# ಆಚೀಚೆಯ ಕತೆಗಳು

.....ಕಡಲಾಚೆಯ ಕನ್ನಡ ಕಥಾಸಂಕಲನ.....

ಪ್ರಧಾನ ಸಂಪಾದಕ: ಗುರುಪ್ರಸಾದ್ ಕಾಗಿನೆಲೆ



ಕನ್ನಡ ಸಾಹಿತ್ಯ ರಂಗ
ಅಭಿನವ

ಕನ್ನಡ ಸಾಹಿತ್ಯ ರಂಗ ಪುಸ್ತಕಮಾಲೆ-೨

# ಆಚೀಚೆಯ ಕತೆಗಳು

ಕಡಲಾಚೆಯ ಕನ್ನಡ ಕಥಾಸಂಕಲನ

ಪ್ರಧಾನ ಸಂಪಾದಕ

ಗುರುಪ್ರಸಾದ್ ಕಾಗಿನೆಲೆ

ಸಂಪಾದಕ ಮಂಡಲಿ

ಆಹಿತಾನಲ
ಎಚ್. ಕೆ. ಚಂದ್ರಶೇಖರ್
ಎಚ್. ವೈ. ರಾಜಗೋಪಾಲ್
ಮೈ. ಶ್ರೀ. ನಟರಾಜ
ನಳಿನಿ ಮೈಯ
ಶಶಿಕಲಾ ಚಂದ್ರಶೇಖರ್

ಕನ್ನಡ ಸಾಹಿತ್ಯ ರಂಗ
ನ್ಯೂಜೆರ್ಸಿ, ಯು. ಎಸ್. ಎ.

ಅಭಿನವ
ಬೆಂಗಳೂರು

ACHEECHEYA KATHEGALU -- Kadalacheya Kannada Kathasankalana, edited by Guruprasad Kaginele, 2nd book in the series Kannada Sahitya Ranga pustakamale. Published by Kannada Sahitya Ranga, Inc., No. 26. Frederick Place, Old Bridge, NJ 08857, USA, and Abhinava, 17/18-2, 1st Main, Mareenahalli, Vijayanagar, Bangalore 560 040 (India).

First published in 2005 Pages 300 Price Rs. 150/-

ಮೊದಲ ಮುದ್ರಣ - ೨೦೦೫


ಬೆಲೆ: ರೂಪಾಯಿ ೧೫೦/-

ಪ್ರತಿಗಳು: ೬೦೦

ಹೊದಿಕೆ ವಿನ್ಯಾಸ: ಬಿ. ದೇವರಾಜ್
ಮುದ್ರಣ: ಪ್ರಸಾದ್ ಪ್ರಿಂಟರ್ಸ್. ಬೆಂಗಳೂರು

# ಕನ್ನಡ ಸಾಹಿತ್ಯ ರಂಗ

ಕಳೆದ ವರ್ಷ ವಸಂತದ ಚಿಗುರಿನೊಂದಿಗೆ ಮೈತಳೆದ 'ಕನ್ನಡ ಸಾಹಿತ್ಯ ರಂಗ' ಉತ್ತರ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ನೆಲೆಸಿರುವ ಕನ್ನಡಿಗರ ಸಾಹಿತ್ಯಾಸಕ್ತಿಗಳ ಪೋಷಣೆ ಅಭಿವೃದ್ಧಿಗಳಿಗೆ ಮೀಸಲಾದ ಸಂಸ್ಥೆ. ಇಲ್ಲಿನ ಸಾಹಿತ್ಯಪ್ರೇಮಿ ಕನ್ನಡಿಗರನ್ನೆಲ್ಲ ಆಗಿಂದಾಗ್ಗೆ ದೇಶದ ವಿವಿಧ ಕಡೆಗಳಲ್ಲಿ ಸೇರಿಸಿ, ಸಾಹಿತ್ಯೋತ್ಸವಗಳನ್ನು ನಡೆಸುವುದು, ಉತ್ತಮ ವಿಚಾರಶೀಲ ಕಾರ್ಯಕ್ರಮಗಳನ್ನು ಒದಗಿಸುವುದು, ಅವರ ಬರಹಗಳನ್ನು ಪ್ರಕಟಿಸುವುದು--ಮುಂತಾದ ಕೆಲಸಗಳಿಂದ ಅವರ ಸಾಹಿತ್ಯ ಚೇತನವನ್ನು ಉದ್ದೀಪನಗೊಳಿಸುವುದು ರಂಗದ ಉದ್ದೇಶ. ಈ ದಿಸೆಯಲ್ಲಿ ರಂಗ, ಅಮೆರಿಕದ ನೆಲದಲ್ಲಿ ಮೊಟ್ಟಮೊದಲಬಾರಿಗೆ ಪೂರ್ತಿಯಾಗಿ ಸಾಹಿತ್ಯಕ್ಕೇ ಮೀಸಲಾದ ಸಮಾರಂಭ 'ಕನ್ನಡ ವಸಂತ ಸಾಹಿತ್ಯೋತ್ಸವ'ವನ್ನು ನಡೆಸಿ ಅನೇಕ ಸಾಹಿತ್ಯಾಭಿಮಾನಿಗಳ ವಿಶ್ವಾಸಕ್ಕೆ ಪಾತ್ರವಾಯಿತು.

ಫಿಲಡೆಲ್ಫಿಯ ಬಳಿ ಇರುವ ವಿಲನೋವ ವಿಶ್ವವಿದ್ಯಾನಿಲಯದ ಸುಂದರ ಆವರಣದಲ್ಲಿ ಮೇ ೨೯, ೨೦೦೪ರಂದು ದಿನವಿಡೀ ನಡೆದ ಆ ಸಾಹಿತ್ಯೋತ್ಸವಕ್ಕೆ ಅಮೆರಿಕದ ೧೨ ರಾಜ್ಯಗಳಿಂದ ಸುಮಾರು ೧೫೫ ಮಂದಿ ಬಂದಿದ್ದರು. ಕನ್ನಡ ಸಾಹಿತ್ಯದ ಬಗ್ಗೆ ಭಾಷಣ, ಕವಿಗೋಷ್ಠಿ, ಇಲ್ಲಿನ ಬರಹಗಾರರ ಮತ್ತು ಅವರು ಪ್ರಕಟಿಸಿದ ಪುಸ್ತಕಗಳ ಪರಿಚಯ, ಅಮೆರಿಕದಲ್ಲಿ ಕನ್ನಡ ಕಲಿಕೆ, ಕುವೆಂಪುರವರ 'ಬೆರಳ್‌ಗೆ ಕೊರಳ್' ನಾಟಕ ಪ್ರದರ್ಶನ ಮುಂತಾದ ಉತ್ತಮ ಸಾಹಿತ್ಯಕ ಕಾರ್ಯಕ್ರಮಗಳಿಂದಲೂ, ದಕ್ಷ ನಿರ್ವಹಣೆಯಿಂದಲೂ, ಒಳ್ಳೆಯ ಊಟ ತಿಂಡಿಯ ವ್ಯವಸ್ಥೆ, ಅತಿಥಿ ಸತ್ಕಾರ -- ಇವೆಲ್ಲದರಿಂದ ಕೂಡಿದ ಆ ಸಮಾರಂಭ ಬಹು ಯಶಸ್ವಿಯಾಗಿ ನಡೆಯಿತು. ಮುಖ್ಯ ಅತಿಥಿ ಡಾ. ಪ್ರಭುಶಂಕರರ ಭಾಷಣಗಳನ್ನು ಬಿಟ್ಟು ಉಳಿದ ಎಲ್ಲ ಕಾರ್ಯಕ್ರಮಗಳೂ ಇಲ್ಲಿನವರಿಂದಲೇ ಆದವು ಎಂಬ ಅಂಶ ನಮ್ಮ ಉದ್ದೇಶಗಳನ್ನೂ, ಕಾರ್ಯರೀತಿಯನ್ನೂ ಎತ್ತಿ ತೋರಿಸಿತು. (ಅಂದಿನ ಕಾರ್ಯಕ್ರಮಗಳ ಬಗ್ಗೆ ವರದಿಗಳು ಈಗಲೂ thatskannada.comನ ದಾಖಲೆಯಲ್ಲಿವೆ.) ಅದನ್ನು ಕಂಡ ನಮ್ಮ ಜನಕ್ಕೆ 'ಇಂಥಾ ಉಪಯುಕ್ತ ಸಮಾರಂಭಗಳು ಪದೇ ಪದೇ ನಡೆಯುತ್ತಿರಬಾರದೇ' ಎನ್ನಿಸಿತು. ಅದರ ಪರಿಣಾಮವೇ ಈ ವರ್ಷದ ಸಮಾರಂಭ.

ಕಳೆದ ವರ್ಷ ಕುವೆಂಪು ಜನ್ಮಶತಾಬ್ಧಿಯೂ ಆದದ್ದರಿಂದ ರಂಗ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಪುಸ್ತಕವನ್ನು ಹೊರತಂದು ಆ ಮಹಾಕವಿಯ ನೆನಪಿಗೆ ಅರ್ಪಿಸಿತು.

ರಂಗದ ಸ್ಥಾಪಕರಲ್ಲೊಬ್ಬರಾದ ಆಹಿತಾನಲರು (ನಾಗ ಐತಾಳ) ಸಂಪಾದಿಸಿದ ೩೫೩ಪುಟದ ಈ ಪುಸ್ತಕದ ವಿಶೇಷವೆಂದರೆ ಹೆಚ್ಚಿನ ಪಾಲು ಲೇಖನಗಳು ಇಲ್ಲಿನ ಕನ್ನಡಿಗರು ಬರೆದವು. ಕನ್ನಡದ ಪ್ರಮುಖ ಲೇಖಕರಾದ ಡಾ. ಜಿ.ಎಸ್. ಶಿವರುದ್ರಪ್ಪನವರು (ಮುನ್ನುಡಿ ಮತ್ತು ಲೇಖನ), ಡಾ. ಪ್ರಭುಶಂಕರ ಮತ್ತು ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ (ಲೇಖನಗಳು) ನಮಗೆ ಒತ್ತಾಸೆಯಾಗಿದ್ದುದಲ್ಲದೆ ಅನೇಕ ರೀತಿಯಲ್ಲಿ ಸಹಾಯ ಮಾಡಿದರು. ಅದನ್ನಿಲ್ಲಿ ಮತ್ತೆ ಕೃತಜ್ಞತೆಯಿಂದ ನೆನೆಯುತ್ತೇವೆ. ನಮ್ಮ ಪ್ರಯತ್ನ ಕರ್ನಾಟಕದ ಅನೇಕ ಗಣ್ಯ ಲೇಖಕರ ಮೆಚ್ಚಿಗೆಗೆ ಪಾತ್ರವಾಯಿತೆಂಬುದು ಸಂತೋಷದ ವಿಚಾರ. (ಅದರ ಬಗ್ಗೆ ಬಂದಿರುವ ಹಲವಾರು ಅಭಿಪ್ರಾಯಗಳನ್ನು ಈ ಪುಸ್ತಕದ ಅನುಬಂಧದಲ್ಲಿ ಸಂಗ್ರಹವಾಗಿ ಕೊಟ್ಟಿದೆ.)

ಆ ಪ್ರಯತ್ನ ನಮ್ಮ ನಾಡಿನ ದೊಡ್ಡ ಕವಿಯೊಬ್ಬರ ಸಾಹಿತ್ಯವನ್ನು ಕುರಿತ ಅಭ್ಯಾಸವಾಯಿತು; ಈ ಸಲ ನಮ್ಮ ಗಮನವನ್ನು ಸೃಜನಾತ್ಮಕ ಸಾಹಿತ್ಯದ ಕಡೆಗೆ ಹರಿಸಬಾರದೇಕೆ ಎನ್ನಿಸಿತು. ಒಂದು ಕಥಾಸಂಕಲವನ್ನು ಹೊರತರುವ ನಿರ್ಧಾರ ಮಾಡಿದೆವು. ೧೯೬೦ರ ದಶಕದಿಂದ ಹೆಚ್ಚಿನ ಸಂಖ್ಯೆಯಲ್ಲಿ ಬರತೊಡಗಿದ ನಮ್ಮ ಜನರಲ್ಲಿ ಎಷ್ಟೋ ಮಂದಿ ತಮ್ಮ ಜೀವಿತದ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ಈ ನೆಲದಲ್ಲಿ ಕಳೆದಿದ್ದಾರೆ. ಈಗೀಗ, Information Technology ವ್ಯಾಪಾರ ಬಲಗೊಂಡ ಮೇಲೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಯುವಜನರು ಬರುತ್ತಿದ್ದಾರೆ. ಈ ಎಲ್ಲ ಜನಕ್ಕೆ ಅಮೆರಿಕದ ವಾಸ ಏನೆನಿಸುತ್ತದೆ? ಅವರ ಅಂತರಂಗದ ಮೇಲೆ ಅದು ಎಂಥ ಪ್ರಭಾವ ಬೀರಿದೆ? ಅವರ ಹಿಂದಿನ ಮೌಲ್ಯಗಳನ್ನು ಹೇಗೆ ಬದಲಾಯಿಸಿವೆ? ಇಂಥ ಪ್ರಶ್ನೆಗಳನ್ನು ನಮ್ಮವರು ಹೇಗೆ ಎದುರಿಸಿದ್ದಾರೆ, ಅದು ಅವರ ಸೃಜನಶೀಲತೆಯಲ್ಲಿ ಹೇಗೆ ವ್ಯಕ್ತವಾಗುತ್ತದೆ ಎಂಬುದನ್ನು ಕಾಣುವ ಪ್ರಯತ್ನವೇ ಈ ಪುಸ್ತಕ.

ವಲಸೆಗಾರರ ಜೀವನದಲ್ಲಿ ಕಂಡುಬರುವ ಸಮಸ್ಯೆಗಳು, ಏರಿಳಿತಗಳು ಅಮೆರಿಕಕ್ಕೆ ಬಂದವರಿಗಷ್ಟೆ ಅಲ್ಲ ಅನ್ವಯಿಸುವುದು; ಎಲ್ಲಿ ಹೋದರೂ ಅಲ್ಲಿನ ವಾತಾವರಣಕ್ಕೆ, ಸಂಸ್ಕೃತಿಗೆ ಅನುವಾಗಿ ನಮಗೆ ಹೊಸ ಅನುಭವಗಳಾಗುವುದು ಸಹಜ. ಆದ್ದರಿಂದ ಈ ನಮ್ಮ ಕಥಾಸಂಕಲನವನ್ನು ಕೇವಲ ಅಮೆರಿಕದಲ್ಲಿ ನೆಲಸಿದ ಕನ್ನಡಿಗರಿಗೆ ಮಾತ್ರ ಮೀಸಲಾಗಿಡುವುದರ ಬದಲು ಭಾರತದ ಹೊರಗೆ ಇರುವ ಎಲ್ಲ ಕನ್ನಡಿಗರೂ ಇದರಲ್ಲಿ ಭಾಗವಹಿಸಬಹುದೆಂಬ ತೀರ್ಮಾನ ಕೈಗೊಂಡೆವು. ಅದರಂತೆ ನಾವು ಕಳಿಸಿದ ಆಹ್ವಾನಕ್ಕೆ ಓಗೊಟ್ಟ ನಮ್ಮ ಎಲ್ಲ ಸೋದರ ಸೋದರಿಯರಿಗೂ ನಮ್ಮ ಧನ್ಯವಾದಗಳು.

ಈ ಸಂಕಲನವನ್ನು ಹೊರತರುವುದರಲ್ಲಿ ಅದರ ಸಂಪಾದಕತ್ವವನ್ನು ವಹಿಸಬೇಕೆಂದು ನಮ್ಮ ಸಂಪಾದಕವರ್ಗ ಶ್ರೀ ಗುರುಪ್ರಸಾದ್ ಕಾಗಿನೆಲೆಯವರನ್ನು ಕೇಳಿಕೊಂಡಿತು. ಸ್ವತಃ

ಉತ್ತಮ ಕತೆಗಾರರಾದ ಅವರು ಈ ಕೆಲಸವನ್ನು ಬಹಳ ಪ್ರೀತಿಯಿಂದ, ಮುತುವರ್ಜಿಯಿಂದ ನಿರ್ವಹಿಸಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಸಣ್ಣಕತೆಗೆ ನಮ್ಮ ಕನ್ನಡ ಸಾಹಿತ್ಯ ಹೆಸರಾದುದು. ಕತೆಗಳ ಅಜ್ಜ ಮಾಸ್ತಿ ಬೆಳೆಸಿದ ಈ ಭವ್ಯಪರಂಪರೆಯಲ್ಲಿ ವಿಶ್ವದ ಅತಿ ಶ್ರೇಷ್ಠ ಕತೆಗಾರರ ಸಾಲಿಗೆ ನಿಲ್ಲುವಂಥವರು ಇರುವುದು ನಾವು ಹೆಮ್ಮೆಪಡಬೇಕಾದ ವಿಷಯ. ಅಂಥವರಲ್ಲಿ ಪ್ರಮುಖರಾದ ಶ್ರೀ ಯಶವಂತ ಚಿತ್ತಾಲರು ಈ ಪ್ರಯತ್ನವನ್ನು ವಿಶ್ವಾಸದಿಂದ ಕಂಡು, ಈ ಸಂಕಲನಕ್ಕೆ ಒಂದು ಉತ್ತಮವಾದ ಬೆನ್ನುಡಿ ಬರೆದುಕೊಟ್ಟಿದ್ದಾರೆ. ತಮ್ಮ ಸ್ವಂತ ಕೆಲಸಗಳ ನಡುವೆ ನಮಗಾಗಿ ಸಮಯ ವಿನಿಯೋಗಿಸಿ ಇಲ್ಲಿನ ಕತೆಗಳೆಲ್ಲವನ್ನೂ ಓದಿ, ತಮ್ಮ ಅಭಿಪ್ರಾಯ ತಿಳಿಸಿದ ಶ್ರೀ ಚಿತ್ತಾಲರಿಗೆ ನಾವು ಋಣಿ.

ಈ ಪುಸ್ತಕ ಪ್ರಕಟನೆಯಿಂದ, ಇಲ್ಲಿನ ಹಾಗೂ ಇತರ ದೇಶಗಳಲ್ಲಿ ನೆಲೆಸಿರುವ ಬರಹಗಾರರಿಗೆ ತಮ್ಮ ಕತೆಗಳನ್ನು ಕೇಳುವ, ತಮ್ಮ ಬರಹಗಳನ್ನು ಆದರದಿಂದ ಸ್ವಾಗತಿಸುವ, ಓದುವ ಜನ ಇದ್ದಾರೆ. ತಮ್ಮ ತೀವ್ರ ಹೃದಯಾನುಭೂತಿಗೆ, ಆಲೋಚನೆಗೆ, ಆತ್ಮಸಂವೇದನೆಗೆ ಸ್ಪಂದಿಸುವ, ಚಿಕ್ಕದಾದರೂ ಜೀವಂತವಾದ, ವಿವೇಚನಾಶೀಲವಾದ ಸಹೃದಯ ಸಮಾಜವೊಂದಿದೆ ಎಂಬ ಅರಿವಾಗಿ, ಆ ಅರಿವು ಅವರನ್ನು ಮತ್ತಷ್ಟು ಈ ಬರಹದ ಕೆಲಸದಲ್ಲಿ ತೊಡಗಿಸಿದರೆ ನಮ್ಮ ಸಾಹಿತ್ಯ ರಂಗದ ಕೆಲಸ ಸಾರ್ಥಕವಾದಂತೆ. ಈ ಕೆಲಸ ಸಾಧಿಸುವುದರಲ್ಲಿ ನಮಗೆ ಇಲ್ಲಿನ ಕನ್ನಡಿಗರ ಹಾಗೂ ಕರ್ನಾಟಕದ ಕನ್ನಡಿಗರೆಲ್ಲರ ಬೆಂಬಲ ಅಗತ್ಯ. ಅದನ್ನು ತಮ್ಮೆಲ್ಲರಿಂದ ಪಡೆಯಲು ತಕ್ಕ ಅರ್ಹತೆಯನ್ನು ಗಳಿಸಲು ನಾವು ಸತತವಾಗಿ ಶ್ರಮಿಸುತ್ತೇವೆಂಬ ಆಶ್ವಾಸನೆಯನ್ನು ಕೊಡಬಯಸುತ್ತೇವೆ.

ನಮ್ಮ ಪ್ರಯತ್ನಗಳಲ್ಲೆಲ್ಲ ವಿಶ್ವಾಸವಿಟ್ಟು ನಮಗೆ ಎಲ್ಲ ರೀತಿಯಲ್ಲೂ ಬೆಂಬಲ ನೀಡುತ್ತಿರುವ thatskannada.com ಅಂತರ್ಜಾಲ ತಾಣದ ಶ್ರೀ ಎಸ್.ಕೆ. ಶಾಮಸುಂದರ್ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಈ ಪುಸ್ತಕ ಪ್ರಕಟನೆಯಲ್ಲಿ ನಮಗೆ ಸಹಪ್ರಕಾಶಕರಾಗಿ ನೆರವು ನೀಡಿರುವ ಬೆಂಗಳೂರಿನ ಪ್ರಮುಖ ಸಂಸ್ಥೆ ಅಭಿನವದ ಬಳಗಕ್ಕೆ ನಮ್ಮ ಅನಂತ ವಂದನೆಗಳು. ಈ ಸಹಯೋಗ ಎಂದಿಗೂ ಮುಂದುವರೆಯಲಿ, ಮುಂದಿನ ಅನೇಕ ಯೋಜನೆಗಳಿಗೆ ನಾಂದಿಯಾಗಲಿ ಎಂದು ಹಾರೈಸುತ್ತೇವೆ.

**ಎಚ್. ವೈ. ರಾಜಗೋಪಾಲ್**
**ನಳಿನಿ ಮೈಯ**
ಕನ್ನಡ ಸಾಹಿತ್ಯ ರಂಗದ ಪರವಾಗಿ

# ಅರಿಕೆ

ಕನ್ನಡ ಕಥಾಲೋಕದ ಚರಿತ್ರೆ ಬಹಳ ವಿಸ್ತಾರವಾದದ್ದು. ಆಧುನಿಕ ಕನ್ನಡ ಕಥಾಲೋಕವನ್ನು ನೋಡಿದಾಗ ನನ್ನ ಮನಸ್ಸಿಗೆ ಬರುವ ಮೊದಲ ಭಾವ 'ಗೊಂದಲ'. ಸಾಂಪ್ರದಾಯಿಕತೆ ಮತ್ತು ಆಧುನಿಕತೆ ಎರಡರ ನಡುವಿನ ಸಮತೂಕ ಗಳಿಸಲು ನಮ್ಮ ಕತೆಗಾರರು ಪ್ರಯತ್ನಿಸುತ್ತಲೇ ಇದ್ದಾರೆ. ಜಿ. ಎಸ್.ಆಮೂರರು ಒಂದೆಡೆ ಹೇಳಿದಂತೆ ಈ ಮುಖಾಮುಖಿಯ ಪ್ರಕ್ರಿಯೆ ಕಳೆದ ಶತಮಾನದ ಆದಿಯಲ್ಲಿ ಆರಂಭವಾದದ್ದು – ಇನ್ನೂ ಆ ಹುಡುಕಾಟವೇ ನಮ್ಮ ಅನೇಕ ಕತೆಗಾರರಿಗೆ ಮೂಲ ದ್ರವ್ಯವಾಗಿದೆ. ಐತಿಹಾಸಿಕವಾಗಿ ಸಣ್ಣಕಥಾಲೋಕ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರದ ಕಾಲದಲ್ಲಿ ಆಯಾ ಚಳುವಳಿಗೆ ಕಟ್ಟುಬಿದ್ದವರ ಕೈಗೂಸಾದರೂ, ಯಾವ ಚಳುವಳಿಯೂ ಇಂಥದೇ ಎಂಬ ಕಾಲಘಟ್ಟದಲ್ಲಿ ನಿಂತುಹೋಗಲಿಲ್ಲ. ಡಿ. ಆರ್. ನಾಗರಾಜರು ಹೇಳುವ 'ಪ್ರತಿ ಚಳುವಳಿಯೂ ಪಿತೃಹತ್ಯಾದೋಷದ ಪಾಪದಿಂದ ಮುಕ್ತವಾಗಿಲ್ಲ' ಎನ್ನುವ ಮಾತು ಸ್ವಲ್ಪಮಟ್ಟಿಗೆ ಚಳುವಳಿಗಳಿಗೆ ಅನ್ವಯಿಸಿದರೂ ಪ್ರತಿಯೊಂದು ಮಹತ್ವದ ಕಥೆಗಳೂ ಒಂದಲ್ಲ ಒಂದು ಚಳುವಳಿಯಿಂದ ಪ್ರೇರಿತವಾಗಿ ಆಯಾ ಗುಣಗಳನ್ನು ಎರವಲು ಪಡಕೊಂಡೇ ಅಥವಾ ಗಮನದಲ್ಲಿಟ್ಟುಕೊಂಡೇ ಬರೆಯಲ್ಪಟ್ಟಿದೆ ಎನ್ನುವುದು ಒಂದು ಗಮನಾರ್ಹ ಅಂಶ. ಹಡೆವೆಂಕಟ, ತಬರ, ಹುಲಿಸವಾರಿಯ ನಾಯಕ, ಸೌಭಾಗ್ಯವತಿ, ಆಬೋಲಿನಾ, ಗಾಂಧಿ, ಚಂದ್ರಕಾಂತ, 'ಒಳ್ಳೆಯವನು' 'ಅನಂತನ ಮಗು' ಬೇರೆ ಬೇರೆ ಸ್ತರಗಳಲ್ಲಿ ನಮ್ಮ ಮನಸ್ಸನ್ನು ತಟ್ಟುತ್ತವೆ. ಎಲ್ಲರೂ ತಮ್ಮ ಸೃಷ್ಟಿಕರ್ತನನ್ನು ನೆನೆಸಿದರೂ, ತಾವು ಚಳುವಳಿ ಮಾಡುತ್ತಿದ್ದೇವೆ ಎಂದೇನೂ ಹೇಳುವುದಿಲ್ಲ, ಕತೆಗೋಸ್ಕರ ಕತೆ ಓದಿದ್ದರೆ--

೨೦೦೫ರಲ್ಲಿ ಕತೆ ಬರೆಯುತ್ತಿರುವ ಕತೆಗಾರನಿಗೆ ಇದ್ದಕ್ಕಿದ್ದಂತೆ ಎದುರಾಗಿರುವ ಇನ್ನೊಂದು variable ಎಂದರೆ, ಕನ್ನಡಕ್ಕೇ ವಿನೂತನ ಎನ್ನಿಸಿರುವ ಕಥಾಸ್ಪರ್ಧೆಗಳು. ಕತೆಗಾರರಲ್ಲಿ ಇದ್ದಕ್ಕಿದ್ದಂತೆ ವಿಶೇಷಾಂಕದ ಕತೆಗಾರರು, ಸ್ಪರ್ಧೆಯ ಕತೆಗಾರರು ಮತ್ತು ಮ್ಯಾಗಜೀನ್ ಕತೆಗಾರರು ಎನ್ನುವ ಒಂದು ಅಲಿಖಿತ ವರ್ಗೀಕರಣ ತಾನಾಗಿಯೇ ಆಗಿಹೋಗಿದೆ. ಕನ್ನಡದ ಕಥಾಸ್ಪರ್ಧೆ ಹಾಗೂ ವಿಶೇಷಾಂಕಗಳನ್ನು ಕಳೆದ ಐದು ವರ್ಷಗಳಿಂದ ಗಮನಿಸಿದಲ್ಲಿ ಇದು ಗಮನಕ್ಕೆ ಬರುತ್ತದೆ. ಈ ರೀತಿಯ 'ಗೆಲ್ಲುವ' ಕತೆಗಳು ತಮಗೆ ತಾವೇ ಒಂದು ಚೌಕಟ್ಟನ್ನು ಹಾಕಿಕೊಂಡಿರುತ್ತವೆ. ಸಂಬಂಧಗಳ ಸೂಕ್ಷ್ಮ

ಎಳೆಗಳ ನಯವಾದ ಕುಸುರಿ, ವರ್ಗ ಸಂಘರ್ಷ, ಸ್ಪಷ್ಟ–ಅಸ್ಪಷ್ಟದ ನಡುವಿನ ತೆಳುವಾದ ಗೆರೆ, ಸಮಾನಾಂತರ ನಿರೂಪಣೆ –– ಈ ರೀತಿಯ ಹತ್ತು ಹಲವು 'ಗೆಲ್ಲುವ' ಅಂಶಗಳು ವಿಶಿಷ್ಟವಾದ ಕಥೆಗಳನ್ನು ಹುಟ್ಟುಹಾಕುತ್ತಿವೆಯನ್ನುವುದೇನೋ ನಿಜ. ಆದರೆ, ಈ ಸ್ಪರ್ಧೆ ಒಡ್ಡುವ ಆಮಿಷಗಳನ್ನು ಬದಿಗಿಟ್ಟು ಪ್ರಾಮಾಣಿಕವಾಗಿ'ಕತೆ'ಗೋಸ್ಕರ ಕತೆ ಬರೆಯುವುದು ಎಷ್ಟು ಸಾಧ್ಯ ಎನ್ನುವುದು ಕತೆಗಾರರಿಗೇ ಗೊತ್ತು. ಸ್ಪರ್ಧೆಗಳಿಂದ ವಿಶೇಷಾಂಕಗಳಿಗೆ 'ಬಡ್ತಿ' ಹೊಂದಿದಲ್ಲಿ ಸೃಜನಶೀಲ ಸ್ವಾತಂತ್ರ್ಯ ಸಾಧ್ಯವೇ ಎನ್ನುವುದೂ ಕತೆಗಾರರಿಗೆ ಮಾತ್ರ ಗೊತ್ತಿರುವ 'ಗುಟ್ಟು'.

ಈ ಸಂದರ್ಭದಲ್ಲಿ 'ಕಡಲಾಚೆಯ ಕನ್ನಡಿಗರ ಕಥಾಸಂಕಲನ' ಹೊರತರಲು ಕನ್ನಡ ಸಾಹಿತ್ಯ ರಂಗದ ಈ ಪ್ರಯತ್ನ. 'ಕಡಲಾಚೆ' ಎಂದರೆ ಅಮೆರಿಕಾ ಮಾತ್ರ ಅಲ್ಲ ಎನ್ನುವುದು ಈ ಕಥಾಸಂಕಲನ ನೋಡಿದರೆ ಅರ್ಥವಾಗಬಹುದು. ಈ ಮೊದಲು ಅಮೆರಿಕೆಯಲ್ಲಿ ಕನ್ನಡದ ಚಟುವಟಿಕೆಗಳು ಸಾಕಷ್ಟುಮಟ್ಟಿಗೆ ನಡೆದಿದ್ದರೂ, ಹೀಗೆ ಗುಂಪುಗುಂಪಾಗಿ ಲೇಖಕರು ಸೇರಿ ಲೇಖನ ಸಂಕಲನಗಳು, ಕಥಾಸಂಕಲನಗಳನ್ನು ಪ್ರಕಟಿಸುವ ಪರಿ ಇತ್ತೀಚಿನದು. ಇದು ಸ್ವಾಗತಾರ್ಹ.

ವಲಸೆ ಬಂದು ಕನ್ನಡದಲ್ಲಿ ಬರೆಯಬೇಕೆಂಬ ಹಂಬಲವಿರುವ ಕತೆಗಾರರಿಗೆ ಎದುರಾಗುವ ಸವಾಲುಗಳು ಹಲವಾರು. ಕನ್ನಡದ ಓದುಗನಮಟ್ಟಿಗೆ, ಪರಿಸರದಮಟ್ಟಿಗೆ ಒಬ್ಬ 'ಹೊರಗಿನ' ಕತೆಗಾರ ಸೃಷ್ಟಿಸುವ ಪಾತ್ರಗಳು ಮತ್ತು ಪರಿಸರ ಎರಡೂ ಬಹುತೇಕ ಹೊರಗಿನವು. ಆದರೆ ಈ ಪಾತ್ರಗಳನ್ನು ಓದುಗ ನೋಡಿದಾಗ, ಕತೆಗಾರನ ಯಾವುದೋ ಹೇಳಲಾಗಾದ ಪರಕೀಯತೆ ಬಹಳ ಸ್ಪಷ್ಟವಾಗಿ ಎದ್ದು ಕಾಣಿಸಿಬಿಡುತ್ತದೆ. ಬೆಂಗಳೂರಿನ ಬಸ್‌ಸ್ಟಾಂಡಿನಲ್ಲಿ ಬಸ್‌ಗೆಂದು ಕಾಯುತ್ತಿದ್ದಾಗ, ಮುಂದೆ ಒಂದು ಕುರುಡು ಹೆಂಗಸು ತನ್ನ ಮಗುವಿನ ಸಹಾಯದಿಂದ ರಸ್ತೆ ದಾಟುತ್ತಿದ್ದುದು ಕಂಡಾಗ ಅಲ್ಲಿರುವ ಒಬ್ಬ ಕತೆಗಾರನಲ್ಲಿ'ಕತೆಗಾರ'ಪ್ರಜ್ಞೆ ಜಾಗೃತವಾಗಿ ಒಂದು ಕತೆ ಮೂಡಿಬಂದಾಗ, ಆ 'ಲೋಕಲ್' ಕತೆಗಾರನಲ್ಲಿ ಓದುಗ ಕಾಣುವ ಪರಕೀಯತೆಗೂ, ಇಲ್ಲಿ ಅಮೆರಿಕದ ಮಾಲ್‌ನ ಒಂದಂಗಡಿಯಲ್ಲಿ ಸೋಮಾಲಿಯಾದ ಹೆಣ್ಣುಮಗಳು ತನ್ನ ಕೂದಲು ಕಾಣಬಾರದೆಂದು ತಲೆದಿರಿಸು ಸರಿಮಾಡಿಕೊಳ್ಳುತ್ತಾ ಇನ್ನೊಬ್ಬ ತನ್ನದೇ ವಯಸ್ಸಿನ ಬಿಳಿಯ ಹುಡುಗಿಯ ಹೊಕ್ಕುಳ ಸುತ್ತ ಹಚ್ಚೆಯನ್ನೂ ಅಷ್ಟೇ ಜಾಗರೂಕವಾಗಿ ಬಿಡಿಸುವುದನ್ನು ನೋಡಿದ ಒಬ್ಬ ಅಮೆರಿಕನ್ನಡ ಕತೆಗಾರ ಚಿತ್ರಿಸಿದಾಗ ಕಂಡುಬರುವ ಪರಕೀಯತೆಗೂ ದೊಡ್ಡ ವ್ಯತ್ಯಾಸವನ್ನು ಕಂಡುಹಿಡಿದುಬಿಡುತ್ತಾನೆ. ಆದರೆ, ಕರ್ನಾಟಕದ ಹೊರಗಿನಿಂದಲೇ ಹೆಚ್ಚು ಕಡಿಮೆ ತಮ್ಮ ಒಟ್ಟೂ ಸಾಹಿತ್ಯ ಬರೆದ ಚಿತ್ತಾಲ, ಬಲ್ಲಾಳ ಮತ್ತು ಕಾಯ್ಕಿಣಿಯವರ ಕತೆಗಳಲ್ಲಿ, ಪಾತ್ರಗಳನ್ನು ಚಿತ್ರಿಸುವ ಈ 'ಪರಕೀಯ ಕತೆಗಾರ' ಅದೇ ಬೆಂಗಳೂರಿನ ಕುರುಡು ಹೆಂಗಸಿನ

ಕತೆಯನ್ನು ಸೃಷ್ಟಿಸುವ ಕತೆಗಾರನಿಗಿಂತ ಹೆಚ್ಚಾಗಿ ಬೇರೆಯಾಗಿ ಕಾಣಿಸುವುದಿಲ್ಲವಲ್ಲ! ಖಂಡಾಂತರ ಈ 'ಹೊರಗಿನ' ಕತೆಗಾರರನ್ನು ಸಾಹಿತ್ಯಿಕವಾಗಿ, ಪರಕೀಯರಲ್ಲೂ ಪರಕೀಯವಾಗಿ ಮಾಡುತ್ತಿದೆಯೇ?

ಆದರೆ, ಇಂಗ್ಲಿಷ್‌ನಲ್ಲಿ ಬರೆಯುತ್ತಿರುವ ವಲಸೆಗಾರ ಭಾರತೀಯ ಲೇಖಕರನ್ನು ಒಮ್ಮೆ ನೋಡಿ. ವಲಸೆ ಬದುಕಿನ ಹಳಹಳಿಕೆಗಳೇ ಜೀವಾಳವಾದ ಝುಂಪಾ ಲಹಿರಿಯ 'Interpreter of Maladies'ಗೆ ಪುಲಿಟ್ಜರ್ ಬರುತ್ತದೆ. ಆಕೆಯದೇ ಇನ್ನೊಂದು ವಲಸೆ ಬದುಕಿನ ಕಾದಂಬರಿ 'The Namesake' ನ್ಯೂಯಾರ್ಕ್ ಟೈಮ್ಸ್‌ನ ಬೆಸ್ಟ್‌ಸೆಲ್ಲರ್‌ಗಳ ಪಟ್ಟಿಯಲ್ಲಿ ಸೇರುತ್ತದೆ. ಚಿತ್ರಾ ದಿವಾಕರುಣಿಯ ' Mistress of Spices' ತನ್ನ ಮಾಂತ್ರಿಕ ವಾಸ್ತವವಾದದಿಂದ ಎಲ್ಲರ ಗಮನ ಸೆಳೆಯುತ್ತದೆ. ಐಶ್ವರ್ಯ ರೈ ಅದರ ಸಿನೆಮಾ ಅವತರಣಿಕೆಯಲ್ಲಿ ನಟಿಸಲು ಬಿಟ್ಟ ಕೆಲಸ ಬಿಟ್ಟಹಾಗೆ ಓಡಿಬರುತ್ತಾಳೆ. ವಿ. ಎಸ್. ನೈಪಾಲರಿಗೆ ನೊಬೆಲ್ ಪ್ರಶಸ್ತಿ ಬರುತ್ತದೆ. ಹರಿ ಕುಂಜ್ರು 'The impressionist' ಮತ್ತು 'Transmission'ಗಳ ಮೂಲಕ ತನ್ನದೇ ಆದ ಓದುಗ ವೃಂದವನ್ನು ಸೃಷ್ಟಿಸಿಕೊಂಡಿದ್ದಾನೆ. ತನ್ನ ಫ಼ರಿಶ್ತೆಯಿಂದ 'ಫ಼ತ್ವಾ' ಹಾಕಿಸಿಕೊಂಡರೂ ಸಲ್ಮಾನ್ ರಶ್ದೀ 'The Fury'ಯ ತನಕ ಬರೆಯುತ್ತಲೇ ಇದ್ದಾನೆ. ಇನ್ನು ಭಾರತದಲ್ಲೇ ಕೂತು ಇಂಗ್ಲಿಷ್‌ನಲ್ಲಿ ಬರೆಯುತ್ತಿರುವ ಅಮಿತವ್ ಘೋಶ್, ಅರುಂಧತಿ ರಾಯ್ ಮುಂತಾದವರು ಪಶ್ಚಿಮದಲ್ಲಿ ಉಂಟು ಮಾಡುತ್ತಿರುವ ಸಂಚಲನೆಯ ಬಗ್ಗೆ ನಾನೇನೂ ಹೆಚ್ಚು ಹೇಳಬೇಕಾದದ್ದಿಲ್ಲ. ಭಾರತೀಯ ಇಂಗ್ಲಿಷ್ ಬರಹಗಾರರು, ಅವರಲ್ಲೇ ಇರಲಿ, ತಮ್ಮದೇ ಆದ ಒಂದು ಛಾಪನ್ನು ಜಾಗತಿಕ ಸಾಹಿತ್ಯದಲ್ಲಿ ಮೂಡಿಸಿದ್ದಾರೆ.

ಅಂದರೆ, ಅನಿವಾಸಿ ಭಾರತೀಯರು ಪ್ರಪಂಚದಾದ್ಯಂತ ಭಾರತೀಯ 'ನೇಟಿವಿಟಿ'(ಈ 'ಭಾರತೀಯತೆ' ನಮ್ಮ ಮೂಕಜ್ಜಿ, ಚೋಮರಿಗೆ ಹೋಲಿಸಿದರೆ ತೀರ ತೆಳ್ಳಗೆನ್ನಿಸಿದರೂ)ಗೆ ಒತ್ತುಕೊಟ್ಟುಕೊಂಡ ವಸ್ತುಗಳನ್ನಿಟ್ಟುಕೊಂಡು ಬರೆದಾಗಲೂ ಉಂಟುಮಾಡುವ ಜಾಗತಿಕ ಸಂಚಲನೆಯನ್ನು ಒಬ್ಬ ಅನಿವಾಸಿ ಕನ್ನಡ ಬರಹಗಾರ ಕೇವಲ ಬೆರಳೆಣಿಕೆಯ ಕನ್ನಡ ಓದುಗರಲ್ಲಿ ಕನ್ನಡ ಬರವಣಿಗೆಯ ಮೂಲಕ ಮಾಡುತ್ತಿದ್ದಾನೆಯೇ? ಬರವಣಿಗೆಯಲ್ಲಿ ಈ 'ಪರಕೀಯತೆ' ಎಷ್ಟು ಪ್ರಸ್ತುತ ? ನಾವೇ ಕೊಟ್ಟುಕೊಳ್ಳಬಹುದಾದ ಕಾರಣಗಳಾದ: 'ನಾವ್ಯಾರೂ ಕಸಬುದಾರ ಬರಹಗಾರರಲ್ಲ, ಹವ್ಯಾಸಿಗಳು', 'ನಾವು ಅಮೆರಿಕಾಕ್ಕೆ ಬಂದರೂ ಕನ್ನಡವನ್ನು ಮರೆಯದೆ ಇಪ್ಪತ್ತೈದು ವರ್ಷದ ನಂತರ ಇಂಗ್ಲಿಷ್‌ನಲ್ಲಿ ಯೋಚನೆಮಾಡಿದ ನಂತರವೂ ಕನ್ನಡದ ಲಿಪಿಗಳನ್ನು ಹುಡುಕಿ ಅದನ್ನು ಕನ್ನಡದಲ್ಲಿ ಬರೆಯುತ್ತೇವೆ', 'ನಮ್ಮನ್ನು ಮುಖ್ಯವಾಹಿನಿಗೆ ಹೋಲಿಸುವುದೇ ತಪ್ಪು. ನಾವಿನ್ನೂ ತೊದಲು ನುಡಿಯಾಡುತ್ತಿರುವ ಮಕ್ಕಳು' ಎನ್ನುವುದೆಲ್ಲ ಎಷ್ಟು ಸಾಧು ?

ಪಶ್ಚಿಮ ಮೂಡಿಸುವ ಬೆರಗು (ಅಂತದ್ದೇನಾದರೂ ಇದ್ದರೆ?), ಇಂಗ್ಲಿಷ್ ಓದುವ ಕರ್ನಾಟಕದ ಓದುಗನಿಗೆ ಜಾನ್ ಗ್ರಿಷಮ್‌ನಿಂದಲೋ, ಅಥವಾ ಸಾಲ್ ಬೆಲೋನಿಂದಲೋ ಸಿಗಬಹುದು. ಆದರೆ, ಕನ್ನಡ ಮಾತ್ರ ಓದುವ ಕನ್ನಡಿಗ ಓದುಗನಿಗೆ ಹೊರಗಿನಿಂದ ಮೂಡಿಬರುತ್ತಿರುವ ಕಥಾಸಾಹಿತ್ಯ ಓದಲು ಪ್ರಯತ್ನಿಸಿದಾಗ ಆತನಿಗೆ ಗಿಟ್ಟುವುದು ಮೊಟ್ಟಮೊದಲು 'ಅನಿವಾಸೀ ಭೋಳೇತನ.' ಎಂದೋ ಇಂಡಿಯಾವನ್ನು ಬಿಟ್ಟುಹೋಗಿ ಇಂದು ಮತ್ತೆ ಮತ್ತೆ ನೆನೆಸಿ ಹಪಾಹಪಿಸುವ ಪಾಪಪ್ರಜ್ಞೆ, ಏಕಾಕಿತನಗಳಲ್ಲಿ 'ಹೋಮ್ ಸಿಕ್‌ನೆಸ್'ನಿಂದ ಮೂಡಿಬಂದ ಒಂದು ಬಗೆಯ 'ರಿಯಾಕ್ಟಿವ್ ಡಿಪ್ರೆಶನ್.' ನಾವು ಇಲ್ಲಿದ್ದುಕೊಂಡು ಕನ್ನಡದಲ್ಲಿ ಬರೆಯುತ್ತಿರುವುದೇ ಹೆಚ್ಚು ಅಥವಾ ಯಾವ ಸಾಹಿತ್ಯಿಕ ಹಿನ್ನೆಲೆಯಲ್ಲಿಲ್ಲದಿದ್ದರೂ ನಾವೂ ಕನ್ನಡದಲ್ಲಿ ಬರೆಯುತ್ತಿದ್ದೇವೆ ಎನ್ನುವ ಆತ್ಮರತಿ ಅಷ್ಟೇ ಇದ್ದರೆ ಅದು ಸಾಹಿತ್ಯವಾಗುತ್ತದೆಯೇ ?

ಈ ಜಾಗತೀಕರಣದ ಹುಚ್ಚು ಹೊಳೆಯಲ್ಲಿ ಅಮೆರಿಕಾ ಒಂದು ಹೊರ ಪ್ರಪಂಚವಾಗಿ ಇನ್ನೂ ಉಳಿದಿಲ್ಲ. ಈಗ ಕರ್ನಾಟಕದಲ್ಲಿರುವ ಕನ್ನಡಿಗನಿಗೆ ಬೆರಗು ಮೂಡಿಸುವಂತದ್ದೇನೂ ಅಮೆರಿಕಾದಲ್ಲಿ ಉಳಿದಿಲ್ಲ. ಕನ್ನಡಿಗನೂ ತನಗೆ ಬೇಕಾಗಿಯೋ ಬೇಡದೆಯೋ ತನ್ನನ್ನು ತಾನು ಹೊರಜಗತ್ತಿಗೆ ತೆರೆದುಕೊಂಡಿದ್ದಾನೆ. ಆದ್ದರಿಂದ ಅಮೆರಿಕಾದ ಜೀವನಶೈಲಿ, ವಲಸೆಗಾರನ ಕನವರಿಕೆ, ನೆನವರಿಕೆ ಇಂತಹ ಹಳಹಳಿಕೆಗಳು ಕನ್ನಡದ ಓದುಗನಿಗೆ ಯಾವ ಆಶ್ಚರ್ಯವನ್ನೂ ಮೂಡಿಸದಿರಬಹುದು. ಇಂತಹ ಸಂದರ್ಭದಲ್ಲಿ 'ಅನಿವಾಸೀ ಸಾಹಿತ್ಯ' ಎನ್ನುವ ಒಂದು ಪ್ರಕಾರವೇನಾದರೂ ಇದ್ದಲ್ಲಿ ಆ ಪ್ರಕಾರದಡಿಯಲ್ಲಿ ಬರೆಯುವವರ ಸವಾಲುಗಳೇನು ? ಜವಾಬ್ದಾರಿಯೇನು ? ಬರೀ ಮನೆಯ ನೆನಪನ್ನು ಬಿಟ್ಟು ವರ್ತಮಾನದತ್ತ, ನಂತರ ಭವಿಷ್ಯದತ್ತ ಸಾಗಬೇಕಾಗುವ ಒಂದು ಹೊಣೆ ನಮಗೆ ಇರಬೇಕೇ? ಇಲ್ಲದಿದ್ದರೆ, ಕಾರಂತ, ಕುವೆಂಪು, ಪುತಿನರ ಕಾಲಕ್ಕೆ ಕನ್ನಡ ಮುಗಿದುಹೋಯಿತೆಂದುಕೊಂಡು ಅವರ ಕೃತಿಗಳನ್ನು ನೆನೆಸುತ್ತಾ ಕೂರುವುದೇ ನಮ್ಮ ಸಾಹಿತ್ಯ ಕೃಷಿ ಎಂದು ಭಾವಿಸುವುದು ಸರಿಯೇ? ನಾವು ಬೆಳೆಸುತ್ತಿರುವ ನಮ್ಮ 'ಹ್ಯಾರಿ ಪಾಟರ್', 'ನೋರಾ ರಾಬರ್ಟ್ಸ್' ಅಥವಾ ಸ್ವಲ್ಪ ಸ್ವಲ್ಪ ಅದೃಷ್ಟವಿದ್ದರೆ 'ಲಾರಾ ಇಂಗಲ್ಸ್ ವೈಲ್ಡರ್' ಓದುವ ಮಕ್ಕಳಿಗೆ ಕಾರಂತ, ಪುತಿನರು ಎಷ್ಟು ಪ್ರಸ್ತುತರಾಗುತ್ತಾರೆ ಎನ್ನುವುದನ್ನು ನಾವು ಯೋಚಿಸುತ್ತಿದ್ದೀವಾ?

ಒಂದು ವಿಷಯ ಮಾತ್ರ ನಿಜ. ನಾವಂತೂ ಕೆಲವರು ಬರೆಯುತ್ತಿದ್ದೇವೆ, ಅಲ್ಲಿದ್ದರೂ ನಾವು ಬರೆಯುತ್ತಿದ್ದೆವು, ಇಲ್ಲಿದ್ದೀವಿ; ಬರೆಯುತ್ತಿದ್ದೇವೆ ಅಷ್ಟೇ. ಇಲ್ಲಿದ್ದದ್ದಕ್ಕಾಗಿ ಬರೆಯುತ್ತಿಲ್ಲ. ಇಲ್ಲಿ ಕನ್ನಡ ಓದುವವನು ಅಲ್ಲಿಯೂ ಕನ್ನಡ ಓದುತ್ತಾನೆ. ಅಲ್ಲಿಯೂ ಓದಬೇಕು. ಜಾನ್ ಗ್ರಿಷಮ್‌ನಿಂದ ಅಮೆರಿಕಾ ತಿಳಕೊಳ್ಳೋ 'ಫ್ಲೋರಮ್'ನ ಹುಡುಗರು 'ಪುರುಷೋತ್ತಮ' ಓದುವುದಿಲ್ಲ. ಆದರೆ, ನಾವು ಓದುತ್ತೇವೆ.

ಸಲ್ಮಾನ್ ರಶ್ದೀ ತಾನು ಹುಟ್ಟಾ 'ಮುಂಬೈವಾಲ' ಎಂದು ಇಂಗ್ಲಿಷ್‌ನಲ್ಲಿ ಬರೆಯುವಾಗ ಅಕ್ಷರಗಳನ್ನು ಎರವಲು ಕೇಳುವುದಿಲ್ಲ ಅಥವಾ 'ತಾನು ಪ್ರಪಂಚದಾದ್ಯಂತ ಎಲ್ಲ ದೇಶಗಳಲ್ಲಿಯೂ ಇದ್ದೆ' ಎನ್ನುವ ಕಾರಣಕ್ಕಾಗಿ ಮುಂಬೈಯನ್ನು ಅಥವಾ 'ಬಾಲಿವುಡ್'ನ್ನು ವರ್ಣಿಸುವಾಗ 'ಒಂಚೂರು ಅನುಸರಿಸಿಕೊಳ್ಳಿ' ಎಂದು ಭಾರತೀಯ ಓದುಗರ ಬಳಿ ಜಾಮೀನು ಪಡೆದುಕೊಳ್ಳುವುದಿಲ್ಲ.

*

ಇವ್ಯಾವುವನ್ನೂ ಯೋಚಿಸದೇ, ಕತೆಗಳ ಅಕಡೆಮಿಕ್ ನಾರ್ಮ್‌ಗಳ ಬಗ್ಗೆಯೂ ತಲೆಕೆಡಿಸಿಕೊಳ್ಳದೆ, ಮನಸ್ಸಿನ ಹಸೀ ಹಸೀ ಭಾವನೆಗಳನ್ನು ಅಷ್ಟೇ ಹಸಿಹಸಿಯಾಗಿ ಈ ಸಂಕಲನದ ಕತೆಗಾರರು ಬಿಡಿಸಿದ್ದಾರೆ. ದೇಶ, ಭಾಷೆ ಬಿಟ್ಟು ಬಂದಿದ್ದರೂ ಕನ್ನಡದಲ್ಲಿ ಬರೆಯುತ್ತಿದ್ದೇವೆ ಎನ್ನುವ ಹಪಾಹಪಿಕೆಯೇ ಮೂಲದ್ರವ್ಯವಾದರೂ, ಇಲ್ಲಿನ ಉತ್ಸಾಹ ಮತ್ತು ಕನ್ನಡದ ಬಗೆಗಿನ ಕಳಕಳಿಯನ್ನು ಮೆಚ್ಚತಕ್ಕದ್ದೇ. ಕಥೆಗಳ ವಸ್ತುವಿನಷ್ಟೇ ವೈವಿಧ್ಯ ಅಥವಾ ಅಸಮತೋಲನವನ್ನು ಭಾಷೆಯ ಬಳಕೆ ಮತ್ತು ಕಥೆಗಳ ತಂತ್ರಗಳಲ್ಲೂ ನಾವು ಕಾಣುತ್ತೇವೆ. ಬಹುತೇಕ ನಮಗ್ಯಾರಿಗೂ, ಕಥೆ ಹೇಳುವುದರಿಂದ ಏನೋ ಸಾಧಿಸಬೇಕೆಂಬ ಹಂಬಲವೇನೂ ಇಲ್ಲ. ಆದರೆ, ಕತೆ ಹೇಳಬೇಕೆಂಬ -- ಅದರಲ್ಲೂ ಕನ್ನಡದಲ್ಲಿ ಕತೆ ಬರೆಯಬೇಕೆಂಬ ಹಂಬಲವಿದೆ. ನಾವು ಹೆಚ್ಚುಕಮ್ಮಿ ಮನೆಯಲ್ಲೂ ಮಾತಾಡದ ಭಾಷೆಯಲ್ಲಿ ಕತೆ ಬರೆಯುವುದು ಕನ್ನಡದ ಬಗ್ಗೆ ಇರುವ ಅಪಾರ 'ಭೋಳೇ' ಕಾಳಜಿಯಲ್ಲದೇ ಇನ್ನೇನು? ಈ ಭೋಳೆತನವೇ ನಮ್ಮಿಂದ ಕತೆ ಬರೆಸಿದೆ.

ಈ ಕಥಾಸಂಕಲನವನ್ನು ಸಂಪಾದಿಸುವಾಗ ನನಗನಿಸಿದ ಕೆಲವೇ ಕೆಲವು ಅನಿಸಿಕೆಗಳನ್ನು ಮಾತ್ರ ಇಲ್ಲಿ ಹೇಳಲಿಚ್ಛಿಸುತ್ತೇನೆ. ನಾನೂ ಈ ಸಂಕಲನಕ್ಕೆ ಒಂದು ಕತೆ ಬರೆದಿರುವುದರಿಂದ ಬೇರೆಯವರ ಕತೆಗಳನ್ನು ಕುರಿತು ಏನೂ ಹೆಚ್ಚು ಹೇಳಲಾರೆ. ಆದರೆ, ಇಲ್ಲಿನ ಕಥೆಗಾರರಲ್ಲಿ ಅರವತ್ತು, ಎಪ್ಪತ್ತರ ದಶಕದಲ್ಲಿ ಹಿಂದೆ ಊರು ದೇಶ ಬಿಟ್ಟುಬಂದು ಅಂದಿನಿಂದ ಇಂದಿನವರೆಗೂ ಇಲ್ಲಿನ ಕನ್ನಡದ ಚಟುವಟಿಕೆಗಳಲ್ಲಿ ಮತ್ತು ಇಲ್ಲಿನ ಸ್ಮರಣ ಸಂಚಿಕೆಗಳಲ್ಲಿ ಕತೆ ಬರೆದುಕೊಂಡು, ಆಗಾಗ ಬೆಂಗಳೂರಿಗೆ ಹೋಗಿ ತಮ್ಮ ಸಂಕಲನಗಳನ್ನು ಹೊರತಂದಿರುವವರಿದ್ದಾರೆ. ಕರ್ನಾಟಕದಲ್ಲಿದ್ದು ಕೊಂಡು ಅಲ್ಲಿ ಕಥೆಗಳನ್ನು ಬರೆದು ನಂತರ ವೃತ್ತಿ, ಕೆರಿಯರ್‌ಗಳ ಹುಡುಕಾಟದಲ್ಲಿ ದೇಶಾಂತರ ಬಂದರೂ, ಕನ್ನಡದ ನಂಟನ್ನು ತೊರೆದುಕೊಳ್ಳಲಾಗದೆ, ಕನ್ನಡ ಬರೆಯದೆ ಇರಲಾಗದೇ ಇರುವ ಅನಿವಾರ್ಯತೆಯನ್ನು ಸೃಷ್ಟಿಸಿಕೊಂಡಿರುವವರೂ ಇದ್ದಾರೆ. ಇನ್ನೂ ಕೆಲವರು ಜೀವನಪರ್ಯಂತ ಕನ್ನಡದ ಯಾವ ಮುಖ್ಯ ಕಥಾಸಂಕಲನವನ್ನೂ ಓದದೇ ಇದ್ದರೂ, ಊರುಬಿಟ್ಟು ಬಂದ ಮೇಲೆ, ಮಾತಾಡುವ ಕನ್ನಡ ಹುಡುಕಿಕೊಂಡು ಅದು ಸಿಕ್ಕಾಗ ಅಷ್ಟು ಮಾತ್ರ ಸಾಲದೇ,

ಅಂತರ್ಜಾಲದಲ್ಲಿ ಕನ್ನಡದ ಅಕ್ಷರಗಳನ್ನು ನೋಡಿ ಪುಳಕಿತರಾಗಿ, 'ಬರಹ'ದಲ್ಲಿ ತಮ್ಮ ಅಕ್ಷರಗಳನ್ನೂ ಛಾಪಿಸಿ ಮೈಬೆವರಿ, ಮೊಟ್ಟ ಮೊದಲ ಬಾರಿಗೆ ಕತೆ ಬರೆದಿರುವವರೂ ಇದ್ದಾರೆ. ಆದ್ದರಿಂದ ಕಥೆಗಳ ಗುಣಮಟ್ಟದಲ್ಲಿ ಒಂದೇ 'ಸಮತೋಲನ' ಕಾಪಾಡಿಕೊಂಡು ಬರುವುದು ಸಾಧ್ಯವಾಗಿಲ್ಲವೇನೋ ಎಂದನಿಸಬಹುದು. ಆದರೆ, ಈ ಗುಣಮಟ್ಟದ ಸಮತೂಕ, ಕನ್ನಡ ಸಾಹಿತ್ಯ ರಂಗದ ಉದ್ದೇಶವಾಗಿರಲಿಲ್ಲ. ಸಂಪಾದಕ ಮಂಡಳಿಯ ನಿರ್ಣಯದಂತೆ, ನಮಗೆ ಬಂದ ಕಥೆಗಳಲ್ಲಿ, ಕತೆಗೆ ಬೇಕಾದ 'ವ್ಯಾಕರಣ'ವನ್ನು ಮೈಗೂಡಿಸಿಕೊಂಡಿರುವ ಕತೆಗಳನ್ನು ಸಂಕಲನದಲ್ಲಿ ಸೇರಿಸಿಕೊಳ್ಳಬೇಕೆಂದು ನಿರ್ಧರಿಸಲಾಗಿತ್ತು. ಇದು ಕನ್ನಡದಲ್ಲಿ ಬರೆಯುವ ಹಂಬಲವಿರುವವರಿಗೆ ಉತ್ತೇಜನ ಕೊಡಬಯಸುವ ಸಂಪಾದಕ ಮಂಡಳಿಯ ಒಮ್ಮತದ ಅಭಿಪ್ರಾಯ. ಆದ್ದರಿಂದ ಶ್ರೇಷ್ಠತೆಯ ವ್ಯಸನವನ್ನು ಬಿಟ್ಟು, ಕತೆಗಾಗಿ ಬರೆದ, ಬಂದ ಬಹಳಷ್ಟು ಕತೆಗಳನ್ನು ಸಂಕಲನದಲ್ಲಿ ಸೇರಿಸಿಕೊಳ್ಳಲಾಗಿದೆ. ನನ್ನ ವೈಯುಕ್ತಿಕ ಅಭಿಪ್ರಾಯ ಅಥವಾ ನಂಬಿಕೆಗಳನ್ನು ನಾನು ಯಾರ ಮೇಲೆಯೂ ಹೇರಬಯಸಿಲ್ಲ.

ಜಿ. ಎಸ್. ಶಿವರುದ್ರಪ್ಪನವರು ಕನ್ನಡ ಸಾಹಿತ್ಯ ರಂಗದ ಹಿಂದಿನ ಪ್ರಕಟಣೆ 'ಕುವೆಂಪು ಸಾಹಿತ್ಯ ಸಮೀಕ್ಷೆ'ಗೆ ಬರೆದ ಮುನ್ನುಡಿಯಲ್ಲಿ ಹೇಳಿದ್ದರು -- 'ಇಲ್ಲಿ ಲೇಖನಗಳನ್ನು ಬರೆದ ಯಾರೂ ಮೂಲತಃ ಸಾಹಿತ್ಯದ ವಿದ್ಯಾರ್ಥಿಗಳಲ್ಲ. ಸಾಹಿತ್ಯಗಳನ್ನು ಕಲಿಸುವ ಸಂಸ್ಥೆಗಳಿಗೆ ಸೇರಿದವರೂ ಅಲ್ಲ. ಅವರೆಲ್ಲ ಬಹುತೇಕ ವೈದ್ಯರು, ಎಂಜಿನಿಯರುಗಳು, ಸಮಾಜಶಾಸ್ತ್ರ ಜ್ಞರು, ವಿವಿಧ ವೈಜ್ಞಾನಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಾ ಇರುವವರು. ಒಂದು ವೇಳೆ ಇವರೇನಾದರೂ ಕರ್ನಾಟಕದಲ್ಲಿ ಇದ್ದಿದ್ದರೆ, ಇಲ್ಲಿರುವ ಎಷ್ಟೋ ಇಂಜಿನಿಯರುಗಳ ಹಾಗೆ, ವೈದ್ಯರುಗಳ ಹಾಗೆ ತಮಗೂ ಕನ್ನಡ ಸಾಹಿತ್ಯಕ್ಕೂ ಸಂಬಂಧವಿಲ್ಲದವರ ಹಾಗೆ ಹಾಯಾಗಿ ಇದ್ದು ಬಿಡುತ್ತಿದ್ದರೇನೋ'--

ಇದು ನಿಜವಿರಬಹುದು. ಆದರೆ, ಇಂದು ಕನ್ನಡದಲ್ಲಿ ಬರೆಯುತ್ತಿರುವ ಮುಖ್ಯ ವಾಹಿನಿಯಲ್ಲಿರುವ ಲೇಖಕರಲ್ಲಿ ಬಹಳಷ್ಟು ಜನ ಸಾಹಿತ್ಯದ ವಿದ್ಯಾರ್ಥಿಗಳೇನಲ್ಲ. ಅವರ್‍ಯಾರಿಗೂ ಸಾಹಿತ್ಯಿಕ ಹಿನ್ನೆಲೆಯೂ ಇಲ್ಲ. ಆದರೆ, ತಾವೇ ತಮ್ಮ ಆಸಕ್ತಿಯನ್ನು ರೂಢಿಸಿಕೊಳ್ಳಲು ನಡೆಸಿರುವ ಹುಡುಕಾಟ, ಹಳೆಯ ಹಾಗೂ ಇತ್ತೀಚಿನ ಸಾಹಿತ್ಯದ ನಿರಂತರ ಓದು ಅವರ ಬರವಣಿಗೆಯನ್ನು ಪಕ್ವವಾಗಿಸಿದೆ. ಆದ್ದರಿಂದ ಇಂದು ಸಾಹಿತ್ಯ ಹುಟ್ಟುತ್ತಿರುವುದು ಇಂತಹ ಅಸಾಹಿತ್ಯಕ ಹಿನ್ನೆಲೆಯಲ್ಲಿಯೇ.

ಹೊರಪ್ರಪಂಚದಲ್ಲಿ, ನೆಲದ ಹೊರಗೆ ತಮ್ಮ ಏಕಾಕಿತನದಲ್ಲಿ, ಬದುಕಿಬಿಟ್ಟ ನಾಡಿನ ಸಾಂಸ್ಕೃತಿಕ ಸ್ಮರಣೆ ಎಲ್ಲ ಮುಖ್ಯ ಕಥೆಗಾರರ ಸ್ಫೂರ್ತಿ, ಕೂಡ. ಚಿತ್ತಾಲರ ಹನೇಹಳ್ಳಿ,

ಕುವೆಂಪುರವರ ಮಲೆನಾಡು, ಅನಂತಮೂರ್ತಿಯವರ ಅಗ್ರಹಾರ, ಕುಂವೀಯವರ ಕೊಟ್ಟೂರು ಅವರ ಕೃತಿಗಳಲ್ಲಿ ರೂಪಕವಾಗಿ, ಪಾತ್ರವಾಗಿ ಬಂದಿವೆ. ಅದೇ ದಿಕ್ಕಿನಲ್ಲಿ ಇಂಥದೇ ಒಂದು ರೂಪಕವನ್ನು ಕರ್ನಾಟಕದಲ್ಲಿ ಕಂಡುಕೊಳ್ಳುವುದಕ್ಕೆ ಹೊರನಾಡಿನಿಂದ ಮಾಡುವ ಪ್ರಯತ್ನದ ಸಾಧುತನ ಎಷ್ಟು ಗಟ್ಟಿ ಎನ್ನುವುದನ್ನು ಓದುಗರೇ ಹೇಳಬೇಕು. ಕಥಾಕುಸುರಿ ಮತ್ತು ಕಸಬುದಾರಿಕೆಯ ವೈವಿಧ್ಯತೆ ಹಾಗು ಪರಿಣತಿ ಸಾಧಿಸಲು ಬರೀ ದೇಶ ಬಿಟ್ಟು ಬಂದರಷ್ಟೇ ಸಾಕೇ? ಎಲ್ಲರ ಹೃದಯದಲ್ಲಿಯೂ ಆಗುವ ತಳಮಳದಿಂದ ಶಿಕಾರಿಯ 'ನಾಗಪ್ಪ' ಹುಟ್ಟುತ್ತಾನೆಯೇ? ಮೃದುವಾದಾಗ 'ಆಬೋಲೀನ' ಮೂಡಿಬರುತ್ತಾಳೆಯೇ?

ಇಲ್ಲಿನ ಕಥೆಗಳನ್ನು ಲೇಖಕರ ಅಕಾರಾದಿಯಾಗಿ ಜೋಡಿಸಲಾಗಿದೆ.

ಇದು ಕಡಲಾಚೆಯ ಕನ್ನಡಿಗರ ಸೃಜನಶೀಲತೆಯನ್ನು ಬಿಂಬಿಸುವ ಒಂದು ಪ್ರಯತ್ನ. ಇದರಲ್ಲಿ ನಾವು ಎಷ್ಟು ಯಶಸ್ವಿಯಾಗುತ್ತೇವೆ ಎನ್ನುವುದನ್ನು ಯೋಚಿಸುವ ಗೋಜಿಗೆ ಹೋಗಿಲ್ಲ. ಕತೆಗಳ ಯಶಸ್ಸಿಗೆ ಇಂಥದೇ ಮಾಪಕ ಇದೆ ಎಂದೂ ನಮಗೆ ಗೊತ್ತಿಲ್ಲ. ಆದರೆ, ಇಲ್ಲಿ ಕನ್ನಡದ ಬಗ್ಗೆ ಪ್ರಾಮಾಣಿಕ ಕಾಳಜಿಯಿದೆ. ನಮಗೆ ಗೊತ್ತಿರುವುದನ್ನು ಬಂದಹಾಗೆ ಇನ್ನೊಬ್ಬರಿಗೆ ಹೇಳಬೇಕೆಂಬ ಹಂಬಲವಿದೆ, ಶ್ರಮವಿದೆ, ಕೃಷಿಯಿದೆ. ಬರೆದಿರುವ ಬಹಳ ಮಂದಿಗೆ ತಮ್ಮ ಕತೆಯ ಬಗ್ಗೆ ಬೇರೆಯವರು ಏನು ಹೇಳುತ್ತಾರೋ ಎಂದು ಕೇಳುವ ಕುತೂಹಲವೂ ಇದೆ. ಬೆನ್ನು ತಟ್ಟಿಸಿಕೊಳ್ಳಬೇಕೆನ್ನುವ ಆಸೆಯಿದೆ. ಚೆನ್ನಾಗಿಲ್ಲವೆಂದು ಮೂದಲಿಸುತ್ತಾರೇನೋ ಎಂಬ ಅಳುಕೂ ಇದೆ.

ಇದಲ್ಲವೇ ಅನಿವಾಸೀ 'ಭೋಳೇತನ'?

ನನಗೆ ಈ ಕೆಲಸವನ್ನು ವಹಿಸಿಕೊಟ್ಟ 'ಕನ್ನಡ ಸಾಹಿತ್ಯ ರಂಗ'ಕ್ಕೆ ಧನ್ಯವಾದಗಳು. ನನ್ನ ಜತೆಯಲ್ಲಿ ನಿಂತು ಬೆಂಬಲ ನೀಡಿದ ಸಂಪಾದಕ ಮಂಡಳಿಗೆ ನಾನು ಕೃತಜ್ಞ. ಈ ಪುಸ್ತಕಕ್ಕೊಂದು ಸುಂದರ ಬೆನ್ನುಡಿ ಬರೆದುಕೊಟ್ಟ ಯಶವಂತಚಿತ್ತಾಲರಿಗೆ ನನ್ನ ನಮನ. ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟು, ಪ್ರಕಾಶಿಸಿದ 'ಅಭಿನವ'ದ ಗೆಳೆಯರಿಗೆ, ಅಂದವಾದ ಮುಖಪುಟವನ್ನು ಚಿತ್ರಿಸಿಕೊಟ್ಟ ಶ್ರೀ ದೇವರಾಜ್ ಅವರಿಗೆ, ನಮ್ಮ ಎಲ್ಲ ಚಟುವಟಿಕೆಗಳಿಗೆ ವೇದಿಕೆ ರೂಪಿಸಿಕೊಟ್ಟ ದಟ್ಸ್ ಕನ್ನಡ ಡಾಟ್ ಕಾಮ್‌ನ ಶಾಮ್ ಅವರಿಗೂ ಧನ್ಯವಾದಗಳು.

ವಿಶ್ವಾಸದೊಂದಿಗೆ,
**ಗುರುಪ್ರಸಾದ್ ಕಾಗಿನೆಲೆ**

# ಕಥಾನುಕ್ರಮಣಿಕೆ

# ಕವಲು ದಾರಿ

– ಆಹಿತಾನಲ

೧

'ಏನಿದು....? ಇನ್ನೂ ಏಳೋ ಆಲೋಚನೆಯೇ ಇಲ್ಲವೇ?.... ಎದ್ದೇಳಿ, ಸಾಕು ನಿಮ್ಮ್ ನಿದ್ರೆ. ಊಟ ಮಾಡೋದು, ಮಲಗುವುದು....ಇಷ್ಟೇ ಕೆಲ್ಸವಾಯ್ತಲ್ಲ ನಿಮ್ದು! ಏಳೀ.... ಏಳೀ....ಕಾಫ್ಹಿ ಮಾಡಿಕೊಡ್ತೀನಿ, ಕುಡ್ದು ಒಂದು ಚಿಕ್ಕ ವಾಕಿಂಗ್ ಹೋಗ್ಬನ್ನಿ. ಎಕ್ಸರ್‌ಸೈಸ್ ಆದ ಹಾಗೂ ಆಗತ್ತೆ, ನಿಮ್ಮ ಜಡತನದ ನಿವಾರಣೆಯೂ ಆಗತ್ತೆ.... ಏಳಿ...., ಏಳಿ....'ಎಂದೆಲ್ಲ ಒಂದೇಸಮನೆ, ಪಟ-ಪಟ ಅರಳು ಹೊಟ್ಟಿದ ಹಾಗೆ ನಾಗಮ್ಮ ಗಂಡನಿಗೆ ಆಜ್ಞಾಪಿಸಿದಳು. ಮಧ್ಯಾಹ್ನ ಪಟ್ಟಾಗಿ ಊಟ ಮಾಡಿ ಮಲಗಿದ ರಾಜಣ್ಣ, ಹೆಂಡತಿಯ ಆರ್ಭಟಕ್ಕೆ ಎಚ್ಚರಗೊಂಡು ಮನಸ್ಸಿಲ್ಲದ ಮನಸ್ಸಿನಿಂದ ಹಾಸಿಗೆ ಬಿಟ್ಟು ಎದ್ದು ಕುಳಿತ.

'ಅಬ್ಬಾ.... ಇವಳ ಗಂಟಲೇ....! ಮೂರು ಮೈಲಿ ದೂರಕ್ಕೂ ಕೇಳ್ಸತ್ತೆ. ಇವಳಿಗೆ ಆ ದೇವರು ಯಾತಕ್ಕಾಗಿ ಮಾತಾಡಲು ಕಲ್ಸಿದ್ನೋ!....' ಎಂದು ಹಾಸಿಗೆಯ ಮೇಲೇ ಕುಳಿತು ಯೋಚಿಸುತ್ತಿದ್ದ.

'ಏನು....? ಹೇಳಿದ್ದು ಕೇಳ್ಸಲಿಲ್ವೇ ? ಇನ್ನೂ ಹಾಸಿಗೆ ಬಿಟ್ಟು ಏಳ್ಲಿಲ್ವಲ್ಲ? ನಿಮ್ಮ ಅವಸ್ಥೆಯೇ ಹೀಗೆ. ಹೆಂಡ್ತೀ ಮಾತು ನಿಮಗೆ ನಿರ್ಲಕ್ಷ್ಯ, ಅಲ್ವೇ ?'

'ಇಲ್ಲ ಮಹಾ ತಾಯೀ..... ನಿನ್ನ ಮಾತನ್ನು ನಿರ್ಲಕ್ಷಿಸಿದ್ರೆ ನನ್ಗೆಲ್ಲಿ ಉಳಿಗಾಲ ?' ಎಂದು ಮನಸ್ಸಿನಲ್ಲೇ ಅಂದುಕೊಂಡು ಬಚ್ಚಲು ಕಡೆ ರಾಜಣ್ಣ ಹೊರಟ. ಅದನ್ನು ನೋಡಿ ನಾಗಮ್ಮ ಏರಿದ ಸ್ವರದಲ್ಲಿ 'ಉಚ್ಚೆ ಹೊಯ್ದರೆ, ಟಾಯ್ಲೆಟ್ ಫ್ಲಶ್ ಮಾಡ್ಬನ್ನಿ. ನಿಮ್ಮ ಮೂತ್ರವೇನೂ ಪವಿತ್ರವಲ್ಲ. ನಾನು ಹೇಳಿದ್ದು ಕೇಳಿಸ್ತಾ....?' ಎಂದು (ಆ)ಜ್ಞಾಪಿಸಿದಳು.

ರಾಜಣ್ಣ ಬರಿಯ ಹ್ಞೂಂಗುಟ್ಟಿದ ಅಷ್ಟೆ. ನಾಲಿಗೆ ಚೂರೂ ಚಲಿಸದಿದ್ದರೂ, ಮನಸ್ಸಿನಲ್ಲೇ ಅವನು ನಾಗೂಗೆ ಕೊಡಬೇಕಾದ ಉತ್ತರ ಹೇಳಿಕೊಂಡ 'ಎಲ್ಲದಕ್ಕೂ ಇವಳದೊಂದು ಆರ್ಡರ್ ಇದೆಯಲ್ಲ. ನಾನೊಬ್ಬ ಪಶುವೆಂದು ತಿಳಿದಿದ್ದಾಳೋ ಏನೋ

ಇಷ್ಟು. ಮೂರೊತ್ತೂ ಇವ್ಳ ಮಾತು ಕೇಳಿ ರಗ್ಳೆಯಾಗ್ತಿದೆ. ಎಲ್ಲಾದರೂ ಇವ್ಳಿಂದ ದೂರ್ವಿರೋ ಕಡೆ ಓಡಿ ಹೋಗ್ಬೇಕೆನಿಸುತ್ತೆ ' ಎಂದು. ಆದರೆ ಗಟ್ಟಿಯಾಗಿ ಹೇಳಲು ಧೈರ್ಯ ಸಾಲದು. 'ನಾನೊಬ್ಬ ಹೇಡಿಯಾಗಿ ಹೋದ್ನಲ್ಲಾ....' ಎಂದು ಮನಸ್ಸಿನಲ್ಲೇ ಅಂದುಕೊಂಡ. ಅವಳ ಆಜ್ಞಾಪನೆಯಂತೆ, ಮರೆಯದೆ ಫ್ಲಶ್ ಮಾಡಿ ಅಡುಗೆ ಮನೆಗೆ ಬಂದ.

'ಫ್ಲಶ್ ಮಾಡಿ ಬಂದಿದ್ದೀನಿ ಯಜಮಾನ್ತಿಯರೇ....' ಎಂದು ಸ್ವಲ್ಪ ಕುಹಕದಲ್ಲೇ ಹೇಳಿದ.

'ನೀವ್ ಮಾಡೋದನ್ನ ಹೇಳಿದ್ದು.... ಅದಕ್ಕೇ ನಿಮ್ ಕೊಂಕುಮಾತು ಬೇರೆ'

ಮೌನವಾಗಿಯೇ ನಾಗಮ್ಮ ಕೊಟ್ಟ ಕಾಫಿಯನ್ನು ಕುಡಿಯಲು ಪ್ರಾರಂಭಿಸಿದ ರಾಜಣ್ಣ. ಕಾಫಿ ರುಚಿಯಾಗಿತ್ತು. 'ಎಷ್ಟೇ ಬೈದರೂ, ಇವಳು ಮಾಡುವ ಕಾಫಿ, ಅಡುಗೆ ಎಲ್ಲ ರುಚಿಯಾಗಿಯೇ ಇರುತ್ತೆ.... ದೇವರು ಇವಳಿಗೆ ಆ ದೊಡ್ಡಬಾಯನ್ನ ಯಾಕೆ ಕೊಟ್ನೋ !' ಸುರ್–ಸುರ್ ಶಬ್ದ ಮಾಡಿ ಕಾಫಿ ಹೀರುತ್ತ ಅಂದುಕೊಂಡ ರಾಜಣ್ಣ.

'ಅಲ್ಲಾ.... ಸುರ್.... ಸುರ್ರ್.... ಅಂತ ಶಬ್ದ ಮಾಡ್ದೆ ಕುಡಿಯಲು ಬರೋದೇ ಇಲ್ವೇ ನಿಮ್ಗೆ? ಬಂದವರ ಇದಿರೂ ಹಾಗೇ ಕುಡಿತೀರಿ. ಎಲ್ರೆದ್ರೂ ನನ್ಗೆ ಅವಮಾನ....'

'....ಬೇಗ ಕಾಫಿ ಕುಡ್ದು ಇಲ್ಲಿಂದ ಮೊದ್ಲು ಜಾರ್ಕೊಳ್ಬೇಕು.... ಇಲ್ಲದಿದ್ದಲ್ಲಿ ಇವ್ಳಿಂದ ಇನ್ನೇನ್ ಹೇಳ್ಸಿಕೊಬೇಕೋ !' ಎಂದು ಮನಸ್ಸಿನಲ್ಲೇ ಅಂದುಕೊಂಡು ಬಿಸಿ ಬಿಸಿ ಕಾಫಿಯನ್ನು ಹೇಗೋ ಕುಡಿದು ಲೋಟವನ್ನು ಸಿಂಕ್‌ನಲ್ಲಿಟ್ಟು ಅಲ್ಲಿಂದ ಜಾರಿಕೊಂಡ ರಾಜಣ್ಣ.

ಮಲಗುವ ಕೋಣೆಗೆ ಬಂದು, ಸೊಂಟಕ್ಕೆ ಒಂದು ಪಂಚೆ ಬಿಗಿದು, ಶರ್ಟ್ ಧರಿಸಿದ. ಹೊರಗೆ ಬಂದು, ಚಪ್ಪಲಿ ಹಾಕಿಕೊಳ್ಳುತ್ತ, ಅಡುಗೆ ಮನೆಯಲ್ಲಿದ್ದ ಹೆಂಡತಿಗೆ ಕೂಗಿ ಹೇಳಿದ 'ವಾಕಿಂಗ್ ಹೋಗ್ಬಿಟ್ಟು ಬರ್ತೀನಿ, ನಾಗೂ....' ಎಂದು.

ಅಡುಗೆ ಮನೆಯಿಂದಲೇ ಏರಿದ ಸ್ವರದಲ್ಲಿ ನಾಗಮ್ಮ ಉತ್ತರ ಕೊಟ್ಟಳು 'ಹ್ಞೂ.... ಹೋಗ್ತಾ ವಾಕಿಂಗ್‌ಸ್ಟಿಕ್ ಹಿಡ್ಕೊಂಡು ಹೋಗಲು ಮರೀಬೇಡಿ....' ಎಲ್ಲಾದರೂ ಬಿದ್ದುಗಿದ್ದು ಬಿಟ್ಟೀರಾ....'

'....ಸರಿ, ತಿರ್ಗಾ ಇವಳ ಆರ್ಡರ್....' ಎಂದೆಣಿಸುತ್ತ, ಗೋಡೆಯ ಮೂಲೆಯಲ್ಲಿ ಒರಗಿಸಿಟ್ಟ ವಾಕಿಂಗ್‌ಸ್ಟಿಕ್‌ನ್ನ ಕೈಗೆತ್ತಿಕೊಂಡ, ರಾಜಣ್ಣ. ಅಷ್ಟರಲ್ಲಿ ನಾಗಮ್ಮ ಅಡುಗೆ ಮನೆಯಿಂದ ಹೊರಗೆ ಬಂದು, ಗಂಡನನ್ನು ನೋಡಿ 'ಇದೇನಿದು....? ಪಂಚೆ ಉಟ್ಟು ಹೊರಗೆ ಹೋಗ್ತಿದ್ದೀರಲ್ಲಾ....? ನಡೀತಾ ಪಂಚೆ ಕಾಲಿಗೆ ಸಿಕ್ಕಿ, ಎಲ್ಲಾದ್ರೂ ಎಡ್ವಿ ಬಿದ್ರೆ

ನಿಮ್ಮನ್ನ ನೋಡ್ಕೊಳ್ಳವರ್‍ಯಾರೂ....? ಅಲ್ದೇ, ಹೊರ್ಗಡೆ ಹೋಗ್ತಾ ಸ್ವಲ್ಪ ಟಿಪ್-ಟಾಪ್ ಆಗಿರ್ಬೇಕು. ಹೋಗಿ.... ಪಂಚೆ ಬದ್ಲು ಒಂದು ಪ್ಯಾಂಟ್ ಹಾಕ್ಕೊಳ್ಳಿ' ಎಂದು ಹೇಳಿದಳು ರಾಜಣ್ಣನನ್ನುದ್ದೇಶಿಸಿ.

'....ಅಯ್ಯೋ.... ತಿರುಗಿ ಇವಳ ಆರ್ಡರ್....' ಎಂದು ಗೊಣಗುತ್ತ ಪ್ಯಾಂಟ್ ಧರಿಸಲು ಮಲಗುವ ಕೋಣೆಯೊಳಗೆ ಹೊಕ್ಕ. ಅಂತೂ ಹೆಂಡತಿಯ ಮಾತಿನಂತೆ ಡ್ರೆಸ್ ಮಾಡಿಕೊಂಡು ಇನ್ನೇನು ಮನೆ ಹೊರಗೆ ಕಾಲಿಡುತ್ತಿದ್ದಂತೆ 'ಟೊಪ್ಪಿ ಮರ್‍ತ್ರಾ....? ಹೊರ್ಗಡೆ ಬಿಸಿಲು ಬೇರೆ....' ಎಂದು ಗಂಡನನ್ನು (ಆ)ಜ್ಞಾಪಿಸಿದಳು. ಟೊಪ್ಪೀನೂ ಧರಿಸಿ, ಅಂತೂ ಕೊನೆಗೂ ಮನೆಯಿಂದ ಹೊರಗೆ ಬಿದ್ದ ರಾಜಣ್ಣ.

ದಾರಿಯಲ್ಲಿ ಅವನಷ್ಟಕ್ಕೇ ಹೇಳಿಕೊಂಡ 'ಸಾಕಪ್ಪಾ ಸಾಕು.... ಈ ನಾಗೂ ಯಜಮಾನಿಕೆ.... ನಾನು ಮಾಡುವ ಪ್ರತಿಯೊಂದು ಕೆಲ್ಸಕ್ಕೂ ಇವಳ ಮುದ್ರೆ ಬೇಕು.... ಆ ಡ್ರೆಸ್ ಮಾಡ್ಕೋ.... ಈ ಡ್ರೆಸ್ ಬೇಡ....ಅದನ್ನು ತಿನ್ನಬೇಡಿ....ಇದನ್ನ ತಿಂದದ್ದು ಇಷ್ಟೇ ಸಾಕು.... ಫ್ಲಶ್ ಮಾಡಿ ಬಂದ್ರಾ.... ಔಷಧಿ ತಕೊಂಡ್ರಾ....? ಅಬ್ಬಾ ಒಂದೇ ಎರಡೇ....? ಸಾಕಾಗಿ ಹೋಯ್ತು, ಇವಳ ಆರ್ಡರ್ ಕೇಳಿ.... ಈಚೆಗೆ ನಾನು ರಿಟೈರ್ ಆದ್ಮೇಲಿಂದ ಇವಳ ಬಾಯಿ ಹೆಚ್ಚುತ್ತಲೇ ಇದೆ. ನನಗೆ ಬುದ್ಧಿಭ್ರಮಣೆ ಅಂತ ಬೇರೆ ಹೇಳ್ತಿರ್‍ತಾಳೆ. ಸಂಪಾದನೆ ಮಾಡುವಷ್ಟು ಕಾಲ ಎಲ್ಲ ನಾನು ಹೇಳಿದ ಹಾಗೆ ನಡೀತಿತ್ತು. ಈಗ ಎಲ್ಲ ಅವ್ಳದ್ದೇ ದರ್ಬಾರ್.... ಅದ್ಯಾಕೆ ಅವ್ಳು ತಾನೇ ಬುದ್ಧಿವಂತೆ ಅಂತ ತಿಳ್ಕೊಂಡಿದ್ದಾಳೋ ಹೊಳೀತಿಲ್ಲ....' ಅಷ್ಟರಲ್ಲಿ ಬೀದಿ ನಾಯೊಂದು ಗುರ್.... ಅನ್ನುತ್ತಾ ರಾಜಣ್ಣನ ದಾರಿಗೆ ಅಡ್ಡ ಬಂತು. ವಾಕಿಂಗ್ ಸ್ಟಿಕ್ ಬೀಸಿ 'ಹತ್.... ಹೋಗಾಚೆ....'ಎಂದು ಆ ನಾಯಿಯನ್ನು ಓಡ್ಸಿವಾಕಿಂಗ್ ಮುಂದುವರಿಸಿದ ರಾಜಣ್ಣ. ಹಾಗೇ ಅವನ ವಿಚಾರಲಹರಿ ಮುಂದುವರಿಯುತ್ತಿತ್ತು.... 'ಅಲ್ಲಾ, ಅವಳು ಹೇಳಿದ ಹಾಗೆ ಈ ವಾಕಿಂಗ್‌ಸ್ಟಿಕ್ ತಂದದ್ದು ಒಳ್ಳೆದೇ ಆಯ್ತು. ನಾಯಿಯನ್ನು ಓಡ್ಸೋಕಾದ್ರೂ ಬಂತಲ್ಲ.... ಅಲ್ದೇ, ಪಂಚೆ ಉಟ್ಕೊಂಡು ಬಂದಿದ್ರೆ, ಈ ನಾಯಿ ಪಂಚೆ ಎಳೆದು ಹಾಕ್ತಿತ್ತೋ ಏನೋ....' ಎಂದುಕೊಂಡ, ಓಡಿ ಹೋದ ಆ ನಾಯಿಯ ಕಡೆ ನೋಡುತ್ತಾ. ಹೀಗೆ, ಹೆಂಡತಿ ಬಗ್ಗೆ ಏನೇನೋ ಯೋಚಿತ್ತಾ, ರಾಜಣ್ಣ ತನ್ನ ವಾಕಿಂಗ್ ಮುಂದುವರಿಸುತ್ತಿದ್ದ. ಕೊನೆಗೆ, ಸಾಕಷ್ಟು ಎಕ್ಸರ್‌ಸೈಸ್ ಆಯ್ತೆಂದು ನಿರ್ಣಯಿಸಿ, ತಿರುಗಿ ಮನೆ ಕಡೆ ಹೊರಟ. ವಾಪಾಸು ಬರುತ್ತ ತಿರುಗಿ ಅದೇ ನಾಯಿ ಅವನನ್ನು ಭೇಟಿ ಮಾಡಿತು. ಆದರೆ, ಈ ಬಾರಿ ಅವನನ್ನು ನೋಡಿ ಗುರ್ ಗುಡಲಿಲ್ಲ.... ತನ್ನ ವಾಕಿಂಗ್ ಸ್ಟಿಕ್‌ನ ಮಹಿಮೆ ಅದು ಎಂದುಕೊಂಡ ರಾಜಣ್ಣ.

ಮನೆ ಬಾಗಿಲು ತೆರೆಯುತ್ತಲೇ 'ನಾಗಮ್ಮ....ಏನಿದು.... ಇಷ್ಟೊತ್ತು.... ? ಹೋಗಿ.... ನಿಮ್ ಔಷಧಿ ತಕೊಳ್ಳೊ ಹೊತ್ತಾಯ್ತು.... ಮರೀದೇ ತೆಕೊಳ್ಳಿ.... 'ಎಂದು ಗಂಡನನ್ನು ಸ್ವಾಗತಿಸಿದಳು.

'....ಸರಿ, ತಿರ್ಗಾ ಈ ನರಕ ವಾಸಕ್ಕೆ ಬಂದೆನಲ್ಲಾ.... ವಾಕಿಂಗ್ ಹೋದಷ್ಟು ಸಮಯ ಇವಳ ಪಿರಿಪಿರಿಯಿಂದ ಮುಕ್ತನಾಗಿದ್ದೆ. ಈಗ ಶುರುವಾಯ್ತು, ಇವಳದ್ದು. ಇನ್ನು ರಾತ್ರಿ ಮಲಗುವವರೆಗೂ ಇವ್ಳ ಬಾಯಿಗೆ ಬೀಗಾನೇ ಇರೊಲ್ಲ.... ವಟವಟ ಅಂತ ಏನೇನೋ ವದ್ರತಾನೇ ಇರ್ತಾಳೆ.... ನಾನು ಅದನ್ನ ಕೇಳ್ಕೊಂಡು ಸಹಿಸಿಕೊಂಡೇ ಇರ್ಬೇಕು. ದೇವ್ರೇ.... ಯಾಕಪ್ಪಾ ಇಂಥ ಜನ್ಮ ಕೊಟ್ಟೆ ನನಗೇ....' ಅಂತ ಮನಸ್ಸಿನಲ್ಲೇ ಹೇಳಿಕೊಂಡ ರಾಜಣ್ಣ. ಲಿವಿಂಗ್ ರೂಮಿಗೆ ಬಂದು ಒಂದು ಪುಸ್ತಕ ಕೈಗೆತ್ತಿಕೊಂಡು ಓದಲು ಪ್ರಾರಂಭಿಸಿದ.

ಅಷ್ಟರಲ್ಲಿ ಮನೆಯ ಕಾಲಿಂಗ್ ಬೆಲ್ ಶಬ್ದವಾಯ್ತು. 'ಅದ್ಯಾರು ಅಂತ ಸ್ವಲ್ಪ ನೋಡಿ....' ಎಂದು ಅಡುಗೆ ಮನೆಯಿಂದ ಆರ್ಡರ್ ಬಂತು. ಗೊಣಗುತ್ತಲೇ ರಾಜಣ್ಣ ಬಾಗಿಲು ತೆರೆದ. ಬಂದವರು ನಾಗಮ್ಮನ ಸ್ನೇಹಿತೆ ಸುಭದ್ರಮ್ಮ.

'ನಿನ್ನ ಫ್ರೆಂಡ್ ಸುಭದ್ರಮ್ಮ ಬಂದಿದ್ದಾರೆ ನಾಗೂ....' ಎಂದು ಹೆಂಡತಿಗೆ ಕೂಗಿ ಹೇಳಿದ. 'ಬನ್ನಿ ಸುಭದ್ರಮ್ಮ.... ಇವ್ಳು ಒಳ್ಗಡೆ ಇದ್ದಾಳೆ.... ಎಲ್ಲಾ ಚೆನ್ನಾಗಿದ್ದೀರಾ....?' ಎಂದು ಬಂದ ಅತಿಥಿಯನ್ನು ರಾಜಣ್ಣ ಸ್ವಾಗತಿಸಿದ.

'ನಾವೆಲ್ಲ ಚೆನ್ನಾಗಿದ್ದೀವಿ. ನೀವೂ.... ? ಸುಮ್ನೆ ನಾಗಮ್ಮನ್ನ ಮಾತಾ-ಡ್ಸ್ಕೊಂಡು ಹೋಗೋಣ ಅಂತ ಬಂದೆ, ಅಷ್ಟೆ' ಎಂದು ಸೀದಾ ಅಡುಗೆ ಮನೆ ಕಡೆ ನಡೆದರು. '....ಸದ್ಯ ಸ್ವಲ್ಪ ಹೊತ್ತು ನಾಗೂ ಕಾಟ ತಪ್ಪುತ್ತೆ, ಸುಭದ್ರಮ್ಮ ಇರೋ ತನಕ....' ಅಂತ ಮನಸ್ಸಿನಲ್ಲೇ ಖುಷಿಪಟ್ಟು, ರಾಜಣ್ಣ ತನ್ನ ಓದನ್ನು ಮುಂದುವರಿಸಿದ. ಒಳಗಡೆ ಹೆಂಗಸರಿಬ್ಬರ ಮಾತುಕತೆ ಮುಂದುವರಿಯುತ್ತಲೇ ಇತ್ತು.

'ನಿಮ್ಮ ಯಜಮಾನ್ರು ತುಂಬ ಓದ್ತಾರಲ್ಲಾ.... ? ನಾನು ಬಂದಾಗ್ಲೆಲ್ಲಾ ಅವ್ರು ಪುಸ್ತಕ ಹಿಡ್ಕೊಂಡೇ ಇರ್ತಾರೆ' ಸುಭದ್ರಮ್ಮ ಹೇಳುತ್ತಿದ್ದರು.

'ಹೌದು, ಅವ್ರಿಗೆ ಓದೋದಂದ್ರೆ ತುಂಬಾ ಇಷ್ಟ! ತುಂಬ ತಿಳ್ಕೊಂಡಿದ್ದಾರೆ. ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದಾಗ, ಸ್ಟೂಡೆಂಟ್ಸ್‌ಗೆಲ್ಲ ಅವ್ರ ಮೇಲೆ ತುಂಬ ಗೌರವ. ರಿಟೈರ್ ಆದ್ಮೇಲೂ ಓದೋದೇನೂ ಏನೂ ಕಮ್ಮಿ ಮಾಡಲಿಲ್ಲ. ಬಹಳ ಬುದ್ಧಿವಂತ್ರು ನಮ್ಮ ಯಜಮಾನ್ರು. ಅವ್ರಿಗೆ ತಿಳಿಯದಿರೋ ವಿಷಯನೇ ಇಲ್ಲ, ಸುಭದ್ರಮ್ಮಾ....' ಗಂಡನನ್ನು ಹೊಗಳುತ್ತ ಹೇಳಿದ್ಳು ನಾಗಮ್ಮ.

ಲಿವಿಂಗ್ ರೂಮಿನಿಂದಲೇ ಇದನ್ನ ಕೇಳಿಸಿಕೊಳ್ಳುತ್ತಿದ್ದ ರಾಜಣ್ಣ ಜಂಬದಿಂದ ಊದಿಕೊಂಡ. 'ಇಷ್ಟಾದ್ರೂ ಒಳ್ಳೆ ಭಾವನೆ ನನ್ನ ಮೇಲಿದೆಯಲ್ಲ, ನಾಗೂಗೆ. ಎಲ್ರ ಎದಿರು ನನ್ನನ್ನ ಬಿಟ್ಕೊಡೊಲ್ಲ ನಮ್ ನಾಗೂ. ಆದ್ರೆ, ಯಾರಿಲ್ದಿದ್ದಾಗ ನನ್ನನ್ನ ಕಾಲು ಕಸದ ಹಾಗೆ ನೋಡ್ತಾಳೆ. ಅದ್ಯಾಕೆ ಹಾಗ್ಮಾಡ್ತಾಳೋ .... ಎಂದು ಹೆಂಡತಿ ಬಗ್ಗೆ ಯೋಚಿಸುತ್ತಿದ್ದ.

ಸುಭದ್ರಮ್ಮ ಅವರ ಮನೆಗೆ ಹೋದದ್ದೇ ರಾಜಣ್ಣನಿಗೆ ಗೊತ್ತಾಗಲಿಲ್ಲ. ಓದುತ್ತಿರುವ ಪುಸ್ತಕ ಅಷ್ಟೊಂದು ಇಂಟರೆಸ್ಟಿಂಗ್ ಆಗಿತ್ತು. 'ಅಲ್ಲಾ....ಇವತ್ತು ರಾತ್ರಿ ಊಟ ಎಷ್ಟೊತ್ತಿಗೆ.... ?' ಅಂತ ನಾಗಮ್ಮ ಅವನ ಎದುರು ನಿಂತು ಕೇಳಿದಾಗಲೇ, ರಾಜಣ್ಣನಿಗೆ ಎಚ್ಚರವಾದದ್ದು.

'ಇದೇನು.... ಹೊಸ್ತಾಗಿ....? ಪ್ರತಿ ದಿನಾನೂ ನೀನು ಹೇಳಿದ ಹೊತ್ತಿಗೆ ಊಟ ಮಾಡೋದಲ್ವೇ.... ? ನೀನು ಹಾಕಿದ ಹೊತ್ತಿಗೆ ನಾನು ಊಟಕ್ಕೆ ತಯಾರಿ'.

'ಹೊಸ್ತೇನು ಬಂತು? ದಿನಾ ಊಟಕ್ಕಾಯ್ತಾ.... ಅಂತ ಕೇಳ್ತಿರಲಿಲ್ವೇ ನೀವು..?'

'ಹಸಿವೆ ಆದ್ದಕ್ಕೆ ಹಾಗೆ ಕೇಳುವುದು. ಅದೂ ಒಂದು ತಪ್ಪೇ ನನ್ನದೂ.... ?'

'ಸರಿ.... ಸರಿ.... ಈಗ ಊಟಕ್ಕೆ ಏಳಿ. ಬಿಸಿ–ಬಿಸಿ ಇದ್ದಾಗ್ಲೇ ಊಟ ಮುಗ್ಸಿಬಿಡೋಣ. ತಣ್ಣಗಾದರೆ ಊಟ ಏನೂ ರುಚಿ ಇರೊಲ್ಲ'.

ಮಾತಿಲ್ಲದೆ ರಾಜಣ್ಣ ಊಟದ ಮನೆ ಕಡೆ ಹೊರಟ. ಇನ್ನೇನು ಡೈನಿಂಗ್ ಟೇಬಲ್ ಮುಂದೆ ಕುಳಿತುಕೊಳ್ಳಬೇಕು ಅನ್ನುವಷ್ಟರಲ್ಲಿ 'ಹೋಗಿ, ಕೈತೊಳ್ಕೊಂಡು ಬನ್ನಿ. ಏನೇನು ಮುಟ್ಟಿದ್ದೀರೊ ಆ ಕೈನಲ್ಲಿ....' ಎಂದು ನಾಗಮ್ಮ ಗಂಡನಿಗೆ ಆಜ್ಞಾಪಿಸಿದಳು.

'....ಹ್ಞೂ....' ಎಂದು ನಿಟ್ಟುಸಿರುಬಿಡುತ್ತ ರಾಜಣ್ಣ ಅಡುಗೆಮನೆ ಸಿಂಕ್‌ನಲ್ಲಿ ಕೈ ತೊಳೆದು ಬಂದು ಊಟಕ್ಕೆ ಕುಳಿತ..... ಸದ್ಯ, 'ಅಡುಗೆ ಮನೆ ಸಿಂಕ್‌ನಲ್ಯಾಕೆ ಕೈತೊಳಿತೀರಿ? ಬಾತ್‌ರೂಮ್ ಸಿಂಕ್‌ನಲ್ಲಿ ತೊಳ್ಕೊಂಡು ಬನ್ನಿ....'ಅಂತ ಹೇಳ್ಲಿಲ್ಲವಲ್ಲ. ನನ್ನ ಅದೃಷ್ಟ.... ಅಂತ ಯೋಚಿಸಿತ್ತ ತಟ್ಟೆಗೆ ಕೈ ಹಾಕಿದ.

ಅಡುಗೆ ಎಲ್ಲ ಬಹಳ ರುಚಿಯಾಗಿತ್ತು. ತನ್ನ ಹೆಂಡತಿ ಅಡುಗೆಯಲ್ಲಿ ತುಂಬ ಜಾಣೆ ಅನ್ನೋದನ್ನ ರಾಜಣ್ಣ ಯಾವಾಗಲೂ ಒಪ್ಪಿಕೊಳ್ಳುತ್ತಿದ್ದ. ಮಾತ್ರವಲ್ಲ; ಬಂದವರೆದುರೆಲ್ಲ ಅವಳ ಅಡುಗೆಯನ್ನು ಹೊಗಳುತ್ತಿದ್ದ ಕೂಡ. ಆದರೆ, ಅವತ್ತಿನ ಸಾರಿಗೆ ಉಪ್ಪು ಸ್ವಲ್ಪ ಕಡಿಮೆ ಎಂದೆನಿಸಿತು ಅವನಿಗೆ. ಹಾಗೆಂದು ನಾಗಮ್ಮನಿಗೆ ಹೇಳಿದ.

'ನಿಮಗೆ ಕಂಪ್ಲೈಂಟ್ ಮಾಡ್ದೆ ಊಟ ಮಾಡೋಕೇ ಬರಲ್ವಾ....? ಏನಾದ್ರೂ ಊನ ಹೇಳ್ತಾನೇ ಇರಬೇಕಲ್ಲ? ಉಪ್ಪೂ ಸಾಕು.... ಗಿಪ್ಪೂ ಸಾಕು. ಸುಮ್ಮನೆ ಊಟ ಮಾಡಿ.... ಉಪ್ಪು ಜಾಸ್ತಿ ತಿಂದ್ರೆ ಬ್ಲಡ್ ಪ್ರೆಶರ್ ಜಾಸ್ತಿಯಾಗುತ್ತೆ. ಮೊದ್ಲೇ ನಿಮ್ಮ ಪ್ರೆಶರ್ ಜಾಸ್ತಿ. ಇನ್ನು ಉಪ್ಪು ಜಾಸ್ತಿ ತಿಂದು ಅದನ್ನ ಇನ್ನೂ ಜಾಸ್ತಿ ಮಾಡ್ಕೊಳ್ಳೋದು ಬೇಡ' ಎಂದು ಗಂಡನ ಬಾಯಿ ಮುಚ್ಚಿಸಿದಳು ನಾಗಮ್ಮ.

ಅವತ್ತು ಬಾಳೆಹಣ್ಣಿನ ಸೀಕರಣೆ ಮಾಡಿದ್ದಳು. ರಾಜಣ್ಣನಿಗೆ ಸ್ವೀಟ್ ಅಂದರೆ ತುಂಬ ಇಷ್ಟವೆಂದು ಅವಳಿಗೆ ತಿಳಿದದ್ದೇ ! ಸೀಕರಣೆಯನ್ನು ತಿನ್ನುತ್ತ, ರಾಜಣ್ಣ ಸುಮ್ಮನಿರಲಾರದೆ, 'ಇದಕ್ಕೆ ಈಕ್ವಲ್ ಸ್ವಲ್ಪ ಜಾಸ್ತಿ ಹಾಕ ಬೇಕಾಗಿತ್ತು' ಎಂದು ಹೆಂಡತಿಯ ಕಡೆ ನೋಡುತ್ತ ಹೇಳಿದ.

'ತಿರುಗಿ ನಿಮ್ಮ ಕಂಪ್ಲೈಂಟ್ ಶುರುವಾಯ್ತಲ್ಲ.... ಸ್ವೀಟ್ ಜಾಸ್ತಿ ತಿಂದ್ರೇ ಈಗ ಡಯಾಬಿಟಿಸ್ ಬರ್‍ತೊಂಡ್ರಿ ನೀವು....'

'ನಿನಗೆ ನನ್ನ ತಪ್ಪನ್ನು ಎತ್ತಿ ಹೇಳುವುದೇ ಒಂದು ತರ ಖುಷಿ ಕೊಡುತ್ತೆ ಅಂತ ಕಾಣುತ್ತೆ, ಅಲ್ವೇ?' ರಾಜಣ್ಣ ಹೇಳಿದ.

'ನಿಮ್ಗೆ ಇಷ್ಟ ಅಂತ್ಲೇ ನಾನು ಸೀಕರಣೆ ಮಾಡಿದ್ದು. ಅದನ್ನ ನೀವು ಎಣಿಸೋದೇ ಇಲ್ವಲ್ಲ'. ರಾಜಣ್ಣ ಮನಸ್ಸಿನಲ್ಲೇ ಅಂದುಕೊಂಡ '....ಅದೇನೋ ನಿಜ.... ಬಹುಶಃ ನನ್ನ ಒಳಿತಿಗೇ ಅವಳು ಎಲ್ಲ ಮಾಡುತ್ತಿರಬೇಕು.... ಆದರೂ ಮೂರ್‍ಹೊತ್ತೂ ಅದ್ಯಾಕೆ ಹೀಗೆ ನನ್ನನ್ನ ಗೋಳ್ಹೊಯ್ದು ಕೊಳ್ಳುತ್ತಿದ್ದಾಳೆ....? ನನ್ನ ಮೇಲೆ ಸವಾರಿ ಮಾಡೋದು ಅಂದ್ರೆ ಅವಳಿಗೆ ಇಷ್ಟಾ ಅಂತ ಕಾಣ್ಸತ್ತೆ....'

ಊಟ ಮುಗಿಸಿ ಟೀವಿ ಮುಂದೆ ಕುಳಿತ ರಾಜಣ್ಣ. ಆದರೆ, ಸ್ವಲ್ಪ ಹೊತ್ತಿಗೇ ಅವನಿಗೆ ತಿಳಿಯದಂತೆ ನಿದ್ರಾದೇವಿಯ ಪಾಶಕ್ಕೊಳಗಾದ. ಟೀವಿ ಮಾತ್ರ ಅದರಷ್ಟಕ್ಕೆ 'ಕೊಯ್ಙ್ಙ... ಕೊಯ್ಙ್ಙ....' ಅಂತ ಹೇಳುತ್ತಲೇ ಇತ್ತು, ರಾಜಣ್ಣನ ನಿದ್ರೆ ಮುಂದುವರಿಯುತ್ತಲೇ ಇತ್ತು. ಸ್ವಲ್ಪ ಹೊತ್ತಿನಲ್ಲೆ 'ಇದೇನಿದು, ಬಾಯಿ ತೆರ್‍ಕೊಂಡು ಗೊರ್ಕೆ ಹೊಡೀತಿದ್ದೀರಲ್ಲ.... ಶಬ್ಧ ಊರಾಚೆಗೆ ಕೇಳ್ಸುವಂತಿದೆ.... ಸ್ವಲ್ಪ ಬಾಯಿ ಮುಚ್ಕೊಂಡಿರಿ.... ಟೀವಿಯಲ್ಲಿ ಅದೇನು ಬರುತ್ತ್ಯೋ ನಿಮ್ಮ ಗೊರ್ಕೆಲೀ ಗೊತ್ತೇ ಆಗ್ತಿಲ್ಲ...' ನಾಗಮ್ಮ ಗಂಡನನ್ನು ಮೊಣಕೈಯಿಂದ ತಿವಿಯುತ್ತ ಸ್ವಲ್ಪ ಏರು ಸ್ವರದಲ್ಲೇ ಹೇಳಿದಳು. ನಿದ್ರೆ ಹೊಡೆಯುತ್ತಿದ್ದ ರಾಜಣ್ಣ ದಡಬಡನೆ ಎದ್ದು 'ಅಲ್ಲಾ.... ನಾನು ನಿದ್ರೆ ಮಾಡೋದೂ ನಿನ್ಗೊಂದು ಸಮಸ್ಯೆಯಾಗಿ ಹೋಯ್ತಲ್ಲ....'ಎಂದು ಉತ್ತರ ನೀಡಿದ.

'ನಿದ್ರೆ ಬಂದ್ರೆ ಹೋಗಿ ಹಾಸ್ಗೆ ಮೇಲೆ ಮಲ್ಗಿ. ಅಂಗಾತನೆ ಮಲ್ಗಬೇಡಿ. ಗೊರ್ಕೆ ಹೊಡೀತಾ ಇರ್ತೀರಿ. ಮಗ್ಗುಲಲ್ಲೇ ಮಲ್ಗಿ.... ತಿಳಿತೇ...?'ನಾಗಮ್ಮ ಗಂಡನಿಗೆ ಆರ್ಡರ್ ಮಾಡಿದಳು.

ಸೋಫಾದಿಂದ ಏಳುತ್ತ, ಮನಸ್ಸಿನಲ್ಲೇ '....ರಾತ್ರಿ ನಿದ್ರೆ ಬಂದ್ಮೇಲಾದ್ರೂ ಇವಳ ಪಿರಿಪಿರಿ ಮುಗಿದೀತು, ಸದ್ಯ'ಎಂದು ಮಲಗುವ ಕೋಣೆಯ ಕಡೆ ಹೊರಟ. ಅಷ್ಟು ಹೊತ್ತು, ಟೀವಿ ಮುಂದೆ ಸೋಫಾದ ಮೇಲೆ ನಿದ್ರೆ ಮಾಡುತ್ತಿದ್ದರೂ, ಹಾಸಿಗೆ ಮೇಲೆ ಮಲಗಿದಾಗ

ಆ ನಿದ್ರೆ ಓಡಿ ಹೋಗಿತ್ತು. ಹಾಗೇ ಹಾಸಿಗೆ ಮೇಲೆ ಹೊರಳುತ್ತ, ತನ್ನ ಹೆಂಡತಿಯ ಅಬ್ಬರದವರ್ತನೆಯನ್ನೆ ಯೋಚಿಸುತ್ತಿದ್ದರಾಜಣ್ಣ. ಯೋಚಿಸಿದಷ್ಟೂ, ಹೆಂಡತಿಯ ವರ್ತನೆಯ ಬಗ್ಗೆ ಅವನಲ್ಲಿ ಜಿಗುಪ್ಸೆ ಹುಟ್ಟುತ್ತಿತ್ತು '....ಮಾತು ಮಾತಿಗೂ ಇವಳದು ಅಧಿಕಾರ ವಾಣಿ.... ಇತ್ತೀಚೆಗಂತೂ ಇವಳದ್ದು ಅತಿಯಾಗುತ್ತಿದೆ.... ಬೇರೆ ಎಲ್ಲಾದ್ರೂ ಓಡಿ ಹೋಗ್ಬೇಕೆನಿಸುತ್ತೆ.... ಎಲ್ರಿಗೂ ಒಳ್ಳೊಳ್ಳೆ ಹೆಂಡಂದಿರಿರ್ತಾರೆ. ನನಗ್ಯಾಕೆ ಈ ಡಿಕ್ಟೇಟರ್ ಹೆಂಡತೀನ ಆ ದೇವರು ದಯಪಾಲಿಸಿದ್ನೋ....? ಎಷ್ಟು ದಿನಗಳವರೆಗೆ ಈ ನರಕ ಯಾತ್ನೇನ ಅನುಭವಿಸ್ಬೇಕೋ, ತಿಳಿಯೆ....' ಅವನ ಯೋಚನೆ ಲಗಾಮು ಇಲ್ಲದ ಕುದುರೆಯಂತೆ ಜಿಗಿ-ಜಿಗಿದು ಓಡುತ್ತಿತ್ತು. ಎಷ್ಟು ಹೊತ್ತಿಗೆ ನಿದ್ರೆ ಬಂತೋ ಅವನಿಗೆ ಅರಿವಿರಲಿಲ್ಲ. ಆದರೆ, ನಿದ್ರೆ ಬರುವ ಮುಂಚೆ ಎಲ್ಲಾದರೂ ಓಡಿ ಹೋಗಬೇಕು... ಇವಳಿಂದ ಬಿಡುಗಡೆ ಪಡೆಯಬೇಕು....ಎಂಬ ಆಲೋಚನೆಯೇ ಅವನ ತಲೆಯಲ್ಲಿ ಮತ್ತೆ ಮತ್ತೆ ಸುಳಿಯುತ್ತಿತ್ತು.

೨

ಇದ್ದಕ್ಕಿದ್ದಂತೆ ರಾತ್ರಿ ಒಂದೂವರೆಯ ಹೊತ್ತಿಗೆ ರಾಜಣ್ಣನಿಗೆ ಎಚ್ಚರವಾಯ್ತು. ನಾಗಮ್ಮ ಪಕ್ಕದಲ್ಲಿ ಗಾಢ ನಿದ್ರೆಯಲ್ಲಿದ್ದಳು. ತಿರುಗಿ ಅವನ ತಲೆಯಲ್ಲಿ....ಎಲ್ಲಾದರೂ ಓಡಿ ಹೋಗಬೇಕು.... ಇಲ್ಲಿಂದ ಬಿಡುಗಡೆಯಾಗಬೇಕು....ಎಂಬ ಯೋಚನೆಯೇ ಸುಳಿಯ ತೊಡಗಿತು. ಹೆಂಡತಿಗೆ ಎಚ್ಚರವಾಗದಂತೆ, ಮೆತ್ತಗೆ ಎದ್ದು, ಲಿವಿಂಗ್‌ರೂಮಿಗೆ ಬಂದ. ಅಲ್ಲಿ ಸೋಫಾದ ಮೇಲೆ ಕುಳಿತು ಯೋಚಿಸಹತ್ತಿದ. ಮತ್ತೆ ಅವನ ತಲೆಯಲ್ಲಿ ಸುಳಿದದ್ದು '....ಎಲ್ಲಾದರೂ ಓಡಿ ಹೋಗಬೇಕು....ಈ ಶೂರ್ಪನಕೆಯ ಕೈಯಿಂದ ಬಿಡಿಸಿ ಕೊಳ್ಳಬೇಕು....' ಎಂಬ ಯೋಚನೆ '....ಹ್ಞೂ.... ಯಾಕೆ ಓಡಿಹೋಗಬಾರದು....? ನನಗೆ ಇವಳೊಬ್ಬಳೇ ಗತಿಯೇನು? ಬೇರೆಲ್ಲಾದರೂ ಒಳ್ಳೆಯ ಕೆಲಸ ಸಿಕ್ಕುವುದೇನೂ ಕಷ್ಟವಾಗ ಲಾರದು. ಇಲ್ಲಿಂದ ಬಿಡುಗಡೆ ಹೊಂದಿ ಹಾಯಾಗಿರಬಹುದು....' ಎಂದೆಲ್ಲ ಯೋಚಿಸುತ್ತ ಒಂದು ಸೂಟ್‌ಕೇಸ್‌ನಲ್ಲಿ ತನಗೆ ಬೇಕಾದ ಬಟ್ಟೆ, ಮತ್ತಿತರ ಸಾಮಾನುಗಳನ್ನು ತುಂಬಿಸಿದ. ಮಲಗುವ ಕೋಣೆಗೆ ಬಂದು 'ಗುಡ್ ಬೈ, ನಾಗೂ.... ನಾಳೆ ಬೆಳಿಗ್ಗೆ ನೀನು ಏಳೋದ್ರಲ್ಲಿ ನಾನಿಲ್ಲ ಇಲ್ಲಿ.... ಇನ್ನು ನಿನ್ನ ಕೈಯಲ್ಲಿ ಅನಿಸಿಕೊಳ್ಳುವರ್ಯಾರೂ ಇರುವುದಿಲ್ಲ. ನಿನ್ನಿಂದ ಬಿಡುಗಡೆ ಹೊಂದಿ ನಾನೆಲ್ಲಾದ್ರೂ ಸುಖದಿಂದ ಇರ್ತೇನೆ. ಮತ್ತೆ.... ನನ್ನನ್ನ ಹುಡ್ಕೋ ಪ್ರಯತ್ನಕ್ಕೆ ಹೋಗ್ಬೇಡ.... ಹುಡ್ಕಿದ್ರೆ ನಾನು ನಿನ್ನ ಕೈಗೆ ಸಿಗುವವನೂ ಅಲ್ಲ....'ಎಂದು ಹೇಳಿ, ಶಬ್ದ ಮಾಡದೆ ಮನೆಯಿಂದ ಹೊರಬಂದ ರಾಜಣ್ಣ.

ಸೂಟ್‌ಕೇಸ್‌ನ್ನು ಹೊತ್ತು ಬಹಳ ದೂರ ಬಂದ. ದಾರಿಯಲ್ಲಿ 'ತಾನು ಹೀಗೆ ಓಡಿ ಬರುತ್ತಿರುವುದು ಸರಿಯೇ....?' ಎಂಬ ಆಲೋಚನೆ ಅವನಿಗೆ ಬಂದಿತ್ತು. ತನಗೆ ತಾನೇ

ಸಮಾಧಾನ ಹೇಳಿಕೊಂಡ. 'ಎಷ್ಟು ದಿನಗಳವರೆಗೆ ಆ ನರಕ ಯಾತನೆಯನ್ನು ಅನುಭವಿಸುವುದು....?....ನನಗೂ ಸಾಕಾಗಿ ಹೋಗಿದೆ.... ಒಂದೆರಡು ದಿನ ಅವಳು ನನ್ನ ಮೇಲೆ ಕೋಪಗೊಂಡಾಳು.... ಆಮೇಲೆ ಎಲ್ಲಾ ಸರಿ ಹೋದೀತು.... ಮಗ, ಶ್ರೀಕಾಂತ ತಾಯಿಯ ಹೆಲ್ಪ್‌ಗೆ ಬಂದಾನು, ಅವನ ಹೆಂಡತಿ ಅವನನ್ನು ಬಿಟ್ಟರೆ.... ಮಗಳು ಅರ್ಚನ ತಾಯಿಯ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸಿಯಾಳು.... ನಾಗುವನ್ನು ತನ್ನ ಮನೆಗೇ ಕರೆದುಕೊಂಡು ಹೋದಾಳು.... ನನ್ನ ವರ್ತನೆಯ ಬಗ್ಗೆ ಅರ್ಚನಾ ಜಿಗುಪ್ಸೆಗೊಂಡಾಳು... ಆದರೇನು ?.... ನನ್ನ ಒಳಿತನ್ನು ನಾನು ನೋಡಿಕೊಳ್ಳಬೇಕಲ್ಲವೇ....?.... ಯಾರೂ ನನ್ನ ಬಗ್ಗೆ ಯೋಚಿಸಲಾರರು.... ನಾನೊಬ್ಬ ನನ್ನ ಸಂಸಾರದಲ್ಲೇ ತೀರ ಅಪರಿಚಿತನಾಗಿದ್ದೇನೆ.... ಅವರೆಲ್ಲರೂ ಒಂದೇ.... ನಾನೊಬ್ಬನೇ ಬೇರೆ.... ಅಷ್ಟಿದ್ದ ಮೇಲೆ ಅವರೆಲ್ಲರ ಯೋಚನೆ ನಾನ್ಯಾಕೆ ಮಾಡಬೇಕು....? ನನ್ನ ಭವಿಷ್ಯ ನನ್ನ ಕೈಯಲ್ಲಿ ' ಎಂಬೆಲ್ಲ ಯೋಚನೆ ಅವನ ತಲೆಯಲ್ಲಿ ಸುಳಿಯುತ್ತಲೇ ಇತ್ತು.

ಸ್ವಲ್ಪ ದೂರ ಬಂದ ಮೇಲೆ, ಅವನೊಂದು ಕವಲೊಡೆದ ದಾರಿಗೆ ಬಂದ. ಒಂದು ರಸ್ತೆ ಎಡಗಡೆ ; ಇನ್ನೊಂದು ಬಲಗಡೆ ಹರಿದಿತ್ತು. ಕವಲು ಬುಡದಲ್ಲಿ ನಿಂತು ಯೋಚಿಸ ಹತ್ತಿದ 'ಎಡದಾರಿ ಹಿಡಿಯಲೋ ಅಥವಾ ಬಲ ದಾರಿ ತುಳಿಯಲೋ....?' ಎಂದು. ಬಹಳ ಹೊತ್ತು ಆ ಬಗ್ಗೆ ಯೋಚನೆ ಮಾಡುತ್ತಾ ನಿಂತ. ಕೊನೆಗೆ 'ಏನಾದ್ರೂ ಆಗ್ಲಿ, ಬಲ ದಾರಿಯಲ್ಲೇ ಹೋಗ್ತೀನಿ. ಆಗ ತನ್ನ ಅದೃಷ್ಟ ಖುಲಾಯಿಸಿ, ತನಗೆ ಒಳ್ಳೆದೇ ಆಗಬಹುದು. ಯಾವಾಗಲೂ ಶುಭವನ್ನೇ ಕೋರಬೇಕು.... ಈ ದಾರಿ ಹಿಡದ್ರೆ, ತನಗೆ ಖಂಡಿತ ಶುಭವೇ ಆಗತ್ತೆ....' ಎಂದು ಎಣಿಸಿ, ಬಲ ಕವಲದಾರಿಯನ್ನು ತುಳಿಯಲು ಪ್ರಾರಂಭಿಸಿದ.

ರಾಜಣ್ಣ ರಾತ್ರಿಯೆಲ್ಲ ನಡೆದು, ಬಹಳ ದೂರ ಸಾಗಿದ ಆ ದಾರಿಯಲ್ಲಿ. ಬೆಳಗಿನ ಜಾವದ ಹೊತ್ತಿಗೆ ಅವನು ಬಕಲಾಪುರವೆಂಬ ಒಂದು ಪಟ್ಟಣಕ್ಕೆ ಬಂದಿದ್ದ. ಸೂಟ್‌ಕೇಸ್ ಹೊತ್ತು ಅವನ ಕೈ ಬಡವಾಗಿತ್ತು. ಹೊಟ್ಟೆಯೂ ಚುರಿಚುರಿ ಎನ್ನುತ್ತಿತ್ತು. ಹಾಗೇ ಒಂದು ರಸ್ತೆ ಪಕ್ಕದಲ್ಲಿರುವ ಬೆಂಚಿನ ಮೇಲೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಕುಳಿತ. ಇಷ್ಟು ಹೊತ್ತಿಗೆ ನಾಗು ಎದ್ದಿರಬಹುದು.... ಪಕ್ಕದಲ್ಲಿ ನಾನಿರದಿದ್ದುದನ್ನು ಕಂಡು 'ಏನ್ರೀ.... ಆಗಲೇ ಬಾತ್‌ರೂಮಿನಲ್ಲಿ ಕುಳಿತಾಯ್ತೇ....? ಬೇಗ ಹೊರಗ್ಬನ್ನಿ.... ನನ್ಗೆ ಸ್ವಲ್ಪ ಅರ್ಜೆಂಟ್....' ಅಂತ ಕಿರುಚ್ತಿರಬಹುದು. ಅವಳ ಆರ್ಭಟ ಸುಮ್ಮನೆ... ಅದನ್ನು ಕೇಳಸ್ಕೊಳ್ಳೋದಕ್ಕೆ ನಾನಿರುವುದಿಲ್ಲ.... ಬಾತ್‌ರೂಮಿನಲ್ಲಿ ನಾನಿಲ್ಲದಿರುವುದನ್ನು ಗಮನಿಸಿ ಸ್ವಲ್ಪ ಗಾಬರಿಯಾದಾಳು.... ಅದೇನೇ ಇರಲಿ.... ನಾನ್ಯಾಕೆ ಆ ಆಲೋಚನೆ ಮಾಡಿ ತಲೆ ಕೆಡಸ್ಕೋಬೇಕು....? 'ಇನ್ನು ಮುಂದೆ, ನಾಗೂ.... ಈ ರಾಜಣ್ಣ ನಿನ್ನ ಹಡ್ತಕ್ಕೆ ಸಿಗುವವ್ನಲ್ಲ .. ಈಗ ನಾನು ಸ್ವತಂತ್ರನಾಗಿದ್ದೀನಿ.... ನಿನ್ನ ಹಂಗಿಲ್ಲ ನನಗೆ....' ಎಂದೆಲ್ಲ ಯೋಚಿಸುತ್ತಿದ್ದರೂ,

ಹೊಟ್ಟೆ ಚುರಿಚುರಿ ನಿಲ್ಲಲಿಲ್ಲ. ಎಲ್ಲಾದರೂ ಹೊಟೇಲನ್ನು ಹುಡುಕಿ ಹೊಟ್ಟೆ ಭರ್ತಿ ಮಾಡಿಕೊಳ್ಳಬೇಕು. ಪೂರಿಸಾಗು, ಮಸಾಲೆದೋಸೆ, ವಡೆಸಾಂಬಾರ್.... ಎಲ್ಲ ತಿನ್ತೇನೆ ಇವತ್ತು. 'ಅದು ಬೇಡ.... ಇದು ಬೇಡ....' ಎಂದು ಹೇಳೋಕೆ ನಾಗು ಇರೊಲ್ಲ.... ಅಹಾ ಎಂತಹ ಅದೃಷ್ಟ ನನ್ನದು ಈದಿನ..!... ಇಷ್ಟೆಲ್ಲ ಯೋಚಿಸುತ್ತಿದ್ದಂತೆ, ಪೂರಿ-ಸಾಗು.... ಇನ್ನಿತರ ತಿಂಡಿ ತಿನ್ನಲು ತನ್ನ ಬಳಿ ಬೇಕಾದಷ್ಟು ಕಾಸಿದೆಯೇ....? ಎಂಬ ಯೋಚನೆ ಅವನ ತಲೆಯಲ್ಲಿ ಸುಳಿಯಿತು. ಪ್ಯಾಂಟಿನ ಜೇಬಿಗೆ ಕೈಹಾಕಿ ನೋಡಿದ. ಪರ್ಸ್ ಹೊರಗೆ ತೆಗೆದ.... 'ಅರೆ....ರೆ....ರೇ.... ಏನಿದು ಪರ್ಸ್ ತುಂಬಾ ಹಣ.... ಎಂಟು-ಹತ್ತು ಸಾವಿರಕ್ಕೂ ಹೆಚ್ಚಾಗಿದೆ ಹಣ.... ಬಹುಶಃ ನಾಗು ನನ್ನ ರಿಟೈರ್ಮೆಂಟ್ ದುಡ್ಡನೆಲ್ಲ ಈ ಪರ್ಸ್‌ನಲ್ಲಿಟ್ಟಿರಬೇಕು... ಒಳ್ಳೆಯದೇ ಆಯ್ತು....ಆದರೆ.... ನಾಗು ಮನೆ ಖರ್ಚಿಗೇನು ಮಾಡುತ್ತಾಳೆ, ತಾನು ಈ ಹಣ ತಂದಾಗ....?.... ಏನೇ ಮಾಡಿಕೊಳ್ಳಲಿ.... ನನಗೇನು....? ಈ ತಿಂಗಳಿನ ನನ್ನ ರಿಟೈರ್ಮೆಂಟ್ ಕಂತು ಹ್ಯಾಗೂ ಬರುತ್ತದೆ.... ಅದನ್ನು ಉಪಯೋಗಿಸಿ ಕೊಳ್ಳುತ್ತಾಳೆ..... ಅಷ್ಟರವರೆಗೆ ಯಾರಿಂದಾದರೂ ಸಾಲ ಕೊಂಡಾಳು.... ಅವಳಷ್ಟು ಹೆಡ್ಡಿಯಲ್ಲ.... ಏನಾದರೂ ಮಾಡಿಯಾಳು..... ಅಲ್ಲದೆ ಮಕ್ಕಳು ಅವಳ ಸಹಾಯಕ್ಕೆ ಬಾರದಿರುತ್ತಾರೆಯೆ .....? ಛೀ.... ತಿರುಗಿ ಅವಳದೇ ಯೋಚನೆ ಮಾಡ್ತಿದ್ದೀನಲ್ಲ.... ಬಿಟ್ಟು ಬಂದಮೇಲೆ ಅವಳ ಯೋಚನೆ ನಾನು ಬಿಡ್ಬೇಕು' ಹೀಗೆಲ್ಲ ಎಣಿಸುತ್ತ ಹೊಟೇಲ್ ಹೊಕ್ಕಿದ. ಹೊಟ್ಟೆ ತುಂಬ ಯಾರ ಆತಂಕವೂ ಇಲ್ಲದೆ, ಮಸಾಲೆ ದೋಸೆ, ಪೂರಿ-ಸಾಗು, ವಡೆ-ಸಾಂಬಾರ್, ಇಡ್ಲಿ-ಚಟ್ನಿ, ಉಪ್ಪಿಟ್ಟು.... ಎಲ್ಲ ತಿಂದು, ಬಿಲ್ ಪಾವತಿ ಮಾಡಿ ಅಲ್ಲಿಂದ ಹೊರಬಿದ್ದ.

ಇನ್ನು ತಾನು ಮಾಡಬೇಕಾದ ಕಾರ್ಯವೆಂದರೆ ಇರಲು ಒಂದು ಮನೆ, ಜೀವನ ಸಾಗಿಸಲು ಒಂದು ಉದ್ಯೋಗ ಇವೆರಡನ್ನು ಹುಡುಕಬೇಕು. ಹಂಗಾಮಿಯಾಗಿ ಒಂದು ಹೊಟೇಲ್‌ನಲ್ಲಿ ರೂಮ್ ಪಡೆದರಾಯ್ತು. ಕೆಲಸಕ್ಕೆ ಇಲ್ಲೇ ಯಾವುದಾದರೊಂದು ಸ್ಕೂಲಿನಲ್ಲಿ ಮೇಷ್ಟ್ರ ಕೆಲ್ಸ ಸಿಕ್ಕಿದರೂ ಸಾಕು. ಪ್ರೊಫೆಸರ್ ಆಗಿ ರಿಟೈರ್ ಆದ ತನಗೆ ಸ್ಕೂಲ್ ಮೇಷ್ಟ್ರ ಕೆಲ್ಸ ಸಿಕ್ಕುವುದು ಕಷ್ಟವಾಗುತ್ತದೆಯೇ ?

ಒಂದೆರಡು ದಿನಗಳಲ್ಲೆ, ವಾಸಕ್ಕೊಂದು ಪುಟ್ಟ ಮನೆ ಬಾಡಿಗೆಗೆ ಗೊತ್ತುಮಾಡಿಕೊಂಡ. ಯಾರನ್ನೋ ಭೇಟಿ ಮಾಡಿ ಅಲ್ಲಿನ ಹೈಸ್ಕೂಲಿನಲ್ಲಿ ಮೇಷ್ಟ್ರ ಕೆಲಸವೂ ಸಿಕ್ಕಿತು. ಯಾವ ಹಾಳು-ಹರಟೆ ಇಲ್ಲದೆ ಅವನ ಜೀವನ ಸಾಗುತ್ತಿತ್ತು. ಆಗೊಮ್ಮೆ-ಈಗೊಮ್ಮೆ ನಾಗುವಿನ ನೆನಪಾದರೂ, ತನ್ನ ಹಿಂದಿನ ಜೀವನವನ್ನು ಮನಸ್ಸಿನಿಂದ ತಾನಾಗಿಯೇ ದೂರಮಾಡಲು ರಾಜಣ್ಣ ಯತ್ನಿಸುತ್ತಿದ್ದ. ತನ್ನ ಕೆಲಸದಲ್ಲಿ ಅವನು ತೃಪ್ತಿ ಪಡೆದಿದ್ದ. ಪಾಠ ಹೇಳಿಕೊಡುವ ಅವನ ವಿದ್ಯಾರ್ಥಿಗಳೆಲ್ಲ ಅವನನ್ನು ತುಂಬಾ ಗೌರವಿಸುತ್ತಿದ್ದರು. ಎಲ್ಲರೂ ಅವನ ಪಾಠವನ್ನು

ಮೆಚ್ಚಿದ್ದರು. ಸ್ಕೂಲಿನ ಇತರ ಉಪಾಧ್ಯಾಯ-ಉಪಾಧ್ಯಾಯಿನಿಯರೂ ಅವನನ್ನು ಬಹುವಾಗಿ ಮೆಚ್ಚಿದ್ದರು. ಅವನು ಊರಿನಲ್ಲೆಲ್ಲ ಜನಪ್ರಿಯನಾಗುತ್ತ ಬಂದ.

ಆದರೂ, ನಾಗುವಿನ ನೆನಪು ಅವನನ್ನು ಕಾಡುತ್ತಲೇ ಇತ್ತು. ಹೀಗೆ, ಒಮ್ಮೆ ಅವನು ಪಾಠ ಮಾಡಿ ಮುಗಿಸಿ ಟೀಚರ್ಸ್ ರೂಮಿನಲ್ಲಿ ಕುಳಿತು ನಾಗುವಿನ ಬಗ್ಗೆ ಯೋಚಿಸುತ್ತಿದ್ದಾಗ, ಸಹ-ಉದ್ಯೋಗಿನಿ ಕ್ರಿಶ್ಚಿನಾ, ಅವನ ಬಳಿ ಬಂದು, 'ಏನು ರಾಜಾರಾಮ್ ಬಹಳವಾಗಿ ಯೋಚಿಸುವಂತಿದೆಯಲ್ಲ....?' ಎಂದು ರಾಗಮಾಡಿ ಕೇಳಿದಳು. ಹೊಡೆದೆಬ್ಬಿಸಿದವನಂತೆ ಎಚ್ಚೆತ್ತು ರಾಜಣ್ಣ 'ಏನಿಲ್ಲ.... ನಾಳೆಯ ಪಾಠದ ಬಗ್ಗೆ ಯೋಚಿಸುತ್ತಿದ್ದೆ.....' ಎಂದು ಸುಳ್ಳು ಹೇಳಿದ. ಕ್ರಿಶ್ಚಿನಾ ಆ ಸ್ಕೂಲಿನಲ್ಲಿ ಅತಿ ಜನಪ್ರಿಯ ಟೀಚರ್. ಅವಳ ವಯಸ್ಸು ಸುಮಾರು ಐವತ್ತಿರಬಹುದಾದರೂ, ನೋಡಲು ಇನ್ನೂ ೩೦-೩೫ ವರ್ಷದವಳಂತೆ ಕಾಣುತ್ತಿದ್ದಳು ಎಲ್ಲ ಅಧ್ಯಾಪಕರೂ ಅವಳ ಸ್ನೇಹ ಬಯಸುತ್ತಿದ್ದರು. ರಾಜಣ್ಣನೂ ಅವಳ ಸಾಮೀಪ್ಯ ಬಯಸುತ್ತಿದ್ದರೂ, ತಾನಾಗಿಯೇ ಅವಳನ್ನು ಸಂಪರ್ಕಿಸಲು ಯಾಕೋ ತುಂಬ ಅಳುಕುತ್ತಿದ್ದ. ಆದರೂ, ಮನಸ್ಸಿನಲ್ಲೇ ಅವಳನ್ನು ಮೆಚ್ಚುತ್ತಿದ್ದ. ಈಗ ಅವಳಾಗಿಯೇ ಅವನನ್ನು ಮಾತಾಡಿಸಿದಾಗ ಅವನ ಆಸೆ ಚಿಗುರಿತು.

'ನೀವು ಈ ಸ್ಕೂಲ್ ಸೇರಿದಂದಿನಿಂದ ಗಮನಿಸುತ್ತಿದ್ದೇನೆ. ಯಾವುದೋ ವಿಚಾರ ನಿಮ್ಮ ತಲೆ ತಿನ್ನುತ್ತಿದೆ ಅಲ್ಲವೇ? ಕೆಲವೊಮ್ಮೆ ಒಬ್ಬರೇ ಕುಳಿತು ಅದೇನೋ ಯೋಚನೆ ಮಾಡುತ್ತಿರುತ್ತೀರಿ' ಎಂದು ಕ್ರಿಶ್ಚಿನಾ ಮಾತು ಮುಂದುವರಿಸಿದಳು.

'ಏನೂ ಇಲ್ಲ.... ಊರು ಬಿಟ್ಟು ಬಂದಿದ್ದೇನೆ.... ಆಗಾಗ್ಗೆ ಮನೆ ಯೋಚನೆ ಬರ್ತಾ ಇದೆ. ಅದನ್ನೇ ನೀವು ಕಂಡಿರಬೇಕು'.

'ಹೌದೇ....? ಯಾರಿದ್ದಾರೆ ಮನೆಯಲ್ಲಿ? ಹೆಂಡತಿ ಮಕ್ಕಳು ಇದ್ದಾರೆಯೇ? ಇಲ್ಲಿ ನೀವೊಬ್ಬರೇ ಒಂಟಿ ಜೀವನ ನಡೆಸುತ್ತಿದ್ದೀರಾ ?'

ಹೀಗೆ ಮಾತಿಗೆ ಮಾತು ಬೆಳೆದುಬಂದು, ರಾಜಣ್ಣ ತನ್ನೆಲ್ಲ ವಿಚಾರವನ್ನೂ ಅವಳೊಡನೆ ತೋಡಿಕೊಂಡ. ಕ್ರಿಶ್ಚಿನಾ ಬಹಳ ಕುತೂಹಲದಿಂದ ಅವನ ವಿಚಾರ ಕೇಳುತ್ತಿದ್ದಳು, ಹಾಗೂ ಅವನ ಬಗ್ಗೆ ಸಹಾನುಭೂತಿಯನ್ನು ತೋರಿಸುತ್ತಿದ್ದಳು.

'ನೋಡಿ ಮನಸ್ಸಿಗೆ ಶಾಂತಿ ಸಿಗಬೇಕಾದರೆ, ಸಂಸಾರದಲ್ಲಿ ಸುಖವಿರಬೇಕು. ನಿಮ್ಮ ಬಗ್ಗೆ ನನ್ನ ಸಹಾನುಭೂತಿಯಿದೆ, ಮಿಸ್ಟರ್ ರಾಜಾರಾಮ್'

'ನನ್ನ ಹೆಂಡತಿ, ನಾಗೂವನ್ನು ನಾನು ಪ್ರೀತಿಸುವುದಿಲ್ಲ ಎಂದು ಹೇಳಲಾರೆ. ಆದರೆ, ಅವಳ ಪಿರಿ-ಪಿರಿ ಜಾಸ್ತಿಯಾಗಿ, ನಾನು ಮನೆ ಬಿಟ್ಟುಬರಬೇಕಾಯ್ತು ಅಷ್ಟೆ !'

'ಸರಿ.... ಸರಿ.... ಆ ವಿಚಾರ ನೀವು ಹೆಚ್ಚಿಗೆ ಹೇಳಬೇಕಾದುದಿಲ್ಲ. ನನ್ನದೂ ಅಂಥದೇ ಅನುಭವ. ನನ್ನ ಗಂಡ ರಾಬರ್ಟ್ ಅದೇ ರೀತಿಯವ. ಆದರೆ, ನಾನು ಹೇಗೋ ದಿನ ದೂಡಿಕೊಂಡು ಹೋಗುತ್ತಿದ್ದೇನೆ, ಅಷ್ಟೆ'.

ಅವರಿಬ್ಬರ ಸಮಸ್ಯೆಗಳೂ ಒಂದಾಗಿರುವುದು ಅವರೊಳಗಿನ ಸ್ನೇಹವನ್ನು ಇನ್ನೂ ಹೆಚ್ಚಿಸಿತ್ತು. ದಿನ ಕಳೆದಂತೆ ಅವರಿಬ್ಬರೊಳಗಿನ ಅನ್ಯೋನ್ಯತೆ ಬೆಳೆಯುತ್ತ ಬಂತು. ಆಗಾಗ್ಗೆ, ಕ್ರಿಶ್ಚಿನಾ ರಾಜಣ್ಣನ ಮನೆಗೆ ಭೇಟಿ ಕೊಡುತ್ತಿದ್ದಳು. ಆದರೆ, ಒಂದು ದಿನವೂ ಆಕೆ ಅವನನ್ನು ತನ್ನ ಮನೆಗೆ ಆಮಂತ್ರಿಸಿರಲಿಲ್ಲ. ಗಂಡನಿರುವುದರಿಂದ ಅವಳು ಹಾಗೆ ಮಾಡುತ್ತಿರಬೇಕೆಂದು ರಾಜಣ್ಣ ಯೋಚಿಸುತ್ತಿದ್ದ. ಅವನಿಗೆ ತಿಳಿಯದಂತೆ, ರಾಜಣ್ಣ ಕ್ರಿಶ್ಚಿನಾಳಲ್ಲಿ ಅನುರಕ್ತನಾಗ ತೊಡಗಿದ. ಆದರೆ, ಅದನ್ನು ಬಹಿರಂಗವಾಗಿ ವ್ಯಕ್ತಪಡಿಸಲು ಅವನಿಗೆ ಧೈರ್ಯ ಸಾಲದು. ಆದರೂ, ಅವಳ ಸಾಮೀಪ್ಯವನ್ನು ಸದಾ ಬಯಸುತ್ತಿದ್ದು, ಹೆಚ್ಚು ಹೆಚ್ಚಿನ ಕಾಲ ಅವಳೊಡನೆ ಕಳೆಯಲು ಪ್ರಾರಂಭಿಸಿದ. ಸ್ಕೂಲ್ ಬಿಟ್ಟ ನಂತರ ಅವಳೊಡನೆ ಬಹಳ ಕಾಲ ಮಾತಾಡುತ್ತಿದ್ದ. ಒಮ್ಮೊಮ್ಮೆ, ಸಾಯಂಕಾಲ ಅವರಿಬ್ಬರೂ ರೆಸ್ಟೋರೆಂಟ್‌ಗೆ ಕಾಫಿ ಕುಡಿಯಲೋ, ಉಪಹಾರಕ್ಕೋ ಹೋಗತೊಡಗಿದರು.

ಹಾಗೆ ಒಮ್ಮೆ ರೆಸ್ಟೋರೆಂಟ್‌ಗೆ ಹೋದಾಗ, ಕ್ರಿಶ್ಚಿನಾ ಕೇಳಿದಳು, 'ನೀವು ನಾನ್‌ವೆಜ್ ತಿನ್ನುತ್ತೀರಾ?' ಎಂದು.

ರಾಜಣ್ಣನಿಗೆ ಏನೆಂದು ಹೇಳಲು ತೋಚದೇ ಹೋಯ್ತು. ಮಡಿವಂತ ಕುಲದವನಾದ ಅವನಿಗೆ ನಾನ್‌ವೆಜ್ ಅಂತ ಎಣಿಸಿದರೇ ವಾಕರಿಕೆ ಬರುತ್ತಿತ್ತು. ಆದರೆ, ಕ್ರಿಶ್ಚಿನಾ ಎದುರು ಅದನ್ನೆಲ್ಲಾ ತೋರಿಸಿಕೊಳ್ಳಲು ಇಷ್ಟವಿರಲಿಲ್ಲ. ಅವಳಿಗೆ 'ಇಲ್ಲ ನನಗೆ ನಾನ್‌ವೆಜ್ ತಿಂದು ಅಭ್ಯಾಸವೇ ಇಲ್ಲ. ನೀವು ಕ್ರಿಶ್ಚಿಯನ್ ಆಗಿರುತ್ತ, ನಿಮ್ಮ ಮನೆಯಲ್ಲಿ ನಾನ್‌ವೆಜ್ ತಿನ್ನುತ್ತೀರಿ, ಅಲ್ಲವೇ?'

'ಹೌದು. ರಾಬರ್ಟ್‌ಗೆ ಹಂದಿ ಮಾಂಸವೆಂದರೆ ಬಲು ಇಷ್ಟ. ನನಗೆ ಅಷ್ಟೊಂದು ಇಷ್ಟವಿಲ್ಲ. ನನ್ನ ಅಜ್ಜಿ ಬ್ರಾಹ್ಮಣ ಕುಲದವಳು. ಆದರೆ, ನಮ್ಮ ತಂದೆ ಮತಾಂತರವಾದರು. ಅಜ್ಜಿ ಇನ್ನೂ ತುಳ್ಸಿ ಕಟ್ಟೆ ಮುಂದೆ ಕೂತು ಪೂಜೆ ಮಾಡುತ್ತಿರುತ್ತಾಳೆ. ಅವಳ ಸಂಪರ್ಕ ನನಗಿನ್ನೂ ಇದೆ. ಹಾಗಾಗಿ, ನನಗೆ ಮಾಂಸದ ಮೇಲೆ ಅಷ್ಟೊಂದು ಮಮತೆ ಇಲ್ಲ. ಹಾಗೆಂತ ತಿನ್ನುವುದಿಲ್ಲವೆಂದಲ್ಲ'.

'ಹೌದೇ ? ನಿಮಗೆ ಬೇಕಾದಲ್ಲಿ ಇಲ್ಲಿ ಏನಾದರೂ ನಾನ್-ವೆಜ್ ತಿಂಡಿ ಆರ್ಡರ್ ಮಾಡಿ. ನನಗೋಸ್ಕರವಾಗಿ ತಿನ್ನದೆ ಇರಬೇಡಿ'.

'ಹಾಗೇನಿಲ್ಲ. ನೀವೂ ತಿನ್ನುವುದಾದರೆ ಏನಾದರೂ ಆರ್ಡರ್ ಮಾಡೋಣ'.

'ನಾನು ಇಷ್ಟರವರೆಗೆ ಅದನ್ನು ಮೂಸಿ ಕೂಡಾ ನೋಡಿರಲಿಲ್ಲ. ನೀವು ಬಯಸಿದರೆ ಒಂದು ಚೂರು ಏನಾದರೂ ತಿಂದೇನು'.

'ಒತ್ತಾಯವಿಲ್ಲ, ರಾಜಾರಾಮ್. ನೋಡೋಣ, ಆಮ್ಲೆಟ್ ತರಿಸುವ. ಅದೇನೂ ಅಂಥ ವಾಸನೆ ಬರುವಂಥದಲ್ಲ. ಈರುಳ್ಳಿ ಟೊಮೇಟೋ, ಮೆಣಸಿನಕಾಯಿ ಎಲ್ಲ ಹಾಕಿದರೆ, ಅದು ನಿಮ್ಮ ದೋಸೆಯಂತೇ ರುಚಿ ಇರುತ್ತದೆ. ರುಚಿ ನೋಡುತ್ತೀರಾ?'

'ಆಗಲಿ. ನಿಮ್ಮಿಷ್ಟದಂತೆ'.

ಅಂದು ಆಮ್ಲೆಟ್ ಆರ್ಡರ್ ಮಾಡಿ ಕ್ರಿಶ್ಚಿನಾಳನ್ನು ಸಂತೋಷಪಡಿಸಲು ರಾಜಣ್ಣ ಚೂರು ತಿಂದೇಬಿಟ್ಟಿದ್ದ. ಆದರೆ, ಮನೆಗೆ ಬಂದು ಗಂಟಲೊಳಗೆ ಕೈಹಾಕಿ ತಿಂದ ಆಮ್ಲೆಟ್‌ನ್ನು ವಾಕರಿಸಿ ಹೊರತೆಗೆದಿದ್ದ. ಅಂದು ಯಾಕೋ ಅವನಲ್ಲಿ ಆದೊಂದು ಪಾಪಪ್ರಜ್ಞೆ ಕಾಡುತ್ತಿತ್ತು. '...ನಾಗೂಗೇನಾದ್ರೂ ತಾನು ಆಮ್ಲೆಟ್ ತಿಂದಿದ್ದು ಗೊತ್ತಾದ್ರೆ, ನನ್ನ ಕೊಂದೇಬಿಡ್ತಾಳೆ....' ಅಂತ ಎಣಿಸಿದ ಬೆನ್ನಿಗೇ '...ಅಯ್ಯೋ ನಾನ್ಯಾಕೆ ಅವಳಿಗಿನ್ನು ಹೆದ್ರ್ಕೊಂಡು ಇರಬೇಕು....? ಅವಳ–ನನ್ನ ಸಂಬಂಧ ಕಡಿದು ಬಂದಿದ್ದೀನಲ್ಲ....' ಎಂದು ಸಮಾಧಾನ ಹೇಳಿಕೊಂಡ. ಅಂದು ರಾತ್ರಿಯೆಲ್ಲ ಅವನಿಗೆ ನಿದ್ರೆ ಬಾರದು. ಕನಸಿನಲ್ಲೂ ನಾಗೂ ಬಂದು ಹೆದರಿಸುತ್ತಿದ್ದ ಹಾಗೆ, ಮಧ್ಯೆ ಕ್ರಿಶ್ಚಿನಾ ಬಂದು ಏನೋ ಸಮಾಧಾನ ಹೇಳುತ್ತಿರುವಂತೆ.

ಇದಾದ ಒಂದು ವಾರದ ಮೇಲೆ ರಾಜಣ್ಣ ತನ್ನ ಕೆಲಸ ಮುಗಿಸಿ, ಟೀಚರ್ಸ್ ರೂಮಿನಲ್ಲಿ ಕುಳಿತಿದ್ದ. ಅಂದು ಯಾಕೋ ಕ್ರಿಶ್ಚಿನಾ ಸ್ಕೂಲಿಗೆ ಬಂದಿರಲಿಲ್ಲ. ಸಾಮಾನ್ಯವಾಗಿ ರಜೆ ಹಾಕುತ್ತಿದ್ದರೆ ತನಗೆ ಹೇಳುತ್ತಿದ್ದಳು. ಇಂದು ಆದ್ಯಾಕೆ ಹೇಳದೆ ಗೈರುಹಾಜರಿಯಾಗಿದ್ದಾಳೆ....? ಮೈ-ಗಿಯ್ ಏನಾದರೂ ಚೆನ್ನಾಗಿಲ್ಲವೇ....? ' ಎಂದೆಲ್ಲ ಯೋಚಿಸುತ್ತಿದ್ದಂತೆ, ಒಬ್ಬ ಧಡೂತಿ ಮನುಷ್ಯ ಅವನಿದ್ದಲ್ಲಿಗೆ ಬಂದು 'ರಾಜಾ ರಾಮ್‌ರಾವ್ ಅಂದ್ರೆ ನೀವೇನೋ?' ಎಂದು ಒರಟು ಸ್ವರದಲ್ಲಿ ಕೇಳಿದ. ರಾಜಣ್ಣ 'ಹೌದು.... ಏನಾಗಬೇಕಿತ್ತು....?' ಎಂದು ವಿನಯದಿಂದಲೇ ಕೇಳಿದ. ಬಂದವನ ಸ್ವರ ಏರಿತು.

'ಏನೋ....? ಈ ಊರಿಗೆ ಹೊಸಬ ನೀನು. ನನ್ನ ಸಮಾಚಾರ ನಿನಗೆ ತಿಳಿದಿಲ್ಲ. ಮರ್ಯಾದೆ ಇಟ್ಟು ಸುಮ್ಮನೆ ಇಲ್ಲಿಂದ ಕಾಲು ಕೀಳು. ಇಲ್ಲದಿದ್ದರೆ ನಿನ್ನನ್ನ ಜೀವ ಸಹಿತ ಬಿಡೊಲ್ಲ.... ತಿಳಿಯಿತೇ ?' ರಾಜಣ್ಣ ಕುಳಿತ ಮೇಜನ್ನು ಕೈಯಿಂದ ಗುದ್ದುತ್ತ ಹೇಳಿದ ಬಂದ ವ್ಯಕ್ತಿ.

'ಸ್ವಾಮೀ, ತಾವು ಯಾರೆಂದು ತಿಳಿಯಲಿಲ್ಲ. ಸುಮ್ಮನೆ ಬಂದು ಈರೀತಿ ಭಯ ಹುಟ್ಟಿಸುವ ಮಾತಾಡ್ತೀರಲ್ಲ. ಸಮಾಚಾರ ಏನೆಂದು ಮೊದಲು ತಿಳಿಸಿ.... ನಾನೇನು ನಿಮಗೆ ತಪ್ಪು ಮಾಡಿದ್ದೇನೆಂತ ಈ ರೀತಿ ಜೋರು ಮಾಡ್ತಾ ಇದ್ದೀರಿ?'

'ಗೊತ್ತಾಗ್ಲಿಲ್ವಾ ನಿಂಗೆ. ನನ್ನ ಹೆಸ್ರು ರಾಬರ್ಟ್, ಕ್ರಿಶ್ಚಿನಾ ನನ್ನ ಹೆಂಡ್ತಿ. ಈಗ ಗೊತ್ತಾಯ್ತಲ್ಲಾ ನಾನೇನು ಹೇಳ್ತೀನೆಂತ.... ಸುಮ್ಮನೆ ಬಾಯಿಮುಚ್ಚಿ, ನನ್ನ ಹೆಂಡ್ತಿ ತಂಟೆಗೆ ಬರಬೇಡ.... ಇಲ್ಲದಿದ್ರೆ ನಿನ್ನ ಜೀವದ ಆಸೆ ಬಿಡ್ಬೇಕಾಗತ್ತೆ....! ಗೊತ್ತಾಯ್ತಾ? ಮರ್ಯಾದೆ ಉಳಿಸ್ಕೋಬೇಕಾದ್ರೆ ಈ ಊರು ಬಿಟ್ಟುಹೋಗು. ಇಲ್ದಿದ್ರೆ ನೋಡ್ಕೋ....' ಎಂದು ತನ್ನ ಬಲವಾದ ಮುಷ್ಠಿಯನ್ನು ರಾಜಣ್ಣನ ಮುಖಕ್ಕೆ ತಿವಿಯುತ್ತ ಹೇಳಿದ ರಾಬರ್ಟ್.

ರಾಜಣ್ಣನ ಮೈಯೆಲ್ಲ ಒಂದೇ ಸಮನೆ ಬೆವರಿನಿಂದ ಒದ್ದೆಯಾಯ್ತು. ರಾಬರ್ಟ್‌ನ ಗಲಾಟೆ ಕೇಳಿ ಪಕ್ಕದಲ್ಲಿರುವ ಇತರ ಮೇಷ್ಟ್ರುಗಳೆಲ್ಲ ಅಲ್ಲಿಗೆ ಬಂದು, ರಾಬರ್ಟ್‌ಗೆ ಏನೇನೋ ಸಮಾಧಾನ ಹೇಳಿ ಅವನನ್ನು ಕಳುಹಿಸಿಕೊಟ್ಟರು. ರಾಬರ್ಟ್ ಹೋದ ಮೇಲೆ, ಸ್ಕೂಲಿನ ಹೆಡ್ ಮೇಷ್ಟ್ರು ರಾಜಣ್ಣನನ್ನುದ್ದೇಶಿಸಿ, 'ಮಿಸ್ಟರ್ ರಾಜಾ ರಾಮ್‌ರಾವ್, ಇವನ ಸಹವಾಸ ನಿಮಗೆಲ್ಲಿ ಬಿತ್ತು? ಇವನೊಬ್ಬ ದೊಡ್ಡ ಕಿಲಾಡಿ. ಖೂನಿ ಮಾಡೋದಕ್ಕೂ ಹಿಂಜರಿಯದವ. ನಿಮ್ಮ-ಕ್ರಿಶ್ಚಿನಾರ ನಡುವೆ ಸಂಬಂಧವಿದೆಯೆಂದು ತಿಳಿದು, ಇಲ್ಲಿಗೆ ಬಂದಿರುತ್ತಾನೆ. ಹಾಗೆ ನೋಡಿದ್ರೆ, ಈ ಸಂಬಂಧದಿಂದ ನಮ್ಮ ಸ್ಕೂಲಿಗೇ ಅಪಮಾನ. ನಿಮ್ಮಿಬ್ಬರ ಚಲನವಲನಗಳನ್ನು ನೋಡಿ, ಈ ಮೊದ್ಲೇ ನಿಮಗೆ ಆ ಬಗ್ಗೆ ಸ್ವಲ್ಪ ವಾರ್ನಿಂಗ್ ಕೊಡಬೇಕೆಂತ ಮಾಡಿದ್ದೆ. ಈಗ ನೋಡಿದ್ರೆ, ಪರಿಸ್ಥಿತಿ ತುಂಬಾ ಮುಂದುವರಿದಿದೆ. ನೀವು ಆ ಬಗ್ಗೆ ಸ್ವಲ್ಪ ಆಲೋಚನೆ ಮಾಡಿ....' ಎಂದು ಸ್ವಲ್ಪ ಸಿಡುಕಿನಿಂದಲೇ ಹೇಳಿದರು.

ಸಹೋದ್ಯೋಗಿಗಳ ಮುಂದೆ ತನಗಾದ ಅಪಮಾನಕ್ಕಾಗಿ ರಾಜಣ್ಣ ಕುಗ್ಗಿ ಹೋದ. ರಾಬರ್ಟ್ ಇದ್ದ ಎರಡೇ ನಿಮಿಷಗಳಲ್ಲಿ ತನ್ನ ಇಡೀ ಜೀವಮಾನವೆಲ್ಲ ಹೃದಯ ನಡುಗುವಂತೆ ಮಾಡಿಹೋಗಿದ್ದ.ಈಗ ಹೆಡ್‌ಮೇಷ್ಟ್ರೂ ತನಗೆ ಒಂದು ರೀತಿಯ ಭಯ ಹಾಕುತ್ತಿದ್ದಾರೆ. ಹಾಗೆಂದು ಎಣಿಸುತ್ತ, ರಾಜಣ್ಣ ತತ್ತರಿಸಿಹೋದ.

ಏನೊಂದೂ ಮಾತಾಡದೇ ತಲೆ ತಗ್ಗಿಸಿ, ರಾಜಣ್ಣ ತನ್ನ ಮನೆಯ ಕಡೆ ಹೊರಟ. '....ನನಗಾದ್ರೂ ಈ ಕ್ರಿಶ್ಚಿನಾ ಸಹವಾಸ ಯಾಕೆ ಬೇಕಿತ್ತು....? ಇಷ್ಟಕ್ಕೂ ನಾನು ಅವಳ ಮೈ ಮುಟ್ಟಿದವನಲ್ಲ.... ಯಾಕೋ ಅವಳ ಮೇಲೆ ಮನಸ್ಸಾದುದು ನಿಜ.... ಪರಿಸ್ಥಿತಿ ಇಷ್ಟಕ್ಕೆ ಬರುವುದೆಂತ ತಿಳಿದಿದ್ದರೆ, ಅವಳ ಹತ್ತಿರ ಮಾತಾಡಲೇ ಹೋಗುತ್ತಿರಲಿಲ್ಲ. ಅವಳಾಗಿಯೇ ನನ್ನನ್ನು ಮೇಲಿಂದ ಮೇಲೆ ಬಿದ್ದು ಮಾತನಾಡಿಸಿದ್ದು..... ಅವಳ ಬಲೆಗೆ ನಾನು ಬೀಳ ಬಾರದಿತ್ತು....' ಎಂದೆಲ್ಲ ಯೋಚಿಸುತ್ತ ಮನೆ ತಲುಪಿದ. ಮನಸ್ಸಿನಲ್ಲೆಲ್ಲೋ 'ಈ ವಿಷಯ ನಾಗೂಗೆ ತಿಳಿದರೆ, ನನ್ನನ್ನು ಸುಮ್ಮನೆ ಬಿಟ್ಟಾಳೇ....?' ಎಂಬ ಪ್ರಶ್ನೆ ಹುಟ್ಟಿದರೂ, ಅದು ಆ ಸಮಯಕ್ಕೆ ಪ್ರಾಮುಖ್ಯವಾಗಿ ಕಾಣಲಿಲ್ಲ. ಈಗ ಬಂದ ಈ ಪರಿಸ್ಥಿತಿಯಿಂದ ಹೇಗೆ ಪಾರಾಗುವುದು ಎಂಬುದೇ ಬಹುಮುಖ್ಯ ಸಮಸ್ಯೆ ರಾಜಣ್ಣನನ್ನು

ಎದುರಿಸಿದುದು. ಎಲ್ಲ ಟೀಚರ್ಸ್ ಮುಂದೆ ತನಗೆ ಅವಮಾನವಾಯ್ತು.... ಇನ್ನು ಈ ಸುದ್ದಿಯೆಲ್ಲ ಸ್ಕೂಲಿಗೆ ಹಬ್ಬುತ್ತದೆ. ಎಲ್ಲಾ ಸ್ಟೂಡೆಂಟ್ಸ್ ತನ್ನನ್ನು ಗೇಲಿ ಮಾಡುತ್ತಾರೆ.... ಊರವರೆಲ್ಲ ತನ್ನನ್ನು ಹಿಯಾಳಿಸುತ್ತಾರೆ.... ಈ ಮುಖಪಿಟ್ಟು ತಾನಿನ್ನು ಇಲ್ಲಿ ಇರುವುದು ಹೇಗೆ....? ನಿಜ.... ಈ ಊರು ಬಿಡುವುದೇ ಈ ಎಲ್ಲ ಸಮಸ್ಯೆಗಳಿಗ ನಿಜವಾದ ಪರಿಹಾರ.... ಎಂದೆಣಿಸುತ್ತ, ಕುರ್ಚಿಯ ಮೇಲೆ ಕುಸಿದ. ಬಹಳ ಹೊತ್ತು ಆ ಬಗ್ಗೆ ಆಲೋಚನೆ ಮಾಡುತ್ತಿದ್ದ. ಆಲೋಚಿಸಿದಷ್ಟೂ, ಆ ಊರನ್ನು ಬಿಡುವುದೇ ಕ್ಷೇಮಕರವೆಂಬ ನಿರ್ಧಾರಕ್ಕೆ ಬಂದ. ರಾತ್ರಿ ಒಂಬತ್ತಾದರೂ ಅವನಿಗೆ ಏನೂ ಮಾಡುವ ಹುಮ್ಮಸ್ಸಿರಲಿಲ್ಲ. ಕೊನೆಗೆ, ಮೆಲ್ಲನೆದ್ದು ತನ್ನ ಸೂಟ್‌ಕೇಸನ್ನು ಬಟ್ಟೆಬರೆಗಳಿಂದ ತುಂಬಿಸಿದ. ರಾತ್ರೋ ರಾತ್ರಿ ಸೂಟ್ ಕೇಸ್ ಹೊತ್ತು, ಆ ಊರಿಂದ ಪಲಾಯನ ಮಾಡಿದ, ರಾಬರ್ಟ್‌ನ ಬೆದರಿಕೆ ಒಂದೆಡೆ, ತನಗಾದ ಅವಮಾನ ಇನ್ನೊಂದೆಡೆ. ಅದನ್ನು ಎಣಿಸುತ್ತಿದ್ದಂತೆ ಅವನ ಹೆಜ್ಜೆಯ ವೇಗವೂ ಹೆಚ್ಚುತ್ತಲಿತ್ತು.

೩

ಬೆಳಗಿನ ಜಾವಕ್ಕೆ ಅವನು ಮತ್ತೊಮ್ಮೆ ಈ ಹಿಂದೆ ನಿಂತಿದ್ದ ಆ ಕವಲು ದಾರಿಯಿದ್ದ ಸ್ಥಳಕ್ಕೆ ಬಂದಿದ್ದ. ಅಲ್ಲಿ ನಿಂತು ಇನ್ನೊಮ್ಮೆ ಯೋಚಿಸಿದ.... '....ಈ ಬಾರಿ ಎಡ ಭಾಗದ ಕವಲದಾರಿ ತುಳಿಯುತ್ತೇನೆ. ನೋಡೋಣ ನನ್ನ ಅದೃಷ್ಟ. ಆಗಲಾದರೂ ಅದು ಕುದುರೀತು....' ಎಂದೆಣಿಸಿ ಆ ದಾರಿ ತುಳಿದ.

ಒಂದೈದಾರು ಮೈಲು ದೂರ ಹೋಗಿದ್ದನೋ ಏನೋ. ಹಿಂದಿನಿಂದ ಒಬ್ಬ ನಡು ವಯಸ್ಸಿನ ವ್ಯಕ್ತಿಯೊಬ್ಬ ತಾನು ಪ್ರಯಾಣಿಸುತ್ತಿದ್ದ ಕಾರನ್ನು ರಾಜಣ್ಣನ ಪಕ್ಕದಲ್ಲಿ ನಿಲ್ಲಿಸಿ, ಹಾರ್ನ್ ಮಾಡಿದ. ರಾಜಣ್ಣ ಸ್ವಲ್ಪ ಬೆದರಿ, ತನಗೆ ದಾರಿ ಬಿಡಿ ಎಂದು ಆ ವ್ಯಕ್ತಿ ಹಾರ್ನ್ ಮಾಡಿ ತಿಳಿಸುತ್ತಿದ್ದನೆಂದು ಊಹಿಸಿ, ರಸ್ತೆಯಿಂದ ಪಕ್ಕಕ್ಕೆ ಸರಿದ. ಆದರೆ ಆ ವ್ಯಕ್ತಿ, 'ಹಲೋ, ಏನು.... ಹಸನಾಪುರದ ಕಡೆ ಹೊರಟಿದ್ದೀರಾ....? ನಾನೂ ಅಲ್ಲೇ ವಾಸಿಸುವವ.... ಬನ್ನಿ, ಕಾರು ಹತ್ತಿ. ಅಲ್ಲಿ ನಿಮ್ಮನ್ನು ಬಿಡುತ್ತೇನೆ....' ಎಂದು ರಾಜಣ್ಣನನ್ನು ಆಮಂತ್ರಿಸಿದ.

ಒಬ್ಬ ಅಪರಿಚಿತ ವ್ಯಕ್ತಿ ಹೀಗೆ ತನ್ನನ್ನು ಕೇಳಿದ್ದುದು ಅವನಿಗೆ ಆಶ್ಚರ್ಯವಾಯ್ತು. 'ಬೇಡ, ನೀವು ಹೋಗಿ. ನಾನು ನಡೆದೇ ಬರುತ್ತೇನೆ. ಅಲ್ಲದೆ ನಿಮಗೆ ಸುಮ್ಮನೆ ತೊಂದರೆ ಯಾಕೆ....?' ರಾಜಣ್ಣ ಸಂಕೋಚದಿಂದ ನುಡಿದ.

'ಅಯ್ಯೋ, ತೊಂದರೆ ಏನು ಬಂತು....? ಹೇಗೂ ಆ ಕಡೆಗೇ ನಾನೂ ಹೋಗುವವನೆ. ನನಗೆ ಅದರಿಂದ ಯಾವ ಬಗೆಯ ಖರ್ಚೂ ಹೆಚ್ಚುವುದಿಲ್ಲ. ಬನ್ನಿ.... ಬನ್ನಿ.... ಹತ್ತಿ ಕಾರನ್ನ.... ಹಸನಾಪುರ ಇಲ್ಲಿಂದ ೩೨ ಮೈಲು ದೂರವಾಗುತ್ತೆ. ನಡೆದು ಹೋಗುತ್ತಿದ್ದರೆ

ನಿಮಗೆ ಎರಡು ದಿನಗಳಾದರೂ ತಗಲುತ್ತದೆ. ಕಾರಲ್ಲಾದ್ರೆ ಎರಡು ಗಂಟೆ ಒಳಗೆ ತಲುಪಬಹುದು.... ಬನ್ನಿ ಬನ್ನಿ ಸಂಕೋಚಪಡಬೇಡಿ. ನನಗೂ ದಾರಿಯಲ್ಲಿ ಮಾತಾಡೋದಕ್ಕೆ ಕಂಪನಿಯಾದಹಾಗಾಗುತ್ತೆ' ಎಂದು ಇನ್ನೊಮ್ಮೆ ಒತ್ತಾಯದ ಆಮಂತ್ರಣ ನೀಡಿದ ಆ ವ್ಯಕ್ತಿ. ರಾಜಣ್ಣ ಯೋಚಿಸಿದ 'ಈತ ಹೇಳಿದ ಹಸನಾಪುರಕ್ಕೆ ನಾನು ಹೋಗುವುದಾದರೆ, ತಾನಾಗಿಯೇ ಆಮಂತ್ರಿಸಿದ ಅವನ ಜೊತೆ ಹೋದಲ್ಲಿ ನನಗೇನು ನಷ್ಟ? ಅಲ್ಲದೆ ಇನ್ನೂ ೩೨ ಮೈಲಿ ನಡೆಯುವುದೆಂದರೆ ಸಾಮಾನ್ಯವೇ ?' ಹಾಗೆಂದು ಸಂಕೋಚದಿಂದಲೇ ಸೂಟ್‌ಕೇಸನ್ನು ಕಾರೊಳಗೆ ತುಂಬಿ ಡ್ರೈವರೊಡನೆ ಮುಂದಿನ ಸೀಟಿನಲ್ಲಿ ಕುಳಿತ.

'ನನ್ನ ಹೆಸರು ವಿಶ್ವೇಶ್ವರ ಬಾಯಾರ್ ಎಂದು. ನನ್ನ ಊರು ಹಸನಾಪುರವೇ. ಅಲ್ಲಿ ನಾನೊಂದು ಬಿಸಿನೆಸ್ ಮಾಡಿಕೊಂಡು ಇದ್ದೇನೆ. ನಿಮ್ಮದು ಯಾವೂರಾಯ್ತು....?' ಎಂದು ರಾಜಣ್ಣನೊಡನೆ ಮಾತು ಬೆಳೆಸಿದ.

'ನನ್ನ ಹೆಸರು ರಾಜಾ ರಾಮ್‌ರಾವ್ ಅಂತ. ಊರು ಹಿಮಸಾಗರ. ಸಾಕಷ್ಟು ದೊಡ್ಡ ಊರೆ ! ಕಾಲೇಜೊಂದು ಬೇರೆ ಇದೆ – ಯೂನಿವರ್ಸಿಟಿಗೆ ಸೇರಿದಂತೆ. ಅಲ್ಲೇ ನಾನು ಪ್ರೊಫೆಸರ್ ಆಗಿದ್ದೆ. ಈಗ ಬೇರೆ ಕಡೆ ಏನಾದರೂ ಕೆಲ್ಸ ಸಿಕ್ಕೀತು ಅಂತ ಹುಡುಕಿಕೊಂಡು ಹೊರಟಿದ್ದೇನೆ'.

'ಹಸನಾಪುರಾನೂ ದೊಡ್ಡದೇ! ಒಂದು ದೊಡ್ಡ ಖಾಸಗಿ ಕಾಲೆಜು ಕೂಡ ಇದೆ. ಅದನ್ನು ಸ್ಥಾಪಿಸಿದವರು ನಮ್ಮ ತಂದೆಯವರು. ಈಗ ಅವರಿಲ್ಲ. ನಾನೇ ಆ ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷ. ನಿಮಗೇನಾದರೂ ಕೆಲ್ಸ–ಗಿಲ್ಸ ಬೇಕಿದ್ದಲ್ಲಿ ಹೇಳಿ, ನಮ್ಮ ಕಾಲೇಜಿನಲ್ಲಿ ಕೊಡ್ಸ್ತೀನಿ. ನಿಮ್ಮ ಸಬ್ಜಕ್ಟ್ ಯಾವುದು....?'

'ಹಿಂದೆ ನಾನು ಲಿಟ್ರೇಚರ್ ಕಲ್ಸಿತ್ತಿದ್ದೆ. ನೋಡೋಣ. ಎಲ್ಲಾ ಕೂಡಿ ಬಂದಲ್ಲಿ ನಾನ್ಯಾಕೆ ನಿಮ್ಮ ಕಾಲೇಜು ಸೇರಬಾರ್ದು?'

'ಹ್ಞೂಂ ಮತ್ತೆ. ಯಾಕೆ ಸೇರಬಾರ್ದು? ಅದ್ಯಾಕೆ ನಿಮ್ಮ ಕಾಲೇಜನ್ನ ಬಿಟ್ಟದ್ದು?'

'ಬಿಟ್ಟದ್ದಲ್ಲ. ರಿಟೈರ್ ಆದೆ. ಸ್ವಲ್ಪ ದಿನ ಮನೆಲೇ ಕುಳಿತೆ. ಬೇಜಾರಾಗ್ತಾ ಬಂತು. ಯಾಕೆ ಪಾರ್ಟ್‌ಟೈಮ್ ಕೆಲ್ಸ ಹುಡುಕಬಾರದು ಅಂತ ಅನಿಸ್ತು. ಅದಕ್ಕೇ ಹೊರಟೆ. ನೋಡಿ, ನೀವೀಗ ಸಿಕ್ಕಿದ್ದು ಒಳ್ಳೆಯದೇ ಆಯ್ತಲ್ಲ'.

'ಹೌದು. ಎಲ್ಲ ವಿಧಿ ನೋಡಿ. ನನಗೆ ಈ ದಿನ ನಿಮ್ಮನ್ನು ಇಲ್ಲಿ ಮೀಟ್ ಆಗೋದಕ್ಕೆ ಋಣ ಇತ್ತು. ಅದನ್ನ ತಪ್ಸೋದಕ್ಕಾಗುತ್ಯೇ?'

'ನಿಜ.... ನಿಜ. ಈ ದಿನ ನಿಮ್ಮನ್ನು ಭೇಟಿಯಾಗ್ಬೇಕು ಅಂತ ನನ್ನ ಹಣೇ ಮೇಲೆ ದೇವರು ಬರ್ದಿರಬೇಕು. ಹಾಗೇ ಆಯ್ತು ನೋಡಿ. ವಿಧಿಯನ್ನು ತಪ್ಸೋಕಾಗೊಲ್ಲ, ವಿಶ್ವೇಶ್ವರ ಅವರೆ. ನಿಮ್ಮ ಲಾಸ್ಟ್ ನೇಂ ಅದೇನೋ ಹೇಳಿದ್ರಿ, ಸರಿಯಾಗಿ ಕೇಳಿಸ್ಕೊಳ್ಳಿಲ್ಲ'.

'ಬಾಯಾರ್ ಅಂತ. ನಮ್ಮ ತಂದೆ ಸೌತ್‌ಕೆನ್ರಾದಿಂದ ಹಸನಾಪುರಕ್ಕೆ ಬಂದು ನೆಲೆಸಿದರಂತೆ. ದೇವಸ್ಥಾನದ ಪೂಜೆಗೆಂದು ಬಂದಿದ್ದಂತೆ. ಹಾಗೇ ಯಾರೋ ಒಬ್ಬ ದೊಡ್ಡ ಮನುಷ್ಯರಿಂದ ಸ್ವಲ್ಪ ಸಾಲ ಮಾಡಿ, ಒಂದು ಮನೆ ಕಟ್ಸಿ ಅದನ್ನ ಬಾಡ್ಗೆಗೆ ಕೊಟ್ಟು, ಆ ಹಣ ಕೂಡ್ಸಿ ಕೂಡ್ಸಿ ಇನ್ನೊಂದು ಮನೆ, ಮತ್ತೊಂದು ಮನೆ ಅಂತ ತುಂಬಾ ಮನೆ ಕಟ್ಸಿ, ಅದ್ರಲ್ಲೇ ತುಂಬಾ ದುಡ್ಡು ಮಾಡಿದ್ರು. ಹಾಗೇ ಒಂದು ಖಾಸಗಿ ಹೈಸ್ಕೂಲು, ಕಾಲೇಜು ಅಂತ ಸ್ಟಾರ್ಟ್ ಮಾಡಿದ್ರು. ಈಗ ಅವರಿಲ್ಲ, ಹೋಗಿ ೯ ವರ್ಷಗಳಾದ್ವು. ಅಯ್ಯೋ.... ಆ ಹರಟೆ ಎಲ್ಲ ನಿಮಗ್ಯಾಕೆ ಬೇಕು....? ಸಾರೀ.... ಬೋರ್ ಮಾಡ್ದೇ ಅಂತ ಕಾಣ್ಸುತ್ತೆ'.

'ಇಲ್ಲ....ಇಲ್ಲ.... ಬಹಳ ಇಂಟರೆಸ್ಟ್ ಆಗಿದೆ. ಅಲ್ದೇ ನೀವೂ ನಿಮ್ತಂದೆ ಮಾಡ್ತಿದ್ದ ಆ ಪುಣ್ಯದ ಕೆಲ್ಸನ ಮುಂದುವರ್ಸಿಕೊಂಡು ಬರ್ತಿದ್ದೀರಲ್ಲ. ಅದೊಂದು ಹಿರಿತನವೇ !'

'ಅಯ್ಯೋ.... ಅದ್ರಲ್ಲೇನು ಹಿರಿತನ....? ಶಿವರಾಮ ಕಾರಂತ್ರು ಒಂದು ನಾವೆಲ್‌ನಲ್ಲಿ ಬರೆದ ಹಾಗೆ, ಒಬ್ಬ ಮನುಷ್ಯ ಸಮಾಜದಿಂದ ಪಡೆದದ್ದನ್ನಾ ಸಮಾಜಕ್ಕೇ ಹಿಂತಿರುಗಿ ಕೊಡಬೇಕು, ಅಲ್ವೇ....?'

'....ಅಬ್ಬಾ.... ಈತ ಒಬ್ಬ ಆದರ್ಶ ಮನುಷ್ಯನ ಹಾಗೆ ಕಾಣಿಸ್ತಾನೆ. ಇಂಥವ್ರು ಈ ಕಾಲದಲ್ಲಿ ಇರೋದು ವಿರಳ....' ಎಂದು ಮನಸ್ಸಿನಲ್ಲೇ ಎಣಿಸುತ್ತ, 'ನೀವು ಹೇಳೋದು ಅಕ್ಷರಶಃ ನಿಜ. ಈಗ ಯಾರು ಹಾಗೆ ನಡ್ಕೋತಾರೆ....? ಎಲ್ರೂ ತಮ್‌ತಮ್ಮ ಸ್ವಾರ್ಥಾನೇ ನೋಡ್ಕೋತಾರೆ, ಅಷ್ಟೆ'.

'ಅಯ್ಯೋ.... ಬಿಡಿ.... ನೋಡಿ ನನಗೇನೂ ಹಾಗೆ ಮಾಡೋದ್ರಿಂದ ಯಾವ ನಷ್ಟಾನೂ ಆಗ್ತಿಲ್ಲ. ಜನ್ರಿಗಾದ್ರೂ ಸ್ವಲ್ಪ ಉಪಕಾರವಾಗುತ್ತಲ್ಲ.... ಅಷ್ಟೇ ಸಾಕು.... ಅದೊಂದು ಬಗೆಯ ತೃಪ್ತಿಯನ್ನೇ ನನಗೆ ಕೊಡುತ್ತೆ'.

ಹೀಗೇ, ಮಾತಾಡಿಕೊಂಡು ಅವರ ದಾರಿ ಸಾಗುತ್ತಲಿತ್ತು. ಹಸನಾಪುರ ಹತ್ತಿರ ಬರುತ್ತಿದ್ದಂತೆ ವಿಶ್ವೇಶ್ವರ, ರಾಜಣ್ಣನನ್ನು ಕೇಳಿದ ' ನಿಮ್ಗೆ ಹಸನಾಪುರದಲ್ಲಿ ವಾಸ ಸ್ಥಳಕ್ಕೆ ಏನಾದ್ರೂ ಅನುಕೂಲತೆ ಇದೆಯಾ ?'

'ಏನೂ ಇಲ್ಲ. ಅಲ್ಲಿಗೆ ಮೊದಲ ಬಾರಿ ಹೋಗ್ತಿದ್ದೇನೆ. ಯಾರ ಪರಿಚಯಾನೂ ಇಲ್ಲ. ಅಲ್ಹೋಗಿ ಪರಿಚಯ ಮಾಡ್ಕೋಬೇಕು, ಅಷ್ಟೆ'.

'ಹಾಗಾದ್ರೆ ನಾನೊಂದು ವಿಷಯ ಸೂಚಿಸ್ತೇನೆ. ನಮ್ಮ ಮನೆಗೆ ತಾಗಿಕೊಂಡು ಒಂದು ಪುಟ್ಟ ಔಟ್‌ಹೌಸ್ ಇದೆ. ಒಂದು ರೂಮು, ಬಾತ್ ರೂಮು, ಚಿಕ್ಕದೊಂದು ಕಿಚನ್. ಅದು ನಿಮ್ಗೆ ಇಷ್ಟವಾದರೆ, ಅಲ್ಲಿ ನೀವಿರಬಹುದು. ಅಡ್ಗೆ ನೀವೇ ಮಾಡ್ಕೋಬಹುದು, ಮಾಡ್ಕೊಳ್ಳೋಕೆ ಬರುತ್ತೆ ತಾನೆ....?'

'ಅಯ್ಯೋ.... ಅದೆಲ್ಲಿ ಬರುತ್ತೆ....? ಹೊಟೇಲ್‌ನಲ್ಲೇ ಊಟ ಮಾಡ್ಬೇಕಾಗುತ್ತೆ.... ನೀವು ನನಗೆ ಆಫರ್ ಮಾಡ್ತಿರೋದು ನಿಮ್ಮ ದೊಡ್ಡತನ ತೋರ್ಸತ್ತೆ. ಆದ್ರೆ, ಯಾಕೆ ನಿಮಗೆ ತೊಂದರೆ....? ಇಗಾಗ್ಲೇ ನನ್ನನ್ನು ಇಲ್ಲಿವರೆಗೆ ಕರೆದುಕೊಂಡುಬಂದು ದೊಡ್ಡ ಉಪಕಾರ ಮಾಡಿದ್ದೀರಾ....'

'ತೊಂದ್ರೆ ಏನು ಬಂತು ? ಬನ್ನಿ... ಏನೂ ತೊಂದ್ರೆ ಇಲ್ಲ. ನಮ್ಮ ಔಟ್‌ಹೌಸ್‌ನಲ್ಲೇ ಇರಿ. ನಿಮ್ಗೆ ಆದಷ್ಟು ಅನ್ಕೂಲ ಮಾಡಿಕೊಡ್ತೇವೆ.... ಸರಿನಾ.... ?'

ಅಷ್ಟರಲ್ಲಿ ಕಾರು ಒಂದು ದೊಡ್ಡ ಬಂಗಲೆ ಮುಂದೆ ನಿಂತಿತು. ಮನೆಯ ಗೇಟ್ ದಾಟುತ್ತಲೇ ಬಾಗಿಲ ಬಳಿ ಒಬ್ಬ ಸೇವಕ ಹಾಜರಾಗಿದ್ದು, ಕಾರಿನ ಬಾಗಿಲು ತೆರೆದು ವಿಶ್ವೇಶ್ವರನಿಗೆ ಒಂದು ಸಲಾಮು ಹೊಡೆದ. ವಿಶ್ವೇಶ್ವರ ಕಾರಿಂದ ಇಳಿದು 'ಮಾರಾ, ಈ ಸಾಹೇಬರ ಸೂಟ್‌ಕೇಸ್‌ನ್ನು ನಮ್ಮ ಎಡಗಡೆ ಔಟ್‌ಹೌಸ್‌ನಲ್ಲಿಡು. ಅದನ್ನ ಗುಡ್ಸಿ ಚೊಕ್ಕ ಮಾಡಿದ್ದೀಯಲ್ಲಾ....?' ಎಂದು ತನ್ನ ಆಳಿಗೆ ಹೇಳಿದ. ರಾಜಣ್ಣನನ್ನು ಮನೆ ಒಳಗೆ ಕರೆದುಕೊಂಡು ಹೋಗಿ, ಅಲ್ಲಿ ಇದ್ದ ತನ್ನ ಹೆಂಡತಿಗೆ ಪರಿಚಯ ಮಾಡಿಕೊಟ್ಟ. 'ಸುನಂದಾ.., ಇವರು ರಾಜಾ ರಾಮ್ ಅಂತ. ಇಲ್ಲಿಗೆ ಬರುವವರಿದ್ದರು, ದಾರಿಯಲ್ಲಿ ನಡ್ಕೊಂಡು. ನಾನು ಅವರಿಗೊಂದು ರೈಡ್ ಕೊಟ್ಟೆ. ಅವರು ಊರಿಗೆ ಹೊಸಬರು. ವಾಸಕ್ಕೆ ಬೇರೆಲ್ಲೂ ಅನುಕೂಲವಿಲ್ಲ. ಹಾಗಾಗಿ, ನಮ್ಮ ಎಡಗಡೆ ಔಟ್‌ಹೌಸ್‌ನಲ್ಲಿ ಇವರ ವಾಸಕ್ಕೆ ಅನುಕೂಲ ಮಾಡಿಕೊಡಬೇಕು. ಮಾರಂಗೆ ಹೇಳಿ ಎಲ್ಲ ಅನುಕೂಲ ಮಾಡಿಸ್ತಿಯಾ....? ದಣಿದು ಬಂದ ಇವರಿಗೇನಾದ್ರೂ ಉಪಹಾರ ಕೊಡ್ತಿಯಾ....?' ಎಂದು ಮಡದಿಯನ್ನುದ್ದೇಶಿಸಿ ಹೇಳಿದ.

ಸುನಂದ ತಲೆಯಾಡಿಸುತ್ತ, ಅಡುಗೆಮನೆಯ ಕಡೆ ಹೊರಟಳು. ವಿಶ್ವೇಶ್ವರ ರಾಜಣ್ಣನ ಕಡೆ ತಿರುಗಿ, 'ರಾಜಾ ರಾಮ್, ಸ್ವಲ್ಪ ಇಲ್ಲೇ ಸೋಫಾದ ಮೇಲೆ ರೆಸ್ಟ್ ತಕೊಳ್ಳಿ. ಸುನಂದಾ ಹಾಗೇ ಸ್ವಲ್ಪ ಕಾಫಿ–ತಿಂಡಿ ಏನಾದ್ರೂ ಮಾಡಿ ತರ್‍ತಾಳೆ. ಅಷ್ಟರಲ್ಲಿ ನಿಮ್ಮ ಬಿಡಾರವನ್ನ ಮಾರ ರೆಡೀ ಮಾಡಿಟ್ಟಿರ್‍ತಾನೆ' ಎಂದು, ಬಟ್ಟೆ ಬದಲಾಯಿಸಲು ತಮ್ಮ ರೂಮಿನ ಕಡೆ ಹೊರಟ.

ಕಾಫಿ ಮುಗಿದ ಮೇಲೆ ರಾಜಣ್ಣ ಅವನಿಗಾಗಿ ಅನುಕೂಲ ಮಾಡಿಟ್ಟ ಔಟ್‌ಹೌಸ್‌ಗೆ ಹೋದ. ರೂಮಿನಲ್ಲೊಂದು ಮಂಚ, ಅದರ ಮೇಲೊಂದು ಹಾಸಿಗೆ, ಪಕ್ಕದಲ್ಲೇ

ಒಂದು ಮೇಜು-ಕುರ್ಚಿ, ಎಲ್ಲ ಅನುಕೂಲತೆ ಚೆನ್ನಾಗಿತ್ತು. ಹಾಸಿಗೆ ಮೇಲೆ ಕುಳಿತು, '....ನಾಗೂ ಈಗ ಏನು ಮಾಡುತ್ತಿರಬಹುದು...?' ಅಂತ ಯೋಚಿಸಿದ. ಮರುಕ್ಷಣವೇ, '....ಛೇ.... ಈ ನಾಗೂ ಕೈಯಿಂದ ಬಿಡಿಸ್ಕೊಂಡು ಇಷ್ಟು ದೂರ ಬಂದ್ರೂನೂ, ಯಾಕೆ ನನ್ನ ತಲೇಲಿ ಸುಳಿತಿದಾಳೆ....? ಅವಳ ಯೋಚನೆ ಖಂಡಿತಾ ಬಿಟ್ಬಿಡಬೇಕು....' ಎಂದು ತನಗೇ ಹೇಳಿಕೊಂಡ. ಹಾಗೇ, ಅವನ ಯೋಚನೆ ತನ್ನ ಮುಂದಿನ ಕೆಲಸ ಹುಡುಕುವಿಕೆಯ ಕಡೆ ಹೊರಳಿತು '....ಹೇಗೂ ವಿಶ್ವೇಶ್ವರ ತಮ್ಮ ಕಾಲೇಜಿನಲ್ಲಿ ಕೆಲ್ಸ ಸಿಗಬಹುದು ಅಂತ ಹೇಳಿದ್ದಾರಲ್ಲ.... ನೋಡೋಣ, ಅಲ್ಲಿ ಸಿಗಲೂಬಹುದು.... ಅಂತೂ ಊರು ಬಿಟ್ಟು ನಾಗೂವಿನಿಂದ ದೂರ ಬಂದುದಕ್ಕೆ ಎಲ್ಲವೂ ಅನುಕೂಲವಾಗುವ ಚಿಹ್ನೆ ಕಾಣಿಸುತ್ತಿದೆ.... ತತ್.... ತಿರ್ಗ್ಗಾ.... ಅವಳದೇ ಯೋಚನೆ.... ಛೀ....' ಎಂದು ಜಿಗುಪ್ಸೆಯಿಂದ ಹಾಸಿಗೆ ಮೇಲೆ ಒರಗಿದ. ದಣಿದು ಬಂದುದಕ್ಕೋ ಏನೋ, ಹಾಗೇ ಅವನಿಗೆ ನಿದ್ರೆ ಬಂತು.

ರಾಜಣ್ಣ ನಿರೀಕ್ಷಿಸಿದಂತೆ, ವಿಶ್ವೇಶ್ವರನ ಸಹಾಯದಿಂದ ಆ ಊರಿನ ಕಾಲೇಜಿನಲ್ಲಿ ಲೆಕ್ಚರರ್ ಹುದ್ದೆಯೊಂದನ್ನು ರಾಜಣ್ಣ ಗಿಟ್ಟಿಸಿಕೊಂಡ. ವಿಶ್ವೇಶ್ವರ ಎಷ್ಟು ಒತ್ತಾಯ ಮಾಡಿದರೂ, ರಾಜಣ್ಣ ತನ್ನ ಬಿಡಾರವನ್ನು ಬದಲಿಸಿ, ಅವನ ಎಡಗಡೆಯ ಔಟ್‌ಹೌಸ್‌ನ್ನು ಖಾಲಿ ಮಾಡಿದ. ಖಾಲಿ ಮಾಡುವ ಮುನ್ನ ವಿಶ್ವೇಶ್ವರನ ಔದಾರ್ಯಕ್ಕೆ ಮನಸಾರೆ ಕೃತಜ್ಞತೆಯನ್ನು ಸಲ್ಲಿಸಿದ್ದ. ಹಸನಾಪುರದಲ್ಲಿನ ಜೀವನ ಅವನಿಗೆ ಹಿಡಿಸಿತ್ತು. ಕಾಲೇಜಿನ ಕೆಲಸವೂ ಆರಾಮವಾಗಿತ್ತು. ತನ್ನ ಸಬ್ಜೆಕ್ಟೇ ಆದ ಲಿಟ್ರೇಚರ್ ಪಾಠ ಮಾಡುವುದು ಅವನಿಗೆ ನೀರು ಕುಡಿದಂತೆ. ಆ ಊರಿನ ಹಲವಾರು ಗಣ್ಯ ವ್ಯಕ್ತಿಗಳನ್ನೂ ಅವನು ಪರಿಚಯ ಮಾಡಿಕೊಂಡು, ಅವರೊಡನೆ ಗೌರವವಾಗಿ ನಡೆದುಕೊಳ್ಳುತ್ತಿದ್ದ. ಹೊಸ ವಾತಾವರಣದಲ್ಲಿ ಸುಖ ದಿನಗಳನ್ನು ಅನುಭವಿಸುತ್ತಾ ಜೀವನದಲ್ಲಿ ತೃಪ್ತಿ ಪಡೆಯುತ್ತಿದ್ದ.

ನಾಗೂ ನೆನಪು ಅವನೆಷ್ಟು ದೂರ ಮಾಡಲು ಪ್ರಯತ್ನಪಟ್ಟರೂ, ಆಗಾಗ್ಗೆ ಬರುತ್ತಲೇ ಇತ್ತು. ಆಗೊಮ್ಮೆ ಈಗೊಮ್ಮೆ, ಅವಳಿಂದ ದೂರ ಬಂದು, ತನ್ನ-ಅವಳ ಸಂಬಂಧ ಕಡಿದುಕೊಂಡು, ತಾನು ಸರಿಯಾದ ನಿರ್ಣಯವನ್ನೇ ಕೈಗೊಂಡೆ ಎಂಬ ನಂಬಿಕೆಯೂ ಅವನಲ್ಲಿ ಹುಟ್ಟುತ್ತಿತ್ತು. ಅಂಥ ಸಮಯದಲ್ಲಿ ತನ್ನ ಮೇಲೇ ತಾನು ಅಭಿಮಾನಪಡುತ್ತಿದ್ದ. ತನ್ನ ಜೀವನದಲ್ಲಿ ಅನುಭವಿಸಲರ್ಹವಾದ ಸಂತೋಷವನ್ನು, ಹಸನಾಪುರದ ಜೀವನ ತಂದುಕೊಟ್ಟಿದೆ ಎಂಬ ಅನುಭವವ ಅವನಿಗೆ ಆಗುತ್ತಿತ್ತು.

ಹೀಗೆ, ಒಂದು ಬಗೆಯ ಸಂತೃಪ್ತ ಜೀವನ ನಡೆಸುತ್ತಿದ್ದ ಅವನಿಗೆ, ರೇವತಿ ಎಂಬವಳೊಬ್ಬಳ ಸ್ನೇಹವಾಯ್ತು. ರೇವತಿ ಅವನು ಪಾಠ ಕಲಿಸುತ್ತಿದ್ದ ಕಾಲೇಜಿನಲ್ಲಿ ಒಬ್ಬ ಗುಮಾಸ್ತೆ. ಯಾವುದೋ ಕಾರ್ಯಕ್ಕೆ ಅವಳನ್ನು ಸಂಪರ್ಕಿಸಬೇಕಾದ ಸಮಯ ಒದಗಿಬಂತು. ಆಕೆ ವಯಸ್ಸಿನಲ್ಲಿ ಸುಮಾರು ೩೨-೩೩ ವರ್ಷದವಳು. ನೋಡಲು ಸಾಕಷ್ಟು

ಸ್ಪುರದ್ರೂಪಿಯಾಗಿದ್ದಳು. ಮೊದಮೊದಲು ಅವರ ಸಂಬಂಧ ತೀರ ಕ್ಯಾಶುವಲ್ ಆಗಿದ್ದರೂ, ಬರುತ್ತ-ಬರುತ್ತ, ಅದು ಗಾಢವಾದ ಅನ್ಯೋನ್ಯತೆಯ ಕಡೆ ತಿರುಗತೊಡಗಿತು. ಅವರಿಬ್ಬರ ಸ್ನೇಹ ಎಲ್ಲರ ಗಮನಕ್ಕೂ ಬರುವಷ್ಟು ಬೆಳೆದುಬಂತು. ಇದು ವಿಶ್ವೇಶ್ವರನಿಗೂ ತಿಳಿದಿತ್ತು. ವಿಶ್ವೇಶ್ವರ ಎಷ್ಟೆಂದು ಕೆದಕಿದರೂ, ರಾಜಣ್ಣ ತನ್ನ ಪೂರ್ವ ಸಂಸಾರ ಸಂಬಂಧದ ವಿಚಾರ ಮಾತನಾಡುತ್ತಲೇ ಇರಲಿಲ್ಲ, ಬದಲಿಗೆ ಏನೇನೋ ಮಾತಾಡಿ ವಿಷಯ ಬದಲಿಸುತ್ತಿದ್ದ.

ಒಮ್ಮೆ ವಿಶ್ವೇಶ್ವರ 'ರಾಜಾರಾಮ್ ನೀವು ಒಂಟಿ ಜೀವನವನ್ನು ಹೀಗೆ ಎಷ್ಟು ದಿನಗಳವರೆಗೆ ನಡ್ಸ್ಕೊಂಡು ಬರ್ತೀರಿ? ನಿಮಗೊಬ್ಬ ಜೀವನ ಸಂಗಾತಿ ಬೇಕಾಗಿದ್ದಾಳೆ. ಆ ಬಗ್ಗೆ ಆಲೋಚನೆ ಮಾಡುತ್ತಿದ್ದೀರಾ....?' ಎಂದು ಕೇಳಿದ.

'ಆ ಬಗ್ಗೆ ನಾನು ಯಾವ ಯೋಚನೆಯನ್ನೂ ಮಾಡಿಲ್ಲ. ಹೀಗೆ ಒಂಟಿ ಜೀವನದಲ್ಲೇ ನಾನು ತೃಪ್ತಿಪಡುತ್ತಿದ್ದೇನೆ' ಎಂದು ರಾಜಣ್ಣ ಮಾತು ತಟ್ಟಿ ಹಾರಿಸಿದ.

'ಹಾಗೆ ಹೇಳಬೇಡಿ, ರಾಜಾ ರಾಮ್. ಈಗ ನೋಡಿ, ನಿಮ್ಮ-ರೇವತಿ ಸ್ನೇಹದಲ್ಲಿ ನೀವು ಸುಖ ಅನುಭವಿಸುತ್ತಿಲ್ಲವೇ?'

'....ಅಯ್ಯೋ, ಇವರಿಗೆಲ್ಲಿ ಆ ವಿಷಯ ತಿಳಿಯಿತಪ್ಪಾ....!' ಎಂದು ಕಳವಳಗೊಳ್ಳುತ್ತ, ವಿಶ್ವೇಶ್ವರನ ಮುಖವನ್ನೇ ಅರ್ಥವಿಲ್ಲದ ನಗುವಿನಿಂದ ನೋಡಹತ್ತಿದ ರಾಜಣ್ಣ.

'ನಿಮ್ಮ ಈ ನೋಟವೇ ಸಾರುತ್ತಿದೆ, ನೀವು ರೇವತಿಯ ಸ್ನೇಹದಿಂದ ಅತಿ ಸಂತೋಷ ಪಡೆಯುತ್ತಿದ್ದೀರೆಂದು. ಅಧಿಕ ಪ್ರಸಂಗವೆಂದು ತಿಳಿಯಬೇಡಿ.... ನಾನೊಂದು ಸಲಹೆ ಮಾಡುತ್ತೇನೆ. ನಿವ್ಯಾಕೆ ಅವಳನ್ನು ಮದುವೆಯಾಗಬಾರದು....?'

ರಾಜಣ್ಣನಿಗೆ ಏನನ್ನೂ ಹೇಳಲಾಗಲಿಲ್ಲ. ವಿಶ್ವೇಶ್ವರ ಹೇಳುತ್ತಿದ್ದುದೇನೋ ಸರಿಯಾದ ಮಾತು. ಆ ಆಲೋಚನೆ ಅವನಿಗೂ ಆಗಾಗ್ಗೆ ಸುಳಿದಿತ್ತು. ಆದರೆ, ನಾಗೂ ಅವನ ಮನಸ್ಸಿನಲ್ಲಿ ನೆಟ್ಟು ಹೋಗಿದ್ದಳು, ಅವನ ಬಯಕೆಗೆ ವಿರುದ್ಧವಾಗಿ. ಅವಳನ್ನು ತನ್ನ ಮನಸ್ಸಿನಿಂದ ದೂರ ಮಾಡಿದ ಹೊರತೂ ವಿಶ್ವೇಶ್ವರ ಹೇಳಿದ ಸಲಹೆ ಫಲಕಾರಿಯಾಗದು. ಆದರೂ, ಅವಳನ್ನು ಮರೆಯ ಬೇಕಾದರೆ ತಾನು ಬೇರೊಬ್ಬಳ ಸ್ನೇಹ ಬೆಳೆಸಿದರೆ ಸುಲಭವಾಗಬಹುದು – ಎಂಬ ಆಲೋಚನೆಯೂ ಅವನಿಗೆ ಬರುತ್ತಲಿತ್ತು. ಈಗ ವಿಶ್ವೇಶ್ವರನ ಸಲಹೆ ಅದನ್ನೇ ಪುಷ್ಠೀಕರಿಸುತ್ತಿದೆ.

ವಿಶ್ವೇಶ್ವರ, ರಾಜಣ್ಣನ ಮನಸ್ಸಿನಲ್ಲಾಗುತ್ತಿರುವ ಆಂಧೋಳನವನ್ನು ಅರಿತು, 'ನೋಡಿ ರಾಜಾ ರಾಮ್. ನೀವು ಅವಳನ್ನು ಮದುವೆಯಾಗಿ. ಅವಳ ಜಾತಿ-ಗೀತಿ ನೋಡಬೇಡಿ. ಆಕೆ ಒಳ್ಳೆಯ ಸ್ವಭಾವದಳೆಂದು ಕೇಳಿದ್ದೇನೆ. ನೋಡಲೂ ಚೆನ್ನಾಗಿಯೇ ಇದ್ದಾಳೆ. ನಿಮ್ಮ

ವಯಸ್ಸಿಗೆ ಅವಳು ಸ್ವಲ್ಪ ಚಿಕ್ಕವಳಾಗಿರಬಹುದು. ಆದರೆ, ಪ್ರೀತಿಯಿದ್ದಲ್ಲಿ ಅದಕ್ಕೆಲ್ಲಾ ಅವಕಾಶ ಕೊಡಬಾರದು'.

'ಛೇ....ಛೇ.... ನಾನು ಜಾತಿ–ಗೀತಿಯೆಂತ ಆಲೋಚನೆ ಮಾಡೊಲ್ಲ. ಆದರೆ, ಅವಳ ಪೂರ್ವ ಜೀವನವೇನೂ ನನಗೆ ತಿಳಿದಿಲ್ಲ. ಅವಳ ಹತ್ತಿರ ಕೇಳಲೂ ನನಗೆ ಅಳುಕು....' ರಾಜಣ್ಣ ಅಳುಕಿನಿಂದಲೇ ಹೇಳಿದ. ರಾಜಣ್ಣ, ರೇವತಿಯ ಪೂರ್ವವಿಚಾರ ಕೇಳದಿದ್ದುದಕ್ಕೆ ಇನ್ನೊಂದು ಬಲವಾದ ಕಾರಣವೂ ಇತ್ತು. ಅವಳಿಗೆ ತನ್ನ ಪೂರ್ವ ವೃತ್ತಾಂತವನ್ನು ಹೇಳಲು ಅವನು ಬಯಸಿರಲಿಲ್ಲ.

'ಅವಳು ಸ್ವಲ್ಪ ವರ್ಷಗಳ ಹಿಂದೆ ಮಂಗಳೂರಿನಿಂದ ಬಂದಳು. ಅಲ್ಲಿ ಅವಳು ಒಮ್ಮೆ ಮದುವೆಯಾಗಿದ್ದಳೆಂಬ ಸುದ್ದಿ ಇದೆ. ಅವಳ ಮನೆತನದವರು ಬ್ರಾಹ್ಮಣರಂತೂ ಅಲ್ಲ. ಅಲ್ಲದೇ ನೀವೇ ಹೇಳುತ್ತೀರಲ್ಲ ಜಾತಿ–ಗೀತಿಯ ಬಗ್ಗೆ ನಿಮಗ್ಯಾವ ಅಭ್ಯಂತರವೂ ಇಲ್ಲವೆಂದು. ಮತ್ತಿನ್ನೇನು....? ಶುಭಸ್ಯ ಶೀಘ್ರಂ. ಆ ಬಗ್ಗೆ ಸೀರಿಯಸ್ ಆಗಿ ಯೋಚಿಸಿರಿ'.

ರಾಜಣ್ಣ ಅವತ್ತು ಏನೂ ಹೇಳಲಿಲ್ಲ. ವಿಶ್ವೇಶ್ವರ ಹೇಳಿದಂತೆ ಅವನು ಸೀರಿಯಸ್ ಆಗಿ ಆ ವಿಚಾರ ಯೋಚನೆ ಮಾಡಲು ಪ್ರಾರಂಭಿಸಿದ. ಫಲವಾಗಿ, ಒಂದೆರಡು ತಿಂಗಳುಗಳಲ್ಲೆ ರಾಜಣ್ಣ–ರೇವತಿಯರ ಮದುವೆ ಜರಗಿಹೋಯ್ತು. ವಿಶ್ವೇಶ್ವರನ ಒತ್ತಾಯದಿಂದ ಮದುವೆಯನ್ನು ವಿಶ್ವೇಶ್ವರನ ಬಂಗಲೆಯಲ್ಲೇ ಸರಳವಾಗಿ ಆಚರಿಸಲಾಯ್ತು. ರಾಜಣ್ಣನಿಗೆ, ಈಗ ತನ್ನ ಜೀವನವೆಲ್ಲ ತುಂಬಿಹೋಯ್ತು ಎಂಬ ಭಾವನೆ ಹುಟ್ಟಿತು. ರೇವತಿ ಅಡುಗೆ ಚೆನ್ನಾಗಿ ಮಾಡುತ್ತಿದ್ದಳು. ಪುಷ್ಕಳವಾದ ಭೋಜನ ಅವನಿಗೆ ತೃಪ್ತಿ ತರುತ್ತಿತ್ತು. ಅವಳ ನಗುಮುಖ ಅವನನ್ನು ಸೂರೆಗೊಳಿಸಿತ್ತು. ತಾನೊಬ್ಬ ಅತಿ ಸುಖಪುರುಷನಂತೆ ಮುಗಿಲ ಮೇಲೆ ತೇಲಾಡುತ್ತಿರುವೆನೆಂಬ ಭಾವನೆಯೆ ಅವನಲ್ಲಿ ಮೂಡಿತ್ತು. ಅವನ ಹೊಸ ಜೀವನವು ಸುಗಮವಾಗಿ ಸಾಗುತ್ತಿತ್ತು.

ಒಂದು ದಿನ ರಾಜಣ್ಣ ಕಾಲೇಜು ಕೆಲಸ ಮುಗಿಸಿ, ರೇವತಿಯ ಜೊತೆ ಮನೆಗೆ ಹೋಗಲು ಅವಳ ಡೆಸ್ಕ್ ಕಡೆ ಹೋದಾಗ, ಅವಳು ಅಲ್ಲಿರಲಿಲ್ಲ. ಸ್ವಲ್ಪ ಹೊತ್ತು ಅವಳಿಗಾಗಿ ಕಾದರೂ ಅವಳು ಬಾರದೆ, ಒಬ್ಬನೇ ಮನೆಗೆ ಹಿಂತಿರುಗಿದ. ಮನೆಯಲ್ಲೂ ಅವಳನ್ನು ಕಾಣದೆ, ಸ್ವಲ್ಪ ಕುತೂಹಲನಾದ. ಸ್ವಲ್ಪ ಹೊತ್ತು ಹಾಗೇ ವಿಶ್ರಾಂತಿ ಪಡೆಯಲು ಹಾಸಿಗೆಯಲ್ಲಿ ಒರಗಿದ. ಸುಮಾರು ಒಂದು ಗಂಟೆಯ ಮೇಲೆ ರೇವತಿ ಮನೆಗೆ ಬಂದಳು. ಅವಳು ಸಮೀಪಕ್ಕೆ ಬಂದಾಗ ಏನೋ ಸೆಂಟಿನ ವಾಸನೆ ರಾಜಣ್ಣನ ಮೂಗನ್ನು ತಿವಿಯಿತು. ಅದೇ ರೀತಿಯ ಸೆಂಟು ವಾಸನೆ ಅವನು ಆಗಾಗ್ಗೆ ಅನುಭವಿಸಿತ್ತಿದ್ದ. ತಾನು ಅವಳಿಗೆ ಅಂಥ ಸೆಂಟ್ ತಂದುಕೊಟ್ಟಿರಲಿಲ್ಲ. ಬಹುಶಃ ಅವಳೇ ತನ್ನ ಸಂಪಾದನೆಯಿಂದ ಕೊಂಡು ತಂದಿರಬೇಕೆಂದು ಯೋಚಿಸಿತ್ತಿದ್ದ. ರೇವತಿ ಗಂಡ ಮಲಗುವ ಕೋಣೆಗೆ ಬಂದಾಗ,

ರಾಜಣ್ಣ ಕೇಳಿದ 'ಏನು....? ಎಲ್ಲಿಗೆ ಹೋಗಿದ್ದೆ ಈವತ್ತು....? ಕಾಲೇಜಿನಿಂದ ಬೇಗ ಹೊರಟೆಯಾ....? ಇದೇನಿದು....? ಸೆಂಟಿನ ವಾಸನೆ ಮೂಗಿಗೆ ಬಡಿಯುತ್ತಿದೆಯಲ್ಲಾ....!'

'ಇವತ್ತು ಗುಮಾಸ್ತ ಉದ್ಯೋಗಿಗಳೆಲ್ಲ ಸೇರಿ ಒಂದು ಚಿಕ್ಕ ಪಾರ್ಟಿ ಇಟ್ಟುಕೊಂಡಿದ್ದರು. ನಿಮಗೆ ಹೇಳಲು ಸಮಯ ಸಿಗಲಿಲ್ಲ. ಸಾರೀ. ನೀವು ಬಂದು ತುಂಬ ಹೊತ್ತಾಯ್ತೇ....?'

'ಹೌದು, ಸುಮಾರು ಒಂದು ಗಂಟೆಯ ಮೇಲಾಯ್ತು. ಮತ್ತೆ ನಿನ್ನ ಆ ಸೆಂಟಿನ ವಾಸನೆ....?'

'ಅಯ್ಯೋ.... ಅದು.... ನಮ್ಮ ಸಹೋದ್ಯೋಗಿ, ಲಲಿತಾ ಎಷ್ಟು ಬೇಡವೆಂದರೂ ನನ್ನ ಮೈಗೆ ಸ್ವಲ್ಪ ಹಚ್ಚಿದಳು. ವಾಸನೆ ಚೆನ್ನಾಗಿದೆಯಲ್ಲವೇ....?'

ರಾಜಣ್ಣ ಬರಿದೆ 'ಹೂಂ....'ಎಂದು ಮಾತ್ರ ಹೇಳಿದ. ರೇವತಿ ಕೊಟ್ಟ ವಿವರಣೆ ಅವನನ್ನು ತೃಪ್ತಿಪಡಿಸದಿದ್ದರೂ, ಆತ ಮುಂದೆ ಮಾತು ಬೆಳೆಸಲಿಲ್ಲ. ಅವಳ ಸೆಂಟಿನ ಪರಿಮಳ ಈ ಹಿಂದೆ ಆಗಾಗ್ಗೆ ಬರುತ್ತಿದ್ದುದೂ ಅವನ ನೆನಪಿಗೆ ಬಂತು. ಆದರೂ, ಆ ಬಗ್ಗೆ ತಲೆ ಕೆಡಿಸಿಕೊಳ್ಳಬಾರದೆಂದು ಸುಮ್ಮನಿರಲು ಯೋಚಿಸಿದ. ಆದರೂ, ರೇವತಿಯ ಚಲನವಲನಗಳು ಅವನಿಗೆ ಯಾಕೋ ಅನುಮಾನ ಬರುವಂತಿತ್ತು.

ಹೀಗಿರುತ್ತ, ಒಮ್ಮೆ ರಾಜಣ್ಣ ಕಾಲೇಜಿನ ಕೆಲಸದ ಪ್ರಯುಕ್ತ ಕೆಲವು ದಿನಗಳ ಮಟ್ಟಿಗೆ ಬೇರೊಂದು ಊರಿಗೆ ಹೋಗಬೇಕಾಗಿ ಬಂತು. ರೇವತಿಗೆ ಸ್ವಲ್ಪ ಜಾಗರೂಕಳಾಗಿ ಇರುವಂತೆ ಹೇಳಿ ಅವನು ಪ್ರಯಾಣ ಬೆಳೆಸಿದನು. ಅವನ ಅದೃಷ್ಟಕ್ಕೆ, ಹೋದ ಕೆಲಸ ಪೂರೈಸಿ, ಊರಿಗೆ ಒಂದು ದಿನ ಮೊದಲೇ ಬರುವ ಹಾಗಾಯ್ತು. ರೇವತಿಗೆ ಮುನ್ಸೂಚನೆ ಕೊಡದೆ, ಸಾಯಂಕಾಲ ೫:೩೦ರ ಹೊತ್ತಿಗೆ ರಾಜಣ್ಣ ಮನೆಗೆ ಬಂದಾಗ, ಮನೆಯ ಮುಂದಿನ ಬಾಗಿಲು ಸ್ವಲ್ಪ ತೆರೆದಿತ್ತು. ಸ್ವಲ್ಪ ಗಾಬರಿಯಾಗಿ ಬಾಗಿಲ ಬಳಿಗೆ ಬಂದಾಗ, ಒಳಗಿನಿಂದ ರೇವತಿಯ ಕಿಲಕಿಲ ನಗುವು ಕೇಳಿಸಿತು. '....ಅರೇ.... ಏನಿದು ಹೀಗೆ ಮನೆಯಲ್ಲಿ ಒಬ್ಬಳೇ ಇದ್ದು ನಗುತ್ತಿದ್ದಾಳೆ.....' ಎಂದು ಆಲೋಚಿಸುವಷ್ಟರಲ್ಲಿ ಗಂಡಸಿನ ಸ್ವರವೊಂದೂ ಕೇಳಿಬಂತು. ರಾಜಣ್ಣನಿಗೆ ಅನುಮಾನ ಬಂದು ಸೀದಾ ಮನೆಯ ಒಳಗೆ ನುಗ್ಗಿ ನಿಜ ಸಮಾಚಾರವನ್ನು ತಿಳಿಯಬೇಕೆಂಬ ಮನಸ್ಸು ಮಾಡಿದರೂ, ಯಾಕೋ ಹಿಂಜರಿದು ಮನೆಯಿಂದ ಹೊರಗೆ ಬಂದು, ಸ್ವಲ್ಪ ದೂರದಲ್ಲಿ ಮರೆಯಲ್ಲಿ ನಿಂತು ಕಾದು ನೋಡ ತೊಡಗಿದ. ಹಾಗೇ, ಒಂದರ್ಧ ಗಂಟೆ ಅಲ್ಲಿ ಅವನು ಕಾದಿರಬೇಕು. ಮನೆಯಿಂದ ವಿಶ್ವೇಶ್ವರ ಹೊರಗೆ ಬಂದುದು ಅವನಿಗೆ ಕಾಣಿಸಿತು. ಅವನಿಗೆ ಒಂದೇ ಸಮನೆ ಸಿಟ್ಟು ನೆತ್ತಿಗೇರಿತು. ಹೋಗಿ ಅವನನ್ನು ಕನ್‌ಫ್ರಂಟ್ ಮಾಡಬೇಕೆನಿಸಿತು. ಆದರೆ, ಮನಸ್ಸು ಯಾಕೋ

ಹಿಂಜರಿಯಿತು. ತಾನೊಬ್ಬ ಅಂಜುಬುರುಕ, ಎಲ್ಲರಿಗೂ ಹೆದರಿಕೊಳ್ಳುವವ - ಎಂಬ ಭಾವನೆ ಅವನಲ್ಲಿ ಮೂಡಿಬಂತು.

ವಿಶ್ವೇಶ್ವರ ಮನೆಯಿಂದ ಜಾರಿದ ೫ ನಿಮಿಷಗಳ ಮೇಲೆ ರಾಜಣ್ಣ ಜೋಲು ಮುಖ ಮಾಡಿಕೊಂಡು ಮನೆಯೊಳಗೆ ಬಂದ. ಗಂಡ ಬಂದುದನ್ನು ಗಮನಿಸಿ, ರೇವತಿ ಮಲಗುವ ಕೋಣೆಯಿಂದ ಹೊರಗೆ ಬಂದಳು. ಹಿಂದೆ ಅನುಭವಿಸಿದ ಸೆಂಟಿನ ವಾಸನೆ ಆಗಲೂ ಅವನ ಮೂಗನ್ನು ಬಡಿಯಿತು. ರೇವತಿ ಹೊರಗೆ ಬಂದಾಗ ಅವಳ ಸೀರೆ–ಕುಪ್ಪುಸಗಳೂ ಸ್ವಲ್ಪ ಅಸ್ತವ್ಯಸ್ತವಾಗಿದ್ದುದು ರಾಜಣ್ಣನ ಗಮನಕ್ಕೆ ಬಂತು. ತಡೆದುಕೊಂಡ ಕೋಪವೆಲ್ಲ ಈಗ ಉಕ್ಕಿ ಬಂತು. ಸ್ವಲ್ಪ ಏರಿದ ಸ್ವರದಲ್ಲಿ ಕೇಳಿದ: 'ಏನಿದು ನಿನ್ನ ಅವಸ್ಥೆ.... ನಾನಿಲ್ಲದ ಸಮಯ ನೀನು ಮಾಡುತ್ತಿರುವುದು ಇದೇನಾ....?' ಎಂದು ಕಿರುಚಿದ.

ರೇವತಿ ನಡುಗುವ ಸ್ವರದಲ್ಲಿ ಕೇಳಿದಳು: 'ನಾನೇನು ಮಾಡಿದೆ ಈಗ....? ನಿಮಗೇನಾಗಿದೆ...?'

'ನೀನೇನು ಮಾಡಿದೆ ಎಂದು ನಾನೀಗ ಬಿಡಿಸಿ ಹೇಳಬೇಕೇ....? ಅದು ನಿನಗೆ ತಿಳಿದದ್ದೇ.... ಅದನ್ನು ನಾನೂ ಗಮನಿಸಿದೆ ಇವತ್ತು. ನಿನ್ನ ಮೇಲಿನ ಭರವಸೆ ಎಲ್ಲಾ ಇವತ್ತು ನೀರಾಗಿ ಹೋಯ್ತು. ನಿನ್ನ, ಪ್ರೀತಿ, ಆ ನಿನ್ನ ನಗು, ಎಲ್ಲಾ ಹುಸಿ ಎಂಬುದು ಈ ದಿನ ಖಾತ್ರಿಯಾಯ್ತು. ನೀನು ಹೀಗೆ ಮೋಸ ಮಾಡುತ್ತಿಯಾ ಎಂದು ತಿಳಿದಿರಲಿಲ್ಲ. ನಿನ್ನ ಸ್ವಭಾವ ಹೀಗೆಂದು ಮೊದಲೇ ತಿಳಿದಿದ್ದರೆ ನಾನು ನಿನ್ನನ್ನು ಮದುವೆಯೇ ಆಗುತ್ತಿರಲಿಲ್ಲ. ನನ್ನ ಕನಸನ್ನೆಲ್ಲಾ ಒಡೆದು ಹಾಕಿದೆ ನೀನು. ನೀನೊಂದು ಬೀದಿಯ ನಾಯಿ....' ಎಂದು ಏನೇನೋ ಉದ್ವೇಗದಲ್ಲಿ ನುಡಿದ. ರೇವತಿ ಏನೂ ಉತ್ತರ ಹೇಳುವಂತಿರಲಿಲ್ಲ ಆ ಪರಿಸ್ಥಿತಿಯಲ್ಲಿ. ರೂಮಿನ ಕಡೆ ಧಾವಿಸಿ, ಬಾಗಿಲನ್ನು ದಡಾರನೆ ಹಾಕಿಕೊಂಡಳು.

ರಾಜಣ್ಣ ಕುರ್ಚಿಯ ಮೇಲೆ ಕುಸಿದ. ತಲೆಯ ಮೇಲೆ ಕೈಕೊಟ್ಟು ಬಹಳ ಹೊತ್ತು ಯೋಚನೆ ಮಾಡಹತ್ತಿದ'....ನಾನೆಂಥ ಮೂರ್ಖ. ನಾಗೂ ಹಿಡಿತದಿಂದ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಎಂಥ ಮೋಸ ಹೋದೆ. ಇವರಿಬ್ಬರ ಅನೈತಿಕ ಸಂಬಂಧ ಎಷ್ಟು ದಿನಗಳಿಂದ ನಡೆಯುತ್ತಿತ್ತೋ ಏನೋ, ನನ್ನ ಬೆನ್ನ ಹಿಂದೆ... ಅದಕ್ಕೇ ಇರಬಹುದು ರೇವತಿಯನ್ನು ಮದುವೆಯಾಗಲು ವಿಶ್ವೇಶ್ವರ ನನ್ನನ್ನು ಅಷ್ಟೊಂದು ಒತ್ತಾಯಿಸಿದ್ದುದು. ಎಂಥ ಮೋಸಗಾರನಪ್ಪ ಆತ.... ನನಗೆಲ್ಲ ಒಳಿತನ್ನೇ ಮಾಡುವೆನೆಂಬ ಸಭ್ಯನ ಸೋಗು ಹಾಕಿಕೊಂಡು ನನಗೆ ಹಿಂದಿನಿಂದ ತಿವಿದುಬಿಟ್ಟ....! ಇವನ ಮೋಸದ ಬಲೆಗೆ ನಾನು ಅದೆಷ್ಟು ಸುಲಭವಾಗಿ ಬಿದ್ದೆ....! ಈಗೇನು ಮಾಡಲಿ ನಾನು...? ಹೋಗಿ ಅವನ ಕಪಾಳಕ್ಕೆ ಬಿಗಿಯಲೇ.... ? ಆದರೆ, ನನಗೆಲ್ಲಿ ಅಂತಹ ಧೈರ್ಯವಿದೆ.... ? ನಾನೊಬ್ಬ ಹೇಡಿ....'

ಎಷ್ಟು ಹೊತ್ತು ಹಾಗೆ ಯೋಚನೆ ಮಾಡುತ್ತಿದ್ದನೋ ಏನೋ! ಯೋಚಿಸಿದಷ್ಟು ಅವನ ದುಗುಡ ಹೆಚ್ಚುತ್ತಿತ್ತು. ಕೊನೆಗೆ, ಏನೋ ನಿರ್ಧಾರಕ್ಕೆ ಬಂದವನಂತೆ, ಸೀದಾ ಮಲಗುವ ಕೋಣೆಗೆ ಹೋದ. ರೇವತಿ ಮುಸುಕೆಳೆದು ಮಲಗಿದ್ದಳು. ತನ್ನನ್ನು ಯಾವ ಮುಖದಿಂದ ನೋಡಿಯಾಳು.... ಎಂದೆಣಿಸುತ್ತ ತನ್ನ ಹಳೆಯ ಸೂಟ್‌ಕೇಸನ್ನು ತೆಗೆದ. ಅದರಲ್ಲಿ ತನ್ನೆಲ್ಲ ಬಟ್ಟೆಯನ್ನು ತುಂಬಿಸಿಕೊಂಡ. ಇಷ್ಟಾದರೂ, ರೇವತಿ ಅಲುಗಲಿಲ್ಲ. ರಾಜಣ್ಣನೂ ಅವಳನ್ನು ಮಾತನಾಡಿಸಿವ ಗೋಜಿಗೆ ಹೋಗಲಿಲ್ಲ. ಸೂಟ್‌ಕೇಸ್ ತುಂಬಿದ ಮೇಲೆ ಕೋಣೆಯಿಂದ ಹೊರಗೆ ಬಂದ. ಹಿಂದೆ ನೋಡದೇ, ಮುಂದಿನ ಬಾಗಿಲ ಕಡೆ ಭಾರವಾದ ಹೆಜ್ಜೆ ಹಾಕಿ, ಬಾಗಿಲು ತೆರೆದು ಹೊರಗೆ ಬಂದು, ಬಾಗಿಲನ್ನು ದಢಾರೆಂದು ಹಾಕಿ, ರಸ್ತೆಯ ದಾರಿ ಹಿಡಿದ. ಇಷ್ಟಾದರೂ, ರೇವತಿ ರೂಮಿನಲ್ಲಿ ಮಲಗಿಯೇ ಇದ್ದಳು. '....ಸಾಯಲಿ ಅವಳು.... ಬೀದಿನಾಯಿ.... 'ಎಂದು ಗಟ್ಟಿಯಾಗಿಯೇ ಉಸುರಿದ ರಾಜಣ್ಣ ರಸ್ತೆಗೆ ಕಾಲಿಟ್ಟಾಗ.

ಎಷ್ಟು ಹೊತ್ತು ಹಾಗೆ ನಡೆದನೋ ಏನೋ! ನಡೆದೂ ನಡೆದೂ ದಾರಿ ಸಾಗಿದಷ್ಟೂ, ಮುಗಿಯುವುದಿಲ್ಲವಲ್ಲಾ ಎಂದೆನಿಸಿತು ಅವನಿಗೆ. ಹಾಗೇ, ಹಸನಾಪುರಕ್ಕೆ ಮೊದಲ ಬಾರಿಗೆ ಬರುವಾಗ, ದಾರಿಯಲ್ಲಿ ವಿಶ್ವೇಶ್ವರ ರೈಡ್ ಕೊಟ್ಟುದು ಜ್ಞಾಪಕಕ್ಕೆ ಬಂತು. 'ಅವನಿಂದಲೇ ಇಷ್ಟೆಲ್ಲ ನಡೆದುದು. ಅಂದು ತಾನು ಅವನನ್ನು ಭೇಟಿಯಾಗದಿದ್ದಲ್ಲಿ ತನ್ನ ಭವಿಷ್ಯ ಬದಲಾಗುತ್ತಿತ್ತೋ ಏನೋ ' ಎಂದು ಎಣಿಸಿದ. ಬೆನ್ನಿಗೇ ಅಂದು ಆತ ಹೇಳಿದ 'ಇಲ್ಲಿ ನಿಮ್ಮನ್ನು ಭೇಟಿಯಾಗೋದಕ್ಕೆ ನನ್ನ ಹಣೇ ಮೇಲೆ ಬರೆದಿತ್ತು.... ಅದನ್ನ ತಪ್ಪಿಸೋಕಾಗುತ್ಯೇ...?'ಎಂಬ ಮಾತೂ ಜ್ಞಾಪಕಕ್ಕೆ ಬಂತು. '... ಥೂ, ನನ್ನ ಹಣೇ ಬರಹವೇ....! ವಿಧಿ ನನ್ನ ಹಣೇಲಿ ಸುಖಪಡುವಂತೆ ಬರೆಯಲೇ ಇಲ್ಲ ಅಂತ ಕಾಣಿಸುತ್ತೆ.... ಈಗ ಇನ್ನೇನು ಮಾಡಬೇಕು....?' ಎಂಬ ಯೋಚನೆ ಅವನನ್ನು ಇನ್ನಷ್ಟು ಖೇದಗೊಳಿಸಿತು. ಹಾಗೇ ಯೋಚಿಸುತ್ತ, ಗೊತ್ತು-ಗುರಿಯಿಲ್ಲದವನಂತೆ ನಡೆಯುತ್ತಲೇ ಇದ್ದ.

೪

ಬೆಳಗಿನ ಜಾವವಾಗುವ ಸಮಯಕ್ಕೆ ರಾಜಣ್ಣ ಅದೇ ಕವಲೊಡೆದ ದಾರಿಯ ಸ್ಥಳದಲ್ಲೇ ಬಂದು ನಿಂತಿದ್ದ. 'ಎಡಕವಲಾಯ್ತು, ಬಲಕವಲಾಯ್ತು.... ಮುಂದೆ ಯಾವ ಕವಲೂ ಇಲ್ಲ.... ಇನ್ನು ಎಲ್ಲಿಗೆ ಹೋಗಲಿ....?' ಎಂದು ಯೋಚಿಸುತ್ತ ನಿಂತ ರಾಜಣ್ಣ 'ಅಲ್ಲಿ....ನಿನಗೆ ಕಾಣಿಸುತ್ತಿದ್ದುದು ಎರಡೇ ಕವಲೇ....? ನೋಡು, ಗಮನಕೊಟ್ಟು ನೋಡು.... ಎಡ ಕವಲಿಗೆ ಹೋಗಿ ವಾಪಾಸು ಇಲ್ಲಿಗೇ ಬಂದಿರುವೆ.... ಬಲ ಕವಲು ದಾರಿ ಹಿಡಿದು, ಮತ್ತೆ ಇದೇ ಜಾಗಕ್ಕೆ ವಾಪಾಸು ಬಂದಿರುವೆ.... ನೋಡು.... ನೀನು ಮನೆ ಬಿಟ್ಟು ಇಲ್ಲಿಗೇ ಬಂದುದು.... ನಿಂತು ನೋಡಿದಲ್ಲಿ ಇದು ಎರಡು ದಾರಿ ಕವಲೊಡೆದ ಸ್ಥಳವಲ್ಲ....

ಮೂರು ದಾರಿ ಇಲ್ಲಿ ಕವಲೊಡೆದಿದೆ... ನಿನ್ನ ಅದೃಷ್ಟ ಅನ್ವೇಷಣೆಯಲ್ಲಿ ಎರಡು ದಾರಿ ನಿನಗೇನೂ ದೊರಕಿಸಿ ಕೊಡಲಿಲ್ಲ. ಈಗ ಈ ಮೂರನೆಯ ದಾರಿ ನಿನಗೆ ಒಳ್ಳೇದು ಮಾಡೀತು.... ' ಯಾರೋ ಅವನಿಗೆ ಹೇಳಿದಂತಾಯ್ತು. ಆಗ, 'ಆ ದಾರಿಯಿಂದಲೇ ನಾನಿಲ್ಲಿಗೆ ಬಂದುದು. ಅಲ್ಲಿಂದ ತಪ್ಪಿಸಿಕೊಳ್ಳಲೆಂದೇ ಬಂದುದು. ಇನ್ನು ತಿರುಗಿ ಅಲ್ಲಿಗೇ ಹೋದರೆ ಏನು ಒಳಿತು ದೊರಕೀತು....' ಎಂದು ಗಟ್ಟಿಯಾಗಿಯೇ ರಾಜಣ್ಣ ಉಸುರಿದ.

ತಿರುಗಿ ಆ ಅಶರೀರವಾಣಿ ಹೇಳಿತು 'ಎರಡು ದಾರಿಯಿಂದಲೂ ನೀನು ವಾಪಾಸು ಬಂದಿದ್ದೀಯಾ....! ಈಗ ವಾಪಾಸು ಆ ಮೂರನೆಯ ಕವಲನ್ನು ತುಳಿ.... ಕಡಿಮೆಯೆಂದರೆ, ನೀನ್ನ ಕೈಹಿಡಿದವಳೇ ಸಿಗುತ್ತಾಳೆ.... ಅವಳೇನು ನಿನ್ನ ಕೆಟ್ಟುದನ್ನು ಬಯಸುವವಳಲ್ಲ.... ಅದು ನಿನಗೆ ತಿಳಿದೇ ಇದೆ.... ಅವಳ ಪಿರಿಪಿರಿ ವಿಶೇಷವೇನಲ್ಲ.... ನಿನ್ನ ಒಳಿತನ್ನೇ ಗಮನದಲ್ಲಿಟ್ಟು ಆಕೆ ಹಾಗೆ ವರ್ತಿಸುತ್ತಾಳೆ.... ಅಲ್ಲವೇ....? ಹೋಗು, ಮನೆಗೇ ವಾಪಾಸು ನಡೆ.... ಎಲ್ಲ ಸರಿಹೋದೀತು.... ಆದರೆ, ಗಮನದಲ್ಲಿಟ್ಟುಕೋ....! ಶಬ್ದವಾಗಬೇಕಾದಲ್ಲಿ ಎರಡೂ ಕೈ ತಟ್ಟಬೇಕಲ್ವೇ....? ಆಲೋಚಿಸು....' ಎಂದು.

ರಾಜಣ್ಣನಿಗೆ ಯಾಕೋ ಆ ಅಶರೀರವಾಣಿಯ ಮಾತು ತುಂಬ ಹಿಡಿಸಿತು. ಹಾಗೆಂದು ಅವನು ಆ ಮೂರನೆಯ ಕವಲು ದಾರಿ ಹಿಡಿದು ತನ್ನ ಊರಿನ ಕಡೆ ಹೊರಟ. ಮನಸ್ಸಿನಲ್ಲೇ ಹೇಳಿಕೊಂಡ '....ಹೌದು.... ನಾಗು ಪಿರಿಪಿರಿಯೆಂದರೂ ಆಕೆಯ ಉದ್ದಿಶ್ಯ ಒಳ್ಳೆಯದೇ....' ಎಂದು. ಸ್ವಲ್ಪ ಬಿರುಸಿನಿಂದ ಮನೆಯ ಕಡೆ ಹೆಜ್ಜೆ ಹಾಕತೊಡಗಿದ. ದಾರಿ ಬೇಗ ಸಾಗುತ್ತಲಿದೆ ಎಂಬ ಅನುಭವ ಅವನಲ್ಲಿ ಮೂಡಿತು.

ಊರು ತಲುಪಿ, ಮನೆಯ ಬಾಗಿಲು ತಟ್ಟಿದ. ನಾಗೂ ಸಂತೋಷದಿಂದ ಬಂದು ಬಾಗಿಲು ತೆರೆದು ತನ್ನನ್ನು ಸ್ವಾಗತಿಸುವಳೆಂಬ ನಿರೀಕ್ಷೆಯಲ್ಲಿದ್ದ. ಆದರೆ, ಬಾಗಿಲು ತೆರೆದದ್ದು, ಸುಭದ್ರಮ್ಮನ ಗಂಡ ರಾಮಕೃಷ್ಣಯ್ಯ. ರಾಜಣ್ಣ ಕೇಳಿದ: 'ಏನು ರಾಮಕೃಷ್ಣಯ್ಯ, ಇಲ್ಲೇನು ಮಾಡುತ್ತಿದ್ದೀರಿ....?' ಎಂದು.

'ರಾಮಕೃಷ್ಣಯ್ಯ....? ಇದೇನು....? ತಾವು ಯಾರು....? ಇದು ರಾಮಕೃಷ್ಣಯ್ಯನ ಮನೆಯಲ್ಲ. ನನ್ನ ಹೆಸರೂ ಅದಲ್ಲ. ನಿಮಗೆ ಯಾರು ಬೇಕಾಗಿದ್ದಾರೆ...?' ಬಾಗಿಲು ತೆರೆದ ವ್ಯಕ್ತಿ ಕೇಳಿದ. ಅಷ್ಟರಲ್ಲಿ ಒಳಗಿನಿಂದ ಹೆಂಗಸೊಬ್ಬಳು ಹೊರಗೆ ಬಂದು, 'ಯಾರು ಬಂದಿರುವುದು....? ಏನು ಬೇಕಂತೆ....?' ಎಂದು ಕೇಳಿದಳು. ರಾಜಣ್ಣನಿಗೆ ಸ್ವಲ್ಪ ಧೈರ್ಯ ಬಂತು. ಕಾರಣ, ಬಂದವಳು ನಾಗೂ ಆಗಿದ್ದಳು. ಕೂಡಲೇ, 'ನಾನೇ ಕಣಮ್ಮಾ, ನಾಗೂ....' ಎಂದು ಉಸುರಿದ.

'ಈ ಮನುಷ್ಯನ ಬುದ್ಧಿಭ್ರಮಣೆಯಾದಂತಿದೆ. ನಮ್ಮ ಮನೆಗೆ ಬಂದು ಯಾರ್‍ಯಾರದೋ ಹೆಸರು ಹೇಳುತ್ತಿರುವನಲ್ಲ....! 'ಎಂದು ಬಾಗಿಲು ತೆರೆದ ವ್ಯಕ್ತಿ ಬಂದ ಹೆಂಗಸಿಗೆ ಹೇಳಿದ.

ರಾಜಣ್ಣನಿಗೆ ಆಶ್ಚರ್ಯವಾಯ್ತು. 'ಇದೇನು...? ತನ್ನ ಮನೆಯಲ್ಲೇ ತನಗೇ ಸ್ವಾಗತವಿಲ್ಲ.... ಈತ ಬೇರೆ ನನಗೆ ಬುದ್ಧಿಭ್ರಮಣೆ ಎಂತ ಹೇಳುತ್ತಿದ್ದಾನಲ್ಲಾ.... ಸರಿ ಈ ಮೂರನೆಯ ಕವಲಿನಲ್ಲೂ ತನಗೆ ಸೋಲೇ....! ' ಎಂದು ನಿಟ್ಟುಸಿರನ್ನುಬಿಟ್ಟ. ತಿರುಗಿ, ಆ ಮನೆಯಲ್ಲಿರುವ ವ್ಯಕ್ತಿ 'ನೋಡಿ ಸ್ವಾಮೀ, ನಿಮಗ್ಯಾರು ಬೇಕಾಗಿದ್ದಾರೋ ತಿಳಿಯದು. ಇದು ರಾಕೃಷ್ಣಯ್ಯನ ಮನೆಯಂತೂ ಅಲ್ಲ. ಇದು ನನ್ನ ಮನೆ. ಈಕೆ ನನ್ನ ಹೆಂಡತಿ ಸರಸ್ವತಿ. ನಿಮಗೆ ಅವಳು ನಾಗೂ ಹಾಗೆ ಕಂಡಲ್ಲಿ ಅದು ನಿಮ್ಮ ಭ್ರಮಣೆಯಲ್ಲದೇ ಮತ್ತೇನು....?' ಎಂದು ಸ್ವಲ್ಪ ಜೋರಾಗಿಯೇ ಅಸಮಾಧಾನದಿಂದ ಹೇಳಿದ.

ರಾಜಣ್ಣ, ಅದನ್ನು ಲೆಕ್ಕಿಸದೆ, 'ಏನು ರಾಮಕೃಷ್ಣಯ್ಯ.... ನನ್ನ ಮನೇನೇ ನನಗೆ ಗೊತ್ತಿಲ್ಲವೇ....? ನೀವಿಲ್ಲಿ ಏನು ಮಾಡುತ್ತಿದ್ದೀರಿ....? ಹೋಗಿ, ನಿಮ್ಮ ಮನೆಗೆ ವಾಪಾಸು ಹೋಗಿ....' ಎನ್ನುತ್ತ, ಮನೆ ಒಳಗೆ ನಿಂತು ಬಾಗಿಲು ತಡೆ ಹಿಡಿದಿದ್ದ ಆ ವ್ಯಕ್ತಿಯನ್ನು ತಳ್ಳಿ, ಒಳಗೆ ಹೋಗಲು ಪ್ರಯತ್ನಿಸಿದ. ಆದರೆ, ಆ ವ್ಯಕ್ತಿ ರಾಜಣ್ಣನನ್ನು ನೂಕಿ, ಅವನ ಮುಖದ ಮೇಲೆ ಬಾಗಿಲು ತಳ್ಳಿದ. ಪರಿಣಾಮವಾಗಿ, ರಾಜಣ್ಣ ನೆಲೆ ತಪ್ಪಿ, ದೊಪ್ಪನೆ ಮೆಟ್ಟಲುಗಳಿಂದ ಉರುಳಿ ಬಿದ್ದ....

೫

'ಏನಾಯ್ತು....? ಹ್ಯಾಗೆ ಮಂಚದಿಂದ ಉರ್ಳಿ ಬಿದ್ರಿ....? ಏನು ತುದೀಲ್ ಮಲಗಿದ್ರಾ...?'ಎಂದು ಸ್ವಲ್ಪ ಗಾಬರಿಯಿಂದ, ತನ್ನ ನಿದ್ರೆಗೆ ತೊಂದರೆ ಕೊಟ್ಟನಲ್ಲಾ ಎಂದು ತುಸು ಕೋಪಮಾಡಿಕೊಂಡು ನಾಗೂ ಗಂಡನನ್ನು ವಿಚಾರಿಸಿದಳು. ರಾಜಣ್ಣನಿಗೆ, ಏನಾಗುತ್ತಿದೆ, ತಾನೆಲ್ಲಿದ್ದೇನೆ – ಹಸನಾಪುರದಲ್ಲೋ, ಬಕಲಾಪುರದಲ್ಲೋ – ಎಂಬುದು ತಿಳಿಯದೇ, '....ಅಯ್ಯೋ.... ರೇವತೀ....?'ಎಂದು ಗೋಗರೆಯುತ್ತ ಕಣ್ಬಿಟ್ಟ. ಹಾಸಿಗೆ ಮೇಲೇ ಕುಳಿತು ಕೆಳಗೆ ಬಿದ್ದ ಗಂಡನನ್ನು ಒಂದೇ ಸಮನೆ ನೋಡುತ್ತ 'ಯಾರ್ರೀ ಅದು ರೇವತಿ... ? ಏನು ಕನ್ಸುಗಿನ್ಸು ಕಾಣ್ತಿದ್ದೀರಾ....?' ಎಂದು ಗದರಿಸುವ ದನಿಯಲ್ಲಿ ನಾಗೂ ವಿಚಾರಿಸಿದಳು. ಆಗಲೇ ರಾಜಣ್ಣನಿಗೆ ಅರಿವಾದದ್ದು, ಇಷ್ಟೊತ್ತು ತಾನು ಕನಸು ಕಾಣುತ್ತಿದ್ದೇನೆಂದು.... ಅಲ್ಲಿ ರೇವತೀನೂ ಇಲ್ಲ.... ಕ್ರಿಶ್ಚಿನಾಳೂ ಇಲ್ಲ.... ಎಂದು. ಅರ್ಥವಿಲ್ಲದ ನಗು ನಗುತ್ತ, 'ರಾಮಕೃಷ್ಣಯ್ಯ ತಳ್ಳಿದರು ಅಂತ ಕಾಣ್ಸತ್ತೆ.... 'ಎಂದು ಹೇಳಿದ.

'ಏನೂ....? ರಾಮಕೃಷ್ಣಯ್ಯನೇ....? ಅವರ್ಯಾಕೆ ಬರ್ತಾರೆ ಇಲ್ಲಿಗೆ, ಈ ಹೊತ್ನಲ್ಲಿ, ಅದೂ ನಿಮ್ಮನ್ನ ತಳ್ಳೋಕೆ....? ಮಂಚದ ತುದೀಲಿ ಮಲಗಿದ್ರಿ ಅಂತ ಕಾಣ್ಸತ್ತೆ. ಬಿದ್ಬಿಟ್ಟು ಏನೇನೋ ಹೇಳ್ತಿದ್ದೀರಾ....ಅದಕ್ಕೇ ಹೇಳೋದು ಅಷ್ಟು ತುದೀಲಿ ಮಲ್ಕೋಬೇಡಿ ಅಂತ....

ನೀವ್ ನನ್ಮಾತು ಕೇಳ್ತೀರಾ....? ನಿಮಗೆಲ್ಲಿ ತರಾ ನನ್ಮಾತು....? ಅದಿರ್ಲಿ, ಏನಾದ್ರೂ ಪೆಟ್‌ಗಿಟ್ ಆಯ್ತೇ....?' ಅಂತ ಗಂಡನನ್ನು ವಿಚಾರಿಸಿದಳು.

'ಏನಾಗಿಲ್ಲ ನೀನು ಸುಮ್ಮನೆ ಗಾಬರಿಯಾಗಬೇಡ'.

'ಇನ್ನು ಸುಮ್ಮನೆ ಮಲ್ಕೊಳ್ಳಿ. ಇನ್ನೇನಾದ್ರೂ ಮಾಡಿ ನನ್ನ ನಿದ್ರೆ ಕೆಡಿಸ್ಬೇಡಿ.... ನಿಮ್ಗೇನು....? ಬೆಳಿಗ್ಗೆ ಒಂಬತ್ತು ಗಂಟೆವರೆಗೂ ಮಲ್ಗಿರ್ತಿರಾ.... ನನಗೆ ಹಾಗೆ ಮಾಡೋಕೆ ಸಾಧ್ಯವೇ....? ಬೆಳಿಗ್ಗೆ ಎದ್ದು ಮನೆ ಕೆಲ್ಸ ಆಗ್ಬೇಕಲ್ಲ.... ಈಗ ಸುಮ್ಮನೆ ಮಲ್ಕೊಳ್ಳಿ....' ಎಂದು ನಾಗು ಅಧಿಕಾರವಾಣಿಯಲ್ಲಿ ಹೇಳಿ ಗಂಡನಿಗೆ ವಿರುದ್ಧ ಮುಖಮಾಡಿ ಮಗ್ಗುಲು ಮಗುಚಿ ಮಲಗಿದಳು.

ಅವಳ ಆ ಆಜ್ಞಾಪನೆ ಕೇಳಿದ ರಾಜಣ್ಣನಿಗೆ ಆ ಮಾತುಗಳು ಪಿರಿಪಿರಿ ಎಂದು ಅನಿಸಲಿಲ್ಲ. ಬದಲಿಗೆ ಏನೋ ಒಂದು ಹಾಡು ಹೇಳಿದ ಹಾಗಿತ್ತು. ಎಷ್ಟೋ ದಿನಗಳಿಂದ ಅದನ್ನು ಮಿಸ್ ಮಾಡಿಕೊಂಡ ಅನುಭವವಾಗಿತ್ತು, ಮನಸ್ಸಿನಲ್ಲೇ '....ನಾಗೂ ನಿಜಕ್ಕೂ ನನ್ನ ಒಳ್ಳೆಯದಕ್ಕಾಗಿಯೇ ಕೂಗಾಡುತ್ತಾಳೆ.... ಇಂಥ, ನಿಗಾ ತೆಗೆದುಕೊಳ್ಳುವ ಹೆಂಡತಿಯನ್ನು ಪಡೆದುದು ನನ್ನ ಅದೃಷ್ಟ....ಸುಮ್ಮನೆ ಅವಳಿಂದ ದೂರ ಹೋಗ್ಬೇಕೆಂತ ಇಲ್ಲದ ಆಲೋಚನೆ ಮಾಡ್ತಿದ್ದೆ... ಅಲ್ದೇ ಅವಳ ಮೇಲೆ ಬೇಸರಪಟ್ಕೊಂಡು ಇರ್ತಿದ್ದೆ.... ಪಾಪ....! ನಾಳೆ ಬೆಳಿಗ್ಗೆ ಎದ್ದ ಮೇಲೆ ಅವಳಿಗದನ್ನು ಹೇಳ್ಬೇಕು....' ಎಂದುಕೊಳ್ತಾ, ಮೆತ್ತಗೆ ಮಲಗಿದ. ನಾಗೂಗೆ ಎಚ್ಚರವಾಗದ ಹಾಗೆ ತಾನೂ ಮಲಗಿ, ಅವಳ ಕಡೆಗೇ ಮುಖ ಮಾಡಿ ಮಗ್ಗುಲು ಮಗುಚಿದ.

– ಓ ಹೆನ್ರಿಯವರ ಕಥೆಯೊಂದನ್ನು ನೆನೆದು ಬರೆದದ್ದು

•

# ನಿಷ್ಠೆ

– ಜಯರಾಮ ಉಡುಪ

ಕೋಡಿ ಒಂದು ಕುಗ್ರಾಮವೆಂದು ಹೇಳುವ ಹಾಗಿಲ್ಲ. ಕರ್ನಾಟಕದ ಕರಾವಳಿ ಪ್ರದೇಶದಲ್ಲಿನ ದಟ್ಟ ಹಸುರಿಂದ ನಳನಳಿಸುವ ಒಂದು ಊರು ಎನ್ನುವುದೇ ಅದಕ್ಕೆ ಉಚಿತ. ಗ್ರಾಮದ ಪಶ್ಚಿಮಕ್ಕೆ ಸಮುದ್ರ; ಅಕ್ಕಿ ರವೆಯಂತೆ ಹಸರಿಸಿರುವ ಶುಭ್ರ ಮರಳಿನ ತೀರ; ತೀರದ ಉದ್ದಕ್ಕೂ ಸೊಂಪಾಗಿ ಬೆಳೆದು ಅಲೆಗಳ ಆವರ್ತನಕ್ಕೆ ಮೇಳೈಸುತ್ತಿರುವಂತೆ ತಲೆದೂಗುವ ತೆಂಗಿನ ತೋಪು; ತೆರೆಗಳೆಬ್ಬಿಸುವ ತಾನಕ್ಕೆ ತಮ್ಮ ತೂಗಾಟದಿಂದ ಹಿಮ್ಮೇಳದ ವೃಂದಗಾನದಲ್ಲಿ ಶ್ರುತಿ ಸೇರಿಸುವ ಗಾಳಿಮರಗಳ ಹಾಡಿ ಉತ್ತರಕ್ಕೆ; ಮಗ್ಗುಲಲ್ಲೇ ಘಟ್ಟಗಳಿಂದ ಹರಿದುಬಂದು ಕಡಲ ಸೇರುವ ಹೊಳೆ; ದಕ್ಷಿಣಕ್ಕೆ ಕಡಲನ್ನು ಮುಟ್ಟುವಂತೆ ಹಸರಿಸಿರುವ ಗುಡ್ಡಬೆಟ್ಟ; ಕಡಲ ತೀರದಿಂದ ನೇರ ಪೂರ್ವಕ್ಕೆ ಕೋಡಿಪೇಟೆ; ಪೇಟೆಯಿಂದ ಪಶ್ಚಿಮಕ್ಕೆ ಕಡಲ ತೀರದವರೆಗೆ ಹರಡಿರುವ ವಿಶಾಲವಾದ ಬಯಲು ಪ್ರದೇಶ. ಊರ ಬೆಟ್ಟದ ತುದಿಯಿಂದ ನೋಡಿದರೆ, ಕಲೆಗಾರನೊಬ್ಬನ ಕುಂಚದ ಕೌಶಲದಿಂದ ಕಡೆದಿಟ್ಟ ಮೋಹಕ ಚಿತ್ರವೋ ಎನ್ನುವ ಭ್ರಮೆ ಹುಟ್ಟಿಸುವ ಚೆಲುವು ಕೋಡಿಯದು. ಋತುಚಕ್ರ ತಿರುಗಿದಂತೆ, ಕಡಲ ಮೊರೆತ, ನದಿಯ ಕಲರವ, ಮತ್ತು ಗಾಳಿಮರಗಳ ಸುಂಯ್‌ಗುಟ್ಟುವಿಕೆ – ಇವುಗಳು ಒಟ್ಟಿಗೆ ನೀಡುವ ಸಂಗೀತದಲ್ಲೂ ಬದಲಾವಣೆಯುಂಟಾಗಿ, ಬಳುಕುವ ತೆಂಗಿನ ಮರಗಳ ನರ್ತನ ಇಡೀ ಕೋಡಿಯನ್ನೇ ಯಕ್ಷಲೋಕದ ರಂಗಸ್ಥಳವನ್ನಾಗಿ ಪರಿವರ್ತಿಸುತ್ತದೆ.

ಇಂಥ ಸುಂದರ ತಾಣದಲ್ಲಿ ಭೂತಾಯ ಸೇವೆಮಾಡಿಕೊಂಡು ತನ್ನ ಸಂಸಾರ ತೂಗಿಸುತ್ತಿದ್ದವನು ಊರ ಗಣ್ಯರಲ್ಲೊಬ್ಬರಾದ ಕುಪ್ಪಯ್ಯ ಮಂಜರ ಮನೆಯಾಳು ಕೆಂಚ. ಚಿಕ್ಕಂದಿನಿಂದಲೇ ಕೋಡಿಯ ಸೌಂದರ್ಯಕ್ಕೆ ಸ್ಪಂದಿಸಿ, ತನ್ನದೇ ಆದ ಸರಳ ರೀತಿಯಲ್ಲಿ ಅದನ್ನು ಉಣ್ಣುತ್ತಾ ಮೈಗೂಡಿಸಿಕೊಂಡು ಬಂದ ತುಂಬು ಹೃದಯ ಅವನದ್ದು. ಆ ವಾತಾವರಣ ಅವನ ಮೇಲೆ ಬೀರಿದ ಪರಿಣಾಮ, ಅದರೊಂದಿಗೆ ಅವನಿಗುಂಟಾದ ಸಂಬಂಧ, ಮತ್ತು ಅವನ ಕಾಯಕ – ಇವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಕಷ್ಟ.

ಮಡದಿ ಕೆಂಪಿ ಮತ್ತು ತನ್ನ ಗಂಡುಗಳು ಕರಿಯ ಮತ್ತು ಕೊಗ್ಗ – ಇವರನ್ನು ಸಾಕುವುದು ಮತ್ತು ಅವನ ಮಿತಿಯಲ್ಲೇ ಅವರನ್ನು ಸಂತೋಷದಿಂದಿಟ್ಟಿರುವುದು – ಇವು ಅವನ ದುಡಿಮೆಯ ಗುರಿಯಾದರೂ, ಇದಕ್ಕಿಂತ ಹೆಚ್ಚಿನದ್ದನ್ನು ಅವನ ಆತ್ಮ ಬಯಸಿ, ಅವನಿಗೆ ಅರಿವಿಲ್ಲದಂತೆ ಅದನ್ನು ಪೂರೈಸಿಕೊಳ್ಳುತ್ತಿತ್ತು.

ದೊಡ್ಡೊಡೆಯರ (ಕುಪ್ಪಯ್ಯ ಮಂಜರ ತಂದೆ ಗೋವಿಂದ ಮಂಜರ) ಕಾಲದಲ್ಲಿ ಇದ್ದ ಹುಲ್ಲಿನ ಮಾಡಿನ ಗುಡಿಸಲನ್ನು ಕೆಡವಿ, ಅದೇ ಸ್ಥಳದಲ್ಲಿ ಹಂಚಿನ ಮನೆಯನ್ನು ಕೆಂಚನಿಗೆ ಕಟ್ಟಿಸಿಕೊಟ್ಟವರು ಅವನ ಸಣ್ಣೊಡೆಯ ಕುಪ್ಪಯ್ಯ ಮಂಜರು. ಗೋವಿಂದ ಮಂಜರು ಕಾಲವಾದ ಮೇಲೆ ಸಣ್ಣೊಡೆಯರೇ ದೊಡ್ಡೊಡೆಯರಾಗಿಬಿಟ್ಟರು. ಹಾಗೆಂತ ತಪ್ಪಿಯೂ ಅವರನ್ನು ಕುಪ್ಪಯ್ಯೊಡೆಯರು ಅಂತ ಅವನು ಕರೆದವನಲ್ಲ. ಅವನ ದೃಷ್ಟಿಯಲ್ಲಿ ಹಾಗೆ ಹೆಸರಿಟ್ಟು ಕರೆದರೆ ದೊಡ್ಡ ಅಪಚಾರವೇ ಆದೀತು. ಈ ಒಡೆಯರನ್ನು ಸಣ್ಣ ಮಗುವಾಗಿದ್ದಾಗಿನಿಂದ ಅವನು ತಿಳಿದವ. ಆಗಲೂ ಅವರನ್ನು ನೀನು ತಾನು ಅಂತಲೋ ಅಥವಾ ಹೆಸರಿಟ್ಟೋ ಅವನು ಸಂಬೋಧಿಸಿದ್ದಿಲ್ಲ. ಕೆಂಚನ ಹಂಚಿನ ಮನೆ ಇರುವುದು ಮಂಜರ ತೆಂಗಿನ ತೋಟದ ಅಂಚಿನಲ್ಲಿ. ಆ ಮನೆಯ ಸುತ್ತಲಿನ ಸೊಬಗಿನ ಬಣ್ಣನೆ ಸಿಗಬೇಕಾದರೆ ಕೆಂಚನ ಹೃದಯವನ್ನು ಹೊಕ್ಕು ಪರಿಶೀಲಿಸಬೇಕಾದೀತು. ಮನೆಯ ಎದುರಿಗೆ ಮಗ್ಗುಲಲ್ಲಿ ದೊಡ್ಡೊಡೆಯರ ಕಾಲದಲ್ಲಿದ್ದ ಸಣ್ಣ ಬಾವಿಯ ಸ್ಥಳದಲ್ಲೇ ಸಣ್ಣೊಡೆಯರು ದೊಡ್ಡ ಬಾವಿಯೊಂದನ್ನು ಕಟ್ಟಿಸಿ, ಪಂಪುಸೆಟ್ಟು ಹಾಕಿಸಿ, ತೆಂಗಿನ ತೋಟ ಮತ್ತು ಎದುರಿಗಿದ್ದ ಮೂರು ಎಕರೆ ಜಮೀನಿಗೂ ಬೇಕಾಗುವ ನೀರಿನ ವ್ಯವಸ್ಥೆ ಮಾಡಿಸಿದ್ದರು. ಕೆಂಚನ ದೃಷ್ಟಿಯಲ್ಲಿ, ಬಾವಿಯಿದ್ದ ಸ್ಥಳದಲ್ಲಿದ್ದ ಗುಮ್ಮಿ ಮತ್ತು ಅದರ ದಡದಲ್ಲಿದ್ದ ಒಂದು ದೊಡ್ಡ ಮಾವಿನ ಮರ – ಇವೇ ಹೊಸ ಬಾವಿಯಲ್ಲಿ ನೀರೊರತೆಯ ಸಿರಿಯುಂಟಾಗಲು ಕಾರಣ. ಮಳೆಗಾಲದ ದಿನಗಳಲ್ಲಂತೂ ಬಾವಿ ತುಳುಕುವಷ್ಟು ತುಂಬಿರುತ್ತಿತ್ತು. ಮನೆಯ ಸುತ್ತ ತೆಂಗಿನ ಸೊಂಪು, ಎದುರಿಗೆ ವಿಶಾಲವಾದ ಬಯಲು, ಪಡುವಣ ದಿಕ್ಕಿನಿಂದ ಬರುವ ಕಡಲ ಮಂದ ಮಾರುತ, ಇವುಗಳ ಸಮ್ಮಿಳಿತದಿಂದ ಮನೆಯ ಎದುರಿಗೆ ಸೋಗೆಯ ನೆಳಲು ಕೊಡುವ ಸುಖ ಕೆಂಚನಿಗೆ ಅತಿ ಪ್ರಿಯ. ಜತೆಗೆ ಅಲ್ಲೇ ಬೆಳದಿಂಗಳ ರಾತ್ರಿಯಲ್ಲಿ ಸಾಬಿಯಂಗಡಿಯ ಕಳ್ಳಿನ ಗಡಿಗೆಯೊಂದಿದ್ದರೆ ಕೆಂಚನಿಗೆ ಆ ತಾಣ ಸ್ವರ್ಗಸಮಾನ. ಅಂಥ ಸಮಯದಲ್ಲೆಲ್ಲ, ಅವನ ಒಡೆಯರು ಹೇಳುವ ಹಾಗೆ, ಕೆಂಚನ ಕಂಠದಿಂದ ರಾಗ ಹೊರಟಿತೆಂದರೆ, ಸಾಬಿಯಂಗಡಿಯ ಕಳ್ಳಿನ ಖರೀದಿಗೆ ರಶೀದಿ ತಲುಪಿಸಿದ ಹಾಗೇ. ಆಗ ಅವನ ಭಾಗವತಿಕೆಯ ಪ್ರಯೋಗಕ್ಕೆ ಒಳಗಾಗುವ ಪದ್ಯಗಳೆಂದರೆ, ಕೆಂಪಿಯಿಂದಲೋ ಅಥವಾ ಅವಳ ಸಹ ಕೂಲಿಗಾರರಿಂದಲೋ ಕೇಳಿದ ಅವರ ದಿನಚರಿಯ ಹಾಡುಗಳು. ಕೆಂಚನ ಕುಡಿತದ ಒಂದು ನಿಯತ್ತೆಂದರೆ, ಮನೆಯಲ್ಲಿ ಗಂಜಿಗೆ ಗತಿಯಿಲ್ಲದಾಗ ಎಂದೂ ಆ ಕೊರತೆಯನ್ನು ಕಡೆಗಾಣಿಸಿ, ಮನೆಯವರನ್ನು ಹಸಿ ಹೊಟ್ಟೆಯಲ್ಲಿಟ್ಟು, ತಾನು ಕುಡಿತದಲ್ಲಿ

ಮುಳುಗದಿರುವುದು. ತನ್ನ ಒಡೆಯರ ಕುಟುಂಬದ ವಿಷಯ ಬಂದಾಗ ಕೆಂಚನಿಗೆ ಎಲ್ಲಿಲ್ಲದ ಮುತುವರ್ಜಿ. ಕೆಂಪಿ ಮತ್ತು ಹಿರಿಯ ಮಗ ಕರಿಯನಿಗೂ ಹಾಗೇ. ಕೋಡಿಯ ಎಲಿಮೆಂಟರಿ ಶಾಲೆಯಲ್ಲಿ ಎರಡನೆಯ ತರಗತಿ ತನಕ ಮಣ್ಣು ಹೊತ್ತು, ಕೊನೆಗೆ ಅಪ್ಪನ ಆದೇಶದಂತೆ ಶಾಲೆ ಬಿಟ್ಟು ಕೆಲಸದ ರಂಗಸ್ಥಳಕ್ಕೆ ಇಳಿದವನು ಕರಿಯ. ಊರಿನಲ್ಲಿರುವ ಏಕಮೇವ ಮಿಲಿಟರಿ ಹೊಟೇಲಿನಲ್ಲಿ ಕ್ಲೀನರ್ ಆಗಿ ಅವನಿಗೆ ಕೆಲಸ. ಕೊಗ್ಗನ ವಿಷಯ ಮಾತ್ರ ಸ್ವಲ್ಪ ಬೇರೆ. ಒಡೆಯರ ಮತ್ತು ಅವರ ಕುಟುಂಬದ ಮೇಲೆ ನಿರುಪಾಧಿಕ ಸ್ವಾಮಿಭಕ್ತಿ ಅವನಿಗೆ ಬರಲೊಲ್ಲದು. ಹುಸೇನ್ ಬ್ಯಾರಿಯವರ ಅಂಗಡಿಯಲ್ಲಿ ಬೀಡಿ ಕಟ್ಟುವ ಕೆಲಸ ಅವನದು. ಶಾಲೆಯ ಕಡೆ ಮುಖವನ್ನು ಕೂಡಾ ಅವನು ಹಾಕಿದವನಲ್ಲ. ಕೆಂಪಿಗೆ ತನ್ನ ಮನೆಯನ್ನು ನಿಭಾಯಿಸುವುದರ ಜತೆಗೆ, ಮಂಜರ ಮನೆಯ ಹೊರಗಿನ ಮತ್ತು ಬೇಸಾಯದ ಕೆಲಸ. ಅಲ್ಲಿ ಕೆಲಸವಿಲ್ಲದಾಗ ಮಂಜರ ಕೇರಿಯ ಬೇರೆ ಮನೆಗಳಲ್ಲಿ ಕೆಲಸ ಸಿಗುವುದುಂಟು. ಒಂದು ಬೆಳೆಯ ಕಾಲಚಕ್ರದುದ್ದಕ್ಕೂ ಕೂಲಿ ಕೆಲಸದ ಅಗತ್ಯ ಬೀಳುವುದಿಲ್ಲ. ಹೀಗಾಗಿ ವರ್ಷದ ಶೇಕಡಾ ೩೦ರಷ್ಟು ಸಮಯವಾದರೂ ಕೆಂಚ–ಕೆಂಪಿಯರಿಗೆ ಕೆಲಸವಿಲ್ಲದ ದಿನಗಳೇ. ಅಂಥ ದಿನಗಳನ್ನು ತಪ್ಪಿಸಲು ಎಷ್ಟೇ ಜಾಗರೂಕತೆ ವಹಿಸಿದರೂ ಸಾಲದು. ಕೆಂಚನ ಅತಿ ದೊಡ್ಡ ಚಿಂತೆಯೆಂದರೆ, ಹೆಚ್ಚಾಗಿ ಕೆಲಸವಿಲ್ಲದ, ಮಳೆಗಾಲದ ಸಮಯದಲ್ಲಿ ಬರುವ, ಗಂಜಿಗೂ ಗತಿಯಿಲ್ಲದ ದಿನಗಳದ್ದು. ಮಂಜರ ಹೆಂಡತಿ ವೇದಾವತಿಯಮ್ಮ (ಕೂಲಿ ಕೆಲಸಗಾರರಿಗೆಲ್ಲ ಅವರು ಏದಮ್ಮ) ದಿನಗೂಲಿಯನ್ನು ಹಣದ ರೂಪದಲ್ಲಿ ಪಾವತಿಮಾಡುವ ಬದಲು, ಅಕ್ಕಿ–ಧಾನ್ಯಗಳ ಮೂಲಕ ಕೆಂಚನ ಮನೆಯಾಳುಗಳಿಗೆ ಕೊಡುವ ಏರ್ಪಾಡು ಮಾಡಿದ್ದು ಕೆಂಚನ ಕುಡಿತದ ದೌರ್ಬಲ್ಯದ ಅರಿವಿಂದಾಗಿಯೇ. ಕೈಯಲ್ಲಿ ದುಡ್ಡು ಬಂತೆಂದರೆ ಕಾಲುಗಳು ಕೆಂಚನನ್ನು ಅವನಿಗರಿವಿಲ್ಲದಂತೆಯೇ ಸಾಬಿಯ ಕಳ್ಳಂಗಡಿಗೆ ಒಯ್ದು ಬಿಡುತ್ತಿದ್ದುವು.

ಎಷ್ಟೋ ಸಾರಿ ಕೆಂಪಿಯ ಸಮ್ಮತಿಯಿಂದಲೂ, ಒಡೆಯ–ಒಡತಿಯರ ಒತ್ತಾಯದಿಂದಲೂ, ದಿನಕೂಲಿಯಲ್ಲಿ ಬಂದ ಧಾನ್ಯವನ್ನು ಒಡೆಯರ ಮನೆಯಲ್ಲೇ ಬಿಟ್ಟು, ಮುಂದಿನ ಕಷ್ಟದ ದಿನಗಳಲ್ಲಿ ಒಟ್ಟಾಗಿ ಅವುಗಳನ್ನು ಒಯ್ಯುವುದೂ ಉಂಟು. ಆದರೂ 'ಸಾಯಲಿ ಬಿಡು' ಎಂದು ಹೆಂಡತಿಗೆ ಹೇಳಿ ಮಂಜರು ಒಮ್ಮೊಮ್ಮೆ ಅವನಿಗೆ ಮಜೂರಿಯನ್ನು ಹಣದ ರೂಪದಲ್ಲಿ ಕೊಡುವುದೂ ಉಂಟು. ಅಂಥ ದಿನಗಳು ಕೆಂಚನಿಗೆ ಹಿಗ್ಗಿನ ದಿನಗಳು – ತಾನು ತನ್ನ ನೆಚ್ಚಿನ ತೆಂಗಿನ ತೋಪಿನ ತಂಪಿನಲ್ಲಿ ತನ್ಮಯನಾಗಿ ತಾನವೇರಿಸಲು ಎಡೆಮಾಡಿಕೊಡುವ ಅಮಲಿನ ಹಂಬಲದಿಂದ.

ಮಂಜರದ್ದು ದೊಡ್ಡ ಸಂಸಾರ. ಅವಿಭಾಜ್ಯ ಕುಟುಂಬದ ನೆಲೆಯಲ್ಲಿ, ತನ್ನ ತಮ್ಮಂದಿರಾದ ಪದ್ಮನಾಭ ಮತ್ತು ನಾಗಪ್ಪಯ್ಯ – ಇವರ ಮತ್ತು ತಮ್ಮ ಸಂಸಾರ – ಇಷ್ಟನ್ನೂ ಪಿತ್ರಾರ್ಜಿತವಾಗಿ ಬಂದ ಆಸ್ತಿಯ ಆಧಾರದಲ್ಲೇ ಹಾಗೋ ಹೀಗೋ

ತೂಗಿಸುತ್ತಿದ್ದರು. ಸೋದರರ ಮಧ್ಯೆ ೧-೩ ವರ್ಷಗಳಷ್ಟು ಮಾತ್ರ ಅಂತರವಿದ್ದುದರಿಂದ, ಮೂರು ಸಂಸಾರಗಳನ್ನೂ ಸೇರಿಸಿದಲ್ಲಿ, ವರ್ಷಗಳುರುಳಿದಂತೆ ಒಟ್ಟು ೧೫-೨೦ ಮಂದಿ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದ ಮನೆತನ ಮಂಜರದ್ದು. ವೇದಮ್ಮನಿಗೆ ಮಕ್ಕಳಾಗಲು ಸ್ವಲ್ಪ ಕಾಲವೇ ಹಿಡಿಯಿತು. ಹೀಗಾಗಿ ಮಂಜ ಮನೆತನದ ಪ್ರಥಮ ವಂಶೋದ್ಧಾರಕನಾಗಿ ಜನಿಸಿದವನು ಪದ್ಮನಾಭ ಮತ್ತು ಮಡದಿ ನೇತ್ರಾವತಿಯರ ಮಗ ಸೀತಾರಾಮ. ಅವನ ಒತ್ತಿನಲ್ಲೇ ಒಂದೇ ವರ್ಷದ ಅವಧಿಯಲ್ಲಿ ವೇದಮ್ಮನಿಗೆ ಏಕೈಕ ಮಗುವಾಗಿ ಮಂಜ ವಂಶದ ಸಿರಿಲಕ್ಷ್ಮಿ ಉದಯಿಸಿದಳು. ಆ ಮನೆಯಲ್ಲಿ ಮುಂದಿನ ಕುಡಿ ಒಡೆಯಲು ಹಲವು ವರ್ಷಗಳೇ ಸಂದ ಕಾರಣ, ಸೀತಾರಾಮ ಮತ್ತು ಸಿರಿಲಕ್ಷ್ಮಿಯರಲ್ಲಿ ಒಂದೇ ಉದರದಲ್ಲಿ ಹುಟ್ಟಿದ ಅಣ್ಣ-ತಂಗಿಯರ ಅನ್ಯೋನ್ಯತೆ ಬೆಳೆತು ಬಲಿಯುತ್ತಾ ಬಂತು. ತನ್ನ ಒಡೆಯರಿಗೆ ಒಂದು ಗಂಡು ಮಗುವಾಗಲಿಲ್ಲವಲ್ಲ ಎಂಬ ಕೊರಗು ಮೊದಮೊದಲು ಒಡೆಯನಿಗಿಂತ ಕೆಂಚನಿಗೇ ಹೆಚ್ಚು ಬಾಧೆ ಕೊಡುತ್ತಿತ್ತು. ಇದು ಕಡಿಮೆಯಾಗತೊಡಗಿದ್ದು ಸೀತಾರಾಮ ದೊಡ್ಡವನಾಗುತ್ತಾ, ತನ್ನ ದೊಡ್ಡಪ್ಪಯ್ಯನಿಗೆ ತುಂಬ ಹೊಂದಿ ಕೊಂಡು, ಅವರ ಮಗನೇ ಎನ್ನುವಷ್ಟು ಆಪ್ತನಾಗಿ, ಅವರ ಕಾರ್ಯ ಕಜ್ಜದಲ್ಲಿ ಅವನೂ ತಲೆ ಮೈ ಹಾಕಿ ಆಸಕ್ತಿ ತೋರಿಸಲು ಶುರುಮಾಡಿದಾಗ.

ಕೆಂಚನಿಗೆ ತನ್ನ ಒಡೆಯರ ಅತ್ಯಂತ ಪ್ರಿಯ ಗುಣವೊಂದೆಂದರೆ ಕೃಷಿಯಲ್ಲಿ ಅವರ ಪ್ರಯೋಗಶೀಲಾ ಮನೋವೃತ್ತಿ. ಯಾವುದಾದರೂ ಹೊಸ ಯೋಜನೆಯೋ, ಸವಲತ್ತೋ, ಅದರ ವಿಷಯ ಎತ್ತಿದಾಕ್ಷಣ ಅವನು ಅತ್ಯುತ್ಸುಕನಾಗಿ ಮರುದಿನವೇ ಅದನ್ನು ಕಾರ್ಯ ಗತಗೊಳಿಸಲು ಸಿದ್ಧನಾಗುತ್ತಿದ್ದ. ಗೋವಿಂದ ಮಂಜರ ಕಾಲದಲ್ಲಿ ಹೆಚ್ಚಿನ ಜಾಗ ಕೃಷಿಗೆ ಯೋಗ್ಯವಾಗಿರದೆ ಹಡು ಬಿದ್ದಿರುತ್ತಿತ್ತು. ಬಯಲು ಜಾಗದಲ್ಲಿ ಕೂಡ ವರ್ಷದಲ್ಲಿ ಒಂದು ಬೆಳೆ ತೆಗೆದರೆ ಹೆಚ್ಚು.

ಕುಪ್ಪಯ್ಯ ಮಂಜರ ಯಜಮಾನಿಕೆಯಲ್ಲಿ ಹಾಳು ಬಿದ್ದ ಜಾಗವನ್ನೆಲ್ಲ ಸವರಿ, ದೊಡ್ಡ ಬಾವಿಯೊಂದನ್ನು ಕಟ್ಟಿ, ನೀರಾವರಿಯ ವ್ಯವಸ್ಥೆ ಮಾಡಿ, ತೆಂಗಿನ ತೋಟವೊಂದನ್ನು ಅಲ್ಲಿ ಎಬ್ಬಿಸಲು ಸುಮಾರು ೧೦ ವರ್ಷಗಳೇ ಹಿಡಿದುವು. ಜತೆಗೆ ಬೈಲು ಗದ್ದೆಗಳಲ್ಲೆಲ್ಲಾ ಕಾರು ಭತ್ತದ ಬೆಳೆ ಆದ ನಂತರ, ತೇವದ ಅಂಶ ಜಾಸ್ತಿ ಇರುವ ತಗ್ಗಿನ ಗದ್ದೆಗಳಲ್ಲಿ ಸುಗ್ಗಿ ಬೆಳೆಯನ್ನೂ, ಸುಮಾರು ಒಂದೂವರೆ ಎಕರೆಯಷ್ಟು ಜಾಗದಲ್ಲಿ ವಿವಿಧ ತರಕಾರಿಗಳನ್ನೂ, ಇನ್ನುಳಿದ ಗದ್ದೆಗಳಲ್ಲಿ ಎರಡು ಧಾನ್ಯದ ಬೆಳೆಗಳನ್ನೂ ಬೆಳೆಸುತ್ತಿದ್ದರು. ಹೈಸ್ಕೂಲಿನ ಮೆಟ್ಟಿಲನ್ನು ಹತ್ತದಿದ್ದರೂ ಮಂಜರದ್ದು ವೈಜ್ಞಾನಿಕ ಬುದ್ಧಿ. ಕಾರಣ-ಪರಿಣಾಮಗಳ ತೃಪ್ತಿಯುತ ವಿಶ್ಲೇಷಣೆ ನಡೆಸದೆ ಯಾವುದೇ ಯೋಜನೆಯನ್ನು ಕೇವಲ ಕ್ಷಣಿಕ ಉತ್ಸಾಹದ ಉಬ್ಬರದಲ್ಲಿ ಅವರು ಹಮ್ಮಿಕೊಳ್ಳುತ್ತಿರಲಿಲ್ಲ. ಮುಂದೆ ಬರುವ ದೊಡ್ಡ ಸಂಸಾರದ ಹೊಣೆಯ ಪ್ರಶ್ನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಮಂಜರು ಆಸ್ತಿಯನ್ನೆಲ್ಲ ಊರ್ಜಿತ

ಗೊಳಿಸಿದ್ದು ಅಂತ ಹೇಳಲು ಬರುವುದಿಲ್ಲ. ಅಂತೂ ಅವರ ಸಾಹಸ ಪ್ರವೃತ್ತಿ ಮುಂದಿನ ಕುಟುಂಬದ ಉನ್ನತಿಗೆ ಮುಖ್ಯ ಕಾರಣ ಎನ್ನುವುದನ್ನು ಅಲ್ಲಗಳೆಯುವ ಹಾಗಿಲ್ಲ. ಯಾವ ಕೆಲಸವನ್ನೇ ಹಮ್ಮಿಕೊಂಡರೂ ತುಂಬ ಶ್ರದ್ಧೆಯಿಂದ ತಾರ್ಕಿಕವಾಗಿ ಮಾಡಿ ಮುಗಿಸುವುದು ಅವರ ಹುಟ್ಟುಗುಣ. 'ಅದರಿಂದ ನನಗೇನು ಫಲ, ಮುಂದೇನು ಬರಬಹುದು' ಎನ್ನುವುದರ ಬಗ್ಗೆ ಅವರು ಚಿಂತಿಸುವವರಲ್ಲ. ಉಳಿದದ್ದೆಲ್ಲ ಊರ ದೇವಸ್ಥಾನದ ಸುಬ್ರಹ್ಮಣ್ಯಸ್ವಾಮಿಗೇ ಸೇರಿದ್ದು ಎನ್ನುವುದು ಅವರ ಧೋರಣೆ.

ಪದ್ಮನಾಭ ಮಂಜರು ಪ್ರಾಯದಲ್ಲಿ ಒಡೆಯರಿಗಿಂತ ಒಂದೇ ವರ್ಷ ಚಿಕ್ಕವರಾದರೂ, ಅನುಭವದಲ್ಲಿ, ತಾಕತ್ತಿನಲ್ಲಿ ತುಂಬಾ ಸಣ್ಣವರು. ಅಣ್ಣನ ಯಜಮಾನಿಕೆಯಲ್ಲಿ ಸಂಪೂರ್ಣ ನಂಬಿಕೆಯುಳ್ಳವರು. ಮದುವೆಯಾಗಿ ನೇತ್ರಾವತಿ ಮನೆಸೇರಿದ ಮೇಲೆ ಈ ಮಾನಸಿಕ ಸಮತೋಲನದಲ್ಲಿ ಅಲ್ಪ ಸ್ವಲ್ಪ ಗಜಿಬಿಜಿಯುಂಟಾಗಿದ್ದರೂ, ಅಣ್ಣನಲ್ಲಿರುವ ನಂಬಿಕೆ, ವಿಶ್ವಾಸ, ಪ್ರೀತಿಗಳಲ್ಲಿ ಕಿಂಚಿತ್ತೂ ಕಡಿಮೆ ಉಂಟಾಗಲಿಲ್ಲ. ಅವರದು ದಷ್ಟಪುಷ್ಟವಾದ ಶರೀರ. ಎರಡಾಳಿನ ಕೆಲಸ ಒಬ್ಬರೇ ಮಾಡಬಲ್ಲರು. ಮನೆಯಲ್ಲಿ ವಿಶೇಷದ ದಿನಗಳಲ್ಲೆಲ್ಲ ಒಳಗೆ ಅಡುಗೆಮನೆಯಲ್ಲಿ ಹೆಂಗಸರಿಗೆ ಸಹಾಯಮಾಡಿದ ಅನುಭವದ ಮೇಲೆ, ಊರಲ್ಲಿ ಅಡುಗೆಯ ಕಾಂಟ್ರಾಕ್ಟಿನ ವ್ಯವಹಾರ ಶುರುಮಾಡಿದರು. ನಟ್ಟಿ, ಕೊಯ್ಲು ಇಂಥ ಸಮಯಗಳು ಬಂದಾಗ, ಕೆಸರಿನ ಗದ್ದೆಗೆ ಧುಮುಕಿ ಕೂಲಿ ಆಳುಗಳ ಜತೆ ಕೆಲಸದಲ್ಲಿ ತಾವೂ ಸೇರಿಬಿಡುವರು. ಅವರ ನಳಪಾಕಕ್ಕೆ ಕರೆ ಬರುವುದು ಹೆಚ್ಚಾಗಿ ಬೇಸಿಗೆಯ ದಿನಗಳಲ್ಲಿ ಮಾತ್ರ. ಹೀಗಾಗಿ ಅವರ ಗಳಿಕೆಯಿಂದ ಬಂದ ಆದಾಯ ಅಲ್ಲೋ ಇಲ್ಲೋ ಮನೆಯ ಮೇಲಿನ ಖರ್ಚಿಗೆ ಮಾತ್ರ ಸಾಕಾಗುತ್ತಿತ್ತು. ಕಿರಿಯವರಾದ ನಾಗಪ್ಪಯ್ಯನ ವಿಷಯ ಮಾತ್ರ ಬೇರೆ. 'ಇವನಾದರೂ ಸ್ವಲ್ಪ ಓದಿ ಒಂದು ಪದವಿಯನ್ನು ಗಳಿಸಲಿ' ಎಂಬ ಅಣ್ಣನ ಆಶಯದಂತೆ ಹತ್ತಿರದ ಉಡುಪಿಯಲ್ಲಿ ಕಾಲೇಜೇನೋ ಸೇರಿದರು. ಆದರೆ ಸೇರಿದ ಮೊದಲ ವರ್ಷವೇ ಗೆಳೆಯರೊಡನೆ ಸೇರಿ ಎಲ್ಲೋ ಪರ ಊರಿಗೆ ಓಡಿಹೋದರು. ಮದುವೆ ಆದರೆ ಸರಿಹೋಗಬಹುದು ಎಂಬ ಅಣ್ಣ-ಅತ್ತಿಗೆಯರ ಇಚ್ಛೆಯಂತೆ ಕಮಲಾಕ್ಷಿಯ ಜತೆ ಮದುವೆ ಏನೋ ಮಾಡಿಸಿದರು. ಇದರಿಂದ ಉಂಟಾದ ಪರಿಣಾಮವೆಂದರೆ ಕಮಲಾಕ್ಷಿ ಮತ್ತು ಮುಂದೆ ಹುಟ್ಟಿದ ಮಕ್ಕಳು ಮನೆಯಲ್ಲೇ ಉಳಿದದ್ದು. ನಾಗಪ್ಪಯ್ಯನ ಅಲೆಮಾರಿತನ ಕಡಿಮೆಯಾಗಲಿಲ್ಲ; ನಾಲ್ಕೋ ಆರೋ ತಿಂಗಳಿಗೊಮ್ಮೆ ಬಂದು ಒಂದು ತಿಂಗಳು ಮನೆಯಲ್ಲಿ ಇದ್ದು ಪುನಃ ತಿರುಗಾಟ.

## ಕಾಲ ೧

ಸೀತಾರಾಮನ ಶಾಲಾದಿನಗಳು ಅವನ ವ್ಯಕ್ತಿತ್ವ ರೂಪಿಸುವಲ್ಲಿ ಬಹಳ ಮಹತ್ವದ ದಿನಗಳಾಗಿದ್ದುವು. ಎಲಿಮೆಂಟರಿ ಶಾಲೆಯ ವಿದ್ಯಾಭ್ಯಾಸ ಕೋಡಿಯಲ್ಲೇ ನಡೆಯಿತು. ಆ

ಶಾಲೆಯಲ್ಲಿ ಆದ ಜ್ಞಾನಾರ್ಜನೆಗಿಂತ ಆ ಸಮಯದಲ್ಲಿ ಮನೆಯಲ್ಲಿ ದೊಡ್ಡಪ್ಪನಿಂದ ಅವನು ಕಲಿತದ್ದೇ ಜಾಸ್ತಿ. ಶಾಲೆಯಲ್ಲಿ ಕೇವಲ ಉರುಹಾಕುವ ಕಲಿಕೆಯ ಅರಿವಾದದ್ದೇ ಹೊರತು, ಸ್ವಂತವಾಗಿ ವಿವೇಚಿಸಲು ಉತ್ತೇಜನವಾಗಲೀ ಪ್ರೋತ್ಸಾಹವಾಗಲೀ ಸಿಕ್ಕಿದ್ದು ಸೊನ್ನೆಯೇ. ಆದರೆ ದೊಡ್ಡಪ್ಪಯ್ಯನಿಂದ ಮನೆಯಲ್ಲಿ ನಡೆದ ಗಣಿತಶಾಸ್ತ್ರದ ತರಬೇತಿಯಿಂದ ಅವನ ತಾರ್ಕಿಕ ಚಿಂತನೆ ಭದ್ರವಾದ ಬುನಾದಿಯಲ್ಲಿ ಬೆಳೆದು ಹರಿತಗೊಳ್ಳಲು ಸಹಾಯವಾಯಿತು.

ಇದೇ ಸಮಯದಲ್ಲಿ, ದೊಡ್ಡಪ್ಪಯ್ಯನ ಪ್ರೀತಿಪೂರ್ವಕ ಆಗ್ರಹದಿಂದಾಗಿ, ಮತ್ತು ಕೆಂಚನ ಕಾಳಜಿಯಿಂದಾಗಿ, ಬೇಸಾಯದ ಬಗ್ಗೆ ಸೀತಾರಾಮನಲ್ಲಿ ಹುಟ್ಟಿದ ಆಸಕ್ತಿ, ತನ್ನ ನೆಲದೊಡನೆ ಅತಿ ನಿಕಟವಾದ ಸಂಬಂಧ ಬೆಳೆಸಿಕೊಳ್ಳುವಂತೆಯೂ, ಅದರಲ್ಲಿರುವ ಸೊಗಡಿನ ಮೂಲ ಅರಿತುಕೊಳ್ಳುವಂತೆಯೂ ಮಾಡಿತು. 'ಏ ಮಾಣಿ, ಸ್ವಲ್ಪ ಗದ್ದೆ ಬದಿಗೆ ಹೋಗಿ ಬರುವ ಬಾ' ಎಂಬ ಮಂಜರ ಕರೆಗೆ ಎಂದೂ ಅವನು ಆಗದು ಎನ್ನಲಿಕ್ಕಿಲ್ಲ. ಹಾಗೆ ಗದ್ದೆಯ ಅಂಚಿನಲ್ಲಿ ಸಂಚರಿಸುತ್ತಿರುವಾಗೆಲ್ಲ ಮಂಜರ ವಿವರಣೆಯ ಉತ್ಸಾಹಕ್ಕೆ ವಿರಾಮವೇ ಇರುತ್ತಿರಲಿಲ್ಲ. 'ಇದು ನೋಡು, ಈ ಮೂಲೆಯಲ್ಲಿ ನಂಜು ಜಾಸ್ತಿ. ಹೀಗಾಗಿ ಇಲ್ಲಿ ಭತ್ತದ ಸಸಿ ಸರಿಯಾಗಿ ಬೆಳೆಯದು. ಅಲ್ಲಿ ಆ ಬದಿಯಲ್ಲಿ ಸಸಿಗಳೆಲ್ಲ ಹದ ತಪ್ಪಿ ಸೊಪ್ಪಾಗಿ ಬೆಳೆದಿವೆ. ಅದೂ ಸರಿಯಲ್ಲ. ಅದೇ ಈ ಮಧ್ಯದ ಜಾಗ ನೋಡು. ಆರೋಗ್ಯದಿಂದ ಬಲಿಷ್ಠವಾಗಿ ಬೆಳೆದು ಹೆಚ್ಚಿನ ತೆನೆ ತರುವ ಸೂಚನೆ ತೋರುತ್ತಿದೆ'. ಹೀಗೆ ದೊಡ್ಡಪ್ಪಯ್ಯನೊಂದಿಗೆ ಮಾಡಿದ ಗದ್ದೆಯ ಅಸಂಖ್ಯ ತಿರುಗಾಟದಿಂದಲೇ, ಶಾಲೆಯ ದಿನಗಳಲ್ಲೂ, ಅವನಿಗೇ ಅರಿವಿಲ್ಲದಂತೆ ಎಷ್ಟೋ ಮಾಹಿತಿ ಅವನಲ್ಲಿ ಸೇರಿಬಿಟ್ಟಿತ್ತು – ಗದ್ದೆ ಕರಡುವುದು ಯಾವಾಗ, ಹೇಗೆ; ಉತ್ತಮ ತಳಿಯ ನೆಲ್ಲು/ಬೀಜಗಳ್ಯಾವುವು; ಅವುಗಳ ಬಿತ್ತನೆ ಎಂತು; ನಟ್ಟಿಯ ತಯಾರಿ ಹೇಗೆ; ಮುಂದೆ ಸಸಿಗಳ ಆರೈಕೆ, ಕಳೆ ಕೀಳುವಿಕೆ, ಬುಡ ಮಾಡುವಿಕೆ, ರೋಗ ನಿವಾರಣೆ ಎಂತು; ಕೊಯ್ಲಿನ ಸಮಯ ಯಾವುದು, ಹೇಗೆ ಮಾಡಿಸುವುದು; ಭತ್ತದ ಶೇಖರಣೆ ಎಂತು, ಇತ್ಯಾದಿ. ಕೊಯ್ಲಿನ ಸಮಯ ಹೊಸ ಫಸಲು ತರುವ ಮುದದ ಜತೆಗೇ ಚಿಂತಾಜನಕ ಕ್ಷಣಗಳೂ ಬರುವ ಅರಿವು ಅವನಿಗುಂಟು – ಎಲ್ಲೋ ಹಿಂಗಾರಿನ ಕಳ್ಳ ಮಳೆಯೊಂದು ದಿಢೀರನೆ ಬಡಿಯಿತೆಂದರೆ ಕಟಾವು ಮಾಡಿದ ಫಸಲೆಲ್ಲ ನಾಚಾರವೇ. ಹೀಗಾಗಿ ಕೊಯ್ಲಾದ ಕ್ಷಣವೇ ಕೆಯ್ಯನ್ನು ಮನೆಗೆ ತಂದು, ಜಪ್ಪಿ, ಭತ್ತ ಬೇರೆಮಾಡಿ ಒಳಗೆ ತರಬೇಕಾಗುತ್ತಿತ್ತು. ಭತ್ತದ ಬೆಳೆಗಳಿಗಿಂತ ಸೀತಾರಾಮನಿಗೆ ಹೆಚ್ಚಿನ ಉತ್ಸಾಹ ಹುಟ್ಟಿಸಿದ್ದು, ಮುದ ತಂದದ್ದು ಬೇಸಿಗೆಯಲ್ಲಿ ದೊಡ್ಡಪ್ಪಯ್ಯ ಕೃಷಿ ಮಾಡುತ್ತಿದ್ದ ದೊಡ್ಡ ತರಕಾರಿ ತೋಟಗಳಿಂದ. ಅವರದ್ದು ಪ್ರಾಯೋಗಿಕ ಕೃಷಿ. ಮೊದಲ ಸಾರಿ ಸುಗ್ಗಿ ಧಾನ್ಯಗಳನ್ನು ಬಿಟ್ಟು, ಸುಮಾರು ೧.೫ ಎಕರೆಯಷ್ಟು ಜಾಗದಲ್ಲಿ, ಹೆಚ್ಚಿಗೆ ಆದಾಯ ತರುವ ಇನ್ಯಾವುದಾದರೂ ಬೆಳೆ ತೆಗೆಯುವ ಅಂದಾಜು ಅವರು ಎತ್ತಿದಾಗಲೇ

ಕೆಂಚ ಮತ್ತು ಪದ್ಮನಾಭರಿಂದ ಉತ್ತೇಜನದ ಮಾತು ಬಂದಿತ್ತಾದರೂ, 'ಅದೆಲ್ಲ ಯಾಕೆ, ಸುಮ್ಮನೆ ದುಡ್ಡು ದಂಡ' ಎಂಬ ಕೊಂಕು ನುಡಿ ಎತ್ತಿದವರು ನಾಗಪ್ಪಯ್ಯ ಮತ್ತು ಕಮಲಾಕ್ಷಿ. ಮನೆಯಲ್ಲಿ ಕಟಿಪಿಟಿ ಬಂದರೂ, ಆ ಪ್ರದೇಶದಲ್ಲಿ ಹೆಚ್ಚು ಬಳಕೆಯಲ್ಲಿರುವ, ಹಲವು ವಿಧದ ಹಸುರುವಾಣಿಗಳು ಮಂಜರ ಕೃಷಿ ಪ್ರಯೋಗ ಶಾಲೆಯನ್ನು ಪ್ರವೇಶಿಸಿದುವು. ಒಂದೆರಡು ವರ್ಷದಲ್ಲೇ ಒಂದು ಕ್ರಮವತ್ತಾದ ವಿಧಾನ ಅವರ ಪ್ರಯೋಗದಿಂದ ಹೊರ ಹೊಮ್ಮಿ, ಸುತ್ತಮುತ್ತಲಿನ ಕೃಷಿಗಾರರೆಲ್ಲ ಆ ವಿಧಾನವನ್ನು ಅನುಕರಿಸುವ, ಮತ್ತು ಹಲವು ಗ್ರಾಮಪಂಚಾಯತಿಗಳ ಮಾರುಕಟ್ಟೆಗಳಲ್ಲಿ ಪ್ರಶಸ್ತಿಗಳನ್ನು ಗಿಟ್ಟಿಸುವಮಟ್ಟಿಗೆ ಅದನ್ನು ಅವರು ಊರ್ಜಿತಗೊಳಿಸಿದರು. ಏರಿ ಏರಿಗಳಲ್ಲಿ ಹಸಿ ಮೆಣಸು, ಏರಿಯ ಎರಡು ಕೊನೆಗಳಲ್ಲಿ ಗುಳ್ಳದ ಬದನೆ, ಒಂದಿಷ್ಟು ಜಾಗದಲ್ಲಿ ಅಲಸಂಡೆಯ ಚಪ್ಪರ, ಇನ್ನೊಂದೆಡೆ ಹಸಿರು ಮತ್ತು ಬಿಳಿ ಹೀಗೆ ಎರಡು ವಿಧದ ಬೆಂಡೆಕಾಯಿಯ ದಂಡೆಗಳು. ಕೆಂಚನನ್ನು ಕೇಳಿದರೆ ಪ್ರತಿಯೊಂದು ಕ್ರಮಕ್ಕೂ, ವಿಧಾನಕ್ಕೂ, ಒಡೆಯರ ಪ್ರಯೋಗದಿಂದ ಹೊಮ್ಮಿದ, ಅವನ ಅನುಭವದಿಂದ ಉಂಟಾದ ಕಾರಣಗಳನ್ನು ತನ್ನದೇ ಶೈಲಿಯಲ್ಲಿ ವಿವರಿಸುವನು. 'ಅದನ್ನು ಹೀಗೆ ಮಾಡಿದರೆ ಹೇಗೋ?' ಎಂದು ಮಂಜರು ಕೆಂಚನನ್ನು ಎಲ್ಲ ವಿಷಯಗಳಲ್ಲೂ ಕೇಳುವವರೇ. ಆಗ ಅವನಿಗೆ ಎಲ್ಲಿಲ್ಲದ ಹೆಮ್ಮೆ. ತನ್ನ ಅನುಭವದ ಭಂಡಾರದಿಂದ ಮಾಗಿದ ಪರಿಹಾರ ಸೂಚಿಸುವಾಗಲೂ ಅವನಿಗೆ ಅಷ್ಟೇ ನಂಬಿಕೆ – ಅದು ಉಂಟುಮಾಡುವ ಪರಿಣಾಮದಲ್ಲಿ.

ಮಾಗಿಯ ಚಳಿ ಕಳೆದು ವಸಂತ ಬಂತೆಂದರೆ ಕೆಂಚನಿಗೆ ಮುಂಬರುವ ತರಕಾರಿ ತೋಟ ಎಬ್ಬಿಸುವ ಕೆಲಸದ ಗೌಜು ಮತ್ತು ಹುಮ್ಮಸ್ಸು. ಭತ್ತದ ಬೆಳೆಗಳಿಗಿಂತ ಅವನಿಗೆ ಇದರಲ್ಲೇ ಒಲವು ಜಾಸ್ತಿ. ಪರಿಮಾಣದ ಅಂದಾಜು ಅವನಿಗೆ ಸಿಗದು – ಯಾವ ಯಾವ ಜಾಗದಲ್ಲಿ ಎಷ್ಟೆಷ್ಟು ಏರಿ ಹೊಡೆಯ ಬೇಕು, ಬೀಜ ನೆಡಬೇಕು – ಇವುಗಳನ್ನು ಒಡೆಯರೇ ನಿಂತು ಮಾಡಿಸಬೇಕು. ಒಮ್ಮೆ ಗಿಡಗಳು ಮೇಲೆ ಬಂದುವು ಎಂದರೆ, ದಿನಾ ನೀರು ಬಿಡುವುದೋ, ಕಳೆ ಕೀಳುವುದೋ, ಬುಡಮಾಡುವುದೋ, ಮದ್ದು ಹೊಡೆಯುವುದೋ – ಇವುಗಳನ್ನು ಬೇಕಾದ ಕೂಲಿ ಆಳುಗಳನ್ನು ಹಾಕಿ ಮಾಡಿ ಮುಗಿಸುವುದರಲ್ಲಿ ಅವನು ನಿಪುಣ. ಪುನಃ ಗಿಡಗಳಿಂದ ಕಾಯಿಗಳನ್ನು ಕೊಯ್ದು, ಗೋಣಿ ಚೀಲಗಳಲ್ಲಿ ತುಂಬಿ, ತೂಕ ಮಾಡಿಸಿ, ಕೋಟ, ಕುಂದಾಪುರ, ಬ್ರಹ್ಮಾವರ, ಉಡುಪಿಯಲ್ಲಿನ ಸಂತೆಗಳಿಗೋ, ಹೊಟೇಲುಗಳಿಗೋ ಕಳುಹಿಸುವ ಏರ್ಪಾಡು ಒಡೆಯರೇ ನಿಂತು ಮಾಡಿಸಬೇಕು.

ಸೀತಾರಾಮನ ಹೈಸ್ಕೂಲಿನ ತರಬೇತಿಯಿಂದ ಪಡೆದ ಮುಖ್ಯಗಳಿಕೆ ಎಂದರೆ ದೊಡ್ಡಪ್ಪಯ್ಯನಿಂದ ಬಿತ್ತಲ್ಪಟ್ಟ ಅವನ ತಾರ್ಕಿಕ, ವೈಜ್ಞಾನಿಕ ಮನೋಧರ್ಮಕ್ಕೆ ಕೆಲವು ಉತ್ತಮ ಅಧ್ಯಾಪಕರಿಂದ ದೊರೆತ ಪೋಷಣೆ. ಉರು ಹಾಕುವ ವಿಷಯಗಳು ಅವನಿಗೆ

ಸುಲಭದಲ್ಲಿ ದಕ್ಕವು. ಹೀಗಾಗಿ ಉಳಿದ ಎಲ್ಲ ವಿಷಯಗಳಲ್ಲೂ ತನ್ನ ತರಗತಿಯಲ್ಲಿ ಪ್ರಥಮನಾಗಿ ಬಂದರೂ, ಸಮಾಜಶಾಸ್ತ್ರ, ಪೌರನೀತಿ, ಚರಿತ್ರೆ – ಇಂಥ ವಿಷಯಗಳಲ್ಲಿ ಅವನ ಅಂಕ ಗಳಿಕೆ ಮಧ್ಯಮ ವರ್ಗದ್ದಾಗಿರುತ್ತಿತ್ತು. ಹೈಸ್ಕೂಲಿನ ಶಾಲಾದಿನಗಳಲ್ಲೂ ಅವನ ಗದ್ದೆ–ಬಯಲಿನ ತಿರುಗಾಟ ಮುಂದುವರಿದು, ದೊಡ್ಡಪ್ಪಯ್ಯನ ಕೃಷಿ ವಿಧಾನಗಳನ್ನು ಹೆಚ್ಚು ವೈಜ್ಞಾನಿಕವಾಗಿ ಅವರೊಂದಿಗೆ ಚರ್ಚಿಸುವ ಅವಕಾಶ ದೊರಕಿಸಿಕೊಟ್ಟುವು. ಆದರೆ ಅವನಿಗೆ ಅತ್ಯಂತ ಸಂತಸದ ದಿನಗಳೆಂದರೆ ಪರೀಕ್ಷೆಗಳೆಲ್ಲ ಮುಗಿದು ಬೇಸಿಗೆಯ ರಜೆಯಲ್ಲಿ ತರಕಾರಿ ತೋಟ ನೀಡುತ್ತಿದ್ದ ಕರೆಯ ದಿನಗಳು. ತನ್ನ ಅಮ್ಮನ 'ನೀನು ರಣಬಿಸಿಲಿನಲ್ಲಿ ಮೂರು ಹೊತ್ತೂ ಗದ್ದೆ–ಬಯಲಿನಲ್ಲಿ ತಿರುಗಿದರೆ ಕರಿ ಕಾಳಪ್ಪನಾಗುವುದು ಖಂಡಿತ' ಎನ್ನುವ ಮಂತ್ರವನ್ನು ಲೆಕ್ಕಿಸದೆ, ಕೆಂಚನ ಜತೆ ಇದ್ದು, ತೋಟದ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ತನಗರಿವಿಲ್ಲದಂತೆಯೇ ಹೊರುತ್ತಿದ್ದ. ಕೆಲವೊಮ್ಮೆ 'ಮಾಣಿ ಬೆಳಿಗ್ಗಿನ ಗಂಜಿ ಊಟಕ್ಕೆ ಇನ್ನೂ ಮನೆಗೆ ಬಂದಿಲ್ಲ' ಎಂದು ಏದಮ್ಮನೋ ಸಿರಿಲಕ್ಷ್ಮಿಯೋ ಮೊಸರವಲಕ್ಕಿಯೊಂದಿಗೆ ತೋಟಕ್ಕೇ ಬರುವುದುಂಟು. ಅಂಥ ಸಮಯದಲ್ಲಿ ಒಂದೆರಡು ಎಳೆ ಚಿಗುರು ಮೆಣಸನ್ನು ಗಿಡದಿಂದ ಕೊಯ್ದು ಅವಲಕ್ಕಿಯೊಂದಿಗೆ ನುರಿದುಕೊಂಡು ಗದ್ದೆಯಂಚಿನಲ್ಲಿ ಕುಳಿತು ತಿನ್ನುವಾಗ, ಬೆಳಗಿನ ಜಾವದ ಕಡಲಿನ ಬೆಚ್ಚಗಿನ ಗಾಳಿಯೊಂದಿಗೆ ತೋಟದಿಂದ ಬರುವ ನವುರಾದ ಕಂಪೂ ಬೆರೆತು ಕೊಡುವ ತೃಪ್ತಿ ಮಾತಿನಲ್ಲಿ ಬಣ್ಣಿಸಿ ಆಗುವುದಲ್ಲ ಎಂದೇ ಅವನ ಭಾವನೆ. ಕೆಲವೊಮ್ಮೆ ಸೂರ್ಯ ಕಂತಿ ಕತ್ತಲು ಮೂಡುವವರೆಗೂ ತೋಟದಲ್ಲಿ ಅವನು ಇದ್ದಾಗ, ಕೆಂಚ ಹುಲ್ಲಿನ ಸೂಡಿಯೊಂದನ್ನು ಮಾಡಿ ಸಣ್ಣೊಡೆಯರನ್ನು ಗದ್ದೆ–ಬಯಲನ್ನು ದಾಟಿಸಿ ಅವರ ಮನೆತನಕ ಬಿಟ್ಟು ಬರುವನು. 'ಬೇಸಗೆಯಲ್ಲಿ ಕಾಲು ಬುಡದಲ್ಲಿ ಏನು ಸರಿದೀತೋ ಹೇಳಲು ಬರುವುದಿಲ್ಲ ಒಡೆಯ. ನೀವು ದೀಪವಿಲ್ಲದೆ ಮನೆಕಡೆ ನಡೆಯುವುದು ಸರಿಯಲ್ಲ' ಎಂದೇ ಅವನು ಒತ್ತಾಯ ಪೂರ್ವಕವಾಗಿ ಒಡೆಯರನ್ನು ಮನೆಗೆ ಬಿಟ್ಟು ಬಂದೇ ಸಾಬಿಯ ಕಳ್ಳಂಗಡಿಗೆ ದರ್ಶನ ಕೊಡುವುದು.

## ಕಾಲ ೨

ಸೀತಾರಾಮು ಬಿ.ಎಸ್.ಸಿ–ಎಮ್.ಎಸ್.ಸಿಗೆಂದು ಮೈಸೂರಿಗೆ ಹೋಗುವುದು ನಿಶ್ಚಯವಾದಾಗ, 'ಮಾಣಿ ಕಣ್ಣು ಕಾಣದ ಊರಿಗೆ ಹೋಗುತ್ತಿದ್ದಾನಲ್ಲ ಎಂಬ ವ್ಯಥೆ ನೇತ್ರಾವತಿಗಿಂತ ಏದಮ್ಮನಿಗೇ ಜಾಸ್ತಿ ಆದದ್ದು. 'ಅವನ ದೇಹ ಪ್ರವೃತ್ತಿ ಸ್ವಲ್ಪ ಸೂಕ್ಷ್ಮ. ಹಾಸ್ಟೆಲಿನ ಊಟ ಬೇರೆ. ಹಾಲು ಮೊಸರಿನ ತಂಪು ಸಿಗುವುದೋ ಇಲ್ಲವೋ. ಹೀಗಿದ್ದಲ್ಲಿ ಅವನು ದೇಹದಲ್ಲಿ ಸೊರಗಿ ಖಾಯಿಲೆ ಬಿದ್ದರೆ ಓದುವುದು ಎಲ್ಲ ಹೇಗೆ?' ಎಂಬುವುದೇ ಅವರ ಚಿಂತೆ. ತಮ್ಮ ಮನೆಯಿಂದ ಮೊದಲು ಕಾಲೇಜು ಮೆಟ್ಟಿಲು ಹತ್ತಿದವ ಎಂಬ

ದೃಷ್ಟಿಯಿಂದ ಕುಪ್ಪಯ್ಯ ಮಂಜರಿಗೆ ಸೀತಾರಾಮನ ಮುಂದಿನ ವ್ಯಾಸಂಗ ಹೆಮ್ಮೆಯ ವಿಷಯ. ಅದಕ್ಕೆ ತಗಲುವ ಖರ್ಚಿನ ಬಾಬ್ತು ಮಾತ್ರ ಅವರಿಗೆ ಚಿಂತೆ ಹುಟ್ಟಿಸಿತ್ತು. ಅವನಿಗೆ ವಿದ್ಯಾರ್ಥಿವೇತನ ಬರದಿದ್ದಲ್ಲಿ ಮನೆಯಲ್ಲಿ ಬೆಳೆಯುತ್ತಿರುವ ಮುಂದಿನ ಪೀಳಿಗೆಗೆ ಓದು ಕಾಣಿಸುವ ಬಗೆ ಹೇಗೆ ಎಂಬ ಪ್ರಶ್ನೆ ಅವರ ಮನಸ್ಸಿನಲ್ಲಿ ಹುಟ್ಟಿ, ಉತ್ತರ ಕಾಣದೆ, ಅಲ್ಲೇ ಸುಳಿದಾಡುತ್ತಿತ್ತು. ಮುಂದೆ ಸೀತಾರಾಮನಿಗೆ ಸಹಾಯಧನ ಸಿಕ್ಕಿ, ಅದರಿಂದ ಅವನ ಕಾಲೇಜು ಖರ್ಚು ಸಂಪೂರ್ಣವಾಗಿ ಕಳೆಯುವುದೆಂದು ಗೊತ್ತಾದ ಮೇಲೇ ಅವರಿಗೆ ಅದರಿಂದ ಶಾಂತಿ ದೊರಕಿದ್ದು. ಅಣ್ಣ ಊರು ಬಿಟ್ಟು ಹೋಗುವುದು ಸಿರಿಲಕ್ಷ್ಮಿಗೆ ಸ್ವಲ್ಪವೂ ಇಷ್ಟವಿಲ್ಲ. ಅವನ ಬಟ್ಟೆ ಒಗೆದು ಕೊಡುವುದರಿಂದ ಹಿಡಿದು ತಟ್ಟೆ ತೊಳೆದುಕೊಡುವ ತನಕ ಪ್ರೀತಿಯಿಂದ ಮಾಡುತ್ತಿದ್ದ ಎಲ್ಲ ಕೆಲಸಗಳಿಗೆ ಬರುವ ಧಕ್ಕೆ ಒಂದು, ತನ್ನ ಓದುವಿಕೆಯಲ್ಲಿ – ಮುಖ್ಯವಾಗಿ ಗಣಿತದಲ್ಲಿ – ಸಿಗುತ್ತಿದ್ದ ಅವನ ಸಹಾಯ ತಪ್ಪುವುದು ಇನ್ನೊಂದು. ಆದರೂ ಡಿಗ್ರಿಗಳನ್ನು ಪಡೆದು ಒಬ್ಬ ದೊಡ್ಡ ವಿಜ್ಞಾನಿ ಅವನಾಗುವುದು ಖಂಡಿತ ಎಂಬ ಅವಳ ಅಂತರ್ದನಿಯೇ ಇವಕ್ಕೆ ಸಮತೋಲನದ ಸಮಾಧಾನ ನೀಡಿ ಅವಳನ್ನು ಸಂತೈಸುತ್ತಿತ್ತು. ಮಂಜರಿಗೆ ಮತ್ತು ಕೆಂಚನಿಗೆ ಸೀತಾರಾಮನ ಗದ್ದೆ–ಬಯಲಿನ ಸ್ನೇಹಪೂರ್ಣ ಒಡನಾಟದ ಮತ್ತು ಅವನು ತಾನಾಗಿ ಹೊರುವ ಜವಾಬ್ದಾರಿಗಳ ತಪ್ಪುವಿಕೆ ಭರಿಸಲಾಗದ ನಷ್ಟವೇ. ಪದ್ಮನಾಭ–ನಾಗಪ್ಪಯ್ಯನ ಬೇರೆ ಗಂಡು ಮಕ್ಕಳು ಈ ಸಮಯದಲ್ಲಿ ಶಾಲೆಗೆ ಹೋಗುವವರಿದ್ದರೂ, ಅವರಿಗೆ ಬಲವಂತ ಮಾಡಿ ಏನಾದರೂ ಕೆಲಸದ ಮೇಲೆ ಕಳುಹಿಸಿದರೆ ಮಾತ್ರ ಅವರು ಗದ್ದೆ ಬದಿಗೆ ಹೋಗುವವರು.

ಸೀತಾರಾಮನಿಗೆ ಕಾಲೇಜು ಜೀವನ ಎಲ್ಲ ವಿಧದಲ್ಲೂ ಹೊಸ ಆಯಾಮಗಳನ್ನೂ ಕರೆಗಳನ್ನೂ ತಂದೊಡ್ಡುತ್ತಿತ್ತು. ಉಡುಪಿ–ಮಂಗಳೂರನ್ನು ಬಿಟ್ಟು ಈ ಮುಂಚೆ ಬೇರೆ ದೊಡ್ಡ ಊರುಗಳನ್ನು ನೋಡಿ ಅನುಭವವಿರದ ಅವನಿಗೆ ಈ ಹೊಸತುಗಳು ಒಡ್ಡಿದ ಸಂವೇದನೆ ಮೊದಲಿಗೆ ಸ್ವಲ್ಪ ಗೊಂದಲ ಉಂಟುಮಾಡಿದರೂ ಕ್ರಮೇಣ ಅವಕ್ಕೆ ಒಗ್ಗಿಹೋದ. ತನ್ನ ಮನೆಯಲ್ಲಿ, ಶಾಲೆಯಲ್ಲಿ ತಾನೇ ರಾಜನಾಗಿ ಮೆರೆದ ಅವನ ಹೆಗ್ಗಳಿಕೆ ಕಾಲೇಜಿನಲ್ಲಿ ಲೆಕ್ಕಕ್ಕೆ ಬರದಿರುವುದು, ಕನ್ನಡ ಮಾಧ್ಯಮದಲ್ಲಿ ಕಲಿತ ಅವನಿಗೆ ಉಳಿದ ಪಟ್ಟಣದಿಂದ ಬಂದ ಮಕ್ಕಳು ಮತ್ತು ಪ್ರಾಧ್ಯಾಪಕರು ಪಟಪಟನೆ ಉದುರಿಸುತ್ತಿದ್ದ ಇಂಗ್ಲಿಷ್ ಮಾತುಗಳನ್ನು ಅರ್ಥೈಸಿಕೊಳ್ಳಲು ಮತ್ತು ಸ್ಪಂದಿಸಲು ಆಗುತ್ತಿದ್ದ ಕಷ್ಟ, ಪಟ್ಟಣದ ಮಕ್ಕಳ ಎದೆಗಾರಿಕೆ, ಗಂಡು–ಹೆಣ್ಣುಗಳಿಗೆ ಪ್ರತ್ಯೇಕವಾದ ಬೆಂಚಿನ ಸಾಲುಗಳಿರುತ್ತಿದ್ದ ಅವನ ಶಾಲೆಗೆ ವಿರುದ್ಧವಾಗಿ ಇಲ್ಲಿ ಅವರು ಒಟ್ಟೊಟ್ಟಿಗೇ ಎಲ್ಲ ಚಟುವಟಿಕೆಗಳಲ್ಲೂ ಭಾಗವಹಿಸುವ ಕ್ರಮ, ಬೇರೆ ರೀತಿಯ ಊಟ–ತಿಂಡಿಗಳ ಕ್ರಮ, ರುಚಿ ––ಇವುಗಳನ್ನೆಲ್ಲ ಜೀರ್ಣಿಸಿಕೊಳ್ಳಲು ಅವನಿಗೆ ಒಂದು ವರ್ಷವೇ ಹಿಡಿಯಿತು. ತನ್ನ ತಾಕತ್ತಿನಲ್ಲಿದ್ದ ದೃಢನಂಬಿಕೆ ಮತ್ತು ತಾನು ಬೆಳೆದುಬಂದ ಸರಳ ಜೀವನಕ್ರಮದಿಂದ ಮೈಗೂಡಿಸಿಕೊಂಡ

ಸರಿ–ತಪ್ಪುಗಳ ಅರಿವು -- ಇವುಗಳು ಈ ಎಲ್ಲ ಗೊಂದಲಗಳನ್ನು ಹಿಮ್ಮೆಟ್ಟಿ, ಒಂದೇ ವರ್ಷದಲ್ಲಿ ತನ್ನತನವನ್ನು ಸ್ಥಾಪಿಸಿಕೊಳ್ಳಲು ಸಹಾಯ ಮಾಡಿದುವು.

ಸೀತಾರಾಮ ಬಿ.ಎಸ್.ಸಿಯ ಎರಡನೆಯ ವರ್ಷದಲ್ಲಿದ್ದಾಗ, ಒಮ್ಮೆ ಎಂದಿನಂತೆ ಮಂಜರು ತಮ್ಮ ಮನೆಯ ಜಗುಲಿಯಲ್ಲಿ ಕುಳಿತು ದಿನಪತ್ರಿಕೆಯೊಂದನ್ನು ಓದುತ್ತಿದ್ದಾಗ, 'ಮೈಸೂರಿನ ಕಾಲೇಜ್ ಹಾಸ್ಟೆಲಿನಲ್ಲಿ ದೊಂಬಿ' ಎಂಬ ಶೀರ್ಷಿಕೆ ಅವರಿಗೆ ಅಂಜಿಕೆ ಮಿಶ್ರಿತ ಕುತೂಹಲ ಹುಟ್ಟಿಸಿತು. ಯಾವುದೋ ಎರಡು ವಿದ್ಯಾರ್ಥಿ ಪಂಗಡಗಳಲ್ಲಿ ಹುಟ್ಟಿದ ವೈಮನಸ್ಯದಿಂದ ಸೀತಾರಾಮನಿದ್ದ ಹಾಸ್ಟೆಲಿನಲ್ಲಿ ಸೊತ್ತುಗಳ ಲೂಟಿ, ಹಾನಿ ಉಂಟಾಗಿ, ೩೦–೪೦ ವಿದ್ಯಾರ್ಥಿಗಳಿಗೆ ತೀವ್ರ ಗಾಯವಾಗಿ, ಅವರನ್ನು ಸ್ಥಳೀಯ ಆಸ್ಪತ್ರೆಗೆ ಸೇರಿಸಲಾಗಿದೆ ಎಂದಷ್ಟೆ ಆ ಸುದ್ದಿ ತುಣುಕಿನಲ್ಲಿದ್ದದ್ದು. ಮಂಜರಿಗೆ ಎದೆ ಧಸಕ್ಕೆಂದಿತು. ಕೂಡಲೇ ಮನೆಯಲ್ಲಿ ಯಾರಿಗೂ ಹೇಳದೆ, ಉಟ್ಟ ಪಂಚೆಯಲ್ಲೇ ಒಂದು ಅಂಗಿ ಕೊಳಿಸಿಕೊಂಡು ಪೇಟೆಯ ಕಡೆ ಹೊರಟರು -- ಮೈಸೂರಿನಲ್ಲಿ ಹೊಟೇಲ್ ಮಾಲೀಕರಾದ ತಮ್ಮ ದೂರದ ಸಂಬಂಧಿ ಯಜ್ಞನಾರಾಯಣ ಅಡಿಗಳಿಗೆ ಫೋನ್ ಮಾಡಲು. ಸುಮಾರು ಒಂದು ಗಂಟೆಯ ನಂತರ ಸಿಕ್ಕ ಅಡಿಗಳು, ಇದರ ಬಗ್ಗೆ ಗುಲ್ಲು ಕೇಳಿರುವುದಾಗಿಯೂ, ತಾವೇ ಸ್ವತಃ ಹಾಸ್ಟೆಲ್‌ಗೆ ಹೋಗಿ ವಿಷಯ ಏನು ಎಂದು ತಿಳಿದು ಬಂದು ಫೋನ್ ಮಾಡುವುದಾಗಿಯೂ ತಿಳಿಸಿದರು. ಅಡಿಗಳಿಂದ ರಾತ್ರಿ ಮಲಗುವ ತನಕ ಫೋನ್ ಆಗಲೀ ಟೆಲಿಗ್ರಾಂ ಆಗಲೀ ಬರದಿದ್ದಾಗ, ಮಂಜರು ಮರುದಿನ ಬೇಗ ಎದ್ದು, ಖುದ್ದಾಗಿ ಮೈಸೂರಿಗೆ ಹೋಗುವುದೆಂದು ನಿಶ್ಚಯಿಸಿ, ಮನೆಮಂದಿಗೆಲ್ಲ ವಿಷಯ ತಿಳಿಸಿದರು. ಮನೆಯವರೆಲ್ಲ ಸೀತಾರಾಮನ ಸ್ವಾಸ್ಥ್ಯದ ಬಗ್ಗೆ ಚಿಂತಿಸುತ್ತಾ ಮಲಗಲು ಪ್ರಯತ್ನಿಸುತ್ತಿರುವಾಗ, ರಾತ್ರಿ ಸುಮಾರು ೧೨ ಗಂಟೆಯ ಹೊತ್ತಿಗೆ ಸೀತಾರಾಮನ ಸವಾರಿ ಹರಿಹರಿ ಎಂದು ಮನೆಯ ಅಂಗಳದಲ್ಲಿ ಬಂದು ಇಳಿಯಿತು. ಆಗಲೇ ಮನೆಯವರಿಗೆಲ್ಲ ಜೀವ ಬಂದ ಹಾಗೆ ಆದದ್ದು. ಆ ಕಾಲೇಜಿನಲ್ಲಿ ಮತ್ತು ಹಾಸ್ಟೆಲಿನಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ವಿದ್ಯಾರ್ಥಿಗಳ ಮೇಲೆ, ಅವರ ಔದ್ಧತ್ಯದಿಂದಾಗಿ, ಒಂದು ರೀತಿಯ ವೈರತ್ವ ಹಲವು ವರ್ಷಗಳಿಂದ ಅಲ್ಲಿನ ಸ್ಥಳೀಯ ವಿದ್ಯಾರ್ಥಿಗಳಿಗೆ ಉಂಟಾಗಿದೆಯಂತೆ. (ಸೀತಾರಾಮನಿಗೆ 'ತಾನು ಕಲಿಯಬೇಕಾದ್ದು ಸಾಕಷ್ಟಿದೆ' ಎಂದು ಮನವರಿಕೆಯಾಗಿ ಅಳುಕಿನಿಂದಲೇ ಇರುತ್ತಿರುವಾಗ, ತನಗೋ ಅಥವಾ ತನ್ನಂಥವರಿಗೋ ಉದ್ಧಟತನ ಎಲ್ಲಿಂದ ಬರಬೇಕು ಎನ್ನುವುದರ ಅರಿವೇ ಆಗದೆ, ಈ ಗೊಂದಲದ ಮೂಲ ಕಾರಣ ಅರ್ಥವಾಗದೇ ಉಳಿಯಿತು.) ಇಂಥ ಹಿನ್ನೆಲೆಯಲ್ಲಿ, ಹಾಸ್ಟೆಲಿನ ಭೋಜನಗೃಹದಲ್ಲಿ, ಮಂಗಳೂರಿನ ಒಬ್ಬ ಶೆಟ್ಟಿ ಮತ್ತು ಹಾಸನದ ಒಬ್ಬ ಗೌಡ ವಿದ್ಯಾರ್ಥಿಗಳ ನಡುವೆ ಹುಟ್ಟಿದ, ಊಟಕ್ಕೆ ಸಂಬಧಿಸಿದ, ಒಂದು ಸಣ್ಣ ಕಟಿಪಿಟಿ ದೊಡ್ಡದಾಗಿ, ಗೌಡರ ಮತ್ತು ಸ್ಥಳೀಯ ವಿದ್ಯಾರ್ಥಿಗಳ ಗುಂಪಿಗೂ ದಕ್ಷಿಣ ಕನ್ನಡದ ವಿದ್ಯಾರ್ಥಿಗಳ ಗುಂಪಿಗೂ ಒಂದು ಯುದ್ಧವೇ ಶುರುವಾಯಿತು. ಶೆಟ್ಟರ

ಮುಖಂಡನೊಬ್ಬ ಗೌಡರ ಮುಖಂಡನೊಬ್ಬನನ್ನು ನಡುಪೇಟೆಯಲ್ಲಿ ಹೊಡೆದನಂತೆ. ಆ ಗೌಡರ ಮುಖಂಡ, ಒಂದಿಷ್ಟು ಮಂದಿ ಗೂಂಡಾಗಳನ್ನು ಕಟ್ಟಿಕೊಂಡು, ಆ ಶೆಟ್ಟಿಯನ್ನೂ ಅವನ ಗುಂಪಿನ ಸದಸ್ಯರನ್ನೂ ಮಾತ್ರವಲ್ಲದೆ ದಕ್ಷಿಣ ಕನ್ನಡದ ಎಲ್ಲ ವಿದ್ಯಾರ್ಥಿಗಳನ್ನೂ ಬಡಿದು ಅವರ ಮೂಳೆ ಮುರಿದು ಅವರಿಗೆ ಸರಿಯಾದ ಪಾಠ ಕಲಿಸಬೇಕೆಂಬ ಯೋಜನೆಯೊಂದಿಗೆ ಹಾಸ್ಟೆಲಿನ ಮೇಲೆ ದಾಳಿ ಇಟ್ಟ. ಎಷ್ಟೋ ಮಂದಿಗೆ ಈ ಬಡಿದಾಟದಲ್ಲಿ ಗಾಯವಾಗಿ ಮೂಳೆ ಮುರಿದು ಅನಾಹುತವೇ ಆಗಿತ್ತು. ಸೀತಾರಾಮ ತನ್ನ ಪಕ್ಕದ ರೂಮಿನ, ಕಾಲೇಜಿನ ಗೌರವಾನ್ವಿತ ಹಿರಿಯ ಗೌಡ ವಿದ್ಯಾರ್ಥಿಯೊಬ್ಬನ ಸಹಾಯದಿಂದ ಬಚಾವಾಗಿ, ಅಲ್ಲಿಂದ ರಾತ್ರೋರಾತ್ರಿ ಕಾಲು ಕಿತ್ತು, ರಿಕ್ಷಾವೋ, ಕಾರೋ, ಬಸ್ಸೋ ಹಿಡಿದು, ಯಾವಯಾವುದೋ ಊರಿನ ಮೂಲಕ ಬ್ರಹ್ಮಾವರ ತಲುಪಿದ್ದು. ಈ ವೃತ್ತಾಂತವನ್ನು ಅವನು ಹೇಳಿ ಮುಗಿಸುವಾಗ ರಾತ್ರಿ ೩ ಗಂಟೆಯಾಗಿತ್ತು. ಈ ಗಲಾಟೆ ಎಲ್ಲ ತಣಿದು ಪುನಃ ಕಾಲೇಜು ಶುರುವಾಗಬೇಕಾದರೆ ಎರಡು ವಾರಗಳೇ ಹಿಡಿದುವು.

ತನ್ನ ೬ ವರ್ಷಗಳ ಮೈಸೂರಿನ ವ್ಯಾಸಂಗದ ದಿನಗಳಲ್ಲಿ ಸೀತಾರಾಮನು ಯಾವಾಗಲೂ ಬೇಸಿಗೆಯಲ್ಲಿ ಕೋಡಿಗೆ ಹಿಂತಿರುಗುವ ಸಮಯವನ್ನು ಇದಿರುನೋಡುತ್ತಿದ್ದ -- ತರಕಾರಿ ತೋಟದ ಆ ಬೆಳೆ, ದಿನದಿನಕ್ಕೂ ಸಾಧ್ಯವಾಗಿಸುವ ದೊಡ್ಡಮ್ಮನ ಶುದ್ಧ ಪರಿಪಕ್ವವಾದ ಅಡುಗೆಗಾಗಿ, ತೋಟದ ಕೆಲಸಕ್ಕಾಗಿ, ಆ ಬೆಳೆ ನಳನಳಿಸಿ ಹೃನ್ಮನ ತುಂಬುವ, ಫಲವೀಯುವ ಸಂತೋಷವನ್ನು ಸವಿಯುವುದಕ್ಕಾಗಿ, ಜೊತೆಗೇ ತನಗೆ ಆಪ್ತರಾದ ದೊಡ್ಡಪ್ಪಯ್ಯ, ಕೆಂಚ, ಸಿರಿಲಕ್ಷ್ಮಿಯರ ಒಡನಾಟಕ್ಕಾಗಿ. ಹೀಗೆ ರಜಾದಲ್ಲಿ ಬಂದಾಗ, ಕೆಂಚನ ಅಂಗಳದಲ್ಲಿ ಅವನೇ ಮರದಿಂದ ಇಳಿಸಿದ ಸೀಯಾಳದ ಸಿಹಿಯನ್ನು ಸೀತಾರಾಮ ಸವಿಯುತ್ತಿರುವಾಗ 'ಒಡೆಯ, ಊರಲ್ಲೆಲ್ಲ ಏನೇನೋ ಬದಲಾವಣೆ ಉಂಟಾಗುತ್ತಿದೆ. ಜನಗಳಲ್ಲಿ ಮುಂಚಿನ ನಿಯತ್ತು ಎಲ್ಲ ಈಗ ಕಾಣದು' ಅಂತ ಕೆಂಚ ತನ್ನ ಪುರಾಣವನ್ನು ಬಿಚ್ಚುತ್ತಿದ್ದ. ದೊಡ್ಡಪ್ಪಯ್ಯನ ಪ್ರಕಾರ, ಕೇರಳದಿಂದ ಬಂದ ಹಿಂಡುಹಿಂಡು ಮಾಪಿಳ್ಳೆಯರು, ಜನರ ಮನಸ್ಸಿಗೆ ಮಾಟ ಮಾಡುತ್ತಿದ್ದಾರೆ. ಆ ಚವರದ ಅಂಗಡಿಯ ನಾಣಿ ಭಂಡಾರಿ, ಮಾರಿಬಲೆಯ ಶೀನ ಮೊಗವೀರ, ಹೀಗೆ ಕೆಲವರು ನಾಯಕತ್ವ ವಹಿಸಿ, ಕೆಂಚನಂಥ ಕೂಲಿಗಾರರ ಮನಸ್ಸನ್ನು ತಿರಿಯುತ್ತಿದ್ದಾರೆ -- ತಾವಿರುವ ಅಡಿ, ಕೆಲಸ ಮಾಡುವ ನೆಲ ಎಲ್ಲ ತಮ್ಮದೇ ಎಂದು ಅವರಿಗೆ ತಮ್ಮ ಒಡೆಯರ ವಿರುದ್ಧ ದಂಗೆ ಏಳಲು ಪುಸಲಾಯಿಸಿ. 'ಇದೆಲ್ಲ ಆಗುವುದು ಸಾಧ್ಯ ಎಂದು ಎಣ್ಣುವುದಾದರೂ ಹೇಗೆ ಒಡೆಯ?' ಎಂದು ಸೀತಾರಾಮನೊಡನೆ ಈ ಘಟನೆಗಳ ಬಗ್ಗೆ ಅವನು ತನ್ನ ಸರಳ ಪ್ರಾಮಾಣಿಕ ವಿಸ್ಮಯವನ್ನು ಪ್ರಕಟಿಸುತ್ತಿದ್ದ. ಅವನ ಪ್ರಕಾರ ಕೊಗ್ಗನ ಮನಸ್ಸಿನಲ್ಲಿ ನಾಣಿ-ಶೀನರಂಥವರು ಅಂಥ ವಿಷಬೀಜವನ್ನು ಆಗಲೇ ಬಿತ್ತಿದ್ದರು.

## ಕಾಲ ೩

ಸಿರಿಲಕ್ಷ್ಮಿಗೆ ಮುಂದೆ ಓದುವ ಆಸೆ ಇತ್ತು. ಸೀತಾರಾಮನ ದೃಷ್ಟಿಯಲ್ಲಿ ಅವಳು ಅವನಿಗಿಂತ ಹೆಚ್ಚು ಸೂಕ್ಷ್ಮ, ಚುರುಕು. ಅವಳನ್ನು ಕಾಲೇಜಿಗೆ ಕಳಿಸುವಂತೆ ದೊಡ್ಡಪ್ಪಯ್ಯನನ್ನು ಒತ್ತಾಯಿಸಿದ್ದ. 'ಅವಳು ಕಾಲೇಜಿಗೆ ಹೋಗಿ ಏನಾಗಬೇಕಾಗಿದೆ?' ಎಂದು ಮಂಜರು ಎಸ್.ಎಸ್.ಎಲ್.ಸಿ ಆದ ಕೂಡಲೇ ಅವಳ ಓದು ನಿಲ್ಲಿಸಿಬಿಟ್ಟಿದ್ದರು. ಅವಳ ಮದುವೆ ನಡೆದದ್ದೂ ಸೀತಾರಾಮ ಪಿ.ಎಚ್.ಡಿ ಪದವಿಗೆ ನ್ಯೂಯಾರ್ಕ್ ಯೂನಿವರ್ಸಿಟಿಗೆ ಸೇರಿದ್ದೂ ಈಗ ೩ ವರ್ಷಗಳ ಹಿಂದೆ. ಬ್ರಹ್ಮಾವರದ ಶೇಷ ಐತಾಳರ ಮಗ, ಅವಳ ಗಂಡ, ದಾವಣಗೆರೆಯಲ್ಲಿ ಭಾರೀ ಹೊಟೇಲ್ ಇಟ್ಟಿದ್ದಾನಂತೆ. ಅವಳ ಹೈಸ್ಕೂಲ್ ಮುಗಿದು ೪-೫ ವರ್ಷಗಳೇ ಸಂದು ಮದುವೆ ತಡವಾಗಿದ್ದರೂ, ಕೊನೆಗೆ ಒಳ್ಳೆಯ ಸಂಬಂಧ ಸಿಕ್ಕ ತೃಪ್ತಿ ಮಂಜರದ್ದು. ತನ್ನ ತಂಗಿ ಓದು ಮುಂದುವರಿಸಿದ್ದರೆ ದೊಡ್ಡ ವಿಜ್ಞಾನಿಯೋ ವೈದ್ಯಳೋ ತಂತ್ರಜ್ಞಳೋ ಆಗಬಹುದಿತ್ತು. ಅವಳಿಗೆ ತನ್ನ ಪ್ರತಿಭೆಯ ಪೂರ್ಣ ವಿಕಾಸಕ್ಕೆ ಆಸ್ಪದ ಸಿಗದಿರುವುದು ಯಾವ ನ್ಯಾಯ? ತಾನು ಸಂಪಾದನೆಯಲ್ಲಿದ್ದಿದ್ದರೆ ಅವಳ ಓದಿನ ಖರ್ಚಿನ ಬಗ್ಗೆ ಚಿಂತಿಸದೆ ಕಾಲೇಜಿಗೆ ಕಳುಹಿಸಬಹುದಿತ್ತು. ಹೀಗೆಲ್ಲ ಯೋಚಿಸುವುದೊಂದೇ ಈಗ ಅವನ ಪಾಲಿಗೆ ಉಳಿದದ್ದು. ತಪ್ಪದೇ ಪತ್ರ ವ್ಯವಹಾರ ಮಾತ್ರ ಇಬ್ಬರೂ ಉಳಿಸಿಕೊಂಡಿದ್ದರು.

ಮೈಸೂರಿನಲ್ಲೇ ಮೊದಲಿಗೆ ಎಲ್ಲ ಹೊಸತಾಗಿ ಕಂಡ ಸೀತಾರಾಮನಿಗೆ, ನ್ಯೂಯಾರ್ಕ್ ಒಂದು ಹೊಸ ಪ್ರಪಂಚವನ್ನೇ ತೆರೆದಿತ್ತು. ಮೊದಲು ಎಲ್ಲ ವಿಚಿತ್ರವಾಗಿ ಕಂಡು, ದಿನನಿತ್ಯದ ಜೀವನಾವಶ್ಯಕತೆಗಳಿಗೂ ಕಲಿಯಬೇಕಾದ್ದು ಬಹಳ ಇದೆ ಅನಿಸಿತು. ಇದಕ್ಕೆ ರೂಢಿಯಾಗುವ ಮಧ್ಯದಲ್ಲಿ ಶಾಖಾಹಾರಿಯಾದ ಅವನಿಗೆ ತನ್ನ ಊಟೋಪಚಾರದ ಬಗ್ಗೆಯೂ ಚಿಂತಿಸಬೇಕಿತ್ತು. ಇದಕ್ಕೆಲ್ಲ ಹೊಂದಿಕೊಳ್ಳುವ ಮುಂಚೆಯೇ ತರಗತಿಗಳು ಪ್ರಾರಂಭವಾದುವು. ಅವೋ, ಶುರುವಾದದ್ದೇ ತಡ, ಮನೆಗೆಲಸ, ಅಸೈನ್ಮೆಂಟ್, ಪರೀಕ್ಷೆ, ಪ್ರಾಜೆಕ್ಟ್‌ಗಳು ಅಂತ ಒಂದೇ ಸಮನೆ ಉಬ್ಬಾಯ ಸ್ಥಿತಿಯಲ್ಲಿ ಹೊಮ್ಮಿ, ಅವನಿಗೆ ಉಸಿರು ಕಟ್ಟುವಂತೆ ಮಾಡಿದುವು. ತರಗತಿಗಳು ಪ್ರಾರಂಭವಾದ ಒಂದೇ ತಿಂಗಳಲ್ಲಿ ಮೈ ಕೊರೆಯುವ ಚಳಿಯೂ ಶುರುವಾಯಿತು. ನಿಜವಾದ ಚಳಿ ಶುರುವಾಗುವುದು ಡಿಸೆಂಬರಿನಲ್ಲಂತೆ. ಅದು ಇನ್ನು ಹೇಗಿರಬಹುದು ಎಂದು ಯೋಚಿಸಿಯೇ ಅವನಿಗೆ ನಡುಕ ಬಂದಿತ್ತು. ಮೊದಲ ೩-೪ ತಿಂಗಳಿನಲ್ಲಿ ವಿದ್ಯಾರ್ಥಿಗೃಹಗಳಲ್ಲಿದ್ದು ಅಲ್ಲಿ ಕೊಡುವ ಆಹಾರಕ್ಕೆ ಕಷ್ಟವಾದರೂ ಒಗ್ಗಿಕೊಳ್ಳಬೇಕಾಯಿತು. ಡಿಸೆಂಬರಿನಲ್ಲಿ ಆ ಸೆಮೆಸ್ಟೆರ್ ಮುಗಿಯುತ್ತಲೇ ತನ್ನ ಭಾರತೀಯ ಸ್ನೇಹಿತನೊಬ್ಬನ ಜತೆ ಒಂದು ಬಾಡಿಗೆ ಮನೆಯನ್ನು ಗೊತ್ತುಮಾಡಿ, ತನ್ನ ವಾಸಸ್ಥಳವನ್ನು ಬದಲಾಯಿಸಿದ. ತನಗೆ ಬರುವ ವಿದ್ಯಾರ್ಥಿವೇತನ ಎಲ್ಲ ಖರ್ಚುಗಳನ್ನು ಕಳೆದು ಸ್ವಲ್ಪ

ಉಳಿಸಿಕೊಳ್ಳುವಷ್ಟು ಇರುತ್ತಿತ್ತು. ವಿದ್ಯಾರ್ಥಿ ಗೃಹದಿಂದ ಹೊರಬಂದ ಮೇಲಂತೂ ಈ ಉಳಿಕೆ ಸ್ವಲ್ಪ ಜಾಸ್ತಿಯೇ ಆಯಿತು. ಮಾತ್ರವಲ್ಲದೆ ತನ್ನ ಪಾಕ ಪ್ರಾವೀಣ್ಯತೆಯ ಪ್ರಯೋಗಕ್ಕೂ ಅವಕಾಶ ದೊರಕಿದಂತಾಯಿತು. ಆದರೆ ಇದರೊಂದಿಗೆ ಮನೆ ನಡೆಸಿಕೊಳ್ಳುವ ಕೆಲಸ, ಜವಾಬ್ದಾರಿ ಎರಡೂ ಹೆಚ್ಚಾಗಿ, ಪರೀಕ್ಷೆ-ಪ್ರಾಜೆಕ್ಟ್‌ಗಳ ಗಲಾಟೆಯ ಮಧ್ಯೆ ಬಿಡುವೇ ಇಲ್ಲದಂತಾಯಿತು.

ಮೊದಲ ಒಂದೆರಡು ವರ್ಷ ಸೀತಾರಾಮ ಬಹಳ ಗೊಂದಲದಲ್ಲಿದ್ದ. ತನ್ನ ಇಂಗ್ಲಿಷ್ ಭಾಷಾ ಪಾಂಡಿತ್ಯದ ಬಗ್ಗೆ ಹೆಮ್ಮೆ ಇದ್ದ ಅವನಿಗೆ, ಈ ಹೊಸ ವಾತಾವರಣದಲ್ಲಿ, ಅಮೆರಿಕೀಯರ ಮಾತು ಅರ್ಥವಾಗದೆ, ಆ ಪಾಂಡಿತ್ಯದ ಬಗ್ಗೆ ನಂಬಿಕೆಯೇ ಕುಸಿದು ಹೋಗುವಷ್ಟು ಗಲಿಬಿಲಿಗೊಳಗಾಗಿದ್ದ. ತನ್ನಂಥದೇ ಹಿನ್ನೆಲೆಯಲ್ಲಿ ಬೆಳೆದು ಇಲ್ಲಿಗೆ ವಲಸೆ ಬಂದ ಕೆಲವು ಭಾರತೀಯರು ಇಲ್ಲಿನ ಬಾಹ್ಯ ತೋರಿಕೆಗೆ ಸಿಗುವ ಜೀವನಕ್ರಮಗಳನ್ನು ಅನುಕರಿಸುವ ವಿಧಾನ ನೋಡಿ, ತನ್ನ ಹಿನ್ನೆಲೆಯ ಮತ್ತು ಇಲ್ಲಿನ ಮೌಲ್ಯಗಳ ತಿಕ್ಕಾಟಕ್ಕೆ ಸಿಕ್ಕಿ, ಎಲ್ಲೆಲ್ಲೂ ಆತ್ಮೀಯತೆಯ ಕೊರತೆಯಿರುವಂತೆ ಕಂಡು, 'ತಾನು ಯಾರು, ಹೇಗಿರಬೇಕು, ಸರಿ-ತಪ್ಪುಗಳ ಅರ್ಥವೇನು?'ಎಂದು, ಅವನ ಜೀವನದಲ್ಲಿ ಮೊತ್ತ ಮೊದಲಿಗೆ ಆ ಪರಿಸರ ತನ್ನ ಆತ್ಮಶೋಧನೆ ಮಾಡಿಕೊಳ್ಳುವ ಹಾಗೆ ಮಾಡಿತು. ಅವನು ಅಭ್ಯಾಸಬಲದಿಂದಲೋ ನಂಬಿಕೆಯಿಂದಲೋ ಕುರುಡಾಗಿ ಅನುಸರಿಸುತ್ತಿದ್ದ ಪ್ರತಿ ಕ್ರಮವನ್ನೂ ಸಮೀಕ್ಷಿಸಿ, ಅವುಗಳ ಆಚರಣೆಯ ಬಗ್ಗೆ ಅರ್ಥ ಕಂಡುಕೊಳ್ಳುವ ಅಭ್ಯಾಸ ಅವನಲ್ಲಿ ಬೆಳೆಯಿತು. ದೊಡ್ಡಪ್ಪಯ್ಯನಿಂದಲೋ ಕೆಂಚನಿಂದಲೋ ಕೋಡಿಯ ಪರಿಸರದಿಂದಲೋ ತನ್ನಲ್ಲಿ ಭದ್ರವಾಗಿ ಹಾಕಲ್ಪಟ್ಟ ಮೌಲ್ಯಗಳ ತಳಪಾಯ, ವಿವೇಚನಾ ಶಕ್ತಿ, ಇದ್ದಕ್ಕಿದ್ದ ಹಾಗೆ ಅವನ ಉಪಯೋಗಕ್ಕೆ ಸಿಕ್ಕಿ, ಮುಂದಿನ ವರ್ಷಗಳಲ್ಲಿ ತನ್ನ ನೈಜ ಅಂತಸ್ಸತ್ವ ಮತ್ತು ಒಳ ಶಕ್ತಿಯನ್ನು ಗುರುತಿಸಿ, ಹೊರಗೆಳೆದು, ಅದನ್ನು ತನ್ನ ಜೀವನದ ಬಂಡಿಯನ್ನು ಓಡಿಸಲು ಬೇಕಾದ ಇಂಧನವನ್ನಾಗಿ ಅವನು ಮಾಡಿಕೊಳ್ಳಲು ಸಾಧ್ಯವಾಯಿತು.

ಸೀತಾರಾಮ ನ್ಯೂಯಾರ್ಕಿಗೆ ಬಂದ ೪ ವರ್ಷಗಳ ಅವಧಿಯಲ್ಲಿ, ಪಿ.ಎಚ್.ಡಿಗೆ ಸಂಬಂಧಿಸಿದ ಸಂಶೋಧನಾ ಕೆಲಸಗಳನ್ನೆಲ್ಲ ಮುಗಿಸಿ, ಅವನ್ನು ಒಳಗೊಂಡ ಪ್ರಬಂಧದ ಹೊತ್ತಗೆಯನ್ನೂ ಬರೆದು, ಮುಂದೆ ಉದ್ಯೋಗದ ತಪಾಸಣೆಯನ್ನು ಶುರು ಮಾಡುವ ಮೊದಲು ಊರಿಗೆ ಹೋಗಿ ಬರಲು ಸರಿಯಾದ ಸಮಯವೆಂದೆಣಿಸಿ, ಮುಂಚೆಯೇ ಯೋಜಿಸಿದಂತೆ ೨ ವಾರಗಳ ಮಟ್ಟಿಗೆ ಭಾರತದ ಪ್ರವಾಸ ಕೈಗೊಂಡ. ಅದು ಅಗೋಸ್ತು ತಿಂಗಳಿನ ಸಮಯ. ಮಳೆಯ ಅಬ್ಬರವೆಲ್ಲ ಹಿರಿದು, ಇಡೀ ಕೋಡಿ ಗ್ರಾಮವೇ ಎಳೆ ಹಸಿರು ಸೀರೆಯುಟ್ಟ ಸರಳ ಹಳ್ಳಿ ಹುಡುಗಿಯಂತೆ, ಭತ್ತದ ಎಳೆ ಪೈರಿನ ರಾಶಿಯಿಂದ ಕಂಗೊಳಿಸುತ್ತಿತ್ತು. ಎರಡು ದಿನದ ಪ್ರಯಾಣ ಮುಗಿಸಿ ಮನೆಯ ಅಂಗಳದಲ್ಲಿ

ಬಂದಿಳಿಯುತ್ತಲೇ ಸೀತಾರಾಮನಿಗೆ ಕೆಟ್ಟ ಸುದ್ದಿಯೊಂದು ಕಾದಿತ್ತು -- ಎರಡು ದಿವಸದ ಹಿಂದೆ ಆದ ಕರಿಯನ ಮರಣ. ಕೆಲವು ದಿನಗಳಿಂದ ತೀವ್ರ ತಲೆ ಸುತ್ತು, ತಲೆ ನೋವು, ವಾಂತಿ- ಭೇದಿಯಾಗಿ, ಅಂದು ರಾತ್ರಿ ಮಲಗಿದವ ಮರುದಿನ ಏಳಲೇ ಇಲ್ಲವಂತೆ. ಕೆಂಪಿ ಏನೇನೋ ಕಷಾಯ, ಆ ಬೇರಿನ ಗಂಧ, ಈ ಸೊಪ್ಪಿನ ಲೇಹ ಅಂತ ಮಾಡಿದರೂ ಉಪಯೋಗ ಬರಲಿಲ್ಲವಂತೆ. ಕುಪ್ಪಯ್ಯ ಮಂಜರೂ ಅಂದು ಊರಲ್ಲಿರಲಿಲ್ಲವಂತೆ. ಅಂಥ ಕಲ್ಲು ಗುಂಡಿನ ಹಾಗೆ ಇದ್ದವನು ಇದ್ದಕ್ಕಿದ್ದ ಹಾಗೆ ಸಾಯುವುದನ್ನು ಯಾರೂ ನಂಬಲಿಕ್ಕಿಲ್ಲ. ಸೀತಾರಾಮ ಸುದ್ದಿ ತಿಳಿದ ತಕ್ಷಣ ನೇರವಾಗಿ ಕೆಂಚನ ಮನೆಯ ಕಡೆ ನಡೆದ. ಅಲ್ಲಿ ಅಂಗಳದಲ್ಲಿ ಕೆಂಚ ತಲೆಗೆ ಕೈಕೊಟ್ಟು ಕುಳಿತಿದ್ದ ದೃಶ್ಯ ಸೀತಾರಾಮನ ಕರುಳನ್ನು ಕಿವುಚಿತು. ಸೀತಾರಾಮನನ್ನು ನೋಡುತ್ತಲೇ ಎದ್ದು ಓಡಿ ಬಂದು 'ಯಾವಾಗ ಬಂದಿರಿ ಒಡೆಯಾ, ಹುಷಾರಿದ್ದೀರಾ? ನೋಡಿ, ಒಂದು ನೆಟ್ಟಗಿದ್ದ ನನ್ನ ಮಾಣಿಗೆ ಹೀಗೆಲ್ಲ ಆಗಿ ಹೋಯ್ತು' ಎಂದು ಗೋಗರೆದ. ಕೆಂಪಿಯೂ ಬಂದು ಮಾತನಾಡಿಸಿ ಬರೇ ಕಣ್ಣೀರಲ್ಲೇ ತನ್ನ ದುಃಖ ತೋಡಿಕೊಂಡಳು.

ಮುಂದಿನ ಎರಡು ದಿನಗಳಲ್ಲಿ ಸಿರಿಲಕ್ಷ್ಮಿ ತನ್ನ ಎರಡು ವರ್ಷದ ಮಗುವಿನೊಂದಿಗೆ ಕೋಡಿಯಲ್ಲಿ ಬಂದಿಳಿದಳು. ಅಣ್ಣನನ್ನು ಕಂಡಾಗ ಆದ ಆನಂದವನ್ನು ಕಣ್ಣಿಂದ ಉದುರಿದ ಎರಡು ಹನಿ ಕಂಬನಿಗಳೇ ಮೌನವಾಗಿ ವ್ಯಕ್ತಪಡಿಸಿದುವು. ಬೆಟ್ಟದಷ್ಟು ಭಾವನೆಗಳು, ಮಾತುಗಳು ಮನಸ್ಸಿನಲ್ಲಿದ್ದಾಗ್ಯೂ, ಮೌನವೇ ಅವನ್ನೆಲ್ಲ ಹೊರಹಾಕುವ ಕಾರ್ಯ ಮಾಡುತ್ತಿತ್ತು. ಸೀತಾರಾಮನಿಗೋ ಕಳೆದು ಹೋದ ನಿಧಿಯೊಂದು ಸಿಕ್ಕಿದ ಸಂತೋಷ. ತುಂಬು ಸಂಸಾರಗಳಿದ್ದ ಆ ಮನೆ ಅವನ ಹಳೆಯ ದಿನದ ನೆನಪುಗಳನ್ನು ಪುಟಪುಟಗಳಿಂದ ತೆರೆದು ತೋರಿಸುತ್ತಿತ್ತು. ಆ ಮನೆಯ ಭೌತಿಕ ವಾತಾವರಣವೆಲ್ಲ ಅವನಿಗೆ ಚೆನ್ನಾಗಿ ಪರಿಚಿತವಾಗಿದ್ದರೂ, ಅಮೆರಿಕದಿಂದ ಬಂದ ಒಂದೇ ದಿನದಲ್ಲಿ ಇದು ತನ್ನ ಮನೆ ಅಲ್ಲ ಎನ್ನುವ ಭಾವನೆ ಅವನಲ್ಲಿ ಮೂಡಿತು. ಇದಕ್ಕೆ ಕಾರಣ, ಗುರುತು ಸಿಗದಷ್ಟು ಒಮ್ಮೆಲೇ ಬೆಳೆದ ತಮ್ಮ-ತಂಗಿಯರು, ನಾಲ್ಕೇ ವರ್ಷದಲ್ಲಿ ಅದಕ್ಕೂ ಹೆಚ್ಚಾಗಿ ಹಳತಾಗಿ ಕಂಡ ಅಪ್ಪ-ಅಮ್ಮ, ದೊಡ್ಡಪ್ಪ-ದೊಡ್ಡಮ್ಮಂದಿರು, ಎಲ್ಲಕ್ಕೂ ಮಿಗಿಲಾಗಿ ಮೊದಲಿನ ಶಿಸ್ತು, ಸಂಯಮ, ಸಮಯ ಪಾಲನೆ ಆ ಮನೆಯಲ್ಲಿ ಈಗ ಇಲ್ಲವಾಗಿ ತೋರಿದ್ದು. ದೊಡ್ಡಪ್ಪ-ದೊಡ್ಡಮ್ಮ, ಸಿರಿಲಕ್ಷ್ಮಿ, ಕೆಂಚರ ಪ್ರೀತಿ ವಾತ್ಸಲ್ಯದಲ್ಲಿ ಮಾತ್ರ ಕಿಂಚಿತ್ತೂ ಕಡಿಮೆ ಆಗಿರದಿರುವುದು ಅವನಿಗೆ ಸಮಾಧಾನದ ವಿಷಯ.

ಊರಲ್ಲಿ ಇದ್ದಷ್ಟು ದಿವಸ ಸೀತಾರಾಮ ಗದ್ದೆ ಬದಿಯ ತಿರುಗಾಟ ದಿನಾ ಮಾಡುತ್ತಿದ್ದ. ಕೆಂಚನಿಗೆ ಮುಂದೆ ಬರುವ ಕೊಯ್ಲಿನ ಸಮಯದ ತನಕ ಬಿಡುವಿನ ದಿನಗಳಾದ್ದರಿಂದ, ತನಗೆ ಇಷ್ಟವಾದ ಕೆಂಚನ ಮನೆಯ ಇದಿರಿನ ತೆಂಗಿನ ತೋಟದಲ್ಲಿ ಸೀತಾರಾಮ ಹೆಚ್ಚು

ಸಮಯ ಕಳೆಯುತ್ತಿದ್ದ – ಏನೋ ಓದುವ ಬರೆಯುವ ಕೆಲಸ ಮಾಡಿಕೊಂಡೋ, ಇಲ್ಲ ಕೆಂಚನ ಜತೆ ಪಟ್ಟಾಂಗ ಕೊಚ್ಚುವುದರಲ್ಲೋ. ಅವನ ತಿರುಗಾಟಾದಲ್ಲೆಲ್ಲ ಸಿರಿಲಕ್ಷ್ಮಿ ಜತೆ ಸೇರುತ್ತಿದ್ದಳು. ದೊಡ್ಡಪ್ಪಯ್ಯನಿಂದ ಬದಲಾಗುತ್ತಿರುವ ಕೂಲಿಗಾರರ ಮನೋಧರ್ಮದ ಬಗ್ಗೆ ಅವನು ಸಾಕಷ್ಟು ಕೇಳಿದ್ದನಾದರೂ, ಒಂದು ದಿನ ಹೀಗೇ ತೆಂಗಿನ ತೋಟದಲ್ಲಿ ಅವನೂ ಸಿರಿಲಕ್ಷ್ಮಿಯೂ ಕುಳಿತಿರುವಾಗ ಕೆಂಚ ತನ್ನ ಮನದ ಅಳಲನ್ನೆಲ್ಲ ತೋಡಿಕೊಂಡ. ಈಗ ಎಲ್ಲ ತುಂಬ ಬದಲಾಗುತ್ತಿದೆ ಅಯ್ಯ. ನನ್ನ ಮಾಣಿ ಕರಿಯ ಒಳ್ಳೆ ನಿಯತ್ತಿನ ಹುಡುಗ. ಸಂಪಾದನೆ ಮಾಡಿ ಮನೆಗೆ ತಂದು ಹಾಕುತ್ತಿದ್ದ. ಆ ಮಿಲಿಟರಿ ಹೊಟೇಲಿನಲ್ಲಿ ಎಲ್ಲ ಕೆಲಸ ತಾನೇ ನಿಭಾಯಿಸುತ್ತಿದ್ದ. ತನ್ನದೇ ಆದ ಒಂದು ಹೊಟೇಲು ಬ್ರಹ್ಮಾವರದಲ್ಲಿ ಇಡಬೇಕೆಂದಿದ್ದ. ಅವನ ಸ್ಥಿತಿ ಹೀಗಾಯಿತು. ನನಗೆ ಮದುವೆಯಾಗಿ ೮–೧೦ ವರ್ಷಗಳನಂತರ ಹುಟ್ಟಿದ ಆಸೆಯ ಕೂಸದು. ಹೊಟೇಲು ಮಾಡಿದ ನಂತರವೇ ಅವನು ಮದುವೆ ಮಾಡಿಕೊಳ್ಳಬೇಕೆಂದಿದ್ದ. ಅದೇ ಈ ಕೊಗ್ಗನ ಕತೆ ನೋಡಿ. ಯಾರ್‍ಯಾರದ್ದೋ ಮಾತು ಕೇಳಿ ಒಡೆಯರ ಮೇಲೆ ಕೇಸು ಹಾಕಲಿಕ್ಕೆ ತಯಾರಿ ಮಾಡುತ್ತಿದ್ದಾನೆ – ಈ ಮನೆ ಅಡಿ, ತೆಂಗಿನ ತೋಟ, ಬಾವಿ, ಎದುರಿನ ೪೦ ಹಾನೆ ಗದ್ದೆ ಎಲ್ಲ ತನ್ನದೇ ಎಂದು. ಒಡೆಯರಿಗೆ ಹೇಗೆ ನಾನು ಮುಖ ತೋರಿಸುವುದು? ನಾನು ಬುದ್ಧಿಗೆ ಬಂದ ಮೇಲೆ ಜೀವನವಿಡೀ ನನ್ನನ್ನು ಸಾಕಿದ ದಣಿಗಳು ದೊಡ್ಡೊಡೆಯರೂ, ಅವರೂ. ಇದು ಬರೇ ನಮ್ಮ ಮನೆ ಮಾತಷ್ಟೆ ಅಲ್ಲ. ಊರಲ್ಲಿ ಎಲ್ಲ ಕಡೆ ನಡೆಯುತ್ತಿರುವುದೂ ಇದೇ. ಒಡೆಯರಿಗೂ ಪ್ರಾಯವಾಗುತ್ತಿದೆ. ಹಿಂದಿನ ಮುತುವರ್ಜಿ ಈಗ ಇಲ್ಲ. ನಿಮಗೆ ಲಕ್ಷ್ಮಿಯಮ್ಮನಿಗೆ ಇದ್ದ ಉತ್ಸಾಹ, ಆಸಕ್ತಿ ನಿಮ್ಮ ಮನೆಯ ಮಕ್ಕಳಿಗೆ ಯಾರಿಗೂ ಬಂದಿಲ್ಲ. ಕೆಲಸದವರೂ ಅಷ್ಟೆ, ಎಷ್ಟೆಷ್ಟೋ ಹೊತ್ತಿಗೆ ಬರುತ್ತಾರೆ. ಕೇವಲ ಮಜೂರಿಗೋಸ್ಕರ ಕಾಟಾಚಾರದ ಕೆಲಸ ಮಾಡುತ್ತಾರೆ. ಅಯ್ಯೋ, ನನ್ನ ಪುರಾಣದಲ್ಲಿ ಹೊತ್ತು ಆದದ್ದೇ ಗೊತ್ತಾಗಲಿಲ್ಲ. ಏಳಿ ಮನೆತನಕ ಬಿಟ್ಟು ಬರುತ್ತೇನೆ,' ಎಂದು ಸೂಡಿ ಮಾಡಿ ತರಲಿಕ್ಕೆ ಹೊರಟ. ಮನೆಯ ಹತ್ತಿರ ಅಣ್ಣ–ತಂಗಿಯರನ್ನು ಬಿಟ್ಟು ಕೆಂಚ ಅಷ್ಟು ದೂರ ಹೋದ ಮೇಲೆ, ಸಿರಿಲಕ್ಷ್ಮಿಗೆ ಏನೊ ನೆನಪಾಗಿ, 'ಅಣ್ಣಯ್ಯ, ನೀನು ತೋಟದಿಂದ ಹೊರಡುವಾಗ ಕೆಂಚನಿಗೆ ಕೊಟ್ಟಿದ್ದು ನೂರರ ನೋಟೋ?' ಎಂದು ಕೇಳಿದಳು. ಹೌದೆಂದು ತಿಳಿದಾಕ್ಷಣ 'ಅವನು ಹತ್ತರ ನೋಟೆಂದೇ ತಿಳಿದಾನು. ಈಗ ಅವನು ಸೀದಾ ಹೋಗುವುದು ಸಾಬಿಯ ಕಳ್ಳಂಗಡಿಗೆ. ಸಾಬಿ ಅವನಿಗೆ ಮೋಸ ಮಾಡುವುದು ಖಂಡಿತ' ಎಂದು, ಕೆಂಚನಿಗೆ ತಿಳಿಸುವುದಕ್ಕೋಸ್ಕರ, ವಾಪಾಸು ಓಡಿ ಹೋಗಿ ಅವನನ್ನು ಹಿಂಬಾಲಿಸಿದಳು.

## ಕಾಲ ೪

ಅಂದು ಶಿಕಾಗೋದ ಒಂದು ಪ್ರಸಿದ್ಧ ರಂಗಮಂದಿರದಲ್ಲಿ ತನ್ನ ಸ್ನೇಹಿತರೊಬ್ಬರ ಮಗಳ ಭರತನಾಟ್ಯದ ರಂಗ ಪ್ರವೇಶದ ಕಾರ್ಯಕ್ರಮವನ್ನು ನೋಡಲು ಸೀತಾರಾಮ

ತನ್ನ ಮಡದಿ ವೈದೇಹಿ ಮತ್ತು ೧೦ ವರ್ಷದ ಮಗ ಸುಘೋಷನ ಜತೆ ಹೋಗಿದ್ದ. ಮನೆಗೆ ಬರುವಾಗ ಕಾರಿನಲ್ಲಿ ಯೋಚನಾಮಗ್ನನಾಗಿದ್ದ ಪತಿಯನ್ನು ಕಂಡು, 'ಕಾರ್ಯಕ್ರಮ ತುಂಬ ಹಿಡಿಸಿರುವ ಹಾಗಿದೆ ನಿನಗೆ?' ಎಂದು ವೈದೇಹಿ ಅವನೆಡೆ ಮಿನುಗುವ ನಲ್ನೋಟದಿಂದ ಅರ್ಥಗರ್ಭಿತವಾಗಿ ನೋಡಿ ಕೇಳಲು, ಸೀತಾರಾಮನ ಮಾರುದ್ದದ ಉತ್ತರ ಬಂತು. 'ಸುಮ್ಮನೆ ಕುಚೋದ್ಯದ ಪ್ರಶ್ನೆ ಕೇಳುತ್ತಿದ್ದೀಯ. ನನ್ನ ಮನಸ್ಸಿನಲ್ಲಿ ಎದ್ದ ಯೋಚನಾ ಸರಣಿಗಳನ್ನು ಚೆನ್ನಾಗಿ ತಿಳಿಯಬಲ್ಲವಳು ನೀನು. ಅಲ್ಲ ಮಾರಾಯತಿ, ಅದು ಹೇಗೆ ಒಬ್ಬರಾದ ಮೇಲೆ ಒಬ್ಬರು ಬಂದು ಅಷ್ಟೊಂದು ಹೊತ್ತು ಆ ಹುಡುಗಿಯ ಬಗ್ಗೆ, ಅವಳ ನರ್ತನದ ಬಗ್ಗೆ, ತಂದೆ-ತಾಯಿಗಳ ಬಗ್ಗೆ ಹೊಗಳಿದ್ದು! ನಾನೇನು ಭರತನಾಟ್ಯದಲ್ಲಿ ಅಷ್ಟೊಂದು ಪರಿಣತನಲ್ಲ. ಆದರೂ ಸೊಬಗಿಲ್ಲದ ಭಂಗಿ, ಲಾವಣ್ಯವಿಲ್ಲದ ನಾಟ್ಯ, ಭಾವವಿಲ್ಲದ ಅಭಿನಯ ಗುರುತಿಸಬಲ್ಲೆ. ಕಾರ್ಯಕ್ರಮದ ತುಂಬಾ ಇದೇ ತುಂಬಿದ್ದು. ಈ ಬೂಟಾಟಿಕೆಯ ಹೊಗಳಿಕೆ, ಆಡಂಬರದ ಅದ್ದೂರಿ ಇವಕ್ಕೂ ನಿಜವಾದ ಕಲೆಗೂ ಏನು ಸಂಬಂಧ? ಕೇವಲ ಈ ತರದ ಆಡಂಬರದ ಅರಂಗೇಟ್ರಮ್ಮನ್ನೇ ಗುರಿಯಾಗಿಟ್ಟುಕೊಂಡು ಕಲೆಯ ನಾಜೂಕನ್ನು ಕಡೆಗಾಣಿಸುವುದಾದರೆ, ಇಲ್ಲಿ ಇಂಥ ಶಾಸ್ತ್ರೀಯ ನಾಟ್ಯ ವಿಧಿಗಳನ್ನು ನಾವು ಉಳಿಸಿ ಬೆಳೆಸಿಕೊಳ್ಳುವುದು ಹೌದೋ? ಅವುಗಳ ಮೂಲ ಸತ್ತ್ವ ಕಳೆದುಹೋಗಿ, ಏನೋ ಒಂದು ಅಪಭ್ರಂಶವಾದ ರೂಪ ಕ್ರಮೇಣ ಉದ್ಭವಿಸುವುದು ಖಂಡಿತ'.

ವೃತ್ತಿಯಲ್ಲಿ ವಕೀಲಳಾದ ವೈದೇಹಿ ಸೀತಾರಾಮನ ಇಂಥ ವ್ಯಾಖ್ಯೆಗಳ ಪುಚ್ಛ ಹಿಡಿದು ಅವನ ಜತೆ ಯಾವ ವಿಷಯದಲ್ಲಾದರೂ ಎಷ್ಟು ಹೊತ್ತಾದರೂ ಗಹನವಾದ ಸಮೀಕ್ಷೆ ನಡೆಸಬಲ್ಲಳು. ಆ ಎರಡು ಜೀವಗಳು ಒಬ್ಬರನ್ನೊಬ್ಬರು ಅರಿತ ಆಳ, ಸ್ಪಂದಿಸುವ ಕ್ರಮ, ಅವರಲ್ಲಿರುವ ಬೌದ್ಧಿಕ ಸಮ್ಮತ, ಅನುನಾದ, ಹೆಚ್ಚು ಕಡಿಮೆ ಆಧ್ಯಾತ್ಮಮಟ್ಟಕ್ಕೆ ಏರುವ ಪ್ರಮಾಣದ್ದು. ಇಬ್ಬರದು ಬೇಸಾಯದ ಮನೆತನದ ಹಿನ್ನೆಲೆಯಾದರೂ ಅವಳು ಹುಟ್ಟಿ ಬೆಳೆದದ್ದು ಶ್ರೀಮಂತ ವಾತಾವರಣದಲ್ಲಿ. ಅವಳ ತಂದೆ ತೀರ್ಥಹಳ್ಳಿಯಲ್ಲಿ ದೊಡ್ಡ ಜಮೀನುದಾರರು. ಅವರಿಬ್ಬರ ನಡುವೆ ಎಷ್ಟೊಂದು ವಿಷಯದಲ್ಲಿ ಸಾಮ್ಯವಿದೆ ಎಂಬುದನ್ನು ಮದುವೆಯಾದ ೧೨ ವರ್ಷಗಳ ನಂತರ ಇಂದಿಗೂ ಅವರು ಕಂಡುಕೊಂಡು ಆಶ್ಚರ್ಯಪಡುತ್ತಾರೆ. 'ನೋಡು, ಮನೆ ಹತ್ತಿರ ಬಂತು. ಹೀಗೇ ನಮ್ಮ ಮಾತು ಮುಂದುವರಿದರೆ, ವಿಷಯ ಒಂದರಿಂದ ಇನ್ನೊಂದಕ್ಕೆ ಹೋಗಿ ಇಡೀ ರಾತ್ರಿ ನಾವು ಮಾತಿನಲ್ಲಿ ಕಳೆಯುವುದು ಖಂಡಿತ. ನಾಳೆ ಊರಿಗೆ ಹೊರಡಬೇಕಲ್ಲ. ಇನ್ನೂ ಸ್ವಲ್ಪ ತಯಾರಿ ಬಾಕಿ ಉಳಿದಿದೆ. ಸ್ವಲ್ಪ ಸರಿಯಾಗಿ ನಿದ್ದೆ ಹೊಡೆಯೋಣ. ಮುಂದಿನ ಎರಡು ದಿನ ನಿದ್ದೆ ಕೆಡುವುದು ಎಂತಿದ್ದರೂ ಇದೆ' ಎಂದು ವೈದೇಹಿ ನಾಳಿನ ಭಾರತ ಪ್ರಯಾಣದ ಬಗ್ಗೆ ಎಚ್ಚರಿಸಿದಳು.

ಸೀತಾರಾಮನಿಗೆ ಕೋಡಿಗೆ ಹೋಗುವ ಹುಮ್ಮಸ್ಸು ಮುಂಚಿನಂತಿಲ್ಲ. ಅವನ ತಾಯಿ ಮತ್ತು ಕೆಂಚ ತೀರಿಹೋಗಿ ಕೆಲವು ವರ್ಷಗಳೇ ಆಗಿದ್ದುವು. ದೊಡ್ಡಪ್ಪ ಮತ್ತು ದೊಡ್ಡಮ್ಮ ಪ್ರಾಯದಲ್ಲಿ ೬೦ರ ದಶಕದಲ್ಲಿದ್ದರೂ ದೈಹಿಕವಾಗಿ ಮತ್ತು ಮಾನಸಿಕವಾಗಿ ಹಳೆಯವರಾಗಿ ಹೋಗಿದ್ದರು. ಅವನ ತಂದೆಗೆ ಮಾತ್ರ ಮುಂಚಿನದೇ ಚಟುವಟಿಕೆ, ದೈಹಿಕ ಬಲ. ಮುಂದಾಳತ್ವದ ಗುಣ ಅವರಲ್ಲಿಲ್ಲದಿದ್ದರೂ ಮನೆವಾರ್ತೆಯನ್ನು ನೋಡಿಕೊಳ್ಳುವರು. ಇನ್ನೂ ಮದುವೆಯಾಗಬೇಕಿದ್ದ ಸೀತಾರಾಮನ ಕಿರಿಯ ತಮ್ಮನೊಬ್ಬನನ್ನು ಬಿಟ್ಟರೆ, ಉಳಿದ ಮಕ್ಕಳೆಲ್ಲ ದೊಡ್ಡವರಾಗಿ ಗಂಡನ ಮನೆಯನ್ನೋ, ಅಥವಾ ಕೆಲಸದ ಮೇಲೆ ಪರ ಊರನ್ನೋ ಸೇರಿಯಾಗಿತ್ತು. ಆರ್ಥಿಕವಾಗಿ ಕಷ್ಟದಲ್ಲಿದ್ದಿದ್ದರೂ ಮುಂಚೆ ಜೀವಸತ್ತ್ವದಿಂದ ತುಂಬಿತುಳುಕುತ್ತಿದ್ದ ಆ ಮನೆ, ಈಗ ದುಡ್ಡಿನ ಗರ್ಜಿಲ್ಲದಿದ್ದಾಗ ಬಿಕೋ ಅನ್ನಿಸುತ್ತಿದೆ. ನಾಗಪ್ಪಯ್ಯ ಈಗ ಹಾಸನದಲ್ಲಿ ದೊಡ್ಡ ಹೊಟೇಲ್ ಮಾಲೀಕರಂತೆ. ತಮ್ಮ ಸಂಸಾರವನ್ನು ಅವರು ಅಲ್ಲಿಗೆ ಸಾಗಿಸಿಯಾಗಿತ್ತು. ಕೋಡಿಯ ಜಾತ್ರೆಗೆ ಆಗಾಗ ಬಂದು, ಅವರು ತಮ್ಮ ಹೊಟೇಲ್ ಸಾಹುಕಾರಿಕೆಯ ದರ್ಪವನ್ನು ತೋರುವುದುಂಟು. ಹಾಗೆ ಬಂದಾಗೆಲ್ಲ ಮನೆಯಲ್ಲಿ ಗುಲ್ಲೆಬ್ಬಿಸಿ ತಮ್ಮ ಆಸ್ತಿಯ ಪಾಲು ಕೇಳುವುದುಂಟು. 'ಅವನಿಗೆ ಅವನ ಪಾಲನ್ನು ಕೊಟ್ಟು ಉಪದ್ರ ಕಳೆದುಕೊಳ್ಳೋಣ' ಎಂಬ ಪದ್ಮನಾಭ ಮಂಜರ ಸಲಹೆಯನ್ನು 'ನಾನಿರುವಷ್ಟು ದಿನ ಹೀಗೇ ಇರುವ' ಎಂದು ಕುಪ್ಪಯ್ಯ ಮಂಜರು ತಳ್ಳಿಹಾಕುತ್ತಿದ್ದರು.

ಸೀತಾರಾಮ ಊರಿಗೆ ಬಂದ ದಿನವೇ ಸಾಯಂಕಾಲ ತೋಟಕ್ಕೆ ಹೋಗೋಣ ಬಾ ಎಂದು ವೈದೇಹಿಯನ್ನು ಹೊರಡಿಸಿದ – ನಿನ್ನ ತೋಟ ಎಲ್ಲೂ ಓಡಿ ಹೋಗುವುದಿಲ್ಲ, ನಾಳೆ ಹೋದರಾಗದೇ ಎಂಬ ದೊಡ್ಡಮ್ಮನ ಮಾತನ್ನೂ ಕಿವಿಗೆ ಹಾಕಿಕೊಳ್ಳದೆ. ಬೇಸಿಗೆಯ ಉತ್ತುಂಗ ಕಾಲ ಅದು. ಸುಗ್ಗಿಯ ಪೈರಿನಿಂದಲೋ, ತರತರದ ತರಕಾರಿಯ ಫಲಗಳಿಂದಲೋ, ಧಾನ್ಯದ ಬೆಳೆಗಳಿಂದಲೋ ನಳನಳಿಸುತ್ತಿದ್ದ ಆ ಪ್ರದೇಶ ಈಗ ಬರಡು ಭೂಮಿಯಾಗಿ ಬಿದ್ದಿದೆ. ಸೀತಾರಾಮನಿಗೆ ನೋಡಿ ಕರುಳು ಕಿವುಚಿದಂತಾಯಿತು. 'ವೈದಿ, ನೀನೇ ನೋಡಿದ್ದಿಯಲ್ಲ ಮುಂಚೆ, ಹೇಗಿದ್ದ ಪ್ರದೇಶ ಹೇಗಾಗಿಹೋಯಿತು, ನೋಡು' ಎಂದು ತನ್ನ ಅಳಲನ್ನು ತೋಡಿಕೊಂಡ. ಕೆಂಚನ ಮನೆಯ ಎದುರಿನ ತೋಟದಲ್ಲಿ ಕಾಲಿಡುತ್ತಿದ್ದಂತೆಯೇ ಅಂಗಳದಲ್ಲಿ ಕುಳಿತ, ಗೂನು ಬೆನ್ನಿನಿಂದ ಸಂಪೂರ್ಣ ಕುಗ್ಗಿ ಹೋದ ಕೆಂಪಿ ಕಂಡುಬಂದಳು. ಇವರನ್ನು ಗುರುತಿಸುತ್ತಲೇ ಅವಳು 'ಯಾರು ಸಣ್ಣೊಡೆಯರಾ ? ಬನ್ನಿ ಬನ್ನಿ. ಹುಷಾರಿದ್ದೀರ ಅಯ್ಯ? ಅಮ್ಮ–ಮಗ ಇಬ್ಬರೂ ಬಂದಿದ್ದಾರಾ ಜತೆಗೆ ? ಎಂದು ತನ್ನ ಸರಳ ರೀತಿಯಲ್ಲಿ ಅವರನ್ನು ಆಹ್ವಾನಿಸಿದಳು. ಪಕ್ಕದ ಮನೆಯ ಗಂಡಾಳೊಬ್ಬನನ್ನು ಕರೆಸಿ ಎರಡು ಸೀಯಾಳ ತೆಗೆಸಿ ಇಬ್ಬರಿಗೂ ಕೊಡಿಸಿದಳು. ಕೆಂಚನಿಲ್ಲದಿರುವುದನ್ನು ನೆನೆದು ಕಂಬನಿ ತುಂಬಿಕೊಂಡು 'ನೋಡಿ, ಇದನ್ನೆಲ್ಲ ನೋಡುವ

ಇಚ್ಚೆ ಇಲ್ಲವೆಂತಲೇ ಅವರು ಈ ಕೆಟ್ಟ ಕಾಲ ಬರುವ ಮುಂಚೆಯೇ ಹೊರಟುಹೋದರು ಎಂದು, ಕೆಂಚನ ಮನೆ, ಮನೆಯ ಸುತ್ತಮುತ್ತಲಿನ ಸ್ಥಳ ಮತ್ತು ಬಾವಿ -- ಇವೆಲ್ಲ ಕೋರ್ಟಿನ ಮೂಲಕ ಕೊಗ್ಗ ತನ್ನದಾಗಿಸಿಕೊಂಡ ಕತೆಯನ್ನು ವಿವರಿಸಿ ಹೇಳಿದಳು. ಇವೆಲ್ಲ ದೊಡ್ಡಪ್ಪಯ್ಯನ ಮತ್ತು ಸಿರಿಲಕ್ಷ್ಮಿಯ ಕಾಗದಗಳಿಂದ ಮುಂಚೆಯೇ ಸೀತಾರಾಮನಿಗೆ ತಿಳಿದಿದ್ದರೂ, ಕೊಗ್ಗನ ಸ್ನೇಹಿತರೆಲ್ಲ ಅವನ ಜತೆ ಸೇರಿ ನಡೆಸಿದ ಪಿತೂರಿ, ಅವನು ಕೆಂಚ-ಕೆಂಪಿಯರ ಇಚ್ಚೆಯ ವಿರುದ್ಧ ನಡೆದ ಬಗೆ, ಮನೆಯಲ್ಲಿ ನಡೆದ ಗಲಾಟೆ ಇತ್ಯಾದಿ ವಿವರಗಳ ಅರಿವಿರಲಿಲ್ಲ. ಇಷ್ಟೆಲ್ಲ ಮಾತುಕತೆಯಾಗುತ್ತಿರುವಾಗ ಕೊಗ್ಗ ಒಂದೆರಡು ಬಾರಿ ಮನೆಯಿಂದ ಹೊರ ಬಂದು ಅಂಗಳದಲ್ಲಿ ಸುಳಿದು ಹೋದ. 'ಇನ್ನೂ ಇಲ್ಲೇ ಕುಳಿತಿದ್ದರೆ ಆಮೇಲೆ ಅವನು ನನಗೆ ಜೋರು ಮಾಡುವುದು ಹೌದು. ನೀವು ಹೋಗುವ ಮುಂಚೆ ಪುರಸತ್ತು ಮಾಡಿಕೊಂಡು ಪುನಃ ಬನ್ನಿ' ಎಂದು ಕೆಂಪಿ ನಿಧಾನವಾಗಿ ಎದ್ದು ಮನೆಯ ಒಳಗೆ ಹೋದಳು.

ಸೀತಾರಾಮ ಅಲ್ಲೇ ತೋಟದಲ್ಲಿ ಸ್ವಲ್ಪ ಸಮಯ ಕುಳಿತಿದ್ದು ಹಳೆಯ ದಿನಗಳ ವೈಭವದ ಮೆಲುಕು ಹಾಕಲು ಯತ್ನಿಸಿದ. ಏನೇನೋ ಪ್ರಶ್ನೆಗಳು ಮನಸ್ಸಿನಲ್ಲಿ ಏಳಲಾರಂಭಿಸಿದುವು. 'ಕಾಲರೇಖೆಯ ಕೆಲವು ಮುಖ್ಯ ಘಟ್ಟಗಳಲ್ಲಿ ಕೈಕೊಂಡ ಕಾರ್ಯಗಳ ಪರಿಣಾಮ ಬಹಳ ಸಮಯದವರೆಗೂ ಹಬ್ಬಿರಲು ಸಾಧ್ಯವಲ್ಲವೇ? ದೊಡ್ಡಪ್ಪಯ್ಯನಿಗೆ ಇಷ್ಟೆಲ್ಲ ಗೊತ್ತಿದ್ದೇ ಮುಂದಾಲೋಚನೆಯಿಂದ ಆ ಕಾಲದಲ್ಲಿ ಅಷ್ಟೊಂದು ಮುತುವರ್ಜಿವಹಿಸಿ ನಮ್ಮ ಕುಟುಂಬವನ್ನು ಈಗ ಈ ಮಟ್ಟಕ್ಕೆ ತಂದದ್ದೇ? ಸಮಾಜವಾದ-ಸಾಮ್ಯವಾದಗಳ ಪರಿಣಾಮ ಉತ್ತಮ ಗುಣ-ಲಕ್ಷಣಗಳ ಪ್ರೋತ್ಸಾಹ ಕಡಿದುಹಾಕಿ ಅವುಗಳನ್ನು ಕ್ರಮೇಣ ಕ್ಷೀಣಗೊಳಿಸುವಂತಹುದೇ? ಬಂಡವಾಳಶಾಹಿ ಪ್ರಭುತ್ವಕ್ಕೆ ಸ್ವಾರ್ಥದೊಂದಿಗೆ ಅರಿಷಡ್ವರ್ಗಗಳನ್ನೂ ಅಧಿಕಗೊಳಿಸುವ ಗುಣ ಇದೆಯೆ? ಹಾಗಾದರೆ ಹಳೆಯ ಮೌಲ್ಯಗಳನ್ನು ಹೊಸ ಪಾಶ್ಚಾತ್ಯ ಜೀವನಕ್ರಮಗಳಲ್ಲಿ ಮೈಗೂಡಿಸಿಕೊಳ್ಳುವುದು ಅಸಾಧ್ಯವೇ? ತಪ್ಪು-ಒಪ್ಪುಗಳ ವಿವೇಚನೆಗೆ ಮನೋಸಂಸ್ಕೃತಿಯಷ್ಟೇ ಮುಖ್ಯವಲ್ಲವೇ? ಅದಕ್ಕೆ ಮತ-ಧರ್ಮಗಳ ಹಿನ್ನೆಲೆ, ಬೆನ್ನೆಲುಬೇಕೆ ಬೇಕು? ಕೆಂಚ ಓದಿದವನಲ್ಲ. ಅವನ ಮನೋಸಂಸ್ಕೃತಿಗೆ ಮತದ ಹಿನ್ನೆಲೆಯಿಲ್ಲದಿದ್ದರೂ ಅದು ಉತ್ತಮ ಮಟ್ಟದ್ದು. ಅದನ್ನು ಬೆಳೆಸಿಕೊಳ್ಳಲು ಸರಳ ಜೀವನಕ್ರಮವೇ ಅಗತ್ಯವೇ? ಕೃಷಿಗಾರಿಕೆಗೆ ಬುದ್ಧಿಯನ್ನು ಪಕ್ವಗೊಳಿಸುವ ಗುಣ ಇದೆಯೇ ?' ಈ ಪ್ರಶ್ನೆಗಳನ್ನು ಜಾಗರೂಕತೆಯಿಂದ ವಿಶ್ಲೇಷಿಸಿದಲ್ಲಿ ಒಂದು ಬೃಹತ್ ಕಾದಂಬರಿಯನ್ನೇ ರಚಿಸಬಹುದು. ಎಲ್ಲೋ ಕೆಂಚನ ಕುಡಿದ ಅಮಲಿನ ದನಿಯಲ್ಲಿ ಭತ್ತ ಕುಟ್ಟುವ ಹಾಡಿನ ತುಣುಕೊಂದು ಗಾಳಿಯಲ್ಲಿ ತೇಲಿ ಬಂದಂತಾಯಿತು.

**ನಿದ್ದಿಗೆ ಮದ್ದುಂಟೆ ಬುದ್ಧಿಗೆ ಕೇಡುಂಟೆ, ಇದ್ಯ ಬಲ್ಲವಗೇ ಭಯವುಂಟೆ,**
**ಇದ್ಯ ಬಲ್ಲವಗೆ ಭಯವುಂಟೆ ದ್ಯಾವರೆ, ಮದ್ದುಂಟೆ ಜನನ ಮರಣಕ್ಕೆ.**

'ಏಳು, ಕತ್ತಲೆಯಾಯಿತು ಹೋಗೋಣ' ಎಂದು ವೈದೇಹಿ ಅವನ ಕೈ ಹಿಡಿದೆತ್ತಿದಾಗಲೇ ಅವನು ತನ್ನ ಸ್ವಪ್ನದಿಂದ ಹೊರಬಂದದ್ದು. ಅವಳ ಕೈ ಹಿಡಿದುಕೊಂಡೇ ಅವನು ಮನೆಯ ಕಡೆ ನಡೆದ. ಮನೆಯನ್ನು ಸಮೀಪಿಸುತ್ತಲೇ 'ಆಯಿತು ಒಡೆಯ, ನಾನಿನ್ನು ವಾಪಾಸು ಹೋಗುತ್ತೇನೆ' ಎಂದು ಕೆಂಚ ಹಿಂದಿನಿಂದ ಹೇಳಿದ ಹಾಗಾಯಿತು. ಹಾಗಾದರೆ ನಿಷ್ಠೆಯೇ ಮೂರ್ತಿವೆತ್ತಂತಿದ್ದ ಕೆಂಚ ತನ್ನೊಂದಿಗೆ ಅಂಥ ಮೌಲ್ಯಗಳನ್ನೂ ಕೊಂಡುಹೋದನೇ ? ಎಂದು ಸೀತಾರಾಮ ಅದರ ಒಳ ಅರ್ಥದ ಬಗ್ಗೆ ಯೋಚಿಸಿ ಮನಸ್ಸಿನಲ್ಲೇ ವ್ಯಂಗ್ಯವಾಗಿ ನಕ್ಕ.

•

# ಸುಮ್ಮನೆ

– ಗುರುಪ್ರಸಾದ್ ಕಾಗಿನೆಲೆ

ಮನೆ ಕಟ್ಟೋ ರಿಯಲ್ಟರ್‌ಗಳ ಹೆಸರು ಜ್ಯಾಕ್, ಡೇನಿಯೇಲ್ ಅಂತೆ. ಮತ್ತು ತರೋ ಹೆಸರು ಅಂತ ತಮಾಷೆ ಮಾಡಿದ್ದೆ. ಗಂಡ ಹೆಂಡತಿಯಂತೆ. ಡೇನಿಯೇಲೋ, ಡೇನಿಯಾಲೋ ಹೇಗೆ ಕೂಗಬೇಕು ಅಂತ ಗೊಂದಲವಾಗೋ ಹೆಸರು. ಈ ಪ್ರಕ್ರಿಯೆಯ ಶುರುವಿನಲ್ಲಿ ಒಮ್ಮೆ ಪುಷ್ಪಾ, ಡ್ಯಾನಿಯಲ್ ಎಂದು ಆಕೆಯನ್ನು ಕರೆದಿದ್ದಳು. ನವಿರಾಗಿಯೇ ತಿದ್ದಿದ್ದಳು, ಡೇನಿಯೇಲ್. ಡ್ಯಾನಿಯಲ್ ಪುಲ್ಲಿಂಗವಂತೆ, ಡೇನಿಯೇಲ್ ಸ್ತ್ರೀಲಿಂಗ.

ಕೊನೆಗೆ ನಾನು, ಪುಷ್ಪಾ ನಮ್ಮ ಮನೆ ಕಟ್ಟಿಕೊಡುವುದಕ್ಕೆ ಆರಿಸಿದ್ದ ರಿಯಲ್ಟರ್‌ಗಳು ಜ್ಯಾಕ್, ಡೇನಿಯೇಲ್. ಅವರದೇ ಒಂದು ರಿಯಲ್ ಎಸ್ಟೇಟ್ ಕಂಪೆನಿಯಂತೆ. ನಾವು ಮನೆ ಕಟ್ಟಿಸಬೇಕೆಂದು ಗೊತ್ತುಮಾಡಿದ್ದ ಜಾಗದಲ್ಲಿದ್ದ ಖಾಲಿ ಸೈಟುಗಳಲ್ಲೆಲ್ಲಾ 'ಜ್ಯಾಕ್, ಡೇನಿಯೇಲ್ ಅಸೋಸಿಯೇಟ್ಸ್' ಅನ್ನೋ ಅವರಿಬ್ಬರದ್ದೂ ನಗ್ತಾ ಇರೋ ಒಂದೇ ಭಂಗಿಯ ಫ್ಲೋಟೋಗಳು ಎಲ್ಲರನ್ನೂ ಬರಮಾಡಿಕೊಳ್ಳುತ್ತಿದ್ದವು. ಪುಷ್ಪಾ ಸ್ವಲ್ಪ ಬ್ಯಾಕ್‌ಗ್ರೌಂಡ್ ಚೆಕ್ ಮಾಡಿದ್ದಳು. ಇಬ್ಬರಿಗೂ ಮದುವೆಯಾಗಿ ಆರುವರ್ಷಗಳಾಗಿವೆ. ಮೂರು ಜನ ಮಕ್ಕಳು. ಎರಡು ಗಂಡು, ಒಂದು ಹೆಣ್ಣು. 'ನೋಡೋದಕ್ಕೆ ಫ್ಯಾಮಿಲಿ ಟೈಪಂತ ಕಾಣುತ್ತೆ. ಅವರ ಹತ್ರಾನೇ ಮನೆ ಕಟ್ಟಿಸೋಣ' ಅಂದಿದ್ದಳು, ಪುಷ್ಪಾ.

ಈ ಮನೇ ಜನಗಳು ಫ್ಯಾಮಿಲಿ ಟೈಪ್ಯಾಕಿರಬೇಕು ಅಂತ ನನಗೆ ಹೊಳೆಯಲಿಲ್ಲ. ಇನ್ನೊಬ್ಬ ನನ್ನ ಸ್ನೇಹಿತ, ನಮ್ಮವನೇ ಗುಜರಾತಿ ಒಬ್ಬ ಇದ್ದ. ಹೆಸರು ದೀಪಕ್ ಪಟೇಲ ಅಂತ. ಅವನೂ ಅಲ್ಲಿ ಇಲ್ಲಿ ಹೆಣಗಾಡಿ, ಕೊನೆಗೆ ಈ ಮನೆ ಕಟ್ಟಿಸೋ ದಂಧೆಯಲ್ಲಿ ತೊಡಗಿಸಿಕೊಂಡಿದ್ದ. ಅವನು ಕಟ್ಟಿಸಿದ್ದ ನಾಲ್ಕು ಮನೆಗಳನ್ನು ನೋಡಿದ್ದೆವು. ಮನೆಗಳೇನೋ ಚೆನ್ನಾಗಿಯೇ ಇದ್ದವು. ಆದರೆ, ಪುಷ್ಪಾಳ ವಾದ 'ನಾಳೆ ಜಗಳ ಆಡಬೇಕೆಂದರೆ, ಕೆಟ್ಟವರಾಗಬೇಕು ಅಂದರೆ ಗುರುತಿಲ್ಲದವರ ಹತ್ತಿರ ಜಗಳ ಕಾಯುವುದೇ ವಾಸಿ' ಅಂತ. ದೀಪಕ್ ಪಟೇಲ ಅವನ ಮರ್ಸೀಡೀಸಿನಲ್ಲಿ ಅವನ ಮನೆಗೆ ಕರೆದುಕೊಂಡು ಹೋಗಿ,

ಜರ್ಮನಿಯ ಒಂದು ಯಾವುದೋ ಡಾರ್ಕ್ ಬಿಯರನ್ನೂ ಕುಡಿಸಿದ್ದ. ಬಿಯರ್ ಕುಡಿದಾದ ಮೇಲೆ 'ಸಾರಿಯಪ್ಪ, ಪಟೇಲ. ಮನೇಲಿ ಫ್ಯಾಮಿಲಿ ಟೈಪು ನೋಡ್ತಿದಾಳೆ, ಇವಳು' ಅಂತ ಹೇಳಿದ್ದಕ್ಕೆ 'ನಮ್ದೇನು ಫ್ಯಾಮಿಲಿಯಲ್ವಾ' ಅಂದ. ಅಲ್ಲೇ ಲವ್‌ಸೀಟಿನಲ್ಲಿ ಮುಕ್ಕಾಲುಭಾಗ ಅವನ ಹೆಂಡತಿ ಕೂತಿದ್ದಳು. ಸುಮ್ಮನೆ ಹಿಹಿಹಿ ಅಂದೆ.

ಪುಷ್ಪಾಗೆ ಡೇನಿಯೇಲ್‌ಳ ಮೇಲೆ ಅಷ್ಟೊಂದು ನಂಬಿಕೆ ಬರಲು ಕಾರಣ ಪ್ರಾಯಶಃ ಡೇನಿಯೇಲ್ 'ಶೋಕೇಸ್ ಮನೆ' ಅಂತ ಅವಳ ಮನೇನೆ ತೋರಿಸಿದ್ದಳು. ಒಂಥರಾ ತಿಳಿಯಾದ ಬಿಸ್ಕತ್ತು ಬಣ್ಣವಿರುವ ಹೊರಗಿನ ಸೈಡಿಂಗು, ಮನೆಯ ಶಿಂಗಲ್ಲುಗಳು ಸ್ವಲ್ಪ ಬೂದು ಬಣ್ಣದ್ದಿದ್ದವು. ಒಳಗೆ ಹೋಗಿ ನೋಡಿದಾಗ ಹೊರಗೆ ಕಾಣಿಸುವುದಕ್ಕಿಂತ ವಿಶಾಲವಾದ ಮನೆ. ದೊಡ್ಡ ಲಿವಿಂಗ್ ರೂಮು, ಮರದ ನೆಲ, ಟೈಲಿನ ನೆಲ, ಕಾರ್ಪೆಟ್ಟಿನ ನೆಲ ಮೂರೂ ನೆಲಗಳನ್ನೂ, ಮೂರೂ ಅಂತಸ್ತುಗಳನ್ನೂ ಬಹಳ ಆಸ್ಥೆಯಿಂದ ತೋರಿಸಿದ್ದಳು ಡೇನಿಯೇಲ್. ಮೇಲಿನ ಫ್ಯಾಮಿಲಿ ರೂಮಿಗೆ ಹೋಗುವ ಕಡೆ ಒಂದು ದೊಡ್ಡ ಬಾಗಿಲಿತ್ತು. ಆ ಬಾಗಿಲಿನ ಪಕ್ಕ ಇದ್ದ ಒಂದು ಮೂಲೆಯಲ್ಲಿ ಮೂರಡಿ ಎತ್ತರದ ಒಂದು ಫ಼ೋಟೋ ಇತ್ತು. ಫ಼ೋಟೋದಲ್ಲಿ ಡೇನಿಯೇಲ್ ತನ್ನ ಒಂದು ವರ್ಷದ ಮಗುವಿಗೆ ಮುತ್ತು ಕೊಡುತ್ತಿದ್ದಳು. ಮಗುವನ್ನು ಮೇಲೆ ಎತ್ತಿಕೊಂಡು ತನ್ನ ಕೂದಲನ್ನು ಇಳಿಬಿಟ್ಟುಕೊಂಡಿದ್ದಾಳೆ. ತೆಳುವಾದ ಬಣ್ಣಗಳ ಹಿನ್ನೆಲೆಯಲ್ಲಿ ಆಕೃತಿಗಳೂ ಆ ಹಿನ್ನೆಲೆಯ ಬಣ್ಣದ ಜತೆಯೇ ಬೆರೆತುಕೊಂಡಿರುವ ಹಾಗಿದ್ದ ಚಿತ್ರ. ಕ್ಯಾನ್‌ವಾಸ್ ಮೇಲೆ ಮೌಂಟ್ ಮಾಡಿಸಿ ಹಾಕಿದ್ದರು. 'ಮಗಳು ಡಾಲೀದು' ಅಂದಳು, ನನ್ನ ಗಮನ ಅತ್ತ ಹೋಗಿದ್ದು ನೋಡಿ. ತಕ್ಷಣ ನಾನು ನನ್ನ ದೃಷ್ಟಿಯನ್ನು ಬೇರೆ ಕಡೆ ತಿರುಗಿಸಿ ನಕ್ಕು 'ಚೆನ್ನಾಗಿದೆ' ಎಂದೆ. ಮೇಲಿನಿಂದಲೇ ಕೆಳಗಿನ ಅಡುಗೆ ಮನೆಯೂ ಕಾಣಿಸುತ್ತಿತ್ತು. ಕೆಳಗೆ ಜ್ಯಾಕ್ ಪೀಟ್ಜಾ ಮಾಡುತ್ತಿದ್ದ. ಎರಡು ಹುಡುಗರೂ ಡೈನಿಂಗ್ ಟೇಬಲ್ ಮೇಲೆ ಕೂತು ಅಲ್ಲೇ ಇದ್ದ ಟೀವಿಯಲ್ಲಿ ಬರುತಿದ್ದ ಯಾವುದೋ ಕಾರ್ಟೂನನ್ನು ನೋಡುತ್ತಿದ್ದವು. ನನ್ನನ್ನು ನೋಡಿದ್ದೇ 'ಬಂದೆ, ಒಂದು ನಿಮಿಷ ಹುಡುಗರಿಗೆ ಊಟ ಹಾಕಿ ಬಂದುಬಿಡುತ್ತೇನೆ' ಎಂದ. ನನ್ನ ಗಮನ ಅಡುಗೆ ಮನೆಯ ವಿವರಗಳ ಕಡೆ ತಿರುಗಿದ್ದನ್ನು ನೋಡಿ 'ಫ಼್ಲೋರಿಂಗೆಲ್ಲಾ ಪೋರ್ಸಲೈನ್ ಟೈಲ್ಸ್. ಈ ಏರಿಯಾದಲ್ಲಿ ಜಾಸ್ತಿ ಖರ್ಚು ಮಾಡಿ, ಮುಂದೆ ಮನೆ ಮಾರಿದರೆ ಹಾಕಿದ ದುಡ್ಡು ವಾಪಸ್ಸು ಬರುವುದಿಲ್ಲವೇನೋ ಅಂತ ಗ್ರಾನೈಟ್ ಹಾಕಿಸಲಿಲ್ಲ. ಆದರೆ, ನೀವು ಕಟ್ಟಿಸುತ್ತಿರೋ ಏರಿಯಾದಲ್ಲಿ ಕಮ್ಮಿ ಅಂದರೆ ವರ್ಷಕ್ಕೆ ಆರು ಪರ್ಸೆಂಟ್ ಮನೆಯ ಬೆಲೆ ಏರುತ್ತೆ. ಆದ್ದರಿಂದ ನೀನು ಕಣ್ಣು ಮುಚ್ಚಿಕೊಂಡು ಗ್ರಾನೈಟ್ ಹಾಕಿಸಬಹುದು' ಎಂದ. ಅಷ್ಟರಲ್ಲಿ ಪೀಟ್ಜಾ ಆಗಿತ್ತು. ಮಕ್ಕಳಿಗೆ ಪೀಟ್ಜಾ ಕೊಟ್ಟುಬಂದು 'ಹನಿ ನಿನಗೆ ಊಟ ಫ್ರಿಜ್ಜಿನಲ್ಲಿಟ್ಟಿದ್ದೇನೆ' ಎಂದ. ಪುಷ್ಪಾ ನನ್ನ ನೋಡಿ ನಕ್ಕು 'ಫ್ಯಾಮಿಲಿ ಟೈಪು' ಎಂದು ಬರೀ ತುಟಿ ಚಲನೆಯಿಂದ ನಕ್ಕಳು.

'ಹೊಸಾ ಮನೆಗೆ ಈ ರಿಯಲ್ ಎಸ್ಟೇಟ್ ಏಜೆಂಟುಗಳು ಯಾಕೆ ಬೇಕು? ನೇರವಾಗಿ ಬಿಲ್ಡರ್ ಜತೆಗೇ ಡೀಲ್ ಮಾಡಬಹುದಲ್ಲ? ಸುಮ್ಮನೆ ಜ್ಯಾಕ್ ಡೇನಿಯೇಲ್ ಇಬ್ಬರೂ ಅವರ ಕಮಿಷನ್ ಹೊಡೆಯುವುದಕ್ಕೆ ನಿಮಗೆ ಅವರ ಮನೇನೇ ತೋರಿಸಿದ್ದಾರೆ. ಇಲ್ಲದಿದ್ದರೆ, ಯಾರು ತಮ್ಮ ಮನೆಗೆ ಕರಕೊಂಡು ಹೋಗಿ ತಮ್ಮ ಪ್ರೈವೆಸಿಯನ್ನೆಲ್ಲಾ ವ್ಯವಹಾರಕ್ಕೆ ತೆಗೆದಿಟ್ಟುಕೋತಾರೆ?' ಎಂದೂ ಒಂದಿಷ್ಟು ಜನ ಹೇಳಿದರು. ಆದರೂ, ನನಗೂ ಪುಷ್ಪಾಳಿಗೂ ಈ ಜ್ಯಾಕ್, ಡೇನಿಯಲ್ ಇಬ್ಬರು ಮಾತ್ರ ಇಡೀ ಊರಲ್ಲೇ ಒಳ್ಳೆಯ ರಿಯಲ್‌ಟರ್‌ಗಳು ಅನ್ನಿಸಿತ್ತು.

ಇನ್ನೊಮ್ಮೆ ದೀಪಕ್ ಪಟೇಲ ಸಿಕ್ಕಿದ್ದ. ಯಾವುದೋ ಸಿಗ್ನಲ್ ಲೈಟಿನಲ್ಲಿ ತನ್ನ ಮರ್ಸಿಡಿಸಿನಿಂದ ಕುತ್ತಿಗೆ ಹೊರಗೆ ಹಾಕಿ 'ಮನೆಗೆ ಯಾವ ಫ್ಯಾಮಿಲಿ ರಿಯಲ್‌ಟರ್‌ನ ನೋಡಿದೆ' ಅಂದ. ನಾನು 'ಹಿಹಿಹಿ' ಮಾಡುತ್ತಾ 'ಜ್ಯಾಕ್, ಡೇನಿಯೇಲ್' ಎಂದೆ. 'ಓ ಡೇನಿಯೇಲ್, ಡೇನಿಯೇಲ್ ಗ್ಲೋವರ್. ನನಗ್ಗೊತ್ತು ಹೇಳು. ನೋಡೋಕೆ ಬಹಳ ಚೆನ್ನಾಗಿದ್ದಾಳಯ್ಯ. ಮೂರುಜನ ಮಕ್ಕಳಿದ್ದಾರೆ. ಅವಳ ಫಿಗರ್ ನೋಡಿದರೆ, ಮೂರು ಮಕ್ಕಳಿದಾವೆ ಅಂತ ಹೇಳೋದೇ ಕಷ್ಟ. ಆದರೆ, ಬಿಸಿನೆಸ್ಸಿಗೆ ಬಂದರೆ, ಬಹಳ ವೀಕ್ ಕಣಯ್ಯ. ಬುದ್ಧಿ ಮತ್ತು ಸೌಂದರ್ಯ ಒಂದೇ ಕಡೆ ಇರೋಲ್ಲ ನೋಡು.... ಅವರು ಕಟ್ಟಿಸಿರೋ ಮನೆಗಳು ಸುಮಾರು ಗೊತ್ತಿವೆ ನನಗೆ. ಪರವಾಗಿಲ್ಲ, ಚೆನ್ನಾಗಿವೆ. ಮತ್ತೆ ನೀನು ಮನೇಗೆ ವಾಸ್ತು ಗೀಸ್ತು ಏನಾರ ನೋಡ್ತಾ ಇದೆಯಾ, ಹೆಂಗೆ?' ಅಂದ. 'ಇಲ್ಲ' ಎಂದೆ. 'ಅಲ್ಲ, ಸುಮ್ಮನೆ ಕೇಳಿದೆ' ಅಂದ.

ನಾನೇನೂ ಮಾತಾಡಲಿಲ್ಲ. ಆದರೆ, ದೀಪಕ್ ಪಟೇಲನೇ ಮುಂದುವರಿಸಿದ್ದ 'ಆ ಜ್ಯಾಕ್, ಡೇನಿಯೇಲ್ ಇಬ್ಬರೂ ಮನೆ ಕಟ್ಟಿಸ್ತಾರಲ್ಲ ಆ ಬಿಲ್ಡರ್‌ಗಳು -- ಅವ್ರೂ ಗಂಡ ಹೆಂಡತಿಯರೇ, ಫ್ಯಾಮಿಲಿ ಟೈಪು. ಶೆರ್ಲೀ, ಮ್ಯಾಕ್ ಅಂತ. ಮನೆಕಟ್ಟೋ ಮೇಸ್ತ್ರಿ ಕೆಲಸಾನೆಲ್ಲಾ ಪಾಪ ಮ್ಯಾಕ್ ಮಾಡ್ತಾನೆ. ಲೆಕ್ಕ ಇಡೋ ಕೆಲಸ, ಬ್ಲೂಪ್ರಿಂಟ್ ಹಾಕೋ ಆರ್ಕಿಟೆಕ್ಟ್‌ಗಳ ಹತ್ತಿರ, ಅಟಾರ್ನಿಗಳ ಹತ್ತಿರ, ಪ್ಲಂಬಿಂಗು, ಎಲಕ್ಟ್ರಿಕ್ಕು, ಮನೆಸಾಲ, ಮತ್ತೆ ಮನೆ ಕಟ್ಟಿಸಿಕೊಳ್ಳೋವರ ಹತ್ತಿರ ಎಲ್ಲ ವ್ಯವಹಾರ ಮಾಡೋದು ಶೆರ್ಲಿ. ಶೆರ್ಲಿ ಮತ್ತು ಡೇನಿಯೇಲ್ ಬಹಳ ಕಾಲದ ಗೆಳತಿಯರು. ಶೆರ್ಲಿಯಿಂದಲೇ ಈ ಡೇನಿಯಲ್ ತನ್ನ ಗಂಡನನ್ನೂ ಈ ವ್ಯವಹಾರಕ್ಕೆ ಎಳೆದಿದ್ದು. ಜ್ಯಾಕ್‌ಗೂ ಮ್ಯಾಕ್‌ಗೂ ಅಷ್ಟಕ್ಕಷ್ಟೇ. ಬರೀ ಒಂದು ಫ್ಯಾಕ್ಸ್ ಮಶೀನು, ಲ್ಯಾಂಡ್ ಲೈನೊಂದು ಮತ್ತು ಎರಡು ಮೊಬೈಲುಗಳ ಮುಂದೆ ಕೂತು ಮಕ್ಕಳನ್ನೂ ನೋಡಿಕೊಂಡು ಮಿಲಿಯನ್‌ಗಟ್ಟಲೆ ದುಡ್ಡು ಮಾಡ್ತಾಳೆ ನೋಡು ಆ ಶೆರ್ಲಿ. ತಾವೂ ಅಷ್ಟು ದುಡ್ಡು ಮಾಡಬಹುದು ಈ ರಿಯಲ್ ಎಸ್ಟೇಟ್ ದಂಧೆ ಬಿಟ್ಟು ಮನೆ ಕಟ್ಟೋದು ಶುರುಮಾಡಿದರೆ ಅಂತ ಜ್ಯಾಕ್ ಹೇಳ್ತಾನಂತೆ. ಆದರೆ,

ಡೇನಿಯೇಲ್‌ಗೆ ಮೂರು ಮಕ್ಕಳನ್ನು ಇಟ್ಟುಕೊಂಡು ಈ ವ್ಯವಹಾರ ಮಾಡೋದು ಕಷ್ಟ ಅಂತ ಜ್ಯಾಕ್‌ನನ್ನು ತಡೀತಿದಾಳೆ' ಅಂದ. ಎಲಾ ಇವನ, ಒಳ್ಳೇ ಹೆಂಗಸರಿಗಿಂತ ಹೆಚ್ಚು ಗಾಸಿಪ್ ಮಾಡ್ತಾನಲ್ಲ ಈತ ಎನಿಸಿತು.

ಇದು ನನಗೆ ಗೊತ್ತಾಗಬಾರದ ವಿವರಗಳು ಎಂದುಕೊಂಡು ಸಿಗ್ನಲ್ ಬೀಳುತ್ತಾ ಎಂದು ಕಾಯುತ್ತಾ ಇದ್ದೆ. ಸಿಗ್ನಲ್ ಬಿದ್ದ ತಕ್ಷಣ 'ಬಾಆಆಅಯ್' ಹೇಳಿ ಹೊರಟೆ.

*

ಇಲ್ಲೆಂತ ವಾಸ್ತು ನೋಡ್ತೋದು ಮನೆಗೆ ಎಂದು ತಕ್ಷಣಕ್ಕೆ ಎನಿಸಿದರೂ ಪುಷ್ಪಾಳಿಗೆ ಹೇಳಿದರೆ ಮುಗಿಯಿತು. ಇನ್ನು ಊರಿನ ಪುರೋಹಿತರನ್ನೆಲ್ಲಾ ಹೋಗಿ ಬ್ಲೂಪ್ರಿಂಟು ತೋರಿಸಿಕೊಂಡು ಬರ್ತಾಳೆ. ಸುಮ್ಮನಿದ್ದುಬಿಡೋಣ ಅಂದುಕೊಂಡಿದ್ದೆ. ಆದರೆ ಪುಷ್ಪಾ ನನ್ನ ಕೆಲಸವನ್ನು ಸುಲಭ ಮಾಡಿದ್ದಳು. ಮನೆಗೆ ಬರುವ ಹೊತ್ತಿಗೆ ಅವಳು ಆಗಲೇ ಯಾರ್‍ಯಾರಿಗೋ ಫೋನು ಮಾಡಿ, ಇಲ್ಲಿ ವಾಸ್ತು ಪ್ರಕಾರ ಮನೆ ಕಟ್ಟೋದು ಹೇಗೆ ಎಂದು ಚರ್ಚೆ ಮಾಡುತ್ತಿದ್ದಳು. ಈಶಾನ್ಯದ ಮೂಲೆಯಲ್ಲಿ ಅಡುಗೆ ಮನೆ, ಅಡುಗೆ ಮನೆಯ ಮೇಲೆ ಮಾಸ್ಟರ್ ಬೆಡ್ ರೂಮಿರಬಾರದು, ಆದರೆ ಗೆಸ್ಟ್ ಬೆಡ್ ರೂಮಿರಬಹುದು. ಮನೆ ಉತ್ತರಕ್ಕೆ ಅಥವಾ ಪೂರ್ವಕ್ಕೆ ಮುಖ ಮಾಡಿದರೆ ಮೂಲೆಗಳಲ್ಲಿ ಒಂದು ಮೂಲೆ ಈಶಾನ್ಯವಿದ್ದೇ ಇರುತ್ತದೆ. ಆಗ ಅಡುಗೆಮನೆ ಈಶಾನ್ಯದಲ್ಲಿ ಹಾಕೋದು ಸುಲಭ. ಯಾವ ಕಕ್ಕಸ್ಸೂ ಅಗ್ನಿಮೂಲೆಯಲ್ಲಿರಬಾರದು. ಅಡುಗೆಮನೆಯದ್ದೂ, ಸ್ನಾನದ್ದೂ ಡ್ರೈನೇಜು ಒಂದೇಕಡೆ ಸೇರಿಕೋಬಾರದು ಎಂದು ಪಟ್ಟಿ ಹಾಕಿಕೊಂಡಿದ್ದಳು. ಎಲ್ಲಾ ಬಾತ್‌ರೂಮಿನ ಕಮೋಡುಗಳು ಪೂರ್ವಕ್ಕೆ ತಿರುಗಿ ಕೂತಿದ್ದವು. ಕಾರಣ ಕೇಳಿದಾಗ ನಾವು 'ಪಾಟಿಗೆ ಕೂತಾಗ ಪೂರ್ವಕ್ಕೆ ಮುಖಮಾಡಿ ಕೂತುಕೋಬೇಕು' ಎನ್ನುವ ಉತ್ತರ ಬಂತು. ಮಾಸ್ಟರ್ ಬೆಡ್‌ರೂಮಿನ ಬಾಗಿಲು ಎರಡಾಗಿತ್ತು. ಮತ್ತೆ ಮುಖ ನೋಡಿದೆ 'ಮುಖ್ಯವಾದ ಬಾಗಿಲುಗಳು ಕ್ಲಾಕ್‌ವೈಸಾಗಿ ತೆರೆದುಕೊಳ್ಳಬೇಕು. ಆದರೆ ಮಾಸ್ಟರ್‌ಬೆಡ್ ರೂಮಿನ ಬಾಗಿಲು ಕ್ಲಾಕ್ವೈಸಾಗಿ ತೆರೆದುಕೊಂಡರೆ ಹಿಂದುಗಡೆ ಜಾಗ ದಂಡವಾಗುತ್ತೆ. ಆದ್ದರಿಂದ ಬಾಗಿಲವಾಡಾನ ದೊಡ್ಡದು ಮಾಡಿ, ಒಂದು ದೊಡ್ಡ ಬಾಗಿಲಿನ ಬದಲಾಗಿ ಎರಡು ಸಣ್ಣ ಬಾಗಿಲನ್ನು ಇರಿಸಿದರೆ ಬಾಗಿಲುಗಳು ಎರಡೂ ಕಡೆ ತೆರೆದುಕೊಳ್ಳುತ್ತೆ. ಒಂದಂತೂ ಕ್ಲಾಕ್‌ವೈಸಾ. ವಾಸ್ತೂಗೆ ವಾಸ್ತೂನು ಆಯ್ತು, ನೋಡ್ತೋಕು ಚೆನ್ನಾಗಿರುತ್ತೆ.' ಎಂದಳು. ವಾರೆವ್ಹಾ ಎಂದು, ಬ್ಲೂಪ್ರಿಂಟನ್ನು ತೆಗೆದುಕೊಂಡು ಹೋಗಿ ಜ್ಯಾಕ್ ಹತ್ತಿರ ಬದಲಾವಣೆ ಮಾಡಿಸಲು ಹೊರಟೆ.

ಜ್ಯಾಕ್ ಯಾರದೋ ಹತ್ತಿರ ಮಾತಾಡುತ್ತಾ ನಿಂತಿದ್ದ, ಅವನ ಆಫೀಸಿನಲ್ಲಿ. ಯಾಕೋ ಮುಖ ಕೆಂಪಗಾಗಿತ್ತು. ನೋಡಿದರೆ, ತುಂಬಾ ಸಿಟ್ಟಿನಲ್ಲಿದ್ದಂತಿದ್ದ. ನನ್ನನ್ನು ನೋಡಿದ ತಕ್ಷಣ ಕೈಯಲ್ಲೇ 'ಒಂದು ನಿಮಿಷ' ಎಂದು, ಫೋನ್ ಡಿಸ್‌ಕನೆಕ್ಟ್ ಮಾಡಿ 'ಸಾರಿ'....

'ಒಂದೇ ನಿಮಿಷ.... ಬಂದೆ' ಎಂದು ಅಲ್ಲೇ ಇದ್ದ ಬಾತ್‌ರೂಮಿಗೆ ಹೋಗಿ ಮುಖತೊಳೆದು ಬಂದ. ನಾನು ಬಂದ ವಿಷಯ ಹೇಳಿದೆ. ಬ್ಲೂಪ್ರಿಂಟಿನಲ್ಲಿದ್ದ ಬದಲಾವಣೆಗಳನ್ನೆಲ್ಲಾ ಗುರುತು ಮಾಡಿಕೊಂಡ. 'ನಾನು ಬಿಲ್ಡರ್ ಜತೆ ಮಾತಾಡುತ್ತೇನೆ' ಅಂದ. ಇನ್ನೊಮ್ಮೆ ಬ್ಲೂಪ್ರಿಂಟನ್ನು ನೋಡುತ್ತಾ 'ತುಂಬಾ ಬದಲಾವಣೆಗಳಾಗಿವೆ. ಕಮೋಡುಗಳು ಎಲ್ಲಾ ಉಲ್ಟಾ ತಿರುಗಿವರೆ, ಬಾತ್‌ರೂಮುಗಳಲ್ಲಿ ಬಾಗಿಲು ತೆಗೆದರೆ, ನೇರವಾಗಿ ಕಮೋಡಿಗೇ ಹೊಡೆಯುತ್ತದಲ್ಲ' ಅಂದ. ನಾನು ಏನೋ ಯೋಚಿಸುತ್ತಾ 'ಇಲ್ಲ ಎಲ್ಲ ಮಾಡಬಹುದು. ನಾನೇ ನೇರವಾಗಿ ಆ ಬಿಲ್ಡರ್ ಮ್ಯಾಕೋ ಪಾಕೋ ಯಾವನೋ, ಅವನ ಜತೆ ಮಾತಾಡ್ತೀನಿ' ಅಂದೆ. 'ಬೇಡ, ನಾನೆಲ್ಲಾ ನೋಡ್ಕೋತೀನಿ' ಅಂದ. 'ನಿನಗೆ ನಾನು ಮೊದಲೇ ಹೇಳಿದೀನಿ. ನಮ್ಮ ಬಿಲ್ಡರ್ ಮ್ಯಾಕ್ ನೇರವಾಗಿ ಯಾರ ಜತೆಯೂ ಮಾತಾಡಲ್ಲ. ಹೀ ಈಸ್ ನಾಟ್ ಎ ಪೀಪಲ್ ಪರ್ಸನ್. ಅದಕ್ಕೋಸ್ಕರವೇ ನಮಗೆ ದುಡ್ಡುಕೊಟ್ಟು ಕೆಲಸಕ್ಕಿಟ್ಟಿಕೊಂಡಿರೋದು' ಅಂದ.

ಈ ಬಿಲ್ಡರ್ ಜತೆ ನೇರವಾಗಿ ವ್ಯವಹಾರ ಮಾಡದೇ ಇರುವ ವಿಷಯ ನನಗೆ ಹೊಸದು, ಪುಷ್ಪಾಳಿಗೂ ಹೊಸದು. ಸ್ನೇಹಿತರಲ್ಲಿ ಒಂದಿಬ್ಬರನ್ನು ಕೇಳಿದಾಗ 'ಇಲ್ಲ ಅದೇನೂ ಹೊಸದಲ್ಲ, ಈ ವ್ಯವಹಾರದಲ್ಲಿ. ಕೆಲಸ ಮಾಡಲಿ, ಬಿಡಲಿ. ದುಡ್ಡಂತೂ ಹೊಡೀತರೆ, ಈ ರಿಯಲ್ಟರ್‌ಗಳು' ಅಂದಿದ್ದರು. ಆದರೂ, ನಮ್ಮ ಮನೆ ಕಟ್ಟೋ ಬಿಲ್ಡರ್‌ನ ಮುಖವನ್ನೂ ನೋಡದಿದ್ದರೆ ಹೇಗೆ ಎಂದು ಬ್ಲೂಪ್ರಿಂಟ್ ತಯಾರಾಗುವ ಮುಂಚಿನ ಗಂಭೀರವಾದ ಮಾತುಕತೆಯಲ್ಲಿ ನಾನು ಹೇಳಿದ್ದಾಗ, ಡೇನಿಯೇಲ್ 'ಬೇಕಾದರೆ, ಅವನ ಒಂದು ಫ಼ೋಟೊ ಕೊಡ್ತೀನಿ, ಇಟ್ಟುಕೊಳ್ಳಿ' ಎಂದು ನಕ್ಕಿದ್ದಳು. ನಾನು ಮುಖ ಸಿಂಡರಿಸಿಕೊಂಡಾಗ, ಅದು ತಮಾಷೆಯಲ್ಲವೆಂದೂ 'ಸಾರಿ' ಹೇಳಿದ್ದಳು.

ಮನೆಗೆ ಬಂದು ಪುಷ್ಪಾಳಿಗೆ ಅವನ ಆಫ಼ೀಸಿನಲ್ಲಿ ಜ್ಯಾಕ್ ಕಾರಣವಿಲ್ಲದೆ ಸಿಟ್ಟಿನಲ್ಲಿದ್ದು, ಮುಖ ಕೆಂಪಗಾದದ್ದು ಹಾಗೂ ಬಹುಶಃ ಅತ್ತಿರಬಹುದಾದ ವಿಷಯವನ್ನು ಹೇಳಿದೆ. 'ನಿನಗೆ ಬುದ್ಧಿಯಿಲ್ಲ' ಎಂದಳು. ಸುಮ್ಮನೆ ಇನ್ನು ಮಾತಾಡಿ ಉಪಯೋಗವಿಲ್ಲ ಎಂದು ಸುಮ್ಮನಾದೆ.

*

ನನ್ನ ಸ್ನೇಹಿತ ರೆಡ್ಡಿ ಮನೆ ಕಟ್ಟಿದ್ದ. ಹೋಗಿ ನೋಡಿ ಬರೋಣವೆಂದು ಮುಂಚೆಯೇ ಪ್ಲಾನು ಹಾಕಿದ್ದೆವು. ಅವತ್ತು ರಾತ್ರಿ ಮನೆ ನೋಡಲೆಂದು ಹೋದೆವು.

ಪ್ಲಾಸ್ಟಿಕ್ ತೋರಣವಿದ್ದ ಹೊಸಾಮನೆ. 'ಐ ಸ್ಪೆಂಟ್ ಫ಼ೋರ್ ಹಂಡ್ರೆಡ್ ಡಾಲರ್ಸ್ ಆನ್ ದಟ್ ಪೂಜಾರಿ ಯು ನೋ ಫ಼ಾರ್ ಗೃಹಪ್ರವೇಶಮ್. ರ್‍ಯಾಸ್ಕಲ್ಸ್, ಬಿಗ್ ಫ಼್ರಾಡ್

ಯು ನೋ' ಅಂದು ಮನೆ ತೋರಿಸಿದ. ನಾಲ್ಕು ಬೆಡ್‌ರೂಮಿದ್ದ ಸೊಗಸಾದ ಮನೆ. 'ಐ ಡಿಡ್‌ನಾಟ್ ಸ್ಪೆಂಡ್ ಮನಿ ಆನ್ ದ ಫ್ಲೋರಿಂಗ್ ಅಂಡ್ ಆಲ್. ದಿಸ್ ವೈನೈಲ್ ಈಸ್ ಈಸಿ ಟು ಮೈನ್ಟೈನ್, ವಿತ್ ದ ಕಿಡ್ಸ್ ಯು ನೋ. ಆಲ್‌ವೇಸ್ ಥ್ರೋಯಿಂಗ್ ಥಿಂಗ್ಸ್ ಆನ್ ದ ಫ್ಲೋರ್ ಯು ನೋ' ಎಂದ. ರೆಡ್ಡಿ ಹೆಂಡತಿ 'ರಂಡಿ, ರಂಡಿ' ಎಂದಳು. ಪುಷ್ಪಾ ಅಡುಗೆಮನೆಯ ನಲ್ಲಿಗಳು, ಕ್ಯಾಬಿನೆಟ್ಟುಗಳು ಮತ್ತು ನೆಲದ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದಳು. ನಾನು, ರೆಡ್ಡಿ ಹೊರಗೆ ಡೆಕ್ಕಿನ ಮೇಲೆ ಕೂತು ತಣ್ಣನೆಯ ಬಿಯರು ಕುಡಿಯುತ್ತಾ ಇದ್ದೆವು. ದೀಪಕ್ ಪಟೇಲನ ಹತ್ತಿರ ನಾನು ಮನೆ ಕಟ್ಟಿಸದಿದ್ದುದು ಎಷ್ಟು ಒಳ್ಳೆಯದಾಯಿತೆಂದೂ, ಅವ ಯಾರ್ಯಾರಿಗೆ ಎಷ್ಟು ಟೋಪಿ ಹಾಕಿದ್ದಾನೆಂದೂ ಹೇಳಿದ. 'ನೆವರ್ ಟ್ರಸ್ಟ್ ಇಂಡಿಯನ್ಸ್ ಅಂಡಿ. ಈ ಬಿಸಿನೆಸ್‌ಲೋ.' ಅಂದು 'ಇಂಕೊಕ ಬಿಯರ್ ಕಾವಾಲ' ಎಂದ. ನಾನು ಹೂಂಗುಟ್ಟಿ ಡೆಕ್ಕಿನಿಂದ ಕಣ್ಣಿಗೆ ಕಾಣುವಷ್ಟು ದೂರವೂ ನೋಡಿದೆ.

ಮನೆಗಳು, ಬರೀ ಮನೆಗಳು ಕಂಡವು. 'ಡೆಕ್ಕಿನ ತುದಿಗೆ ಹೋಗಿ ಬೀಳುವಷ್ಟು ನಿಗುರಿದರೆ, ಡೌನ್ಟೌನ್ ಕಾಣುತ್ತದೆ' ಎಂದ. ನಾನು 'ಇರಲಿ' ಎಂದು ಮನೆಯೊಳಗೆ ಬಂದೆ. 'ಭೋಜನಂ ಚೇಸ್ಕೊಂಡು ಪೋವಾಲಿ' ಎಂದ. ಪುಷ್ಪಾಳ ಮುಖ ನೋಡಿದೆ. ಸರಿ ಇಷ್ಟು ಬಂದಿದ್ದೇ ಆಗಿದೆ, ಇನ್ನೇನು ಊಟ ಮುಗಿಸಿಕೊಂಡೇ ಹೋದರಾಯಿತು. ಮನೇಲಿ ಅಡುಗೆ ಕೆಲಸ ತಪ್ಪುತ್ತೆ ಅಂದುಕೊಂಡು ಅಲ್ಲಿಯೇ ಊಟ ಮಾಡಿ ಬಂದೆವು. ಬರುವ ಮುಂಚೆ ಅವರ ಮನೆಯ ಲಿವಿಂಗ್ ರೂಮಿನ ಛಾವಣಿ ನೆಲದಿಂದ ಎಷ್ಟು ಎತ್ತರದಲ್ಲಿದೆ ಎಂದು ಕೇಳಿದೆ. ಛಾವಣಿಯನ್ನೇ ನೋಡುತ್ತಾ 'ಹದಿನಾಲ್ಕಡಿ' ಎಂದ ರೆಡ್ಡಿ.

ಮನೆಗೆ ಬಂದ ತಕ್ಷಣ ಪುಷ್ಪಾ ಮನೆಯ ಬ್ಲೂಪ್ರಿಂಟಲ್ಲಿ ಮತ್ತೆ ಏನೋ ನೋಡುತ್ತಾ ಕೂತಿದ್ದಳು. ನಾನು ಹಿಂದಿನಿಂದ ಹೋಗಿ ಅವಳ ಬೆನ್ನು ಒತ್ತುವುದಕ್ಕೆ ಶುರುಮಾಡಿದೆ. ನೋಡಿ ನಕ್ಕು 'ಒಂದು ನಿಮಿಷ' ಅಂದಳು. ನಾನು ಹೋಗಿ ಹಾಸಿಗೆಯ ಮೇಲೆ ಯಾವುದೋ ಪುಸ್ತಕ ಓದುತ್ತಾ ಮಲಗಿದ್ದೆ. ಒಂದು ಗೌನು ಹಾಕಿಕೊಳ್ಳುತ್ತಾ ಮಂಚ ಹತ್ತಿದಳು. ಮುಖದ ಹತ್ತಿರ ಮುಖ ತಂದು 'ಥೂ ಅದೇನು ಸುಡುಗಾಡು ಅಂತ ಕುಡೀತೀರಪ್ಪ. ಬರೀ ವಾಸನೆ' ಅಂದಳು. ನಾನು 'ಬರೀ ಬಾಯಿ ತಾನೇ ವಾಸನೆ ಬರುತ್ತಿರುವುದು' ಎಂದು ಕತ್ತು ನೇವರಿಸಹತ್ತಿದೆ. 'ಎಷ್ಟು ದಿನ ಆಗಿತ್ತಲ್ಲವಾ?' ಎಂದಳು. ನಾನು ಮಾತಾಡಲಿಲ್ಲ. ಸುಮ್ಮನೆ ಪುಷ್ಪಾಳ ನಡುವನ್ನು ತಡವುತ್ತಿದ್ದೆ. ಪುಷ್ಪಾ 'ಊಟದ ಮನೇಗೂ ಲಿವಿಂಗ್ ರೂಮಿಗೂ ಮಧ್ಯೆ ಎರಡು ಸಣ್ಣ ಪಿಲ್ಲರ್‌ಗಳನ್ನು ಇರಿಸಿದರೆ ಹೇಗೆ?' ಎಂದಳು. ನಾನು, ಚೆನ್ನಾಗಿರುತ್ತದೆ ಅಂದೆ. ನನ್ನ ನೇವರಿಕೆಯ ತಾಳ ಒಂದೆರಡು ಸೆಕೆಂಡುಗಳಾದರೂ ತಪ್ಪಿತು ಅಂತ ನನ್ನ ಬೆರಳುಗಳಿಗನ್ನಿಸಿತು. ಪುಷ್ಪಾ ಮತ್ತೆ ಗೌನು ಸರಿಮಾಡಿಕೊಳ್ಳುತ್ತಾ ಹೇಳಿದಳು 'ನಾಳೆ ಮುಂಚೆ ಜ್ಯಾಕ್‌ಗೆ ಫೋನು ಮಾಡಿಬಿಡಬೇಕು' ಎಂದಳು.

*

ಬೆಳ್ಳಂಬೆಳಿಗ್ಗೆ ಜ್ಯಾಕ್‌ನ ಮೊಬೈಲಿಗೆ ಫೋನು ಮಾಡಿ ಅವನ ಮನೆಯ ಛಾವಣಿ ನೆಲದಿಂದ ಎಷ್ಟು ಎತ್ತರ ಇದೆ ಎಂದು ಕೇಳಿದಾಗ ಆತ 'ಹದಿನಾರಡಿ' ಅಂದ. ಮತ್ತೆ ಒಂದು ನಿಮಿಷ ಮಾತು ಕೇಳಲಿಲ್ಲ. ಫೋನಿಗೆ ಕೈ ಅಡ್ಡ ಹಿಡಿದಿದ್ದ ಅಂತ ಕಾಣಿಸುತ್ತದೆ. ಹಿಂದಿನಿಂದ ಡೇನಿಯಲ್‌ಳೋ ಅಥವಾ ಮಕ್ಕಳೋ, ಒಟ್ಟು ಕೂಗಾಡುತ್ತಿದ್ದುದು ಕೇಳಿಸಿತು. ಮನೆಯಿಂದ ಹೊರಗೆ ಬಂದನೋ ಅಥವಾ ಬೇರೆ ಇನ್ನೊಂದು ರೂಮಿಗೆ ಹೋದನೋ ಒಟ್ಟು ಈಗ ಹಿನ್ನೆಲೆ ನಿಶ್ಯಬ್ದವಾಗಿತ್ತು. 'ಹೇಳು' ಎಂದ. 'ಏನಿಲ್ಲ' ನಿಮ್ಮ ಮನೆಯ ಲಿವಿಂಗ್ ರೂಮಿನ ಛಾವಣಿ ನೆಲದಿಂದ ಎಷ್ಟು ಎತ್ತರ ಇದೆ' ಎಂದು ಮತ್ತೊಮ್ಮೆ ಕೇಳಿದೆ. 'ಅದೇ ಹೇಳಿದೆನಲ್ಲ, ಹದಿನಾರಡಿ' ಎಂದ. 'ಸರಿ, ನಮ್ಮನೆಯ ಛಾವಣಿಯನ್ನು ಹತ್ತೊಂಬತ್ತಡಿಗೆ ಎತ್ತರಿಸು' ಎಂದೆ.

'ನಿಜವಾಗಿಯೂ ನೀನು ಏನು ಹೇಳ್ತಿದೀ ಅನ್ನೋದು ಗೊತ್ತಾ ನಿನಗೆ. ಅಷ್ಟೆತ್ತರ ಛಾವಣಿಯಾದರೆ, ಅದಕ್ಕೆ ಸರಿ ಹೋಗ್ಗೋ ಹಾಗೆ ಗೋಡೆಗಳಿಗೆ ಎರಡು ದೊಡ್ಡ ದೊಡ್ಡ ಕಿಟಕಿಗಳನ್ನಿಡಬೇಕಾಗುತ್ತದೆ. ಇಂಜಿನಿಯರ್‌ಗಳನ್ನು ಕೇಳಿ ಮತ್ತೆ ಭಾರ ತಡಕೊಳ್ಳೋ ಏರಿಯಾಗಳಿಗೆ ಇನ್ನೊಂದಿಷ್ಟು ಸಪೋರ್ಟುಗಳನ್ನಿಡಬೇಕಾಗಿತ್ತದೆ. ನಿಮ್ಮ ಮನೆ ಮೊದಲೇ ಎತ್ತರದಲ್ಲಿದೆ. ಇಡೀ ಏರಿಯಾದಲ್ಲೇ ನಿಮ್ಮ ಮನೆ ಅತೀ ದೊಡ್ಡದಾಗಿ ಕಾಣಬಹುದು' ಅಂದ.

'ಅದೇ ನನ್ನ ಪಾಯಿಂಟ್' ಅಂದೆ.

ಪುಷ್ಪಾ ಡೇನಿಯೇಲ್‌ಳ ಜತೆಗೆ ಇನ್ನೊಂದು ಮೊಬೈಲಿನಲ್ಲಿ ಮಾತಾಡುತ್ತಿದ್ದಳು. ಮನೆಯ ದೇವಮೂಲೆಯಲ್ಲಿ ಒಂದು ಸಣ್ಣ ಕ್ಲಾಸೆಟ್ ತರದ್ದು ಅಥವಾ ಒಂದು ಸಣ್ಣ ರೂಮಿನ ತರದ್ದು ಒಟ್ಟು ನಾಲ್ಕು ಗೋಡೆ ಇದ್ದರೆ ಸಾಕು ಅಂತದ್ದೊಂದನ್ನು ಬ್ಲೂಪ್ರಿಂಟಲ್ಲಿ ಸೇರಿಸೋಕಾಗುತ್ತಾ ಎಂದು ಕೇಳುತ್ತಿದ್ದಳು. ಅದೇನು ಚರ್ಚೆ ಆಯಿತೋ ಅವರಿಬ್ಬರ ನಡುವೆ, ಪುಷ್ಪಾ 'ನಾನು ನಿಮ್ಮಗಳನ್ನು ಕಟ್ಟಿಕೊಂಡು ಏಗೋದು ಸಾಕಾಗಿಹೋಗಿದೆ. ನಮಗೆ ಒಂದು ಸಣ್ಣ ಕ್ಲಾಸೆಟ್ಟಾದರೂ ಬೇಕೇ ಬೇಕು' ಎಂದು ತನ್ನ ಫೋನನ್ನು ಡಿಸ್ಕನೆಕ್ಟ್ ಮಾಡಿದ್ದಳು. ನನ್ನ ಕಡೆ ತಿರುಗಿ 'ಅಡುಗೆ ಮನೆ ಮೂಲೆಯಲ್ಲಿ ನಾಲ್ಕು ಗೋಡೆ ಹಾಕಿದರೆ, ಅಲ್ಲಿ ದೇವರನ್ನಿಟ್ಟುಕೊಳ್ಳಬಹುದು. ಇವಕ್ಕೇನು ಗೊತ್ತು? ಅಡುಗೇ ಮನೇಲಿ ಕ್ಲಾಸೆಟ್ ಹಾಕಿದರೆ, ಮನೇ ರೀಸೇಲ್ ವ್ಯಾಲ್ಯೂ ಕಡಿಮೆ ಆಗುತ್ತೆ ಅಂತ ವಾದಿಸ್ತಾಳೆ ಆ ಭಿತ್ರಿ. ನಾವು ಸುಮ್ಮನೆ ಆ ದೀಪಕ್ ಪಟೇಲನ ಹತ್ರಾನೇ ಮನೆ ಕಟ್ಟಿಸಬೇಕಾಗಿತ್ತು. ಸ್ವಲ್ಪ ನಮ್ಮ ಸಂಸ್ಕೃತೀನಾದ್ರೂ ಗೊತ್ತಿರುತ್ತೆ. ರೀಸೇಲಂತೆ, ರೀಸೇಲು. ನಾವು ಮನೆ ಕಟ್ಟೋದು ನಾವು ಇರೋಕೋ, ಇನ್ನೊಬ್ಬರಿಗೆ ಮಾರೋಕೋ?' ಎಂದು ಪಾತ್ರೆಗಳನ್ನು ಛಡಛಡ ಮಾಡಹತ್ತಿದಳು. ನಾನು ಇನ್ನೊಮ್ಮೆ ಬ್ಲೂ ಪ್ರಿಂಟನ್ನು ಸರಿಯಾಗಿ ನೋಡುತ್ತಿದ್ದೆ.

*

ಸುಮಾರು ಹದಿನೈದು ದಿನ ಹೆಣಗಾಡಿದ ಮೇಲೆ ಬ್ಲೂಪ್ರಿಂಟ್ ಒಂದು ಹಂತಕ್ಕೆ ಬಂತು. ಗೋಡೆಗಳು ಏಳಹತ್ತಿದವು. ಮುಂದಿನ ಹದಿನೈದು ದಿನಗಳಲ್ಲಿ ಜ್ಯಾಕ್ ಮತ್ತು ಡೇನಿಯೇಲ್‌ರಿಂದ ಒಂದಾದ ಮೇಲೊಂದರಂತೆ ಫೋನುಗಳು ಬರತೊಡಗಿದವು. ಗೋಡೆಗಳ ಬಣ್ಣ, ಅಡುಗೆಮನೆಯ ಕ್ಯಾಬಿನೆಟ್ಟುಗಳು, ನೆಲದ ಟೈಲು, ನೆಲದ ಮರ, ನೆಲದ ಕಾರ್ಪೆಟ್ಟು, ಬಚ್ಚಲಿನ ಸಿಂಕು, ಅಡುಗೆಮನೆಯ ಸಿಂಕು, ದೀಪಗಳು ಎಲ್ಲವನ್ನೂ ಆರಿಸಲು ನಾವೇ ಹೋಗಬೇಕಾಗಿ ಬಂತು. ಪ್ರತಿಯೊಂದನ್ನೂ ಇಂತ ದಿನದ ಒಳಗೇ ತರಬೇಕೆಂಬ ಒತ್ತಡ. ತರಲಿಲ್ಲ ಎಂದರೆ ಮತ್ತೊಂದೆರಡು ಫೋನುಗಳು, ನಮ್ಮಿಂದ ತಡವಾದರೆ, ಮನೆಯನ್ನು ಹೇಳಿದ ದಿನದ ಒಳಗೆ ಕಟ್ಟಿಕೊಡಲಾಗದೇ ಇರಬಹುದೇನೋ ಎಂದು ಒಂತರಾ ಹೆದರಿಸಿದ್ದಳು ಡೇನಿಯೇಲ್. ನನಗೆ ಯಾಕೋ ರೇಗಿಹೋಯಿತು. ಒಮ್ಮೆ ಡೇನಿಯೇಲ್‌ಗೆ ಫೋನು ಮಾಡಿ 'ನಾನು ನಿಮ್ಮಗಳಿಗೆ ದುಡ್ಡು ಕೊಡ್ತಾ ಇರೋದು, ನೀವು ಈ ಕೆಲಸ ಮಾಡಲಿ ಅಂತ. ನಾವ್‌ಗಳೇ ಎಲ್ಲ ಕೆಲಸ ಮಾಡ್ಕಂಡು ಎಲ್ಲಾ ಕಡೆ ನಾವೇ ತಿರುಗಾಡಿದರೆ ನೀವೇನು ಮಾಡಿದ ಹಾಗಾಗುತ್ತೆ' ಎಂದು ಕೂಗಾಡಿದೆ. 'ನಾವುಗಳೇ ಎಲ್ಲ ನಮಗೆ ಬೇಕಾದ್ದನ್ನು ಆರಿಸಿದರೆ, ನೀವ್ಯಾಕೆ ಮನೆ ಕಟ್ಟಬೇಕು? ಅದು ನಿಮ್ಮ ಮನೆಯಾಗೋಲ್ಲ. ನಮ್ಮ ಮನೆಯಾಗುತ್ತೆ' ಎಂದು ನಾನು ಕೂಗಾಡಿದಷ್ಟೇ ರಭಸದಿಂದ ಅವಳೂ ಕೂಗಾಡಿ ಫೋನು ಕುಕ್ಕಿದಳು.

ಒಂದೈದು ನಿಮಿಷವಾದ ನಂತರ ಡೇನಿಯೇಲ್‌ಳಿಗೆ ಏನನ್ನಿಸಿತೋ ಏನೋ, ಮತ್ತೆ ಫೋನು ಮಾಡಿದಳು. 'ನಾನು, ನಿಮ್ಮ ಅಡುಗೆ ಮನೆಯ ಕ್ಯಾಬಿನೆಟ್ ಮಾಡ್ತಾನಲ್ಲ ಅವನ ಅಂಗಡಿಗೆ ಹೋಗ್ತಾ ಇದೇನೆ. ಬರೋ ಹಾಗಿದ್ರೆ ಬಾ. ಅವನನ್ನು ಗುರುತು ಮಾಡಿಕೊಡ್ತೀನಿ. ನೀನು ಬೇರೆಕಡೆ ಬೇಕಾದರೆ ನೋಡಿ ಬೆಲೆಗಳನ್ನು ಒಂದಕ್ಕೊಂದು ಹೋಲಿಸಿ ಆಮೇಲೆ ನಿರ್ಧಾರಕ್ಕೆ ಬರಬಹುದು. ಆದರೆ, ಆದಷ್ಟು ಬೇಗ ಒಂದು ನಿರ್ಧಾರಕ್ಕೆ ಬಾ' ಎಂದಳು. ಪುಷ್ಪಾಳಿಗೆ 'ನೀನೂ ಬರುತ್ತೀಯಾ' ಕೇಳಿದೆ. 'ನೀನು ಹೋಗಿ ನೋಡ್ಕೊಂಡು ಬಾ. ನನಗೆ ಸಮಯವಾದಾಗ ಹೋಗಿ ನೋಡ್ಕೊಂಡು ಬರ್ತೀನಿ, ಆಮೇಲೆ ಏನಾದರೂ ಒಂದು ನಿರ್ಧಾರಕ್ಕೆ ಬರೋಣವಂತೆ' ಅಂದಳು.

ನಮ್ಮಮನೆಯ ಅಡುಗೆಮನೆಯ ಕ್ಯಾಬಿನೆಟ್ಟುಗಳನ್ನು ಮಾಡುವವನ ಅಂಗಡಿಯಿದ್ದದ್ದು ಊರಹೊರಗೆ. ಕಾರಿನಲ್ಲಿ ಹೋದರೆ, ಸುಮಾರು ನಲವತ್ತೈದು ನಿಮಿಷ ಹಿಡಿಯುತ್ತಿತ್ತು. ಕಾರಿನಲ್ಲಿ ನಾನು ಡೇನಿಯೇಲ್ ಇಬ್ಬರೇ ಹೋಗುತ್ತಿದ್ದೆವು. ಆಕೆಯದೇ ಕಾರು. ತೋಳಿಲ್ಲದ ಒಂದು ಸ್ಕರ್ಟು ತೊಟ್ಟು ಡ್ರೈವ್ ಮಾಡುತ್ತಿದ್ದಳು. ಕಣ್ಣಿಗೊಂದು ತಂಪಾದ ಟಾಮಿ ಹಿಲ್‌ಫಿಗರ್, ತೆಳ್ಳಗೆ ಮೇಕಪ್ ಮಾಡಿಕೊಂಡಿದ್ದಳು. ಕಾರಿನಲ್ಲಿ ಯಾವುದೋ ಸಣ್ಣಗೆ ಹಾಡು ಬರುತ್ತಿತ್ತು. ತಣ್ಣಗೆ ಗಾಳಿಯೂ ಬರುತ್ತಿತ್ತು. ಒಂಚೂರು ಹೊರಳಿ ನೋಡಿದಾಗ

ಆಕೆಯ ಮಂಡಿ ಕಾಣಿಸುತ್ತಿತ್ತು. ಕಾರಿನ ಮುಂದಿನ ಕಿಟಕಿಯಿಂದ ಮತ್ತೆ ಮರ್ಸೀಡಿಸ್‌ನ ಲೋಗೋ ಬಿಸಿಲಿಗೆ ಫಳಫಳ ಅಂತ ಹೊಳೆಯುತ್ತಿತ್ತು. ಪರವಾಗಿಲ್ಲವೇ ಬಡ್ಡಿಮಕ್ಕಳು, ಈ ರಿಯಲ್ಟರ್‌ಗಳು ಅಂದುಕೊಂಡೆ.

'ಹೊಸಾದಾ ಕಾರು' ಅಂದೆ.

'ಹೌದು, ಹೋದ ವರ್ಷ ತೆಗೆದುಕೊಂಡೆವು' ಎಂದಳು ನಗುತ್ತಾ.

'ಪರವಾಗಿಲ್ಲವೇ. ಕಳೆದ ವರ್ಷ ಬಹಳಷ್ಟು ಮನೆಗಳನ್ನು ಕಟ್ಟಿಸಿದ್ದೀರಾ ಅಂತ ಕಾಣಿಸುತ್ತೆ. ಜ್ಯಾಕ್ ಎಂಥಾ ಕಾರು ಇಟ್ಟಿದ್ದಾನೆ. ಅವನೂ ಮರ್ಸೀಡೀಸ?' ಎಂದೆ ನಗುತ್ತಾ.

ಸುಮ್ಮನೆ ನಕ್ಕಳು.

'ನಾನು ಕರೋಲಾನೇ ಓಡಿಸೋದು' ಅಂದೆ. 'ಸದ್ಯಕ್ಕೆ ಮಾತ್ರ, ಆದರೆ, ಇಂತಾ ದೊಡ್ಡ ಮನೆ ಕಟ್ಟಿಸ್ತಾ ಇದೆಯಾ. ಮನೆ ಕಟ್ಟಿದ ಮೇಲೆ ಮನೆಮುಂದೆ ನಿಮ್ಮ ಕರೋಲ ಇಡಬೇಡ. ಮತ್ತೆ, ನಿಮಗೆ ಮನೆಕಟ್ಟಿಕೊಟ್ಟ ನಮ್ಮಗಳ ಮರ್ಯಾದೆ ಹೋಗುತ್ತೆ' ಅಂದಳು ನಗುತ್ತಾ. ನಾನು ಮುಖ ಪೆಚ್ಚಾದ ಹಾಗೆ ಮಾಡಿದೆ.

ಅಷ್ಟರಲ್ಲಿ ಡೇನಿಯೇಲ್‌ಳ ಮೊಬೈಲಿಗೆ ಫೋನು ಬಂತು. ಜ್ಯಾಕ್ ಎಂದು ಕಾಣುತ್ತದೆ. ಅವಳ ಮುಖದಲ್ಲಿ ಜಾಸ್ತಿ ಬದಲಾವಣೆಗಳು ಕಾಣಿಸದಿದ್ದರೂ, ತುಟಿಗಳಲ್ಲಿ ಬಲವಂತದ ನಗುವಿನ ಮಧ್ಯೆ 'ಯಸ್' 'ನೋ' 'ಹನಿ' ಗಳು ಮಾತ್ರವೇ ಇದ್ದರೂ ಕಣ್ಣುಗಳ ಟಾಮಿ ಹಿಲ್‌ಫಿಗರ್ ಏನೋ ಮರೆಮಾಚುತ್ತಿದೆ ಅನ್ನಿಸಿತು. ಜಾಸ್ತಿ ಮಾತಿಲ್ಲದೆ ಫೋನು ಆರಿತ್ತು.

ಒಂದೆರಡು ನಿಮಿಷ ಕಾರಿನಲ್ಲಿ ಮೌನ ಮುಸುಕಿತ್ತು. ನಂತರ ಅವಳೇ 'ಇವತ್ತು ನನ್ನ ಹುಟ್ಟುಹಬ್ಬ' ಅಂದಳು, ನನ್ನಕಡೆ ನೋಡುತ್ತಾ.

'ವಾವ್, ಕಂಗ್ರಾಟ್ಸ್' ಅಂದೆ.

'ಮಾಮೂಲಿಯಾಗಿ ನಾನು ಹುಟ್ಟಿದ ದಿನಾನ ಸೆಲಬ್ರೇಟ್ ಮಾಡೊಲ್ಲ. ಆದರೆ, ಇದು ನನ್ನ ಮೂವತ್ತನೆಯ ಹುಟ್ಟಿದ ಹಬ್ಬ. ಮಕ್ಕಳನ್ನು ಒಬ್ಬಳು ಯಾರೋ ಸಿಟ್ಟರ್ ಹತ್ತಿರ ಬಿಟ್ಟು ನಾವು ಒಂದಿಷ್ಟು ಜನ ದೊಡ್ಡವರು ಡೌನ್‌ಟೌನಿನ ಬಾರೊಂದರಲ್ಲಿ ಸೇರ್ತಾ ಇದೀವಿ' ಅಂದಳು.

'ಮಜಾ ಮಾಡಿ' ಅಂದೆ.

ಒಂದು ನಿಮಿಷ ಏನೋ ಯೋಚಿಸಿ 'ನೀನೂ, ಪುಷ್ಪಾ ಇಬ್ಬರೂ ಬನ್ನಿ, ನನ್ನ ಹುಟ್ಟುಹಬ್ಬಕ್ಕೆ' ಅಂದಳು.

ನಾನು ಕಡೆಯ ನಿಮಿಷದ ಈ ಆಹ್ವಾನವನ್ನು ನಯವಾಗಿಯೇ ನಿರಾಕರಿಸಿದೆ. 'ಇಲ್ಲ, ನನಗೆ ಇವತ್ತು ಕೆಲಸ ಇದೆ. ಪುಷ್ಪಾಳ ಕೆಲಸ ರಾತ್ರಿ ಎಷ್ಟು ಹೊತ್ತಿಗೆ ಮುಗಿಯುತ್ತದೆಯೋ' ಅಂದು ಅನುಮಾನಿಸಿದೆ.

'ಇಲ್ಲ, ನೀವಿಬ್ಬರೂ ಬರಲೇಬೇಕು. ಐ ಇನ್‌ಸಿಸ್ಟ್' ಅಂದಳು.

'ನಾನು ಪುಷ್ಪಾಳನ್ನು ಕೇಳಿ ಹೇಳುತ್ತೇನೆ' ಎಂದು ಜಾರಿಕೊಳ್ಳಲು ಪ್ರಯತ್ನಮಾಡಿದೆ.

'ಈಗಲೇ ಅವಳ ಮೊಬೈಲಿಗೆ ಫೋನು ಮಾಡು' ಅಂದಳು.

ನಾನು ಮೊಬೈಲು ನಂಬರು ಗೊತ್ತಿಲ್ಲ ಎಂದು ನೆವ ಕೊಡಲು ಪ್ರಯತ್ನಿಸಿದೆ. ಆದರೆ, ಅವಳ ಮೊಬೈಲಿನಲ್ಲೇ ಪುಷ್ಪಾಳ ನಂಬರೂ ಇತ್ತು. ಅವಳೇ ಡಯಲ್ ಮಾಡಿಕೊಟ್ಟಳು. ಪುಷ್ಪಾ ಆ ಕಡೆಯಿಂದ ಫೋನು ತೆಗೆದುಕೊಂಡವಳೇ, 'ಕ್ಯಾಬಿನೆಟ್ ಅಂಗಡಿಯಲ್ಲಿದ್ದೀಯಾ' ಎಂದು ವಿಚಾರಿಸಿದಳು. ನಾನು 'ಇವತ್ತು ಡೇನಿಯಲ್‌ಳ ಮೂವತ್ತರ ಹುಟ್ಟಿದ ಹಬ್ಬ. ಅವಳು ಪಾರ್ಟಿಗೆ ಕರೆಯುತ್ತಿದ್ದಾಳೆ, ಹೋಗೋಣವೇ' ಕೇಳಿದೆ. ಪುಷ್ಪಾಳಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. 'ಅವಳೂ ಹತ್ತಿರದಲ್ಲಿಯೇ ಇದ್ದಾಳಾ' ಅಂದಳು. ನಾನು ಕನ್ನಡದಲ್ಲಿ 'ಇಲ್ಲೇ ಪಕ್ಕದಲ್ಲಿಯೇ ಇದಾಳೆ' ಅಂದೆ. 'ಏನಂತೀ, ಹೋಗೋಣವಾ. ಹೇಗಿದ್ರೂ ಅವರುಗಳು ಫ್ಯಾಮಿಲಿ ಟೈಪು' ಅಂದೆ. ಪುಷ್ಪಾ ನಕ್ಕು 'ಸರಿ' ಎಂದಳು. ಫೋನಿಡುವುದಕ್ಕೆ ಮುಂಚೆ 'ಸರಿಯಾಗಿ ಕ್ಯಾಬಿನೆಟ್ಟುಗಳನ್ನು ನೋಡಿ ಸ್ಕೆಚ್ ಹಾಕಿಸಿಕೊಂಡು ಬಾ. ಆಮೇಲೆ ಎರಡೆರಡು ಕೆಲಸ ....' ಎಂದು ನೆನಪಿಸಿದಳು.

*

ರಾತ್ರಿ ಡೌನ್‌ಟೌನಿನ ಯಾವುದೋ ಒಂದು ರೆಸ್ಟುರೆಂಟೋ, ಬಾರೋ, ಮಬ್ಬುಗತ್ತಲೆಯಲ್ಲಿ ನಾವುಗಳು ನಾಲ್ಕು ಜೋಡಿ ಕುಳಿತಿದ್ದೆವು. ಜ್ಯಾಕ್ ಒಂದು ತೆಳುವಾದ ಟೀಶರ್ಟ್ ಹಾಕಿ ಕೂದಲಿಗೆ ಜೆಲ್ ಹಾಕಿ ಹಿಂದೆ ಬಾಚಿದ್ದ. ಡೇನಿಯೇಲ್ ಬಿಳಿಯ ಟ್ಯಾಂಕ್ ಟಾಪ್ ಮತ್ತು ಜೀನ್ಸ್ ಕೆಪ್ರಿ ಹಾಕಿದ್ದಳು. ಒಂಚೂರು ತಂಪು, ಒಂಚೂರು ಬಿಸಿ ಪಾನೀಯಗಳ ಹದ ಮೈಗೇರಿದ ಮೇಲೆ, ಕೇಕು ಕತ್ತರಿಸಿ ಅವರವರ ಜೋಡಿಗೆ ಮತ್ತು ಎಲ್ಲರೂ ಡೇನಿಯೇಲ್‌ಗೆ ತಿನ್ನಿಸಿದ್ದಾಯಿತು. ಇದ್ದಕ್ಕಿದ್ದಂತೆ ಡೇನಿಯೇಲ್ 'ಡ್ಯಾನ್ಸ್ ಮಾಡೋಣ' ಅಂದಳು. ಅಲ್ಲಿ ಕೂತ ಜೋಡಿಗಳಲ್ಲಿ ನನಗೆ ಮತ್ತು ಪುಷ್ಪಾಗೆ ಯಾರೊಬ್ಬರೂ ಗೊತ್ತಿರಲಿಲ್ಲ. ಮೇಲಾಗಿ ಪುಷ್ಪಾ ಒಂದು ಚೂಡಿದಾರ್ ಹಾಕಿಕೊಂಡು ಬಂದಿದ್ದಳು. ಯಾವುದೋ ಡೌನ್‌ಟೌನಿನ ಬಾರಿನಲ್ಲಿ ನಾನು ಮತ್ತು ಪುಷ್ಪಾ ಇಬ್ಬರೂ ಮಧ್ಯದಲ್ಲಿ ನಿಂತು ಫ್ಯಾನ್ಸಿ ಡ್ರೆಸ್ಸಿಗೆ ನಿಂತರೆ ಉಳಿದ ಜೋಡಿಗಳು ತಮ್ಮ ಡ್ಯಾನ್ಸ್ ಎಲ್ಲವನ್ನೂ ಬಿಟ್ಟೂ ನಮ್ಮನ್ನೇ ನೋಡುತ್ತಾ ನಿಲ್ಲಬಹುದು ಎಂದೆನಿಸಿ ನಾವು ಕೂತಲ್ಲೇ ತಾಳ ಹಾಕತೊಡಗಿದೆವು.

ನಾನು ಕುಡಿದದ್ದು ಬರೀ ಎರಡು ಬಿಯರು ಮಾತ್ರ. ಆದರೆ, ಸುತ್ತಲಿನ ಮಬ್ಬು ಬೆಳಕು, ಜ್ಯಾಕ್, ಡೇನಿಯೇಲ್‌ಳ ಸಾಲ್ಸಾ ಡ್ಯಾನ್ಸ್ ಮತ್ತು ಹಿನ್ನೆಲೆ ಸಂಗೀತದಬ್ಬರ ಎಲ್ಲಾ ಸೇರಿ ಯಾಕೋ ಮತ್ತೇರಿದೆ ಎನಿಸುತ್ತಿತ್ತು. ಪುಷ್ಪಾ ಆಲ್ಕೋಹಾಲು ಕುಡಿಯುವುದಿಲ್ಲ. ಒಂದೆರಡು ಬಾರಿ ನಾನು ಬಹಳ ಎಚ್ಚರಿಕೆಯಿಂದ, ಪ್ರೀತಿಯ ಲೇಪವಿರುವ ಒತ್ತಡ ತಂದಾಗ 'ಮತ್ತು ತರಿಸೋದು ಮತ್ತು ನನ್ನ ಹತೋಟಿಯಲ್ಲಿ ನಾನಿಲ್ಲದೇ ಇರುವುದು ಎರಡನ್ನೂ ನಾನು ಯಾವತ್ತೂ ಮಾಡುವುದಿಲ್ಲ. ಮತ್ತಿನ್ನೊಂದು ವಿಷಯ, ಮಕ್ಕಳಾಗೋ ವಯಸ್ಸಿನ ಹೆಂಗಸರನ್ನು ಗೊತ್ತುಗುರಿಯಿಲ್ಲದೆ ಆಲ್ಕೋಹಾಲು ಕುಡಿಯಲಿಕ್ಕೆ ಬಲವಂತ ಮಾಡಿದರೆ, ಆಮೇಲೆ ಹೆಚ್ಚುಕಮ್ಮಿಯಾಗಿ ಹ್ಯಾಂಗೋವರ್ ಇಳಿಯೋದರ ಒಳಗೆ ಬಸಿರಾದರೆ, ನಾಳೆ ಆ ಮಗು ಐವಿ ಲೀಗಿಗೆ ಹೋಗಲಿಲ್ಲ ಅಂತ ಅಮ್ಮಂದಿರು ನಿಮ್ಮಗಳನ್ನು ಸ್ಯೂ ಮಾಡಬಹುದು, ಹುಷಾರು' ಎಂದು ಅಷ್ಟೇ ನವಿರಾಗಿ ತಿರಸ್ಕರಿಸಿದ್ದಳು. 'ಹಾಗಾದರೆ, ನಾನು ಮತ್ತು ತರಿಸೋದಿಲ್ಲವಾ?' ಎಂದು ಕೇಳಿದ್ದೆ. 'ಅದಕ್ಕೇ ಮದುವೆಯಾದ ಮೊದಲ ಎರಡು ವರ್ಷಗಳಲ್ಲಿ ಮಾಡಿದ್ದನ್ನೆಲ್ಲಾ ನನ್ನ ಧೈರ್ಯದಿಂದ ಅಳಿಸಿಹಾಕಿದ್ದು' ಅಂದಿದ್ದಳು. ಸರಿಯಾಗಿ ಅರ್ಥವಾಗದಿದ್ದುದ್ದಕ್ಕೆ ಕಾರಣ ಅಂದು ಕುಡಿದ ಅಗ್ಗದ ಬಿಯರು ಅಂದುಕೊಂಡಿದ್ದೆ.

ಮೂರನೆಯ ಬಿಯರು ಕೊಂಡುಕೊಳ್ಳುವುದಕ್ಕೆ ಕೌಂಟರಿನ ಬಳಿ ಹೋಗಿದ್ದಾಗ ಅಲ್ಲೇ ಸಿಕ್ಕ ಇನ್ನೊಂದು ಅತಿಥಿ ಜೋಡಿಯ ಗಂಡಿನ ಜತೆ ಮಾತಾಡುತ್ತಾ ನಿಂತಿದ್ದೆ. ಜ್ಯಾಕ್, ಡೇನಿಯೇಲ್ ಇಬ್ಬರೂ ಸಾಲ್ಸಾ ಮುಗಿಸಿ, ಈಗ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದರು. ಮಂದವಾದ ನೀಲಿ ಬೆಳಕು ಡೇನಿಯೇಲ್‌ಳ ಮುಖದ ಮೇಲೆ ಬಿದ್ದಿತ್ತು. ಮುಖದಲ್ಲಿ ಯಾಕೋ ನಗು ಕಾಣಿಸಲಿಲ್ಲ. ಕಣ್ಣುಗಳು ತುಂಬಿಕೊಂಡಿದ್ದಾವೆ ಅನ್ನಿಸಿತು. ಅಷ್ಟರಲ್ಲಿ ಆ ಸಂಗೀತದ ಅಬ್ಬರದ ಹಿನ್ನೆಲೆಯಲ್ಲೂ ಜ್ಯಾಕ್‌ನ ಮೊಬೈಲು ರಿಂಗುಣಿಸಿದ್ದು ನನಗೂ ಕೇಳಿಸಿತು. ಜ್ಯಾಕ್ ಅವಳನ್ನು ಅಲ್ಲೇ ಬಿಟ್ಟು ಹೊರಗೆ ಹೊರಟ. ಹೋಗುವ ಮುನ್ನ ಫೋನು ಮುಚ್ಚಿ, ನನಗೆ 'ಮ್ಯಾಕ್‌ನ ಫೋನು' ಎಂದು ಹೇಳಿ ಹೋದ. ಥತ್ತೇರಿ, ಈ ಸೂಳೆಮಗ ಹೆಂಡತಿಯ ಹುಟ್ಟಿದ ಹಬ್ಬದಲ್ಲೂ ವ್ಯವಹಾರ ಬಿಡುವುದಿಲ್ಲವಲ್ಲ ಅನ್ನಿಸಿತು. ಅಷ್ಟರಲ್ಲಿ ಡೇನಿಯೇಲ್ ನನ್ನ ಹತ್ತಿರ ಬಂದು 'ಬಾ, ಒಂದೆರಡು ಹೆಜ್ಜೆ ಹಾಕು' ಅಂದಳು. ನಾನು 'ಸಾಧ್ಯವೇ ಇಲ್ಲ' ಎಂದು ಪುಷ್ಪಾಳ ಮುಖ ನೋಡಿದೆ. ಪುಷ್ಪಾ ಎಂದೂ ಇಲ್ಲದವಳು ಅಂದು 'ಕಮಾನ್, ಪಾಪ ಹುಟ್ಟುಹಬ್ಬದ ಹುಡುಗಿಗೆ ನೀವೆಲ್ಲರೂ ಮೋಸ ಮಾಡ್ತಾ ಇದೀರಿ. ಆತ ನೋಡಿದ್ರೆ, ಯಾರದೋ ಫೋನು ತಗೊಳಕ್ಕೆ ಹೋದ. ನೀನೂ ಒಂದೆರಡು ಹೆಜ್ಜೆ ಹಾಕೋಕೆ ಹಿಂದೆ ಮುಂದೆ ನೋಡ್ತಿದೀಯ. ಯಾರೂ ಇಲ್ಲದಿದ್ದರೆ, ನಾನೇ ಬರಬೇಕಾಗುತ್ತೆ' ಎಂದು ಕಣ್ಣು ಹೊಡೆದಳು. ಇವತ್ತು ಯಾರಿಗೋ ಗ್ರಹಚಾರ ಕಾದಿದೆ ಎಂದುಕೊಂಡು ಸುಮ್ಮನೆ ಡೇನಿಯಲ್‌ಳ ಸೊಂಟ ಬಳಸಿ ಹೆಜ್ಜೆ ಹಾಕಲು ಶುರುಮಾಡಿದೆ.

ಆಕೆ ಹಾಕಿದ್ದ ಎಂತದೋ ಸುಗಂಧ ಮೂಗಿಗೆ ಅಡರುತ್ತಿತ್ತು. ಸುಮ್ಮನೇ ಮಾತಿಲ್ಲದೆ ಹೆಜ್ಜೆ ಹಾಕುತ್ತಿದ್ದಳು. ನಾನು ನನಗೆ ಗೊತ್ತಿದ್ದ ಹಾಗೆ ಹೆಜ್ಜೆಹಾಕಲು ಪ್ರಯತ್ನಿಸುತ್ತಿದ್ದೆ. ಡ್ಯಾನ್ಸ್‌ನ ಯಾವುದೋ ಒಂದು ವರಸೆಯೆಂಬಂತೆ ನನ್ನ ಹೆಗಲಿಗೆ ಒಮ್ಮೆ ಒರಗಿದಳು. ನನ್ನ ಭುಜ ಒದ್ದೆಯಾದಂತೆ ಅನ್ನಿಸಿತು. ಏನು ಮಾಡಬೇಕೆಂದು ಗೊತ್ತಾಗದೇ ಸುಮ್ಮನೆ ಆಕಡೆ ಈಕಡೆ ಹೆಜ್ಜೆ ಹಾಕುತ್ತಿದ್ದೆ. ಎಂತ ತಾಪತ್ರಯವೋ ಅವರದ್ದು ಸುಮ್ಮನೆ ನನ್ನನ್ನು ಇವರಿಬ್ಬರ ಮಧ್ಯೆ ಸಿಲುಕಿಸಿದ ಪುಷ್ಪಾಳ ಮೇಲೆ ಸಿಟ್ಟು ಬಂತು. ಅವಳ ಕಡೆ ನೋಡಿದರೆ ಸುಮ್ಮನೆ ನಾನು ಹೆಜ್ಜೆ ಹಾಕುವುದನ್ನು ನೋಡುತ್ತಾ ನಗುತ್ತಿದ್ದಳು. ಅಷ್ಟರಲ್ಲಿ ಸಂಗೀತ ನಿಂತಿತು. ನಾನು ಡೇನಿಯೇಲ್‌ಳ ಕೈ ಬಿಡಿಸಿಕೊಂಡು ಹೊರಟೆ. 'ಒಂದು ನಿಮಿಷ' ಎಂದು ತಡೆದು ನಿಲ್ಲಿಸಿದಳು. ಮುಖ ನೋಡಿದೆ. 'ಮನೆಯ ಛಾವಣಿ ನಿಜವಾಗಿಯೂ ಅಷ್ಟೆತ್ತರ ಇರಬೇಕಾ' ಎಂದು ಕೇಳಿದಳು. ಅವಳ ಮುಖ ದುರುಗುಟ್ಟಿಕೊಂಡು ನೋಡಿ ಪುಷ್ಪಾಳ ಕೈಹಿಡಿದು ಹೊರಗೆ ಹೊರಟೆ.

ದಾರಿಯುದ್ದಕ್ಕೂ ಪುಷ್ಪಾಳನ್ನು ಮನಸ್ಸಿಗೆ ಬಂದಂತೆ ಬಯ್ಯುತ್ತಿದ್ದೆ. ಮನೆಯ ಛಾವಣಿಯ ಎತ್ತರ ಇಳಿಸಲು, ಬೇಕಾದರೆ ಡೇನಿಯೇಲ್ ಡ್ಯಾನ್ಸ್ ಕೂಡಾ ಮಾಡ್ತಾಳಂದೆ. ಅವಳು ಅಳುತ್ತಾ ಇದ್ದಳೆಂದು ಹೇಳಿದ್ದಕ್ಕೆ ಪುಷ್ಪಾ ಕಾಗಕ್ಕ, ಗುಬ್ಬಕ್ಕನ ಕಥೆ ಎಂದುಬಿಟ್ಟಳು. ಅವಳಿಗೆ ಅಳೋದಕ್ಕೇನಾಗಿದೆ ಎಂದು ನಕ್ಕುಬಿಟ್ಟಳು. ನಾನು ಚೆನ್ನಾಗಿ ಡ್ಯಾನ್ಸ್ ಮಾಡ್ತೀನೆಂದಳು. ಮನೆಗೆ ಹೋದವನೇ ಪುಷ್ಪಾಳನ್ನು ಸೀದಾ ಬೆಡ್‌ರೂಮಿಗೆ ಕರಕೊಂಡು ಹೋಗಿ ಎಗ್ಗಿಲ್ಲದಂತೆ ನುಜ್ಜುಗುಜ್ಜು ಮಾಡಿದೆ. ಅವಳೂ ಮನಸಾರೆ ಎಳೆದೆಳೆದಳು. ಒಬ್ಬರನ್ನೊಬ್ಬರು ಅಂಟಿಕೊಂಡೇ ಮಲಗಿದೆವು.

*

ಮನೆ ನಾವಂದುಕೊಂಡಂತೇ ಏಳುತ್ತಿತ್ತು. ಅಡುಗೆಮನೆಯ ದೇವಮೂಲೆಯಲ್ಲಿ ಹಾಕಬೇಕೆಂದಿದ್ದ ಕ್ಲಾಸೆಟ್ಟನ್ನು ಮನೆಯ ಮಧ್ಯದಲ್ಲಿ ಇಡಿಸಿದರೆ ಅದು ದೇವರಮನೆಯ ವಾಸ್ತುವಿಗೂ ಸರಿಹೋಗುತ್ತದೆ ಮತ್ತು ಮನೆ ಮಾರಬೇಕಾದರೆ, ಹೋದವರಿಗೆ ಬಂದವರಿಗೆ ಕೋಟುಗಳನ್ನು ನೇತುಹಾಕಲು ಎರಡನೆಯ ಕ್ಲಾಸೆಟ್ಟಾಗಿ ಅದನ್ನು ಉಪಯೋಗಿಸಿಕೊಳ್ಳಬಹುದು ಮತ್ತು ಮನೆಯ ಒಟ್ಟಾರೆ ಅಂದ ಈ ಕ್ಲಾಸೆಟ್ಟಿನಿಂದ ಕೆಟ್ಟು ಹೋಗುವುದಿಲ್ಲವೆಂದು ಡೇನಿಯೇಲ್ ಕೊಟ್ಟ ಸಲಹೆ ಪುಷ್ಪಾಳಿಗೆ ಸ್ವಲ್ಪಮಟ್ಟಿಗಾದರೂ ಒಪ್ಪಿಗೆಯಾಗಿತ್ತು. ಇನ್ನೊಂದೆರಡು ದೇವಸ್ಥಾನಗಳಿಗೆ ಮತ್ತು ನ್ಯೂಜರ್ಸಿಯ ತನ್ನ ಇಬ್ಬರು ಸ್ನೇಹಿತೆಯರಿಗೆ ಫೋನು ಮಾಡಿ ಈ ಪ್ಲಾನಿಗೆ ಒಪ್ಪಿಕೊಂಡಿದ್ದಳು. ನಾಲ್ಕಡಿ ಮೂರಡಿಯ ಕ್ಲಾಸೆಟ್ ಮನೆಯ ಮಧ್ಯದಲ್ಲಿ ಸಿದ್ಧವಾಯಿತು. ಗೋಡೆಗಳ ಹಲಗೆಗಳನ್ನು ಹೊಡೆಯದೆ, ಇನ್ನೂ ಅಸ್ಥಿಗಳು ಮಾತ್ರ ಇದ್ದಾಗ, ಡೇನಿಯೇಲ್ ಬಂದು ನೋಡಿ ಪುಷ್ಪಾಳನ್ನು ಕೇಳಿದ್ದಳು.

'ನೀವುಗಳು ನಿಜವಾಗಿಯೂ ಈ ನಾಲ್ಕಡಿ ಮೂರಡಿ ಕ್ಲಾಸೆಟ್ಟಲ್ಲಿ ಕೂತುಕೊಂಡು ದೇವರ ಪೂಜೆ ಮಾಡ್ತೀರಾ?' ಎಂದು. ಪುಷ್ಪಾಳಿಗೆ ಮತ್ತೆ ಸಿಟ್ಟು ಬಂದರೂ ಒಬ್ಬರನಂತರ ಇನ್ನೊಬ್ಬರು ಕೂತುಕೊಂಡು ಪೂಜೆ ಮಾಡ್ತೀವಿ ಎಂದು ಹಾರಿಕೆಯ ಉತ್ತರ ಕೊಟ್ಟಳು.

ಗ್ರಾನೈಟು, ಕ್ಯಾಬಿನೆಟ್ಟು, ಕಿಟಕಿಗಳು ನೆಲ ಎಲ್ಲವೂ ನಾವೇ ಹೋಗಿ ಆರಿಸಿದ್ದಕ್ಕೋ ಏನೋ ನಾವು ಯಾವ ರೀತಿಯೂ ಬೇಜಾರು ಮಾಡಿಕೊಳ್ಳದ ರೀತಿಯಲ್ಲಿ ಮನೆ ಆಗುತ್ತಿತ್ತು. ದಿನಾ ಹೋಗಿ ಒಂದೊಂದು ದಿನ ಒಂದೊಂದು ಆಕಾರ ಪಡೆದುಕೊಳ್ಳುತ್ತಿದ್ದ ಮನೆಯನ್ನು ನೋಡಿ ನೋಡಿ ಖುಷಿಯಾಗುತ್ತಿತ್ತು. ಗಾಜಿಲ್ಲದ ಕಿಟಕಿಗಳು ಇದ್ದಕ್ಕಿದ್ದಂತೆ ಒಂದು ದಿನದಲ್ಲಿ ಗಾಜುಗಳನ್ನು ತುಂಬಿಕೊಂಡಾಗ, ಮನೆಯ ಛಾವಣಿ ಬರೇ ಬೋಳುಬೋಳು ಮರದಿಂದ ಇದ್ದಕ್ಕಿದ್ದಂತೆ ನಮಗೆ ಬೇಕಾದ ಬಣ್ಣಗಳಿಂದ ನಳನಳಿಸಲು ತೊಡಗಿದಾಗ, ಗ್ರಾನೈಟು ಜೋಡಿಸುವಾಗ, ಗೋಡೆಯೊಳಗಿಂದ ಮಲ್ಟಿಮೀಡಿಯಾಕ್ಕೆ ಅನುಕೂಲವಾಗಲೆಂದು ಬಾಗುವ ಟ್ಯೂಬುಗಳನ್ನು ಮುಂದೆ ಎಲಕ್ಟ್ರಿಷಿಯನ್ ಗೋಡೆಯ ಸಂದಿಯಿಂದ ತೂರಿಸುವಾಗ, ಪುಷ್ಪಾ ಆ ಟ್ಯೂಬೊಳಗೆ ಊದೂದಿ ಮಕ್ಕಳಂತೆ ಕುಣಿಯುತ್ತಾ ಸಂತೋಷಪಡುತ್ತಿದ್ದಳು. ಈ ಸಂತೋಷ ಅಡಿಪಾಯದಿಂದ ಅಸ್ಥಿ, ಅಸ್ಥಿಯಿಂದ ಗೋಡೆ, ಗೋಡೆಯಿಂದ ಬಣ್ಣ, ಬಣ್ಣದಿಂದ ಸೊಕ್ಕಿನ ಐಟಂಗಳಾದ ಫ್ಲೈರ್‌ಪ್ಲೇಸ್, ಗ್ರಾನೈಟಿನ ಕೌಂಟರ್ಟಾಪು, ಹಿಂದಿನ ಲಾನು ಇತ್ಯಾದಿ ಇತ್ಯಾದಿಗಳಿಗೆ ಮೂರ್ಮಡಿಯಾಗುತ್ತಿತ್ತು. ನಾನು ಹೋಗಿ, ಹೋಗಿ ಮನೆಯ ವಿಧವಿಧ ಫೋಟೋಗಳನ್ನು ಡಿಜಿಟಲ್ ಆಗಿ ಸೆರೆಹಿಡಕೊಂಡು ಬರುತ್ತಿದ್ದೆ. ಆಗಾಗ್ಗೆ ಜ್ಯಾಕ್ ಮನೆಯ ಖರ್ಚು ಜಾಸ್ತಿ ಆಗುತ್ತಾ ಇದೆ, ಸ್ವಲ್ಪ ನೋಡಿಕೊಂಡು ಮುಂದುವರಿಯುವುದು ಒಳ್ಳೆಯದು ಎಂದು ಎಚ್ಚರಿಸುತ್ತಿದ್ದ.

ಈ ಕಳೆದ ಮೂರು ತಿಂಗಳಲ್ಲಿ ನಾನು ಪುಷ್ಪಾ ಒಬ್ಬರಿಗೊಬ್ಬರು ಕೂತು ಮಾತಾಡಿ, ಜೊತೆಯಲ್ಲಿ ಊಟಮಾಡಿದ್ದು ನೆನಪಿಗೇ ಬಂದಿರಲಿಲ್ಲ. ಆದರೆ, ಪುಷ್ಪಾ ಯಾಕೋ ಒಂದೆರೆಡಿಂಚು ದಪ್ಪ ಆಗಿದ್ದಾಳೆ ಅನಿಸಿತು. ಕೇಳಬೇಕೆನ್ನಿಸಿದರೂ, ಇರಲಿ ಎಂದುಕೊಂಡು ಸುಮ್ಮನಾದೆ. ಏನೋ ಒಂದು ಯೋಚನೆ ತಲೆಯಲ್ಲಿ ಮಿಂಚಿಹೋದರೂ, ಒಂದೆರಡು ದಿನ ಸುಮ್ಮನಿದ್ದೆ. ಆಮೇಲೆ, ತಡಕೊಳ್ಳಲಾಗದೇ 'ಪುಷ್ಪಾ, ಏನಾದರೂ ವಿಷಯ ಇದೆಯಾ?' ಕೇಳಿದೆ. 'ಏನೂ ಇರೋ ಹಾಗಿಲ್ವಲ್ವಲ್ಲ. ನಮ್ಮದು ಕಡೇ ಬಾರಿ ಯಾವಾಗ ಹೇಳು' ಎಂದುಕೊಂಡು ಮನೆಯಲ್ಲೇ ತನ್ನ ಚಕ್ರಗಳನ್ನು ಲೆಕ್ಕ ಹಾಕತೊಡಗಿದ್ದಳು. 'ಅಷ್ಟೆಲ್ಲಾ ಕಷ್ಟ ಯಾಕೆ ಮಾರಾಯ್ತಿ, ಹೋಗಿ ಒಂದು ಟೆಸ್ಟು ಮಾಡಿಕೊಂಡು ಬಾ' ಎಂದು ತಂದುಕೊಟ್ಟೆ. ಎರಡು ನಿಮಿಷದ ನಂತರ ಹೊರಗೆ ಬಂದು 'ಸದ್ಯ ನೆಗಟೀವ್' ಅಂದಳು. ನಾನೂ 'ಸದ್ಯ' ಎಂದೆ. ಒಂದು ನಿಮಿಷ ಆದಮೇಲೆ, ನನ್ನ ಭುಜದಮೇಲೆ ಒರಗಿ ಬಿಕ್ಕಿದಳು, ಪುಷ್ಪಾ. ನಾನು ಸುಮ್ಮನೆ ತಲೆ ನೇವರಿಸುತ್ತಿದ್ದೆ. ಆದರೆ, ಈ ಮನೆ ಜನಗಳ ನಡುವೆ ಆ ಸಂಭವದ

ಸಾಧ್ಯತೆಯಿದ್ದದ್ದನ್ನು ಯೋಚಿಸಿಯೇ, ಒಟ್ಟಿಗೆ ಊಟಮಾಡಲಿ, ತಿಂಡಿತಿನ್ನಲಿ ಇಬ್ಬರಿಗೂ ಒಂದೇವೇಳೆಯಲ್ಲಿ ರಾತ್ರಿಯಾಗುತ್ತವೆ ಎಂದನ್ನಿಸಿ ಸ್ವಲ್ಪ ಖುಷಿಯಾಯಿತು. ಪುಷ್ಪಾಳನ್ನು ಯಾವುದೋ ಹೊರಗೆ ರೆಸ್ಟುರೆಂಟಿಗೆ ಊಟಕ್ಕೆ ಕರಕೊಂಡು ಹೋದೆ.

*

ಮನೆಗೆ ಎಲಕ್ಟ್ರಿಷಿಯನ್ ಬರುತ್ತಾನೆ, ಬೆಳಿಗ್ಗೆ ಎಂಟು ಗಂಟೆಗೇ ಇಬ್ಬರೂ ಬಂದು ಎಲಕ್ಟ್ರಿಕ್ ಪಾಯಿಂಟುಗಳು ಎಲ್ಲೆಲ್ಲಿ ಬೇಕು ಅನ್ನುವುದನ್ನು ಹೇಳಿಹೋಗಿ -- ಎಂದು ಜ್ಯಾಕ್ ಫ಼ೋನ್ ಮಾಡಿದ್ದ. ನಾನೊಬ್ಬನೇ ಹೋಗಿದ್ದೆ. ಅವತ್ತೂ ಬೆಳಿಗ್ಗೆ ಪುಷ್ಪಾ ಎದ್ದವಳೇ ಸ್ವಲ್ಪ ಸುಸ್ತು ಎಂದವಳು ಬೇಗನೇ ಆಫ಼ೀಸಿಗೆ ಹೋಗಿದ್ದಳು. ಎಲಕ್ಟ್ರಿಕ್ ಪಾಯಿಂಟುಗಳ ವಿಚಾರವನ್ನು ಪೂರಾ ನನಗೇ ಬಿಟ್ಟಿದ್ದಳು. ನಾನು ಹೋಗಿ ಎಲಕ್ಟ್ರಿಷಿಯನ್ ಜತೆ ಪಾಯಿಂಟುಗಳು ಎಲ್ಲೆಲ್ಲಿ ಇದ್ದರೆ ಅನುಕೂಲ ಎಂದು ಚರ್ಚೆ ಮಾಡುತ್ತಿದ್ದಾಗ, ಇದ್ದಕ್ಕಿದ್ದಂತೆ ನಾವು ಹೇಳಿದ್ದ ಲಿವಿಂಗ್ ರೂಮು ಮತ್ತು ಡೈನಿಂಗ್ ರೂಮಿನ ನಡುವೆ ಬರಬೇಕಾಗಿದ್ದ ಎರಡು ಸಣ್ಣ ಕಂಭಗಳು ಇನ್ನೂ ಇರದಿರುವುದು ನನ್ನ ಗಮನಕ್ಕೆ ಬಂದಿತು. ಆದರೆ, ಮನೆಯ ಒಳಗೋಡೆಗಳೆಲ್ಲಾ ಆದಮೇಲೆ ಕೊನೆಗೆ ಆ ಕಂಭಗಳನ್ನು ಇಡುತ್ತಾರೇನೋ ಎಂದು ಸುಮ್ಮನಾದೆ. ಯಾವುದಕ್ಕೂ ಇರಲಿ ಎಂದು ಜ್ಯಾಕ್‌ಗೆ 'ಆ ಕಂಭಗಳನ್ನು ಯಾವಾಗ ಇಡ್ತೀರಾ?' ಕೇಳಿದೆ.

'ಯಾವ ಕಂಭಗಳು?' ಕೇಳಿದ ಜ್ಯಾಕ್. ಮತ್ತೊಮ್ಮೆ ನೆನಪಿಸಿದೆ. ಮರೆತು ಹೋದವನಂತೆ 'ನನ್ನ ಹತ್ತಿರ ಇರುವ ಬ್ಲೂಪ್ರಿಂಟಿನ ಕಾಪಿಯಲ್ಲಿ ಯಾವ ಕಂಭವೂ ಇಲ್ಲವಲ್ಲ' ಎಂದು ಬ್ಲೂ ಪ್ರಿಂಟು ಬಿಚ್ಚಿದ. ನನಗೆ ರೇಗಿ ಹೋಯಿತು. ನನ್ನ ಬ್ಲೂಪ್ರಿಂಟನ್ನು ಕಾರಿನಿಂದ ತಂದು ತೋರಿಸಿದೆ. 'ನೋಡು, ಒರಿಜಿನಲ್‌ನಲ್ಲಿ ಇರಲಿಲ್ಲ. ಆದರೆ, ನಾವು ಮಾತಾಡಿದಾಗ ನೀನೇ ನಿನ್ನ ಕೈಯಾರೆ ಪೆನ್ಸಿಲ್‌ನಿಂದ ಬರಕೊಟ್ಟಿದೀಯಾ' ತೋರಿಸಿದೆ. 'ನನಗೆ ನೆನಪಿಲ್ಲ' ಎಂದಂದು 'ಒಂದು ನಿಮಿಷ ತಾಳು, ಮ್ಯಾಕ್‌ನ ಜತೆ ಮಾತಾಡಿ ನೋಡ್ತೀನಿ. ಅವನ ಬ್ಲೂಪ್ರಿಂಟಿನ ಕಾಪಿಯಲ್ಲೇನಾದರೂ ಸೇರಿಕೊಂಡಿದೆಯೋ, ಕೇಳ್ತೀನಿ' ಎಂದು ಹೊರಗೆ ಹೋಗಿ ಫ಼ೋನು ಮಾಡಿ ಬಂದ. 'ಮ್ಯಾಕ್‌ಗೂ ನೆನಪಿಲ್ಲ. ಅವನ ಬ್ಲೂಪ್ರಿಂಟಿನ ಮೇಲೂ ಯಾವ ರೀತಿಯ ಕಂಭಗಳೂ ಇಲ್ಲ. ನಿನಗೆ ಆ ಕಂಭ ಬೇಕಾದರೆ, ಸಾವಿರದೈನೂರು ಹೆಚ್ಚುಕೊಡಬೇಕಾಗುತ್ತದೆ' ಅಂದ.

ನನಗೆ ಇನ್ನು ತಡೆಯಲಾಗಲಿಲ್ಲ. 'ನೋಡು, ಜ್ಯಾಕ್ ನಿಮ್ಮಗಳ ಮಧ್ಯ ಅದೇನು ಮಾತಾಗುತ್ತದೆ ಎಂದು ನನಗಂತೂ ತಿಳಿದಿಲ್ಲ. ನನ್ನ ಬ್ಲೂಪ್ರಿಂಟಿನ ಮೇಲೆ ನೀನೇ ಬರೆದಿದ್ದೀಯ. ನೀನು ಇಲ್ಲ ಅಂದರೆ, ನಾನು ಬರಕೊಂಡು ತಂದಿದೀನಿ ಅಂತ ಹೇಳ್ತಾ

ಇರೋಹಾಗೆ ಅನ್ನಿಸುತ್ತೆ. ನಾನು ಆತರಾ ಮಾಡೋನಲ್ಲ. ಮುಖ್ಯವಾಗಿ ನಿನಗೂ ನಿನ್ನ ಆ ಬಿಲ್ಡರ್ ಮ್ಯಾಕ್‌ಗೂ ಸರಿಯಾಗಿ ಮಾತುಕತೆ ನಡೀತಾ ಇಲ್ಲ ಅನ್ನಿಸುತ್ತೆ. ನಾನು ಮಾತಾಡ್ತೀನಿ ಅವನ ಜತೆ, ನೇರವಾಗಿ ಮಾತಾಡಿಸು ಅಂದರೆ, ಆತ ಎದುರಿಗೂ ಬರೋದಿಲ್ಲ ಅಂತಾನೆ. ನೀವೂ ಸಾಕು, ನಿಮ್ಮ ಸಹವಾಸವೂ ಸಾಕು. ನಾನು ಕೊಟ್ಟಿರೋ ಎರಡುಸಾವಿರ ಹೋದರೆ ಹೋಗಲಿ, ನಮಗೆ ಈ ಮನೆ ಬೇಡ. ನೀನೇ ಯಾರಿಗಾದರೂ ಮಾರಿಕೊ' ಎಂದು ಕೂಗಿದೆ. ಎಲಕ್ಟ್ರಿಷಿಯನ್ ಅವನ ಕೆಲಸ ಮಾಡಲೋ ಬೇಡವೋ ಎನ್ನುವಂತೆ ನಮ್ಮಿಬ್ಬರ ಮುಖವನ್ನೂ ನೋಡಿದ.

ಇಲ್ಲಿ ಮನೆ ಕಟ್ಟೋದರಲ್ಲಿ ಇರೋ ಅನುಕೂಲದ ಬಗ್ಗೆ ನನಗೆ ಈತರದ ಖುಷಿ ಇತ್ತು. ಮನೆಯ ಬ್ಲೂಪ್ರಿಂಟು ತಯಾರಾದ ಮೇಲೆ ಎರಡು ಸಾವಿರ ಡಾಲರ್‌ಗಳ ಅಡ್ವಾನ್ಸ್ ಕೊಟ್ಟಮೇಲೆ, ಮನೆಯನ್ನು ಕಟ್ಟಿಯಾದ ಮೇಲೆ ಹೀಗೆ ನಡುವೆ ಏನಾದರೂ ಕಿರಿಕ್ಕಾದರೆ, ಮನೆಯೇ ಬೇಡ ಎಂದು ಬಿಟ್ಟುಹೋಗಬಹುದು. ನಾನು ಈಗ ಈ ಮನೆಯನ್ನು ಬೇಡ ಅಂದರೆ, ಮನೆಯನ್ನು ಮಾರಿಕೊಡುವ ಹೊಣೆ ರಿಯಲ್ಟರ್ರ್ದು. ನಾನು ಮತ್ತು ಪುಷ್ಪಾ ನಮಗೆ ಬೇಕಾದ ಹಾಗೆ ನಾವು ಮನೆ ಕಟ್ಟಿಸಿಕೊಂಡಿದ್ದೆವು. ಮಧ್ಯದಲ್ಲಿ ದೇವರಮನೆ ಬೇರೆ ಇತ್ತು. ಈಗ ನಾನು ಈ ಮನೆ ಬೇಡ ಎಂದರೆ, ಈ ಮನೆಯನ್ನು ಮಾರುವುದು ಅಷ್ಟೇನೂ ಸುಲಭದ ಮಾತಾಗಿರಲಿಲ್ಲ, ಜ್ಯಾಕ್‌ಗೆ.

ಹೊರಗೆ ಹೋಗಿ ಮ್ಯಾಕ್‌ನ ಜತೆ ಫೋನಿನಲ್ಲಿ ಮಾತಾಡಿ ಬಂದ. ನಾನು ಒಳಗಿನಿಂದಲೇ ನೋಡುತ್ತಿದ್ದೆ. ಅವನ ಮುಖದ ಬಣ್ಣಗಳು ಬದಲಾಗುತ್ತಿದ್ದವು. ಅವರಿಬ್ಬರ ನಡುವೆ ಅದೇನು ಮಾತುಕತೆಯಾಯಿತೋ ನನಗಂತೂ ತಿಳಿಯಲಿಲ್ಲ. ಒಳಗೆ ಬಂದು 'ಈಗ ಆಗಿರೋ ಕೆಲಸ ನೋಡಿದರೆ ನೀನು ಹೇಳಿದ ಕಂಭ ಕಟ್ಟೋಕೆ ಆಗೊಲ್ಲ. ಯಾಕಂದರೆ ಮತ್ತೆ ಆ ಕಂಭಗಳನ್ನು ನಿಲ್ಲಿಸೋಕೆ ಗೋಡೆ ಒಡೆಯಬೇಕು. ಒಂದಕ್ಕೆ ಎರಡು ಕೆಲಸ ಆಗುತ್ತೆ. ಆದ್ದರಿಂದ ಕಂಭಗಳನ್ನು ಹಾಕೋಕಂತೂ ಆಗೋಲ್ಲ. ಬೇಕಾದರೆ, ಕೊನೆಯ ಬಿಲ್‌ನಲ್ಲಿ ಏಳುನೂರು ಡಾಲರ್ ಕಡಿಮೆ ಮಾಡಿಕೋತಾನಂತೆ' ಎಂದ. ನಾನು 'ಇದೆಂತಾ ನ್ಯಾಯಾನಯ್ಯ. ನೀನು ಕಂಭ ಕಟ್ಟೋಕೆ ಸಾವಿರದೈನೂರು ಡಾಲರ್ ಈಗ ತಾನೇ ನನ್ನ ಹತ್ರ ಕೇಳೀದೀಯ. ಅದೇ ಕಂಭ ಕಟ್ಟದೇ ಇದ್ದರೆ, ನನಗೆ ಏಳುನೂರು ಡಾಲರ್ ಬಿಡ್ಕೊಡ್ತೀಯ. ಕಟ್ಟಿದ್ದರೆ ಕಂಭಗಳನ್ನು ಕಟ್ಟಿಕೊಡು. ಇಲ್ಲದಿದ್ದರೆ, ಸಾವಿರದೈನೂರಕ್ಕಿಂತಾ ಒಂದು ಸೆಂಟನ್ನೂ ಕಮ್ಮಿ ಇಸ್ಕೊಳಲ್ಲ' ಎಂದವನೇ ಹೊರಗೆ ಬಂದೆ.

ಈ ವ್ಯವಹಾರ ಸಾಕಾಗಿಹೋಗಿತ್ತು. ಪ್ರತಿಯೊಂದು ವಿಷಯದಲ್ಲೂ, ಪ್ರತಿಯೊಂದು ಹಂತದಲ್ಲೂ ಏನಾದರೂ ತಾಪತ್ರಯಗಳು. ನಾವಂದುಕೊಂಡಷ್ಟು ಸುಲಭವಾಗಿ ಏನೂ ನಡೆದಿರಲಿಲ್ಲ. ವಾಸ್ತುವಿನಿಂದ ಶುರುವಾಗಿ ಮನೆಯ ಕಿಟಕಿಗಳವರೆಗೂ ಒಂದಲ್ಲ ಒಂದು

ತೊಂದರೆ ಇದ್ದೇ ಇತ್ತು. ನನಗೆ ತಲೆ ಕೆಟ್ಟುಹೋದ ಹಾಗಾಗಿತ್ತು. ಕಾರಿನಿಂದಲೇ ಪುಷ್ಪಾಳಿಗೆ ಫೋನು ಮಾಡಿ ನಮ್ಮ ಡೈನಿಂಗ್ ರೂಮಿನ ಕಂಭಗಳ ವಿಷಯ ಹೇಳಿದೆ. ನನ್ನ ನಿಸ್ಸಹಾಯಕತೆಯನ್ನೂ ಮತ್ತು ನಾನು ಜೋರುಮಾಡಿದ್ದನ್ನೂ ಭಡಭಡ ಮಾಡಿಕೊಂಡು ಒಂದೆರಡು ನಿಮಿಷ ಮಾತಾಡುತ್ತಿದ್ದೆ. ಯಾಕೋ ಆಕಡೆಯಿಂದ ಏನೂ ಮಾತೇ ಬರಲಿಲ್ಲ. 'ಯಾಕೆ ಮಾತಾಡುತ್ತಿಲ್ಲ?' ಎಂದು ಕೇಳಿದೆ. ಪುಷ್ಪಾ 'ನಾನು ಈಗ ಬಾತ್‌ರೂಮಿನಲ್ಲಿದ್ದೇನೆ. ನನಗೆ ಏಳುವಾರ ಆಯಿತು ಪಿರಿಯಡ್ಸ್ ಆಗಿ. ಇವತ್ತಿನ ಟೆಸ್ಟ್ ಪಾಸಿಟಿವ್ ಬಂದಿದೆ. ನೀನು ಎಲ್ಲ ಕೆಲಸ ಬಿಟ್ಟು ಆಫೀಸಿಗೆ ಬಾ' ಎಂದಳು, ಅಳುತ್ತಾ. 'ಪುಷ್ಪಾ ಸರಿ, ಅಳೋದೇನಾಗಿದೆ ಈಗ. ನಾ ಬರ್ತೀನಿ, ಈಗಲೇ. ಒಳ್ಳೇ ವಿಷಯ ಅಲ್ವಾ. ಇರಲಿ, ನಾ ಬಂದೆ' ಎಂದು ಕಾರನ್ನು ಪುಷ್ಪಾಳ ಆಫೀಸಿನ ಕಡೆಗೆ ತಿರುಗಿಸಿದೆ.

ಜ್ಯಾಕ್‌ನಿಂದ ಮತ್ತೆ ಫೋನು ಬಂತು. 'ಇವತ್ತು ರಾತ್ರಿ ನೀನು ಪುಷ್ಪಾ ಇಬ್ಬರೂ ನಮ್ಮ ಆಫೀಸಿಗೆ ಬನ್ನಿ. ಕಂಭಗಳ ವಿಷಯ ವಿವರವಾಗಿ ಮಾತಾಡೋಣ' ಎಂದ. ನಾನು ಜಾಸ್ತಿ ಮಾತಾಡದೇ 'ಸರಿ' ಎಂದು ಫೋನಿಟ್ಟೆ.

ಪುಷ್ಪಾ ಆಫೀಸಿನ ಕೆಫೆಟೇರಿಯಾದಲ್ಲಿ ಕೂತಿದ್ದಳು. ಸ್ವಲ್ಪ ಅತ್ತಿದ್ದ ಹಾಗೆ ಕಾಣಿಸಿತ್ತು. ಕಣ್ಣುಗಳು ಸ್ವಲ್ಪ ಊದಿಕೊಂಡಿದ್ದವು. ಈಗ ಖುಷಿಯಾಗಿದ್ದಳು. 'ನಾವು ಮನೆ ಕಟ್ಟಿಸುತ್ತಿರುವ ಸಮಯ ಒಳ್ಳೆಯದು ಅಂತ ಕಾಣಿಸುತ್ತೆ. ಇಲ್ಲದಿದ್ದರೆ, ಇಷ್ಟು ವರ್ಷ ಇಲ್ಲದೇ ಇದ್ದದ್ದು ಈಗ ಆಗೋದು ಅಂದರೆ ಏನು?' ಎಂದು ನಕ್ಕಳು.

ನಾನು ಪುಷ್ಪಾಳ ಪಕ್ಕದ ಖುರ್ಚಿಯಲ್ಲೇ ಕೂತಿದ್ದೆ. 'ಮತ್ತೆ ಅತ್ತಿದ್ದು ಯಾಕೆ?'

'ಮನೆ ಏರ್ತಾ ಇದೆ. ಇನ್ನೂ ಎಷ್ಟು ಕೆಲಸಗಳಿವೆ. ಗೃಹಪ್ರವೇಶಕ್ಕೆ ಎಷ್ಟು ಜನ ಬರ್ತಾರೋ. ಎಷ್ಟು ಕೆಲಸ ಇರುತ್ತೆ. ನಾನು ಮನೇಲಿ ಕೂತರೆ, ಮನೇ ಕೆಲಸ ಮಾಡೋರು ಯಾರು? ಓಡಾಡೋರು ಯಾರು? ಕಟ್ಟೋದೊಂದು ಮನೆ. ಅದು ನಮಗೆ ಬೇಕಾದ ಹಾಗೆ ಬರಲಿಲ್ಲ ಅಂದರೆ....' ಎಂದು ಮತ್ತೆ ಕಣ್ಣಲ್ಲಿ ನೀರು ತುಂಬಿಕೊಂಡಳು. ಮುಂದಿನ ಆತಂಕಗಳಿಗೆ ಈ ಮನೆಯ ನೆವ ಕೊಟ್ಟರೆ ನಿರುಮ್ಮಳವಾಗಿ ಉಸಿರಾಡಬಹುದು ಎಂದು ತಿಳಕೊಂಡಿದ್ದಾಳೆ ಅನ್ನಿಸಿತು. ನಾನು, ಅಷ್ಟು ಸುಲಭವಾಗಿ ಅತ್ತು ಹೃದಯ ಹಗುರ ಮಾಡಿಕೊಳ್ಳಬಹುದಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅನ್ನಿಸಿತು. 'ಏನೂ ಪರವಾಗಿಲ್ಲ, ನೀನು ಸುಸ್ತು ಮಾಡಿಕೊಳ್ಳಬೇಡ. ನೀನು ಆರಾಮಾಗಿರು. ಈಗಲೇ ಡಾಕ್ಟರಿಗೆ ಫೋನುಮಾಡಿ ಒಂದು ಅಪಾಯಿಂಟ್‌ಮೆಂಟ್ ತಗೋ. ಸಂಜೆ ಆ ಕಂಭಗಳ ವಿಷಯ ಮಾತಾಡೋವಕ್ಕೆ ಜ್ಯಾಕ್‌ನ ಆಫೀಸಿಗೆ ಹೋಗಬೇಕು. ನಿನಗೂ ಬರೋಕಾಗುತ್ತಾ? ಬರಲಾಗದಿದ್ದರೆ, ಪರವಾಗಿಲ್ಲ. ನಾನು ಹೋಗಿ ಎಲ್ಲ ಸೆಟಲ್ ಮಾಡಿಕೊಂಡು ಬರುತ್ತೇನೆ' ಎಂದೆ.

'ಇಲ್ಲ ನಾನೂ ಬರ್ತೇನೆ. ನನಗೆ ಸಂಜೆ ಎಂಟು ಗಂಟೆಯ ತನಕ ಮೀಟಿಂಗ್ ಇದೆ. ಅಲ್ಲಿಯತನಕ ಬರೋಕಾಗೊಲ್ಲ ಎಂದು ಹೇಳು. ಎಂಟೂವರೆಗೆ ಹೋಗೋಣವಂತೆ' ಅಂದಳು. ನಾನು 'ಸರಿ' ಎಂದು ಜ್ಯಾಕ್‌ಗೆ ಮತ್ತೆ ಫೋನು ಹಚ್ಚಿದೆ.

ಒಂದೈದು ನಿಮಿಷ ಆದಮೇಲೆ ಅನ್ನಿಸಿತು. ಬಹಳ ದಿನದಿಂದ ಕಾದಿದ್ದ ನಮ್ಮ ಆ ಗಳಿಗೆಯನ್ನು, ಒಂದು ಡಾಕ್ಟರ ಅಪಾಯಿಂಟ್‌ಮೆಂಟ್, ಕೆಫೆಟೇರಿಯಾದ ಆ ಖರ್ಚಿಗಳ ಮೇಲೆ ಒಂದೈದು ನಿಮಿಷ ಒತ್ತಿ ಕೂತು ಸೆಲಬ್ರೇಟ್ ಮಾಡಿದ್ದೆವು. ಆಶ್ಚರ್ಯವೆಂದರೆ, ಅದು ಇಬ್ಬರ ಗಮನಕ್ಕೂ ಬಂದಿಯೋ ಇಲ್ಲವೋ ಅನ್ನುವುದು ಆ ಮಿನಟ್ಟಿನಲ್ಲಿ ನನಗಂತೂ ಗೊತ್ತಾಗಿರಲಿಲ್ಲ. ಪುಷ್ಪಾ ಅತ್ತದ್ದಕ್ಕೆ ಕಾರಣ ಏನಿರಬಹುದು ಅನ್ನಿಸಿದಾಗ ಒಂದು ಕ್ಷಣ ಮನೆಯ ಕಾರಣವೇ ನಿಜವಾಗಿದ್ದಲ್ಲಿ, ಗೃಹಪ್ರವೇಶಕ್ಕೆ ಸೀರೆಯನ್ನು ಸ್ವಲ್ಪ ಸಡಿಲವಾಗಿ ಉಡಬೇಕಾಗುವಷ್ಟೇ ಸುಲಭವಾದ ಕಾರಣವಿದ್ದರೆ ಚೆನ್ನಾಗಿರುತ್ತದೆ ಅನ್ನಿಸಿತ್ತು.

*

ಸಂಜೆ ಎಂಟೂವರೆಯ ಸಮಯಕ್ಕೆ ಜ್ಯಾಕ್‌ನ ಆಫೀಸಿಗೆ ಹೋದೆವು. ಪುಷ್ಪಾಳಿಗೆ ನಿಧಾನವಾಗಿ ನಡೆಯಲು ಹೇಳಿ ನಾನು ಒಳಹೋದೆ. ಹೊರಗೆ ಲಾಬಿಯಲ್ಲಿದ್ದ ಸೋಫಾದಲ್ಲಿ ಇಬ್ಬರು ಗಂಡುಮಕ್ಕಳು ಆಟ ಆಡುತ್ತಾ ಕುಳಿತಿದ್ದರು. ಜ್ಯಾಕ್‌ನ ಮಕ್ಕಳು ಎಂದು ಗೊತ್ತಾಯಿತು. ಆಫೀಸಿನಲ್ಲಿ ಬೇರೆ ಯಾರೂ ಇರಲಿಲ್ಲ. ಜ್ಯಾಕ್ ಒಬ್ಬನೇ ಇದ್ದ. 'ಡೇನಿಯೇಲ್ ಇನ್ನೂ ಬಂದಿಲ್ಲವಾ?' ಎಂದು ಕೇಳಿದ್ದಕ್ಕೆ 'ಇನ್ನೇನು ಬರ್ತಾಳೆ. ಇಷ್ಟು ಹೊತ್ತಿನಲ್ಲಿ ಬೇಬಿ ಸಿಟರ್ ಸಿಗೋದು ಕಷ್ಟ. ಡಾಲೀನ ಅವಳ ತಂಗಿಯ ಮನೇಲಿ ಬಿಟ್ಟು ಬರೋಕೆ ಹೋಗಿದಾಳೆ' ಅಂದ.

'ಮ್ಯಾಕ್‌ನ ಜತೆ ಮಾತಾಡಿದೆಯಾ?' ನೇರವಾಗಿ ವಿಷಯಕ್ಕೆ ಬಂದೆ. ಜ್ಯಾಕ್ ಒಂದು ನಿಮಿಷ ಕಿಟಕಿಯಿಂದಾಚೆ ನೋಡಿ ಡೇನಿಯೇಲ್ ಇನ್ನೂ ಬಂದಿಲ್ಲವೇಕೆ ಎಂದು ಹುಬ್ಬುಗಂಟಿಕ್ಕಿಕೊಂಡು ನನ್ನ ನೋಡಿ 'ಕೇಳಿದೆ. ಆತ ಏನು ಮಾಡಿದರೂ ಒಪ್ಪುತ್ತಿಲ್ಲ' ಎಂದ.

'ಸರಿ, ಹಾಗಾದರೆ. ಆ ಮನೆ ನೀವೇ ಮಾರಿಕೊಳ್ಳಿ. ನಮಗೆ ಬೇಡ' ಎಂದು ಎದ್ದೆ.

'ಒಂದು ನಿಮಿಷ ಸಿಟ್ಟುಮಾಡಿಕೋಬೇಡ' ಎಂದ.

'ಸಿಟ್ಟುಮಾಡಿಕೊಳ್ಳದೆ ಇನ್ನೇನು ಮಾಡಲಿ. ಮಾತುಮಾತಿಗೂ ನಿಮ್ಮದು ತೀರಾ ಅತಿಯಾಗಿ ಹೋಯಿತು. ಒಂದೂ ಹೇಳಿದ ಹಾಗೆ ಆಗೋಲ್ಲ. ಪ್ರತಿಯೊಂದಕ್ಕೂ ಹೊಡೆದಾಡಬೇಕು. ಮನೆ ಬೆಲೆ ಈಗಾಗಲೇ ನಾವಂದುಕೊಂಡಿದ್ದಕ್ಕಿಂತಾ ಮೂವತ್ತು ಪರ್ಸೆಂಟ್ ಜಾಸ್ತಿಯಾಗಿದೆ. ಅಷ್ಟಾದ ಮೇಲೂ ಮನೆ ನಮಗೆ ಬೇಕಾದ ಹಾಗೆ ಬರಲಿಲ್ಲ ಎಂದರೆ ಏನರ್ಥ ಹೇಳು' ಎಂದೆ.

'ನೋಡು, ಒಂದು ನಿಮಿಷ ನಾನು ಹೇಳೋದನ್ನು ದಯವಿಟ್ಟು ತಾಳ್ಮೆಯಿಟ್ಟು ಕೇಳು. ನಮ್ಮದೇ ತಪ್ಪು ಅಂತಿಟ್ಟುಕೊಳ್ಳೋಣ. ನಮ್ಮದೋ ಅಥವಾ ಶೆರ್ಲಿ ಮತ್ತು ಮ್ಯಾಕ್‌ದು ತಪ್ಪೋ ಗೊತ್ತಿಲ್ಲ. ಈ ಮನೆಯ ಖರ್ಚು ನಾವು ಅಗ್ರೀಮೆಂಟಿನಲ್ಲಿ ಮಾತಾಡಿದ್ದಕ್ಕಿಂತ ಸಿಕ್ಕಾಪಟ್ಟೆ ಜಾಸ್ತಿಯಾಗಿದೆ. ಕಾರಣ ನನಗೆ ಗೊತ್ತಿಲ್ಲ. ಈ ನಾಲ್ಕು ತಿಂಗಳಲ್ಲಿ ಮನೆಯ ಸಾಮಾನಿನ ಖರ್ಚು ದುಪ್ಪಟ್ಟಾಗಿದೆ ಅಂತ ಮ್ಯಾಕ್ ಹೇಳ್ತಾನೆ. ಅವನಿಗೆ ಬೇಕಾದ್ದು ಅದು ಸಣ್ಣ ಮೊಳೆಯೇ ಆಗಲಿ, ಅದನ್ನು ಅವನಿಗೆ ಬೇಕಾದ ಕಡೆಯಿಂದಲೇ ತರಿಸಿಕೊಳ್ಳೋ ಜಾತಿಯವ ನಮ್ಮ ಮ್ಯಾಕ್. ಅವನೇ ಎಸ್ಟಿಮೇಟನ್ನು ತಪ್ಪು ಮಾಡಿದ್ದನೋ ಅದೂ ಗೊತ್ತಿಲ್ಲ. ನಿಜ ಹೇಳ್ತೀನಿ. ನಿಮ್ಮದಷ್ಟು ದೊಡ್ಡ ಮನೆ ಅವ ಇಲ್ಲಿಯತನಕ ಕಟ್ಟಿಲ್ಲ. ಆದ್ದರಿಂದ ಪ್ರಾಯಶಃ ಲೆಕ್ಕ ತಪ್ಪಾಗಿ ಹೋಗಿರಬೇಕು. ಆದರೆ, ಅದು ನಿನ್ನ ತಲೆನೋವಲ್ಲ. ಕರಾರಿನಲ್ಲಿರುವಂತೆ ಮನೆಕಟ್ಟಿಕೊಡುವುದು ನಮ್ಮ ಹೊಣೆ. ಮ್ಯಾಕ್ ಎಷ್ಟು ಒರಟನೋ ಅಷ್ಟೇ ಒಳ್ಳೆಯ ಕೆಲಸಗಾರ. ಆದರೆ ಅವನು ಇಷ್ಟು ದೊಡ್ಡ ಮನೆ ಕಟ್ಟುವುದರಿಂದ ಏನು ಲಾಭ ಬರಬೇಕು ಅಂತ ನಿರೀಕ್ಷಿಸುತ್ತಿದ್ದನೋ ಅದಕ್ಕಿಂತ ತುಂಬಾ ಕಡಿಮೆ ಅವನಿಗೆ ಸಿಗೋ ಹಾಗೆ ಕಾಣಿಸುತ್ತಿದೆ. ಈಗಾಗಲೇ ಮನೆಗೆಂದು ಹೆಚ್ಚಾಗಿರುವ ಖರ್ಚನ್ನೆಲ್ಲಾ ನಮ್ಮ ಕಮಿಷನ್‌ನಿಂದ ಹಿಡಕೊಳ್ಳುತ್ತಿದ್ದಾನೆ. ಇಷ್ಟರ ನಡುವೆ ಈ ಮನೆಯ ವಿಷಯದಲ್ಲಿ ಶೆರ್ಲಿ ಮತ್ತು ಡೇನಿಯೇಲ್‌ಗೆ ಎಷ್ಟು ಜಗಳವಾಗಿದೆ ಅಂದರೆ, ಅವರಿಬ್ಬರೂ ಮಾತಾಡುವುದನ್ನೇ ಬಿಟ್ಟಿದ್ದಾರೆ. ಮೇಲಾಗಿ ಅವರು ಹೈಸ್ಕೂಲಿನಿಂದ ಸ್ನೇಹಿತೆಯರು. ಮನೆಗೆ ಫೋನು ಬಂದರೆ ಡೇನಿಯೇಲ್ ಎತ್ತುವುದೇ ಇಲ್ಲ. ಡೇನಿಯೇಲ್‌ಗೆ ಶೆರ್ಲಿ ತುಂಬಾ ಬೇಕಾಗಿದ್ದಾಕೆ. ಅವಳ ಜಗಳವನ್ನು ಆಕೆ ಬಹಳ ಮನಸ್ಸಿಗೆ ಹಚ್ಚಿಕೊಂಡಿದ್ದಾಳೆ. ನೀನು ಸ್ವಲ್ಪ ತಾಳ್ಮೆಯಿಂದಿರಬೇಕು. ಈಗ ನಿನಗೆ ಕೊಂಚ ಒದ್ದಾಟ ಆಗಬಹುದು. ಆದರೆ, ಒಂದು ಒಳ್ಳೆಯ ಮನೆಯನ್ನಂತೂ ಕಟ್ಟಿಕೊಡುತ್ತೇವೆ ಅಂತ ನಾನು ಪ್ರಾಮಿಸ್ ಮಾಡ್ತೇನೆ' ಅಂದ ಒಂದೇ ಉಸಿರಲ್ಲಿ. ಬಹಳ ದಿನದಿಂದ ನಂಬಿದ್ದ ಪ್ರೇಯಸಿ ಕೈಬಿಟ್ಟು ಹೋಗುತ್ತಾಳೆ ಅನ್ನಿಸಿದಾಗ ಉಪಯೋಗಿಸುವ ಕಡೆಯ ಅಸ್ತ್ರದಂತೆ ತನ್ನ ಎಲ್ಲಾ ಅಭದ್ರತೆಯನ್ನೂ, ಭಯವನ್ನೂ ಮತ್ತು ಕೊಂಚ ನಿಜವನ್ನೂ ಹೇಳಿದ್ದ. ಆದರೆ, ನಾನು ಕೈಬಿಟ್ಟು ಹೋಗುವ ಅವನ ಪ್ರೇಯಸಿಯಾಗಿರಲಿಲ್ಲ. ಗಂಡಾಗುಂಡಿಯಾದರೂ ಪರವಾಗಿಲ್ಲ, ಸಂಸಾರ ಹೀಗೇ ಮಾಡಬೇಕು ಎಂದು ಮುಂಚೆಯೇ ನಿರ್ಧರಿಸಿದ್ದ ಪಕ್ಕಾ ಹೆಂಡತಿಯಾಗಿದ್ದೆ. ಮಾತಾಡುವುದಕ್ಕೆ ಬಾಯಿ ತೆಗೆದೆ.

ಅಷ್ಟರಲ್ಲಿ ಡೇನಿಯೇಲ್‌ಳ ಫೋನು ಬಂತು. ಅವಳ ತಂಗಿ ಅವಳ ಬಾಯ್‌ಫ್ರೆಂಡಿನ ಜತೆ ಯಾವುದೋ ಸಿನೆಮಾಕ್ಕೆ ಹೋಗಿದ್ದಳಂತೆ. ಆದ್ದರಿಂದ ಡಾಲಿಯನ್ನೂ ಕರಕೊಂಡು ಇಲ್ಲಿಗೇ ಬರುತ್ತಾ ಇದ್ದಾಳಂತೆ. ಸ್ವಲ್ಪ ತಡವಾಗುತ್ತದಂತೆ.

ಪುಷ್ಪಾ ಸುಮ್ಮನೆ ಕೂತಿದ್ದಳು. ಏನು ಯೋಚನೆ ಮಾಡುತ್ತಿದ್ದಳೋ, ಇಷ್ಟು ದಿನ ಎಲ್ಲಾ ಮಾತನ್ನೂ ಆಡುತ್ತಿದ್ದವಳು ಇವತ್ತೇನಾಯಿತೋ ಅಂದುಕೊಂಡೆ. ತೊಡೆಗೆ ತಿವಿದೆ.

ಸುಮ್ಮನೆ ನಕ್ಕಳು. ಇನ್ನು ಡೇನಿಯೇಲ್ ಬಂದರೆ, ಕೆಲಸ ಕೆಡುತ್ತದೆ ಅನ್ನಿಸಿ ನಾನೇ ಹೇಳಿದೆ. 'ಜ್ಯಾಕ್ ಈಗ ನೀನು ನಿನ್ನ ಸ್ವಂತ ವಿಚಾರಗಳನ್ನು ವ್ಯವಹಾರದಲ್ಲಿ ತರುತ್ತಿದ್ದೀಯ. ಅದು ಒಂಥರಾ ಹಿಂಸೆ. ನಾನು ನನ್ನ ಕೆಲಸದ ಕಡೆ ಒಂದು ತಿಂಗಳಿಂದ ಸರಿಯಾಗಿ ಗಮನ ಕೊಟ್ಟಿಲ್ಲ. ನಾನು ಪುಷ್ಪಾ ಒಂದು ಒಳ್ಳೆಯ ರೆಸ್ಟುರೆಂಟಿಗೆ ಊಟಕ್ಕೆ ಹೋಗಿ ಸುಮಾರು ಮೂರು ತಿಂಗಳಾದವು. ದಿನಕ್ಕೆ ನಾಲ್ಕು ಅಥವಾ ಐದು ಗಂಟೆ ನಿದ್ದೆ ಮಾಡ್ತಾ ಇದೀವಿ. ನಿಮಗೆ ಮನೆ ಕಟ್ಟುವುದೊಂದು ಕೆಲಸ ಮಾತ್ರ. ನಮಗೆ ಜೀವನಪರ್ಯಂತ ಇರೋ ಜಾಗ. ನಿನ್ನ, ನಿನ್ನ ಹೆಂಡತಿಯ ಅಥವಾ ಅವಳ ಸ್ನೇಹಿತೆಯರ ವಿಷಯ ನನಗೆ ಬೇಡ. ನಾನೂ ನೂರಾರು ಕಷ್ಟ ಹೇಳ್ಕೋಬಹುದು. ಈಗ ಬರೀ ವ್ಯವಹಾರ ಮಾತ್ರ ಮಾತಾಡೋಣ. ನಮಗೆ ನಾವು ಮಾತಾಡಿದಂತೆ ನಮ್ಮ ಮನೆ ಬೇಕು' ಎಂದು ಕಡ್ಡಿತುಂಡು ಮಾಡಿದಂತೆ ಹೇಳಿದೆ.

'ನೀನು ನಾವು ನಮ್ಮ ಕೈಯಿಂದ ದುಡ್ಡು ಹಾಕೋ ಹಾಗೆ ಮಾಡ್ತಾ ಇದೀಯ' ಅಂದ.

'ಐ ಡೋಂಟ್ ಕೇರ್' ಅಂದೆ, ಸ್ವಲ್ಪ ಖಾರವಾಗಿ. ಇದ್ದಕ್ಕಿದ್ದಂತೆ ದೀಪಕ್ ಪಟೇಲ ನೆನಪಿಗೆ ಬಂದ. ಈ ವ್ಯವಹಾರದಲ್ಲಿ ಕುತ್ತಿಗೆ ಕುಯ್ದರೆ ಮಾತ್ರ ಸ್ವಲ್ಪ ದುಡ್ಡುಮಾಡಬಹುದು. ನಾನು ದುಡ್ಡು ಉಳಿಸುತ್ತಿದ್ದೆನೋ ಇಲ್ಲವೋ ಗೊತ್ತಿಲ್ಲ. ಆದರೆ, ಕುತ್ತಿಗೆ ಕುಯ್ಯಿಸಿಕೊಳ್ಳುವುದಕ್ಕೆ ಮಾತ್ರ ಸಿದ್ಧನಿರಲಿಲ್ಲ.

'ಸರಿ, ನಾನು ಏನು ಮಾಡ್ಬೇಕೋ ಅದು ಮಾಡ್ತೀನಿ.' ಇನ್ನು ಮಾತಾಡಿ ಉಪಯೋಗವಿಲ್ಲವೆಂಬಂತೆ ಎದ್ದ, ಜ್ಯಾಕ್.

ನನಗೂ ಮಾತು ಸಾಕಾಗಿತ್ತು. ಮನೆಗೆ ಹೋಗಲು ಎದ್ದೆ. ನಾವು ಹೊರಗೆ ಹೋಗುವಾಗ ಡೇನಿಯೇಲ್ ತನ್ನ ಒಂದೂವರೆ ವರ್ಷದ ಮಗುವನ್ನು ಎತ್ತುಕೊಂಡು ಬರುತ್ತಿದ್ದಳು. ನಮ್ಮಿಬ್ಬರನ್ನೂ ನೋಡಿ 'ಹಾಯ್' ಎಂದಳು. ಹೊರಗೆ ಸೋಫಾದ ಮೇಲೆ ಆಟವಾಡುತ್ತಿದ್ದ ಇಬ್ಬರು ಮಕ್ಕಳೂ ಮಲಗಿದ್ದವು. ನಾನು ಸುಮ್ಮನೇ 'ಹಾಯ್' ಹೇಳಿ ಹೊರಬಂದೆ. ಅವಳ ಹತ್ತಿರ ಮಾತಾಡಲಿಲ್ಲ.

ಪುಷ್ಪಾ 'ನೀನು ಅಷ್ಟೊಂದು ಸಿಟ್ಟು ಮಾಡಿಕೋಬೇಕಾಗಿತ್ತಾ' ಅಂದಳು, ಕಾರು ಹತ್ತುವ ಮುನ್ನ. 'ಪಾಪ ಆ ಮೂರೂ ಮಕ್ಕಳನ್ನು ಕಟ್ಟಿಕೊಂಡು ಹೇಗೆ ನಿಭಾಯಿಸ್ತಾಳೋ ಅಲ್ಲವಾ?' ಅಂದಳು.

ನಾನು ಸುಮ್ಮನಿದ್ದೆ.

*

ಒಂದು ವಾರ ಮನೆಕಟ್ಟುವ ಜಾಗಕ್ಕೆ ಹೋಗಲಿಲ್ಲ. ಗಂಡನಾಗಿ ಕೆಲವು ಕರ್ತವ್ಯಗಳನ್ನು ನಿಭಾಯಿಸಬೇಕಾಗಿತ್ತು. ಪುಷ್ಪಾಳ ಆಫೀಸಿನ ಕೆಫೆಟೇರಿಯಾದಲ್ಲಿ ಯಾವ ಸಡಗರವೂ ಇಲ್ಲದೇ ನಾವು ಹಂಚಿಕೊಂಡಿದ್ದ ನಮ್ಮ ಸ್ವಂತ ಖುಷಿಯನ್ನು ನಾನು ಅಧಿಕೃತವಾಗಿ ಒಬ್ಬ ಗಂಡನಂತೆ ನಿಭಾಯಿಸಬೇಕಾಗಿತ್ತು. ಒಂದು ಒಳ್ಳೆಯ ರೆಸ್ಟುರೆಂಟಿಗೆ ಊಟಕ್ಕೆ ಕರಕೊಂಡು ಹೋದೆ. ಯಾವುದೋ ಅಂಗಡಿಯಲ್ಲಿ ಅತಿ ದುಬಾರಿಯೆನಿಸಿದ ಮೆತ್ತಗಿನ ಕರಡಿಗಳನ್ನು ತಂದೆ. ಒಂದೆರಡು ದೊಡ್ಡ ದೊಡ್ಡ, ಪುಟ್ಟ ಮಕ್ಕಳ ಪೋಸ್ಟರ್‌ಗಳನ್ನು ತಂದು ನಮ್ಮ ಬೆಡ್‌ರೂಮಿನಲ್ಲಿ ಅಂಟಿಸಿದೆ. ಯಾವುದೋ ಮೆಟರ್ನಿಟಿ ಅಂಗಡಿಗೆ ಕರಕೊಂಡು ಹೋಗಿ ನಿನಗೆ ಬೇಕಾದ ಬಟ್ಟೆಗಳನ್ನೆಲ್ಲಾ ತಗೋ ಎಂದು ವೀರ ಪರಾಕ್ರಮಿಯಂತೆ ಹೇಳಿದ್ದೆ. ಏಕಾಂತದಲ್ಲಿ ಆಕೆಯನ್ನು ಮಲಗಿಸಿಕೊಂಡು ಸಿನೆಮಾ ಹೀರೋನಂತೆ ಅವಳ ಹೊಟ್ಟೆಗೆ ಕಿವಿಹಚ್ಚಿ ಏನೋ ಕೇಳುತ್ತಿದೆ ಎಂದು ಸುಳ್ಳುಸುಳ್ಳೇ ಹೇಳಿದ್ದೆ. ಡಾಕ್ಟರ ಆಫೀಸಿನ ತೀರ ಹತ್ತಿರದ ತನಕ ಕಾರು ನಿಲ್ಲಿಸಿ ಅವಳನ್ನು ಇಳಿಸಿ, ನಾನು ಪಾರ್ಕಿಂಗ್ ಲಾಟಿಗೆ ಹೋಗಿ ಕಾರು ಬಿಟ್ಟು ನಡೆದು ಬಂದಿದ್ದೆ. ಕೊಂಚ ಹೊಟ್ಟೆನೋವೆಂದ ತಕ್ಷಣ ಆಂಬುಲೆನ್ಸು ಕರೆದು, ಪ್ಯಾರ ಮೆಡಿಕ್‌ಗಳ ‘ಓಕೇ’ ಗಳಿಗೆ ಹುಬ್ಬುಗಂಟಿಕ್ಕಿದ್ದೆ. ಡಾಕ್ಟರ ಹತ್ತಿರ ಅಲ್ಟ್ರಾಸೌಂಡ್ ಮಾಡಿಸಲೇಬೇಕು ಎಂದು ಹೇಳಿ ಗಲಾಟೆ ಮಾಡಿ ನಾಲ್ಕೇ ವಾರಕ್ಕೆ ಅಲ್ಟ್ರಸೌಂಡ್ ಮಾಡಿಸಿ, ಎಲ್ಲಾ ಸರಿಯಾಗಿದೆ ಎಂದಾಗ ಅದು ಹೇಗೆ ಎಂದು ಪ್ರಶ್ನಿಸಿ ಅವರ ಕೋಪಕ್ಕೂ ಪಾತ್ರನಾಗಿದ್ದೆ. ಒಟ್ಟು ಅಪ್ಪನಾಗುತ್ತಿದ್ದೇನೆ ಅನ್ನುವ ನಂಬಿಕೆ ನನಗೂ ಪುಷ್ಪಾಳ ಬಸಿರಿನಷ್ಟೇ ಖಾತ್ರಿಯಾಗಬೇಕಾಗಿತ್ತು.

*

ಮನೆ ಮುಗಿದಿತ್ತು. ಅದೇನು ಮಾಡಿದ್ದನೋ ಜ್ಯಾಕ್ ಗೊತ್ತಿಲ್ಲ, ಒಳಗೆ ಎರಡು ಕಂಭಗಳಂತೂ ಇದ್ದವು. ಅವನೇ ಹೇಳಿದಂತೆ ಮನೆ ನಾವಂದುಕೊಂಡಿದ್ದಕ್ಕಿಂತಾ ಸುಂದರವಾಗಿ ಬಂದಿತ್ತು. ಕಂಭಗಳನ್ನು ನೋಡಿ ಪುಷ್ಪಾ ‘ಪಾಪ, ಅವನ ಕೈಯಿಂದಲೇ ಇದಕ್ಕೆ ದುಡ್ಡು ಹಾಕಿರಬೇಕು’ ಎಂದಿದ್ದಳು. ಎಂಟು ವಾರದ ಬಸುರಿ ಆಕೆ. ಸ್ವಲ್ಪ ಮೈಕೈ ತುಂಬಿಕೊಂಡಿದ್ದಳು. ಬೆಳಿಗ್ಗೆ ಎದ್ದು ವಾಂತಿ ಮಾಡುತ್ತಿದ್ದಳು. ಎಡಪಕ್ಕಕ್ಕೆ ಮಲಗುತ್ತಿದ್ದಳು. ವಿಟಮಿನ್ ನುಂಗುತ್ತಿದ್ದಳು. ಗೃಹಪ್ರವೇಶದ ಸಮಯಕ್ಕೆ ಸಣ್ಣಗೆ ಹೊಟ್ಟೆ ಕಾಣಿಸೋಕೆ ಶುರುವಾಗಿರುತ್ತೆ. ‘ಕಡೆಯಪಕ್ಷ ಗೊತ್ತಿರುವವರಿಗಾದರೂ ಹೇಳಿಬಿಡಬೇಕು’ ಎಂದು ಹೇಳುತ್ತಿದ್ದಳು.

ಮನೆಯ ಪತ್ರಗಳು ಒಬ್ಬರಿಂದ ಇನ್ನೊಬ್ಬರಿಗೆ ರವಾನೆ ಆಗುವ ಕಾಲಕ್ಕಾದರೂ ಮ್ಯಾಕ್ ಅಟರ್ನಿಯ ಆಫೀಸಿಗಾದರೂ ಬರುತ್ತಾನೇನೋ ಎಂದು ಯೋಚಿಸಿದ್ದೆ. ಬಂದಿದ್ದರೆ, ಹೋಗಿ ಸರಿಯಾಗಿ ಜಗಳ ಮಾಡಿಬರೋಣ, ನಾಲ್ಕೂವರೆ ತಿಂಗಳು ನಮ್ಮ ಜೀವನಾನ ನರಕ

ಮಾಡಿದ್ದೀಯ ಎಂದು ಹೇಳಿಬರಬೇಕೆಂದುಕೊಂಡಿದ್ದೆ. ಪುಷ್ಪಾ 'ಕಷ್ಟವೋ, ಸುಖವೋ ಒಂದು ಒಳ್ಳೆ ಮನೆ ಕಟ್ಟಿಕೊಟ್ಟಿದ್ದಾನೆ. ಸುಮ್ಮನೆ ಅವನ ಹತ್ತಿರ ಯಾಕೆ ಈಗ ಜಗಳ ಆಡ್ಕೋತೀಯ. ಮನೆ ಏನಾದರೂ ರಿಪೇರಿಗೆ ಬಂದರೆ ಮತ್ತೆ ಅವನ ಹತ್ತಿರವೇ ಹೋಗಬೇಕು' ಎಂದಿದ್ದಳು. ಹೌದಲ್ಲ, ನಾನು ಈ ವಿಷಯವನ್ನು ಯೋಚಿಸಿರಲೇ ಇಲ್ಲ ಎಂದುಕೊಂಡೆ. ಆದರೆ, ಅಟರ್ನಿಯ ಆಫೀಸಿಗೆ ಬಂದಿದ್ದವರೂ ಜ್ಯಾಕ್ ಮತ್ತು ಡೇನಿಯೇಲ್ ಇಬ್ಬರೇ. ನಾವು ಸಹಿ ಹಾಕಿದ ಮೇಲೆ, ಬಿಲ್ಡರ್‌ಗಳ ಪರವಾಗಿ ಇವರಿಬ್ಬರೇ ಸಹಿ ಹಾಕುತ್ತಾರಂತೆ. ನಾನು ಕಡೆಗೂ 'ಡೇನಿಯೇಲ್. ನಿಮ್ಮ ಬಿಲ್ಡರ್‌ಗೆ ಹೇಳು. ಮನೆ ಕಟ್ಸೋ ಮೊದಲೇ ಎಲ್ಲ ಲೆಕ್ಕ ಹಾಕಿಕೋಬೇಕಂತ. ಒಂದು ಲೆಕ್ಕ ಕೊಟ್ಟು ಆಮೇಲೆ ನನಗೆ ಲಾಭ ಬರ್ತಾ ಇಲ್ಲ ಅಂತ ಅಳ್ತಾ ಕೂತರೆ, ವ್ಯವಹಾರ ಮಾಡೋಕಾಗೋಲ್ಲ, ಮತ್ತೆ ನೀನು ಹೇಳಿದ್ಯಲ್ಲ. ನಿಮ್ಮ ಬಿಲ್ಡರ್‌ನ ಫ಼ೋಟೋ ಬೇಕಾದರೆ ಕೊಡ್ತೀನಂತ. ಕೊಡು ಇಟ್ಕೋತೀನಿ' ಅಂದೆ. ಇಬ್ಬರೂ ಮಾತಾಡಲಿಲ್ಲ.

ಹೊರಗೆ ಎಲ್ಲಾ ಪತ್ರ ವ್ಯವಹಾರ ಮುಗಿಸಿದಮೇಲೆ ಪುಷ್ಪಾ ಡೇನಿಯೇಲ್‌ಳಿಗೆ 'ನೀನು ಮೂರುಮಕ್ಕಳ ನಂತರವೂ ತುಂಬಾ ಸುಂದರವಾಗಿ ಕಾಣಿಸ್ತೀಯ' ಎಂದಿದ್ದಳು. ಜ್ಯಾಕ್ ಮತ್ತು ಡೇನಿಯೇಲ್ ಬೇರೆ ಬೇರೆ ಕಾರಿನಲ್ಲಿ ಮನೆಗೆ ಹೋದರು.

*

ಗೃಹಪ್ರವೇಶ ಭರ್ಜರಿಯಾಗಿ ನಡೆಯಿತು. ನಾನು ಶರ್ವಾಣಿ ಹಾಕಿಕೊಂಡು ಬಂದವರಿಗೆಲ್ಲಾ ಮನೆಯ ಮೂಲೆಮೂಲೆಯನ್ನೂ ಬಿಡದೆ ತೋರಿಸುತ್ತಿದ್ದೆ. ಈ ದೇಶದಲ್ಲಿಯೂ ದೇವರಮನೆಗೆ ಜಾಗ ಮಾಡಿಕೊಂಡ ಪುಷ್ಪಾಳ ಜಾಣತನವನ್ನು ಬಂದವರೆಲ್ಲರೂ ಹೊಗಳಿದರು. ಪುಷ್ಪಾ ತನ್ನ ತೀರ ಗುರುತಿರುವ ಗೆಳತಿಯರಿಗೆ ಮಾತ್ರ ತನ್ನ ತಪ್ಪಿದ ತಿಂಗಳ ಲೆಕ್ಕ ಹೇಳಿದ್ದಳು. ಆದರೂ ಹೆಂಗಸರ ಗುಂಪಲ್ಲಿ ಏನೋ ಗುಸುಗುಸು ಇತ್ತು ಎಂದು ಅಂದು ರಾತ್ರಿ ಹೇಳಿದ್ದಳು. ಎಲ್ಲರೂ ಊಟಮಾಡಿ ಹೋದರು. ಇಷ್ಟೊಂದು ಸಂಪ್ರದಾಯಬದ್ಧವಾಗಿ ಗೃಹಪ್ರವೇಶ ಮಾಡಿದ್ದಕ್ಕೆ ಇಂಡಿಯಾದಿಂದ ಬಂದಿದ್ದ ಕೆಲ ಸ್ನೇಹಿತರ ಅಪ್ಪ ಅಮ್ಮಂದಿರುಗಳು 'ದಿ ಬೆಸ್ಟ್' ಎಂದು 'ವಾವಾವಾ' ಮಾಡಿ ಅವರ ಮಕ್ಕಳುಗಳನ್ನು ನೋಡಿ 'ಪ್ಚ್, ಪ್ಚ್' ಮಾಡಿ ಹೋಗಿದ್ದರು.

ಗೃಹಪ್ರವೇಶ ಮಾಡಲು ಬಂದಿದ್ದ ದೇವಸ್ಥಾನದ ಅರ್ಚಕ ಮಾತ್ರ 'ಇಲ್ಲಿ ಎಲ್ಲಿ ಅಷ್ಟೊಂದು ವಾಸ್ತು ನೋಡೋಕೆ ಆಗುತ್ತೆ. ನಿಮಗೆ ವಾಸ್ತು ಬಗ್ಗೆ ಅಷ್ಟೊಂದು ಅನುಮಾನ ಇದ್ದರೆ ಮನೆಯ ಹಿಂದೆ ಒಂದು ಸಣ್ಣ 'ನಾಯಿಮನೆ' ಕಟ್ಟಿಸಿಬಿಡಿ. ಶ್ವಾನದೋಷ ನಿವಾರಣೆಯಾದಮೇಲೆ ಬೇಕಾದರೆ ಮತ್ತೊಂದು ವಾಸ್ತುಹೋಮ ಮಾಡೋಣವಂತೆ.

ನಿಮ್ಮ ಮಿಸೆಸ್ ಡೆಲಿವರಿ ಆಗಲಿ. ಈಗ ಸದ್ಯಕ್ಕೆ ವಾಸ್ತು ಸರಿಯಾಗಿದೆ. ಒಂದು ನಾಲ್ಕು ತಿಂಗಳು ಮಾಸ್ಟರ್ ಬೆಡ್‌ರೂಮಿನಲ್ಲಿ ಮಲಗಬೇಡಿ' ಎಂದು ಹೇಳಿಹೋಗಿದ್ದ. ಈ ಅರ್ಚಕನನ್ನು ಯಾಕಾದರೂ ಕರೆಸಿದ್ದೆವೋ ಎಂದು ಹಣೆಹಣೆ ಚಚ್ಚಿಕೊಂಡೆ. ಅವನಿಗೆ ಪುಷ್ಪಾಳ ವಿಷಯ ಹೇಗೆ ಗೊತ್ತಾಯಿತು ಎಂದು ಅನುಮಾನದಿಂದ ಪುಷ್ಪಾಳ ಮುಖ ನೋಡಿದೆ. ಪುಷ್ಪಾ 'ಆಶೀರ್ವಾದ ತಗೋಬೇಕಾದರೆ ಹೇಳದೇ ಇರೋಕೆ ಮನಸ್ಸು ಬರಲಿಲ್ಲ' ಎಂದಳು. ಹಳೆಮನೆಯಿಂದ ಹೊಸಮನೆಗೆ ಸಾಮಾನುಗಳು ಬಂದಾಗ ನಮ್ಮ ಹಾಸಿಗೆ ಗೆಸ್ಟ್‌ರೂಮನ್ನು ಸೇರಿತ್ತು. ವಾಲ್ಪಾಗಿರೋ ಮಾಸ್ಟರ್‌ಬೆಡ್ ರೂಮಿನ ಛಾವಣಿ ತನ್ನನ್ನು ನೋಡುವುದಕ್ಕೆ ಯಾರೂ ಇಲ್ಲವಲ್ಲ ಎಂದು ಬೇಜಾರು ಮಾಡಿಕೊಂಡಿತ್ತು.

*

ನಾಲ್ಕು ತಿಂಗಳಾಯಿತು. ಪುಷ್ಪಾಗೆ ಅಲ್ಲಲ್ಲಿ ಒಂದು ಸ್ವಲ್ಪ ಸಣ್ಣ ಸಣ್ಣ ತೊಂದರೆಗಳಾಗುತ್ತಿದ್ದವು. ಒಂದು ದಿನ ಹೊಟ್ಟೆನೋವು, ಒಂದು ದಿನ ಬೆನ್ನು ನೋವು, ಒಮ್ಮೆ ಸಣ್ಣಗೆ ಬ್ಲೀಡಿಂಗ್ ಶುರುವಾಗಿ ಇಬ್ಬರಿಗೂ ಗಾಬರಿಯಾಗಿ ತಕ್ಷಣ ಮತ್ತೆ ಡಾಕ್ಟರ ಹತ್ತಿರ ಹೋಗಿಬಂದಿದ್ದೆವು. ಪ್ಲಾಸೆಂಟ ಸ್ವಲ್ಪ ಕೆಳಗಿದೆ, ಇನ್ನೊಂದು ಮೂರು ತಿಂಗಳು ಸ್ವಲ್ಪ ಹುಷಾರಾಗಿರಬೇಕು ಎಂದು ಹೇಳಿದ್ದರು ಡಾಕ್ಟರು. ಪುಷ್ಪಾ ರಜಾ ಹಾಕಿ ಮನೆಯಲ್ಲಿ ಕೂತುಬಿಟ್ಟಳು. ನಾನು ಎಲ್ಲಾ ಸರಿಹೋಗುತ್ತದೆಂದು ಆದಷ್ಟೂ ಸಮಾಧಾನಪಡಿಸಲು ಪ್ರಯತ್ನಿಸಿದೆ.

ಅಂದು ರಾತ್ರಿ ಪುಷ್ಪಾ ಕೇಳಿದಳು 'ಪ್ಲೀಸ್, ನಾಯಿಮನೆ ಕಟ್ಟಿಸಿಬಿಡು ಪ್ಲೀಸ್. ನಮಗೆ ಈ ಮನೆಯಿಂದ ಒಳ್ಳೇದಾಗಬೇಕು. ಸ್ವಲ್ಪ ದುಡ್ಡು ಹೋದ್ರೆ ಹೋಗಲಿ. ನನಗೆ ಈ ಮಗು ಬೇಕು' ಎಂದು ಬಡಬಡಿಸಹತ್ತಿದ್ದಳು.

ನನ್ನ 'ಗಂಡ' ಎಚ್ಚರನಾದ. ನಾಯಿಮನೆ ಈಗ ಅನಿವಾರ್ಯವಾಗಿತ್ತು. ವಾಸ್ತುಪಾಸ್ತು ಹಾಳಾಗಿಹೋಗಲಿ, ಅದು ಬೇಡ ಎಂದು ಹೇಳುವ ಧೈರ್ಯ ನನಗೂ ಬರಲಿಲ್ಲ. ಮತ್ತೆ ಒಂದೈದು ನಿಮಿಷ ನಾನು ಪುಷ್ಪಾ ಬಿಸಿನೆಸ್ ಮಾತಾಡಿ, ಸುಮ್ಮನೆ ಗೊತ್ತಿಲ್ಲದವರ ಹತ್ತಿರ ಕಟ್ಟಿಸುವುದರ ಬದಲು ಗೊತ್ತಿರೋವರ ಹತ್ತಿರವೇ ಹೋದರೆ ವಾಸಿ ಎನ್ನಿಸಿ ಡೇನಿಯೇಲ್‌ಗೇ ಫ಼ೋನು ಮಾಡಿದ್ದೆ. ನಾಯಿಮನೆ ಕಟ್ಟಿಸಿದ ಮೇಲೆ, ಮನೆತುಂಬಿಸಿಕೊಡುವ ವಿಚಾರವನ್ನು ಯೋಚನೆ ಮಾಡಿದರಾಯಿತು ಅನ್ನಿಸಿತು. 'ಸರಿ, ಕಟ್ಟಿಕೊಡೋಣ. ಸಂಜೆ ಆಫ಼ೀಸಿಗೆ ಬಾ. ಎಷ್ಟಾಗುತ್ತೆ ಎಂದು ಹೇಳ್ತೀನಿ' ಎಂದಳು. 'ನಾನು ಈಗಲೇ ಆಕಡೆ ಬರ್ತಾ ಇದೀನಿ. ನೀನು ಮನೆಯಲ್ಲಿದ್ದರೆ, ಜ್ಯಾಕ್‌ಗೆ ಒಂದು ಫ಼ೋನು ಮಾಡು. ಒಂದು 'ನಾಯಿ ಮನೆ' ಎಸ್ಟಿಮೇಟ್ ಕೊಡುವುದಕ್ಕೆ ಅದೆಷ್ಟು ಹೊತ್ತು ಬೇಕಾಗುತ್ತೆ.' ಎಂದೆ.

'ಇಲ್ಲ. ಸಂಜೆಯೇ ಬಾ' ಎಂದಳು. 'ಯಾಕೆ' ಎಂದೆ, ಇವರದ್ದು ಮತ್ತೆ ಶುರುವಾಯಿತಲ್ಲ ಅನ್ನಿಸಿತು. 'ಇಲ್ಲ. ನಾನು ಮತ್ತು ಜ್ಯಾಕ್ ಈಗ ಜತೆಗಿಲ್ಲ. ಬೇರೆ ಬೇರೆ ಬಿಸಿನೆಸ್ ಮಾಡುತ್ತಾ ಇದೀವಿ' ಎಂದಳು, ಯಾವುದೇ ಭಾವನೆಯಿಲ್ಲದೆ. 'ಇನ್ನೊಂದು ಆಫೀಸು ತೆಗೆದಿರಾ' ಎಂದೆ. 'ಹೇಳಿದನಲ್ಲ. ನಾವೀಗ ಬೇರೆಬೇರೆ ಬಿಸಿನೆಸ್ ಮಾಡ್ತೀವಿ' ಎಂದಳು. 'ಸಾರಿ' ಎಂದೆ. ಮುಂದೆ ಮಾತಾಡಲು ಪದಗಳು ಹೊರಡಲಿಲ್ಲ. ಫೋನಿಟ್ಟುಬಿಟ್ಟೆ. ಪುಷ್ಪಾಳಿಗೆ ಏನೂ ಹೇಳಲಿಲ್ಲ. ಅವಳು ಪುಸ್ತಕದಲ್ಲಿ ತಲೆ ಹುದುಗಿಸಿದ್ದಳು. ಕೇಳಿಸಿಕೊಂಡಿದ್ದಾಳೇನೋ ಎಂದು ಅನುಮಾನ ಬಂತು.

ಸಂಜೆ ಗರಾಜನ್ನು ಸ್ವಚ್ಛ ಮಾಡುತ್ತಿದ್ದಾಗ ಹಿಂದೆ ನಮ್ಮ ಖಾಲಿ ಸೈಟು ಮಾರಾಟವಾದ ತಕ್ಷಣ ತೆಗೆದಿಟ್ಟಿದ್ದ ಅಲ್ಲಿದ್ದ ಜ್ಯಾಕ್, ಡೇನಿಯೇಲ್ ಅಸೋಸಿಯೇಟ್ಸ್ ಅನ್ನೋ ಸೈನ್‌ಬೋರ್ಡು ಕಾಣಿಸಿತು. ಡೇನಿಯೇಲ್ ತನ್ನ ಕೂದಲನ್ನು ಇಳಿಬಿಟ್ಟುಕೊಂಡು ಸೈನ್‌ಬೋರ್ಡಿನಿಂದಲೇ ನಗುತ್ತಿದ್ದಳು. ಅದನ್ನು ತೆಗೆದು ಕಸದ ಬುಟ್ಟಿಗೆ ಎಸೆದೆ. ಒಂದು ಸುತ್ತು ಹಾಕಿಬರೋಣ ಎಂದು ಕಾರು ತಿರುಗಿಸಿದೆ. ಖಾಲಿಯಿದ್ದ ಕೆಲವು ಸೈಟುಗಳಲ್ಲಿ ಇನ್ನೂ ಅವರಿಬ್ಬರ ಫೋಟೋಗಳು ನಗುತ್ತಿದ್ದವು, ಕೆಲವು ಕಡೆ ಇರಬೇಕಾದಲ್ಲಿ ಇರದೆ ಗಾಳಿಗೆ ಹಾರಿಹೋಗಿದ್ದವು. ನಾನು ಡ್ರೈವ್ ಮಾಡಿದ ಕಡೆಯಲ್ಲೆಲ್ಲಾ ಇನ್ನೂ ಖಾಲಿ ಸೈಟುಗಳು ಇದ್ದುದನ್ನು ನೋಡಿ ಇಲ್ಲಿ ಮನೆಗಳು ಬಂದರೆ ಸ್ವಲ್ಪ ಅಕ್ಕಪಕ್ಕ ಅಂತ ಯಾರಾದರೂ ಇರುತ್ತಾರೆ ಅನ್ನಿಸಿತ್ತು.

•

# ಗುಬ್ಬಿಯ ಅವಸಾನ

**– ರವಿ ಗೋಪಾಲರಾವ್**

ಬೀದಿ ನಾಯಿಗಳ ಬೊಗಳು ಮತ್ತು ಕಾಗೆಗಳ ಕೂಗಾಟದಿಂದ ಎಚ್ಚರವಾದಾಗ ಎಲ್ಲಿ ಮಲಗಿದ್ದೀನಿ ಅಂತಲೇ ಮರೆತುಹೋಗಿತ್ತು. ಪ್ರಯಾಣದ ಸುಸ್ತಿನಿಂದ ಇರಬೇಕು. ಬಳಲಿದ ದೇಹಕ್ಕೆ ಗಡದ್ದಾಗೆ ನಿದ್ದೆ ಬಂದಿತ್ತು ಅಂತ ಕಾಣುತ್ತೆ. ಕಣ್ಣು ಅರಳಿಸಿ ಸುತ್ತಲೂ ನೋಡಿದೆ. ಇನ್ನೂ ಕತ್ತಲು ಕರಗಿರಲಿಲ್ಲ. ಮುಬ್ಬು ಬೆಳಕಿನಲ್ಲಿ ಮಂಚದ ಬಳಿಯಲ್ಲಿದ್ದ ಯಾವುದೇ ವಸ್ತುವಾಗಲಿ, ಕಿಟಕಿ ಬಾಗಿಲಾಗಲಿ ಪರಿಚಯ ಇದ್ದಂತೆ ಕಾಣಲಿಲ್ಲ. ಪಕ್ಕದಲ್ಲಿ ಪುಟ್ಟಿ, ಪುಟ್ಟಿ ಪಕ್ಕದಲ್ಲಿ ಅವಳಮ್ಮ ಮಲಗಿದ್ದಾರೆಂದು ಮುಟ್ಟಿ ನೋಡಿದ ಮೇಲೆ ಖಾತ್ರಿಯಾಯಿತು. ಅಮೆರಿಕದಿಂದ ನಿನ್ನೆ ರಾತ್ರಿತಾನೆ ಬೆಂಗಳೂರಿಗೆ ಬಂದು ಅಣ್ಣನ ಮಹಡಿ ಮನೆಯ ಮೇಲ್ಗಡೆ ರೂಮಿನಲ್ಲಿ ಮಲಗಿದ್ದೀನಿ ಅಂತ ಅರಿವಾಗಲು ಸ್ವಲ್ಪ ಸಮಯವೇ ಬೇಕಾಯಿತು. ಕಾಗೆಗಳ ಕೂಗಾಟದ ಜೊತೆಗೆ ಈಗ ಜೋರಾಗಿ ಅಲ್ಲಾ ಹೋ ಅಕ್ಬರ್ ಅಂತ ಧ್ವನಿವರ್ದಕದಿಂದ ಕೇಳಿ ಬರುತ್ತಿದ್ದ ನಮಾಝ್ ನನ್ನನ್ನು ಪೂರ್ಣ ಎಚ್ಚರಗೊಳಿಸಿತ್ತು. ಅಸ್ಪಷ್ಟವಾಗಿ ವೆಂಕಟೇಶ ಸುಪ್ರಭಾತ ಕೇಳಿಸಿದಾಗ ರೇಡಿಯೋನಲ್ಲಿ ಬರುತ್ತಿದೆಯೋ ಅಥವಾ ಗುಡಿಯ ಧ್ವನಿವರ್ಧಕದಿಂದ ಬರುತ್ತಿದೆಯೋ ಗೊತ್ತಾಗಲಿಲ್ಲ. ಮಂಚ ಬಿಟ್ಟು ಏಳೋಣ ಅಂದುಕೊಂಡೆ. ಆದರೆ ಇನ್ನೂ ಯಾರು ಎದ್ದಂತಿಲ್ಲ. ಅವರಿಗೆಲ್ಲ ಯಾಕೆ ತೊಂದರೆ ಕೊಡುವುದು ಅಂತ ಸುಮ್ಮನೆ ಮಲಗಿದ್ದೆ. ಕಸ ಗುಡುಸಿ ಅಂಗಳಕ್ಕೆ ನೀರು ಹಾಕುವ ಶಬ್ದ, ದೂರದಲ್ಲಿ ಆಟೋ ಶಬ್ದ, ಹಾಲಿನ ಕ್ಯಾನ್ ಶಬ್ದ, ತರಕಾರಿ ಮಾರುವವನ ಸೊಪ್ಪು, ಹುರಳಿಕಾಯಿ, ಬೆಂಡೇಕಾಯಿ ಎಂದು ಕೂಗುವ ಗಡಸು ಧ್ವನಿ, ಎಲ್ಲ ಸೇರಿ ಕಾಗೆಗಳ ಕೂಗಾಟ, ನಾಯಿಗಳ ಬೊಗಳು ಕಡಿಮೆ ಆದಂತೆ ಅನ್ನಿಸಿತು. ಸೂರ್ಯನ ಬೆಳಕೇ ಕಂಡಿಲ್ಲ ಆಗಲೇ ಎಷ್ಟೊಂದು ಚಟುವಟಿಕೆ ಶುರುವಾಗಿದೆಯಲ್ಲ. ಸ್ಯಾನ್‌ಹೋಸೆಯಲ್ಲಿ ಬೆಳಗಿನ ಜಾವ ಅಲಾರಾಮ್ ಬಿಟ್ಟು ಇನ್ಯಾವ ಶಬ್ದವೂ ಕೇಳಿ ಅಭ್ಯಾಸವಿಲ್ಲ ಅಂತ ಮನಸ್ಸು ಆಗಲೇ ವ್ಯತ್ಯಾಸ ಹುಡುಕುತ್ತಿತ್ತು. ಮಂಚದಿಂದ ಎದ್ದು ಕಿಟಕಿ ಕರ್ಟನ್ ಸರಿಸಿ ನೋಡಿದಾಗ ತುಂಬ ಬೆಳಕಾಗಿದೆ ಎನ್ನುವ ಅರಿವಾಯಿತು. ಮಂಚದಿಂದ ಎದ್ದು, ರೂಮಿಗೇ

ಅಂಟಿಕೊಂಡಂತೆ ಇದ್ದ ಮಹಡಿ ಮೆಟ್ಟಲು ಹತ್ತಿ ಛತ್ತಿಗೆ ಹೋದೆ. ಪಕ್ಕದ ಮನೆಯಿಂದ ಎತ್ತರಕ್ಕೆ ಬೆಳದಿದ್ದ ಸಂಪಿಗೆ ಮರದಲ್ಲಿ ಅಷ್ಟೊಂದು ಹೂವು ಕಾಣದಿದ್ದರೂ ಘಂ ಅಂತ ಸುವಾಸನೆ ಬಂದು, ಜೊತೆಗೆ ತಣ್ಣನೆಯ ಗಾಳಿ ಬೀಸಿದಾಗ ನನಗರಿವಿಲ್ಲದಂತೆ ಎದೆ ಉಬ್ಬಿಸಿ ಹವ ಕುಡಿದು ಕೈ ಕಟ್ಟಿ ನಿಂತೆ. ಛಾವಣಿ ಮೇಲೆ ನಿಂತಿದ್ದರಿಂದ ದೂರದವರೆಗೂ ಮುಂಜಾವಿನ ಕಿತ್ತಳೆ ಬಣ್ಣದ ಆಕಾಶ ಕಾಣುತ್ತಿತ್ತು. ಆ ಸೌಂದರ್ಯಕ್ಕೆ ಮಸಿ ಬಳಿದಂತೆ ಎಲ್ಲಿ ನೋಡಿದರೂ ಬರೀ ಕಪ್ಪು ಕಾಗೆಗಳೇ ಹಾರಾಡುತ್ತಿದ್ದವು, ಈ ಊರಿನಲ್ಲಿ ಬೇರೆ ಹಕ್ಕಿಗಳೆ ಇಲ್ಲವೇ ಅನ್ನಿಸುವಷ್ಟು. ನಾನು ಚಿಕ್ಕಂದಿನಲ್ಲಿ ನೋಡುತ್ತಿದ್ದ ಗುಬ್ಬಚ್ಚಿ, ಕೋಗಿಲೆ, ಅಳಿಲು, ಚಿಟ್ಟೆ ಒಂದೂ ಕಾಣಿಸುತ್ತಿಲ್ಲವಲ್ಲ ಅಂದುಕೊಂಡೆ. ಛಾವಣಿಯಿಂದ ಕೆಳಗಿಳಿದು ಷೂ ಧರಿಸಿ ನನ್ನ ಬೆಳಗಿನ ವ್ಯಾಯಮಕ್ಕೆಂದು ವಾಕಿಂಗ್ ಹೊರಟೆ. ಅಲ್ಲೇ ಹತ್ತಿರದಲ್ಲಿದ್ದ ಕುಮಾರಸ್ವಾಮಿ ಲೇಔಟಿನ ಒಂದು ಬಿ.ಸಿ.ಸಿ ಉದ್ಯಾವನದ ಬೆಂಚಿನ ಮೇಲೆ ಕುಳಿತು ಗಿಡ ಮರಗಳನ್ನು ನೋಡುತ್ತಿದ್ದೆ. ಅರೆ, ಇಲ್ಲೂ ಕೂಡ ಗುಬ್ಬಚ್ಚಿ, ಅಳಿಲು, ಚಿಟ್ಟೆ ಒಂದೂ ಕಾಣಲ್ವಲ್ಲ. ಬರೀ ಕಾಗೆಗಳೇ. ಮನೆಗೆ ಹೋಗುವ ದಾರಿಯಲ್ಲಿ ಶನೀಶ್ವರನ ಗುಡಿ ಅಂತ ಕಂಡ ದಾರಿಗಂಬವನ್ನೇ ಅನುಸರಿಸಿ ಹೋದಾಗ ಅದೊಂದು ಉಚ್ಚೆಕಾಯಿ ಮರದ ಕಟ್ಟೆಗೆ ಗುಡಿಸಿಲಿನಂತೆ ಕಟ್ಟಿದ್ದ ಸಣ್ಣ ಗುಡಿ. ಬಗ್ಗಿ ನೋಡಿದರೂ ಕಾಣದಷ್ಟು ಸಣ್ಣ ಶನೀಶ್ವರ ಕಪ್ಪು ಕಾಗೆ ಮೇಲೆ ಕುಳಿತು ಸವಾರಿ ಮಾಡುತ್ತಿರುವ ದೃಶ್ಯ ಅಸಮಧಾನ ತಂದಿತು. ಸುತ್ತಲೂ ಇದ್ದ ಕೊಳಕು, ವಾಸನೆ ಜೊತೆಗೆ ಎಂತಹ ಕೀಳು ಭಕ್ತರಿರಬೇಕು ಅನ್ನಿಸಿತು. ಈ ಬಡಾವಣೆಯಲ್ಲಿ ಕಾಗೆಗಳು ಇಷ್ಟೊಂದು ಯಾಕಿವೆ ಅಂತ ಕಾರಣ ಹೊಳೆದು ತುಟಿ ಅಂಚಿನಲ್ಲಿ ನಗೆ ಮೂಡಿತು. ಶನೀಶ್ವರನಿಗೆ ನಮಸ್ಕಾರ ಹಾಕಿದೆನಾದರೂ, ಗುಬ್ಬಚ್ಚಿಗಳೇನಾದವು ಅಂತ ತಲೆ ಕೊರೆಯುತ್ತಿತ್ತು. ಒಂದು ವೇಳೆ ಈ ಕಾಗೆಗಳೇನಾದರೂ.... ಅಂತ ಯೋಚನೆ ಕೂಡ ಬಂತು.

ಎಲ್ಲ ಕಡೆ ಹುಡುಕಿದರೂ ಗುಬ್ಬಚ್ಚಿಗಳೇ ಕಾಣಲಿಲ್ಲ. ಅಮೆರಿಕದಿಂದ ರಜಾ ಕಳೆಯಲು ಬಂದ ನನಗ್ಯಾಕೆ ಈ ಗುಬ್ಬಚ್ಚಿ ವಿಚಾರ ಅಂತ ಸುಮ್ಮನಾದೆ. ಅಣ್ಣ, ಅಕ್ಕ, ಸಂಬಂಧಿಕರು, ಗೆಳೆಯರು ಅಂತ ಎಲ್ಲರ ಮನೆಗಳಿಗೂ ಭೇಟಿ ಕೊಡುವುದರಲ್ಲಿ ಕಾಲ ಹೋದದ್ದೇ ಗೊತ್ತಾಗಲಿಲ್ಲ. ಅಣ್ಣನ ಮನೆಯಲ್ಲೇ ಇದ್ದ ಅಮ್ಮನ ಜೊತೆ ಕಾಲ ಕಳೆಯುವಾಗ, ಊಟ ಮಾಡುವಾಗ, ಮನಬಿಚ್ಚಿ ಮಾತನಾಡುವಾಗ, ಅಮ್ಮ ಹೇಳಿದ ಕತೆಗಳನ್ನು ಕಿವಿಗೊಟ್ಟು ಕೇಳುವಾಗ ಎಲ್ಲಿಲ್ಲದ ನೆಮ್ಮದಿ ತರುತ್ತಿತ್ತು. ಅಮ್ಮ ತಾತ್ಕಾಲಿಕವಾಗಿ ಉಳಿದುಕೊಂಡಿರುವುದು ನಮ್ಮ ಅಣ್ಣನ ಮನೆಯಲ್ಲಿ. ಬಸವನಗುಡಿಯಲ್ಲಿದ್ದ ಸ್ವಂತ ಹಳೆ ಹೆಂಚಿನ ಮನೆಗೆ ಬೀಗ ಹಾಕಿದ್ದರೂ ಅಮ್ಮನ ಮನಸ್ಸೆಲ್ಲ ಅಲ್ಲೇ ಇರುತ್ತಿತ್ತು. ನಾವೆಲ್ಲ ಬೆಳೆದ ಮನೆಯನ್ನು ನೋಡದೆ ಅಮೆರಿಕಗೆ ಹೋಗಲು ಮನಸ್ಸಿರಲಿಲ್ಲ. ಬೀಗದ ಕೈ ಹಿಡಿದು ಬಸವನಗುಡಿ ಮನೆಗೆ ಒಬ್ಬನೇ ಹೋದೆ. ಅಪ್ಪ ಕಟ್ಟಿಸಿದ ಹೆಂಚಿನ ಮನೆ ಮುರುಕು ಸ್ಥಿತಿಯಲ್ಲಿ ಬಿಕೋ

ಅನ್ನಿಸಿತು. ಇಲಿ ಹೆಗ್ಗಣಗಳು ದಾಳಿ ಮಾಡಿರುವ ಸೂಚನೆ ಅವುಗಳ ಮಲ ಮೂತ್ರದ ವಾಸನೆಯಿಂದಲೇ ಗೊತ್ತಾಗುತ್ತಿತ್ತು. ಉಸಿರು ಕಟ್ಟಿದಂತಾಗಿ ಎಲ್ಲ ಕಿಟಕಿ ಬಾಗಿಲುಗಳನ್ನು ತೆರೆದು ಒಂದೊಂದೇ ಕೋಣೆಗೆ ಹೋಗಿ ನೋಡಿದೆ. ನಡುಮನೆಯಲ್ಲಿ ಅಮ್ಮ ಮಲಗಿಕೊಳ್ಳುವ ಮಂಚದ ಮೇಲೆ ಕುಳಿತೆ. ಗ್ಲಾಸ್ ಹೆಂಚಿನ ಮೂಲಕ ಬೀಳುತ್ತಿದ್ದ ಸೂರ್ಯನ ಕಿರಣ ಹಿತವೆನ್ನಿಸಿತು. ಕತ್ತೆತ್ತಿ ನೋಡಿದಾಗ ಅಮ್ಮ ಮಡಿ ಸೀರೆ ಒಣಗಲು ಹಾಕುತ್ತಿದ್ದ ತಂತಿ ಇನ್ನೂ ಹಾಗೆ ಇತ್ತು. ಮಡಿಕೋಲು ಸದಾ ಬಾಗಿಲಿನ ಹಿಂದೆ ಇರಲೇ ಬೇಕಲ್ಲವೆ ಎಂದುಕೊಂಡವನು ನಡುಮನೆಯ ಬಾಗಿಲ ಹಿಂದೆ ನೋಡಿದೆ. ಅದೇ ಐದಡಿ ಉದ್ದದ ತೆಳ್ಳನೆ ಬಿದುರಿನ ಕೋಲು, ಅಂದುಕೊಂಡಂತೆ ಗೋಡೆಗೆ ಒರಗಿ ನಿಂತಿತ್ತು. ನನಗರಿವಿಲ್ಲದಂತೆ ಕೈಗೆತ್ತಿಕೊಂಡೆ. ಗುಬ್ಬಚ್ಚಿ ವಿಚಾರ ಮರೆತಿದ್ದೆನಾದರೂ ಆ ಮಡಿಕೋಲು ನೋಡಿದ ಮೇಲೆ ಎಲ್ಲ ಮರುಕಳಿಸಿ ಬಂದಿತು. ಇಪ್ಪತ್ತು ವರ್ಷಗಳೇ ಆಗಿರಬೇಕಲ್ಲವೆ...

ಆ ದಿನ ಹಾಸಿಗೆಯಿಂದ ಎದ್ದವನೇ ನಿರ್ಧರಿಸಿಬಿಟ್ಟಿದ್ದೆ. ಏನಾದರೂ ಮಾಡಿ ಈ ಗುಬ್ಬಚ್ಚಿಗಳನ್ನು ಮನೆಯಿಂದ ಹೊರಗೋಡಿಸಲೇಬೇಕೆಂದು. ಅವಕ್ಕೆಷ್ಟು ಧೈರ್ಯವಿರಬೇಕು. ನನ್ನ ಕೋಣೆಯ ಒಳಗೆ ಹೆಂಚಿಗೆ ಅಂಟಿಕೊಂಡಂತೆ ಈ ಗುಬ್ಬಚ್ಚಿಗಳು ಗೂಡು ಕಟ್ಟಿ ಗಬ್ಬೆಬ್ಬಿಸುತ್ತಿವೆಯಲ್ಲ ಅಂತ ಕೋಪ ಬಂದಿತ್ತು. ಸಾಲದು ಎನ್ನುವಂತೆ ನಾನು ಮಾಡುತ್ತಿದ್ದ ಡ್ರಾಯಿಂಗ್ ಮೇಲೆ ಹಿಕ್ಕೆ ಹಾಕಿ ಪುರ್ ಅಂತ ಹಾರಿ ಹೋಗಿತ್ತಲ್ಲ, ನೋಡ್ಕೊಳ್ತೀನಿ ಇವತ್ತು ಎಂತಲೇ ಎದ್ದೆ. ನಡುಮನೆಗೆ ಹೋಗಿ ಅಮ್ಮನ ಮಡಿಕೋಲು ತಂದಿಟ್ಟುಕೊಂಡೆ. ಗೂಡಿನ ಒಡೆಯರಾದ ಗಂಡು ಹೆಣ್ಣು ಗುಬ್ಬಚ್ಚಿಗಳು ಒಳಗೆ ಬರುವುದನ್ನೇ ಕಾದು ತಕ್ಷಣ ಕಿಟಕಿ ಬಾಗಿಲುಗಳೆನ್ನೆಲ್ಲ ಮುಚ್ಚಿದೆ. ವಿಕಾರವಾಗಿ ಕಿರುಚುತ್ತಾ ಮಡಿಕೋಲನ್ನು ಎತ್ತರಕ್ಕೆ ಬೀಸುತ್ತ ಗುಬ್ಬಚ್ಚಿಗಳು ಹತಾತ್ತನೆ ದಿಗ್ಭ್ರಾಂತಿಗೊಳ್ಳುವಂತೆ ಮಾಡಿದೆ. ಕಿಟಕಿ ಮುಚ್ಚಿದ್ದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಏದುಸಿರುಬಿಡುತ್ತಿದ್ದ ಆ ಬೆದರಿದ ಗುಬ್ಬಿಗಳು ಹೆಂಚಿನೆತ್ತರಕ್ಕೇ ಹಾರಿ ಹಾರಿ ಸುಸ್ತಾದ ಮೇಲೆ ಹುಂ, ಇನ್ನೆಂದಾದರು ಒಳಗೆ ಬಂದೀರ, ಜೋಕೆ ಅಂತ ಕಿರುಚಿ ಕಿಟಕಿ ಬಾಗಿಲು ತೆರೆದೆ. ಬದುಕಿದೆಯ ಬಡ ಜೀವಿ ಅಂತ ಎರಡೂ ಗುಬ್ಬಚ್ಚಿಗಳು ಹಾರಿ ಹೋಗುವುದನ್ನು ನೋಡಿ ಏನೋ ಗೆದ್ದವನಂತೆ ಅನ್ನಿಸಿತು. ಒಂದು ಕುರ್ಚಿಯ ಮೇಲೆ ನಿಂತು ತೊಲೆಗೆ--ಹೆಂಚಿಗೆ ಮಧ್ಯ ಕಟ್ಟಿದ್ದ ಗೂಡನ್ನು ಕೋಲಿನಿಂದ ಎಬ್ಬಿ ತಿವಿದು ಕೆಳಗುರುಳಿಸಿದೆ. ಗೂಡು ನೆಲಕ್ಕೆ ಬೀಳುವ ಮುನ್ನವೇ ಟಪ್, ಟಪ್ ಎಂದು ಶಬ್ದ ಬಂದಾಗ ನೆಲದ ಕಡೆ ಕಣ್ಣಾಡಿಸಿದೆ. ನಾನು ಯೋಚಿಸದೆ ಮಾಡಿದ ಪಾಪ ಕಾರ್ಯ ನನಗರಿವಿಲ್ಲದಂತೆ ನಡೆದು ಹೋಗಿತ್ತು. ಕುರ್ಚಿಯಿಂದ ಕೆಳಗಿಳಿದು ನೋಡಿದೆ. ಕೆಂಪು ರೆಡ್ ಆಕ್ಸೈಡ್ ನೆಲದ ಮೇಲೆ ಎರಡು ನಿರಾಕಾರದ ಹಳದಿ ಲೋಳೆಗಳು ಒಂದನ್ನೊಂದು ಮುತ್ತಿಡುವಂತೆ ಚಲ್ಲಿತ್ತು. ಪಕ್ಕದಲ್ಲೇ ಬಿಳಿ ಹತ್ತಿ, ಕಾಗದದ ಚೂರು, ಗರಿಕೆ, ದಾರಗಳಿಂದ ಮಾಡಿದ್ದ ಗುಬ್ಬಚ್ಚಿಗಳ ಗೂಡು ಕೇಳುವರಿಲ್ಲದೆ ಬಿದ್ದಿತ್ತು. ಎಂತಹ ಅನಾಹುತವಾಯಿತಲ್ಲ

ಅಂತ ಮನಸ್ಸು ಬೇಸರಗೊಳ್ಳುತ್ತಿತ್ತು. ಛೆ, ಗುಬ್ಬಿಗಳು ಮೊಟ್ಟೆ ಇಟ್ಟಿವೇ ಅಂತ ಗೊತ್ತಿದ್ದರೆ ಖಂಡಿತ ಗೂಡು ಬೀಳಿಸುತ್ತಿರಲಿಲ್ಲ. ಒಂದು ವೇಳೆ ಗೂಡಿನ ಜೊತೆಗೇ ಬಿದ್ದಿದ್ದರೆ ಮೊಟ್ಟೆಗಳು ಒಡೆಯುತ್ತಿರಲಿಲ್ಲವೇನೋ. ಯಾಕಾದರೂ ಈ ಮಡಿಕೋಲು ತಂದೆನೋ. ಏಣಿ ಹಾಕಿಕೊಂಡು ಕೈಯಲ್ಲೇ ಗೂಡು ಕಿತ್ತಿದ್ದರೆ ಮೊಟ್ಟೆ ಇರುವ ಅರಿವಾಗುತ್ತಿತ್ತೇನೋ. ಎಷ್ಟು ಸಮಾದಾನ ಮಾಡಿಕೊಂಡರೂ ಗುಬ್ಬಿ ಹತ್ಯೆಗೆ ಕಾರಣನಾದ ಅಪರಾಧಿ ನಾನೇ ಎಂದು ಒಳ ಮನಸ್ಸು ಕೊರೆಯುತ್ತಿತ್ತು. ಮತ್ತೇನಾದರು ಆ ಗುಬ್ಬಿಗಳು ಮೊಟ್ಟೆಗೆ ಕಾವು ಕೊಡಲು ಬಂದರೇ ? ಈ ಭೀಕರ ದೃಶ್ಯವನ್ನು ಆ ಬಡ ಅಪ್ಪ-ಅಮ್ಮ ಗುಬ್ಬಿಗಳು ನೋಡದಿರಲೆಂದು ಮತ್ತೆ ಕಿಟಕಿ ಬಾಗಿಲು ಮುಚ್ಚಿದೆ. ಏನೂ ಮಾಡಲು ತೋಚದೆ ಸುಮ್ಮನೆ ಕತ್ತಲಲ್ಲಿ ಕುಳಿತೆ. 'ಅಯ್ಯಾ, ಇದ್ಯಾಕ ಹಿಂಗೆ ಕತ್ತಲಲ್ಲಿ ಕೂತ್ರಿ ಅಂತ ಕೋಣೆಯೊಳಗೆ ?' ಬಂದ ಕೆಲಸದವಳಿಗೆ ಎಲ್ಲ ಅರ್ಥವಾಗಿತ್ತು. 'ಗುಬ್ಬಿ ಕೊಂದು ಪಾಪ ಕಟ್ಕೊಂಡವ್ರೆ, ರವಪ್ಪ' ಅಂತ ತನ್ನ ಎಂಟು ವರ್ಷದ ಮಗಳಿಗೂ ಹೇಳಿದ್ದು ಕೇಳಿಸಿತು. ಹಿತ್ತಲಿನಿಂದ ಬೊಗಸೆಗೈಯಲ್ಲಿ ಸ್ವಲ್ಪ ಮಣ್ಣು, ಹೊಟ್ಟಿನ ಪುಡಿ ತಂದು ಲೋಳೆಯ ಮೇಲೆ ಹಾಕಿ ವಾಂತಿ ಎತ್ತುವಂತೆ ಮೊರದಲ್ಲಿ ತುಂಬಿ ನೆಲ ಸ್ವಚ್ಛ ಮಾಡಿದ ಕೆಲಸದಾಕೆಗೆ ಮನಸ್ಸಿನಲ್ಲೇ ಧನ್ಯವಾದ ಹೇಳಿಕೊಂಡೆ. ಮಡಿಕೋಲು ಇನ್ನು ಅಲ್ಲೇ ಗೋಡೆಗೆ ಒರಗಿ ನಿಂತಿತ್ತು. ಕೆಲಸದವಳಿಗೂ ಗೊತ್ತು ತಾನು ಮಡಿಕೋಲು ಮುಟ್ಟುವ ಹಾಗಿಲ್ಲ ಎಂದು. ಅದಕ್ಕೆ ಅಂತ ಕಾಣುತ್ತೆ, ನೆಲ ಎಲ್ಲ ಸ್ವಚ್ಛ ಮಾಡಿದರೂ ಮಡಿಕೋಲನ್ನು ಅಲ್ಲೇ ಬಿಟ್ಟಿದ್ದಳು. ಈ ಮಡಿಕೋಲು ಅಪವಿತ್ರವಾದ ಕೆಲಸ ಮಾಡಲು ಸಹಾಯ ಮಾಡಿದೆ. ಇದನ್ನು ಶುಭ್ರಗೊಳಿಸದೆ ಅಮ್ಮನಿಗೆ ಗೊತ್ತಿಲ್ಲದಂತೆ ನಡುಮನೆಗೆ ವಾಪಸ್ಸು ಇಡಲು ಮನಸ್ಸಾಗಲಿಲ್ಲ. ಹಿತ್ತಲಲ್ಲಿದ್ದ ಒಗೆಯೊಕಲ್ಲಿನ ಬಳಿ ಹೋಗಿ ತೊಟ್ಟಿಯ ಮೇಲಿದ್ದ ತಾಮ್ರದ ಚೊಂಬಿನಿಂದ ನೀರು ತುಂಬಿ ಮೂರು ಸಲ ಮಡಿಕೋಲಿನ ಮೇಲೆ ಸುರಿದ ನಂತರ ಸ್ವಚ್ಛವಾಗಿ ಕಾಣಿಸಿತು. ಒಂದು ಹಳೆ ಬಟ್ಟೆಯಲ್ಲಿ ಆ ಮಡಿಕೋಲನ್ನು ಒರೆಸಿ, ಅಡುಗೆ ಮನೆಯಲ್ಲಿದ್ದ ಅಮ್ಮನಿಗೆ ಗೊತ್ತಾಗದಂತೆ ತಂದು ನಡುಮನೆಯ ಬಾಗಿಲಿನ ಹಿಂದೆ ಒರೆಗಿಸಿದೆ. ಆಗಲೇ ಹತ್ತು ಗಂಟೆ ಹೊಡೆದು ಹೊಟ್ಟೆ ಚುರುಗುಟ್ಟುತ್ತಿತ್ತು.

ಛಟಛಟನೆ ಸಿಡಿಯುವ ಒಗ್ಗರಣೆ ಶಬ್ದದ ಜೊತೆಗೆ ಕಾದ ಸೌಟಿನಿಂದ ಒಗ್ಗರಣೆ ಇಳಿಬಿಡುವಾಗ ಬರುವ ಛುಯ್ ಶಬ್ದ, ಘಂ ಅಂತ ಮೂಗಿಗೆ ಬರುವ ಹಿಂಗಿನ ಸುವಾಸನೆ ಎಲ್ಲ ಸೇರಿ ಅಡುಗೆ ತಯಾರಿದೆ ಎಂದು ಗೊತ್ತಾಯಿತು. ಸ್ನಾನ ಮಾಡಿ ಬಂದಾಗ ಅಮ್ಮ ನಡುಮನೆಯಲ್ಲಿ ತಟ್ಟೆ ಹಾಕಿ ಕಾಯುತ್ತಿದ್ದರು. 'ನಿನಗಿಷ್ಟವೆಂದು ಹೆಸರುಬೇಳೆ ತೊವ್ವೆ ಮಾಡಿದ್ದೀನಿ' ಎಂದು ಹೇಳಿ ಚಲ್ಲದಿರುವಂತೆ ಪಾತ್ರೆ ಕೊನೆಗೆ ಸೌಟಿನ ತಳ ಒರೆಸಿ ತಟ್ಟೆಗೆ ಹಾಕಲು ಬಂದಾಗ ಎರಡು ತೊಟ್ಟು ನೆಲದ ಮೇಲೆ ಬಿದ್ದದ್ದು ಅಮ್ಮನಿಗೆ ಕಾಣಲಿಲ್ಲ. ಕೆಂಪು ರೆಡ್ ಆಕ್ಸೈಡ್ ನೆಲದ ಮೇಲೆ ಬಿದ್ದ ನಿರಾಕಾರದ ಹಳದಿ ತೊವ್ವೆಗೂ, ಸ್ವಲ್ಪ

ಹೊತ್ತಿನ ಕೆಳಗಾದ ಪಾಪ ಕಾರ್ಯಕ್ಕೂ ತೀರ ಹೋಲಿಕೆಯ ಅರಿವಾಗಿ ಹೊಟ್ಟೆ ತೊಳಸಿದಂತಾಯಿತು. 'ನನಗೆ ಹಸಿವಿಲ್ಲ' ಅಂತ ಹೇಳಿ ಕೈ ತೊಳೆದೆ.

'ದಪ್' ಅಂತ ಆದ ಶಬ್ದದಿಂದ ಎಚ್ಚತ್ತು ಮಡಿಕೋಲನ್ನು ಅಲ್ಲೆ ಗೋಡೆಗೆ ಒರಗಿಸಿ ಮುಂಬಾಗಿಲಿಗೆ ಬಂದೆ. ಪೇಪರ್ ಹುಡುಗ ಕಿಟಕಿ ಮೂಲಕ ಎಸದ ಡೆಕ್ಕನ್ ಹೆರಾಲ್ಡ್‌ದೆ ಇರಬೇಕು, 'ದಪ್' ಎಂಬ ಶಬ್ದ ಅಂತ ಖಚಿತವಾಯಿತು. ಅಲ್ಲೆ ಇದ್ದ ಒಂದು ಸೋಫ ಕುರ್ಚಿಯಲ್ಲಿ ಕುಳಿತು ಪೇಪರ್ ತಿರುವಿಹಾಕಿದೆ. ಎದುರಿಗಿದ್ದ ಗಾಜಿನ ಅಲ್ಮಿರ ಕಡೆ ಗಮನ ಹರಿಯಿತು. ನಾನು ಚಿಕ್ಕವನಾಗಿದ್ದಲೂ ನೋಡುತ್ತಿದ್ದ ಮಣ್ಣಿನ ಗೊಂಬೆಗಳು ಬೀರುವಿನಲ್ಲಿ ಸಾಲಾಗಿ ಮೌನವಾಗಿ ಕುಳಿತಿದ್ದವು. ಬಿಳಿಯ ಬಣ್ಣದ ಸೌಮ್ಯಮೂರ್ತಿ ಬುದ್ಧನ ಬೊಂಬೆ, ರಾಮ, ಸೀತೆ, ಲಕ್ಷ್ಮಣ ಹನುಮಂತನ ಬೊಂಬೆಗಳು, ಸರಸ್ವತಿಯ ಬೊಂಬೆ ಸಮಯದ ಪರಿವೆಯೇ ಇಲ್ಲದಂತೆ ಕುಳಿತಲ್ಲೆ ನಿಂತಲ್ಲೇ ಸುಮಾರು ಇಪ್ಪತ್ತೈದು ವರ್ಷಗಳಿಂದ ಅದೇ ಗೂಡಿನಲ್ಲಿ ಇರುವುದು ನೋಡಿ ಕಾಲ ಎಷ್ಟು ಸ್ಥಿರ ಸ್ಥಿತಿಯಲ್ಲಿದೆ ಅನ್ನಿಸಿತು. ಸಮ್‌ತಿಂಗ್ಸ್ ನೆವೆರ್ ಚೇಂಜ್! ಗೂಡಿನಲ್ಲೇ ಇದ್ದ ಹಳೆ ಫೋಟೊ ಆಲ್ಬುಮ್ ಕೈಗೆತ್ತಿಕೊಂಡೆ. ಅಜ್ಜ ಅಜ್ಜಿ ಫೋಟೊ, ಅಪ್ಪನ ರಿಟೈರ್ಮೆಂಟ್ ಫೋಟೊ, ಅಮ್ಮನ ಜೊತೆ ಹಾಸನದ ಗೌಡತಿ ಫೋಟೊ, ಅಕ್ಕ ಭಾವಂದಿರ ಜೋಡಿ ಫೋಟೊ, ಅಣ್ಣ ಅತ್ತಿಗೆಯರ ಜೋಡಿ ಮದುವೆ ಫೋಟೊ, ಹೀಗೆ ಒಂದೊಂದೆ ಕಪ್ಪು ಆಲ್ಬಮ್ ಪುಟಗಳನ್ನು ಬೆರಳು ಬೇಗನೆ ತಿರುವಿ ಹಾಕುತ್ತಿದ್ದರೂ ಮನಸ್ಸು ಮಾತ್ರ ಹಿಂದಿನ ಘಟನೆಗಳನ್ನೆಲ್ಲವನ್ನು ಕತೆಯಂತೆ ಪೋಣಿಸಿಯೇ ಮುಂದಕ್ಕೆ ಹೋಗುತ್ತಿತ್ತು. ಅರೆ, ನಾವಿದ್ದ ಗುಬ್ಬಿ ಹಳ್ಳಿಯ ಮನೆ --ಶಾಂತಿ ನಿಲಯ, ಗುಬ್ಬಿ ಕೆರೆ, ಗೆಳಯ ಅನಂತ, ಅಪ್ಪ ಅಮ್ಮನ ವರಮಹಾಲಕ್ಷ್ಮಿವ್ರತದ ಫೋಟೊ, ಶಿವಗಂಗೆ ಬೆಟ್ಟ, ಬೇಲೂರು ಎಲ್ಲ ಕಣ್ಣಿಗೆ ಕಟ್ಟಿದೆಯಂತಿದೆಯಲ್ಲ. ಗುಬ್ಬಿ ನೆನೆಪು ಯಾವಾಗಲೂ ಹಸಿರಾಗೆ ಉಳಿದಿದೆಯಲ್ಲ, ಯಾಕಿರಬಹುದು ? ನನ್ನಾಕೆ ಕೂಡ ಗುಬ್ಬಿಯಲ್ಲಿ ಬೆಳದವಳಲ್ಲವೆ ? ಆ ಕಾರಣದಿಂದಿರಬಹುದೆ ? ಅಥವಾ ಅವಳೂ ಕೂಡ ಗುಬ್ಬಿಯಲ್ಲಿ ನನ್ನಂತೆಯೆ ಮತ್ತೆಲ್ಲೂ ನೋಡದ ವೆಲ್ವೆಟ್ ಹುಳಗಳನ್ನು ಬೆಂಕಿಪೊಟ್ಟಣದಲ್ಲಿ ಹುಲ್ಲಿನ ಹಾಸಿಗೆ ಮಾಡಿ ಅದರೊಳಗಿಟ್ಟು ಆಟವಾಡಿದ್ದಾಳೆ ಅಂತಲೆ ? ಅಥವಾ ಬೈಲಾಂಜನೇಯನ ಗುಡಿಯಲ್ಲಿ ಮುತ್ತುತ್ತಿದ್ದ ಕೋತಿಗಳಿಗೆ ಬಾಳೆಹಣ್ಣು ಕೊಡುವಾಗ ಒಂದು ಗಡವ ಕೋತಿ ಮೈಮೇಲೆ ಹಾರಿತ್ತೆಂದೆ ? ಸದಾ ನೆನಪು ಗುಬ್ಬಿಯದು.

'ಯಾಕೋ ಬೆಳಗಿನಿಂದ ಪೆಚ್ಚಾಗಿದಿಯೆಲ್ಲ' ಅಮ್ಮ ರಾತ್ರಿ ಕೇಳಿದ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಕೆಲಸದವಳು ಎಲ್ಲ ಹೇಳಿದಳು. 'ಗುಬ್ಬಚ್ಚಿ ಮೊಟ್ಟೆ ಒಡೆದೆ ಅಂತ ಯಾಕೆ ಬೇಜಾರು ಮಾಡ್ಕೊಳ್ತಿ? ಏನೋ ಗೊತ್ತಿಲ್ಲದೆ ತಪ್ಪು ಮಾಡಿದ್ದಿ. ಏನ್ಮಾಡೋಣ ಹೇಳು. ಮುಂದಿನವಾರ ಆ ಚಂದ್ರಶೇಖರಯ್ಯ ಗುಬ್ಬಿ ಜಾತ್ರೆಗೆ ಹೋಗುತ್ತಾರಂತೆ. ಅವರಿಗೆ

ಇಪ್ಪತ್ತೈದು ರೂಪಾಯಿ ಕೊಟ್ಟು ಗುಬ್ಬಮ್ಮನ ಹುಂಡಿಗೆ ನಿನ್ನ ಹೆಸರ್ಹೇಳಿ ಹಾಕ್ಬಿಡಿ ಅಂತ ಹೇಳಿದೀನಿ. ಅವರು ಹೊರಡೋ ದಿವಸ ನೀನೆ ಹೋಗಿ ಬಾಳೆಹಣ್ಣು, ತೆಂಗಿನಕಾಯಿ ಕೊಟ್ಟು ಅವರಿಗೆ ನಮಸ್ಕಾರ ಮಾಡಿ ಬಾ. ಹಲ್ಲಿ ಮೈ ಮೇಲೆ ಬಿದ್ದ ದೋಷಕ್ಕೆ ಪರಿಹಾರ ಇರುವಂತೆ ಇದಕ್ಕೂ ಪರಿಹಾರ ಇದೆಯೆಲ್ಲ....' ಸ್ವಲ್ಪ ಸಮಾಧಾನ ಆಗಿತ್ತು.

ಗಂಟೆ ಹನ್ನೆರಡಾಗಿತ್ತು.ಟೈಮ್ ಹೋಗಿದ್ದೇ ಗೊತ್ತಾಗಲಿಲ್ಲ. ಈ ಬಸವನಗುಡಿ ಮನೆ ಯಾವಾಗಲೂ ಹೀಗೆ ನೆನೆಪಿನ ಗಣಿ. ಎಲ್ಲಿ ಅಗೆದರೂ ಸಿಹಿ ಕಹಿ ಅನುಭವಗಳ ಕಣಜವೇ ಸಿಗುತ್ತೆ. ಅಮ್ಮ ಊಟಕ್ಕೆ ಕಾಯುತ್ತಾ ಇರ್ತಾರೆ ಅಂತ ಅರಿವಾಗಿ ಹೊರಡುವ ಆತುರವಾಯಿತು. ಎಲ್ಲ ಬಾಗಿಲುಗಳನ್ನು ಮುಚ್ಚಿದ್ದೇನೆಯೇ ಎಂದು ಖಾತ್ರಿ ಪಡಿಸಿಕೊಳ್ಳಲು ಹಿಂಬಾಗಿಲಿಗೂ ಹೋದೆ. ಆ ಬಾಗಿಲಿಗೆ ಮರದಲ್ಲೆ ಮಾಡಿದ್ದ ಬೀಗ ಭದ್ರವಾಗಿ ಹಾಕಿತ್ತು. ಗುಡಿ ಹೆಬ್ಬಾಗಿಲುಗಳಿಗೆ ಹಾಕಲರ್ಹವಾದ ಆ ಮಜುಭೂತಾದ ಬೀಗ ಕೂಡ ಗುಬ್ಬಿಯ ನೆನಪನ್ನು ತಂದಿತು. ಗುಬ್ಬಿ ಆಶ್ರಮದಭಟ್ಟರು ಬೆಂಗಳೂರಿಗೆ ನಮ್ಮ ಮನೆಗೆ ಬಂದಾಗ ತೇಗದ ಮರದಲ್ಲಿ ಕೆತ್ತಿ ಮಾಡಿದ್ದ ಟೊಂಕಶಾಲೆ ಬೀಗ ಅದು. ಆ ಬೀಗದ ನಿಗೂಢ ವಿನ್ಯಾಸ ಗೊತ್ತಿಲ್ಲದವರು ತಿಪ್ಪರಲಾಗ ಹೊಡೆದರೂ ತೆಗೆಯಲು ಸಾಧ್ಯವಿರಲಿಲ್ಲ. ಶಾಲೆಯಿಂದ ಬರುವ ವೇಳೆಗೆ ಹೊರಟು ಹೋಗಿದ್ದ ಭಟ್ಟರ ಮುಖ ಮಸಕು ಮಸುಕಾಗಿ ನೆನಪಿತ್ತು ಅಷ್ಟೆ. ಮುಂಬಾಗಿಲಿಗೆ ಬೀಗ ಹಾಕಿ ಆಟೋ ಹಿಡಿದು ಕುಮಾರಸ್ವಾಮಿ ಲೇಔಟಿಗೆ ವಾಪಸ್ಸು ಬಂದು ಅಮ್ಮ ಬಡಿಸಿದ ಊಟ ಮಾಡಿ ಹಾಗೇ ಚಾಪೆಯ ಮೇಲೆ ಉರಳಿಕೊಂಡೆ. ಮಂಪರು ನಿದ್ದೆಯಲ್ಲಿ ಗುಬ್ಬಿ ಚಿತ್ರದ ಬಣ್ಣ ಬಣ್ಣದ ಚಿಟ್ಟೆಗಳು ಹಾರುವಂತೆ ಕಣ್ಮುಂದೆಯೇ ಕಾಣತೊಡಗಿದವು.

ಗುಬ್ಬಿ ಒಂದು ಹಳ್ಳಿಯೂ ಅಲ್ಲ, ಪಟ್ಟಣವೂ ಅಲ್ಲ. ಹೆಸರಿಗೆ ತಕ್ಕಂತೆ ಗುಬ್ಬಚ್ಚಿಯಷ್ಟೆ ಚಿಕ್ಕದಾದ ಜಾಗ. ಕಲ್ಲು ಕಲ್ಲು ಕೂಡ ಕಥೆ ಹೇಳುವ ಕರ್ನಾಟಕದಲ್ಲಿ ಗುಬ್ಬಿಗೂ ಒಂದು ಪುರಾತನ ಸ್ಥಳ ಮಹಿಮೆ ಇರಬೇಕಲ್ಲವೆ? ಇಲ್ಲವಾದಲ್ಲಿ ಗುಬ್ಬಿ ಅಂತ ಯಾರು ಹೆಸರು ಇಡಲು ಹೋಗ್ತಾರೆ? ಯಾಕೋ ಏನೋ ಎಷ್ಟು ಜ್ಞಾಪಿಸಿಕೊಂಡರೂ ಗುಬ್ಬಿ ಹೆಸರಿನ ಹಿಂದಿದ್ದ ಚರಿತ್ರೆ ನೆನಪಿಗೆ ಬರಲಿಲ್ಲ. ಹಳ್ಳಿ ಅಥವಾ ಊರಿನ ಹೆಸರು ಪ್ರಾಣಿಗಳ ಮೂಲಾಧಾರದಿಂದ ಬರುವುದು ತೀರ ಕಡಿಮೆಯಾದರೂ ಬಸವನಹಳ್ಳಿ, ನಂದಿಗ್ರಾಮ, ನವಿಲೂರು ಹೀಗೆ ಎಷ್ಟು ಜಾಗಗಳನ್ನು ನಾನೇ ನೋಡಿಲ್ಲವೆ. ಅವೆಲ್ಲಕ್ಕೂ ಒಂದಲ್ಲ ಒಂದು ಕತೆ, ಪುರಾಣ ಹೆಣದಿದ್ದರಲ್ಲವೆ ನಮ್ಮ ಪೂರ್ವಿಕರು. ಏನಿಲ್ಲ ಅಂದರೂ ಹಳ್ಳಿ ಗೌಡ, ಊರಿನ ದೊರೆ, ಋಷಿಮುನಿಗಳು, ಗಾನಗಂಧರ್ವರು, ದೇವ ದೇವತೆಗಳು ಹೀಗೆ ಯಾರಾದರೊಬ್ಬರು ಸ್ಥಳಪುರಾಣಕ್ಕೆ ಕಾರಣರಿರಬೇಕಲ್ಲ. ಚಿಕ್ಕನಾಯಕನಹಳ್ಳಿಗೂ ಒಬ್ಬ ನಾಯಕ ಇದ್ದನಂತೆ. ಆದರೆ ಗುಬ್ಬಿಗೆ ? ಗುಬ್ಬಮ್ಮನ ಜಾತ್ರೆಗೂ ಹೋಗಿದ್ದ ನೆನಪಿದೆ.

ಜಾತ್ರೆಗೆ ಹೋಗುವಾಗ ಗುಬ್ಬಮ್ಮನ ಪೂಜೆ ಯಾಕೆ ಮಾಡುತ್ತಾರೆಂದು ಅಮ್ಮ ಹೇಳಿದ್ದ ಕಥೆಗೂ ಗುಬ್ಬಿ ಹೆಸರಿಗೂ ಏನೋ ಸಂಬಂಧ ಇತ್ತಲ್ಲವೆ ಅಂತ ಮನಸ್ಸು ಮೆಲಕು ಹಾಕುತ್ತಿತ್ತು. ಗುಬ್ಬಿಯಲ್ಲಿ ಹುಟ್ಟಿ ಬೆಳದವರಿಗೆ ಗುಬ್ಬಿ ಗುಬ್ಬಮ್ಮನ ಜಾತ್ರೆ ಪುರಾಣ ಗೊತ್ತಿಲ್ಲ ಅಂದರೆ ಯಾರಾದರು ನಂಬುತ್ತಾರೆಯೆ? ಬೆಂಗಳೂರಿನಲ್ಲಿ ಬಸವನಗುಡಿ ಬಸವಣ್ಣನ ಕತೆಗೂ ಕಡಲೆಕಾಯಿ ಪರ್ಷೆಗೂ ಸಂಬಂಧ ಕಲ್ಪಿಸಬೇಕೆ? ಯಾರಾದರು ನಕ್ಕಾರು. ಗುಬ್ಬಿ ಜಾತ್ರೆಗೆ ಹೋಗಿದ್ದು ಒಂದೆ ಸಲ. ಬಲ ಮೊಣಕ್ಯೆ ಮೇಲೆ ಇದ್ದ ಸುಟ್ಟ ಗಾಯದ ಕಲೆ ನೋಡಿದಾಗಲೆಲ್ಲ ಅದ್ಯಾಕೋ ಗುಬ್ಬಮ್ಮನ ಜಾತ್ರೆ ನೆನಪಿಗೆ ಬರುತ್ತಿತ್ತು. ಗುಬ್ಬಿ ಜಾತ್ರೆಗೆ ಹೋಗುವರೆಲ್ಲಾ ಒಂದಲ್ಲಾ ಒಂದು ಕೋರ್ಯೆಕೆ ಇಟ್ಟುಕೊಂಡೆ ಹೋಗ್ತಿದ್ರಲ್ಲವೆ. ಮೊಣಕ್ಯೆ ಮೆಲೆ ಬಂದಿದ್ದ ನರ ಗಳ್ಳೆ (ವಾರ್ಟ್) ಕುದುರೆ ಬಾಲದ ಕೂದಲು ಕಟ್ಟಿದರೂ ಹೋಗದಿದ್ದಾಗ ಅಮ್ಮ ಗುಬ್ಬಮ್ಮನ ಮೊರೆ ಹೊಕ್ಕಿದ್ದು ಜ್ಞಾಪಕ ಬಂತು. ಜಾತ್ರೆಲಿ ಗುಬ್ಬಮ್ಮನ ರಥ ಎಳೆಯುವಾಗ ಬಾಳೆಹಣ್ಣು ದೇವರಿಗೆ ಅರ್ಪಿಸುವುದು ಪುರಾತನ ಪದ್ದತಿ. ಆ ಬಾಳೆಹಣ್ಣಿನಲ್ಲಿ ನಾಲ್ಕು ಮೆಣಸಿನ ಕಾಳು ಹುದುಗಿಸಿ ಜಾತ್ರೆ ದಿನ ಗುಬ್ಬಮ್ಮನ ರಥಕ್ಕೆ ಎಸೆದರೆ ಎಂತಹ ನರಗಳ್ಳೆಯೂ ಮಾಯವಾಗುವುದಂತೆ. ಜಾತ್ರೆಗೆ ಹೋಗಲು ಇನ್ನೆಂತಹ ಕಾರಣ ಬೇಕು? ಅಮ್ಮನ ಜೊತೆ ನಾನೂ ಜಾತ್ರೆಗೆ ಹೋಗಿ ಮೆಣಸಿನ ಕಾಳು ಹುದುಗಿಸಿದ ನಾಲ್ಕು ಬಾಳೆಹಣ್ಣುಗಳನ್ನು ರಥಕ್ಕೆಸೆದು ಬಂದಿದ್ದೆ. ಮೂಢನಂಬಿಕೆಯಲ್ಲದಿದ್ದರೂ ದೇವರನ್ನು ನಂಬಿ ಕೆಟ್ಟವರಿಲ್ಲ ಅಂತ ಅಮ್ಮನ ತರ್ಕ. ಆದರೆ ನರಗಳ್ಳೆಯಂತೂ ಹೋಗಲಿಲ್ಲ. ನಮ್ಮ ಅಪ್ಪ ಗುಬ್ಬಿಗೆ ಮೆಡಿಕಲ್ ಆಫೀಸರ್ ಆಗಿರುವಾಗ ಇಂತ ಸಣ್ಣ ನರಗಳ್ಳೆಗೆ ಔಷಧ ಕೊಡದಿರುತ್ತಾರೆಯೆ? 'ಮೊಣಕ್ಯೆ ಮೇಲಿದ್ದ ನರಗಳ್ಳೆಗೆ ಒಂದಿಷ್ಟು ಹ್ಯೆಡ್ರೋಕ್ಲೋರಿಕ್ ಆಸಿಡ್ ಹಾಕಿದರೆ ಆಯಿತು. ನರಗಳ್ಳೆ ಸುಟ್ಟು ಬಸ್ಮವಾಗುತ್ತೆ' ನೂತನ ವ್ಯೆದ್ಯಕೀಯ ತರ್ಕ ಅಪ್ಪನದು. ದೀಪಾವಳಿ ಹಬ್ಬದಲ್ಲಿ ಆನೇ ಪಟಾಕಿ ಮ್ಯೆಮೇಲೆ ಸಿಡಿದಂತೆ ನೋವಾಗಿತ್ತು ನನ್ನ ಮೊಣಕ್ಯೆಗೆ. ಸುಟ್ಟ ಗಾಯ ಉಳಿದರೂ ನರಗಳ್ಳೆಯಂತೂ ಮಾಯವಾಗಿತ್ತು. ಆದರೆ ಚಿಕ್ಕ ಮನಸ್ಸಿನ ಮೇಲೆ ಗುಬ್ಬಮ್ಮನ ಜಾತ್ರೆ ಹೆಚ್ಚು ಪ್ರಭಾವ ಬೀರಿತ್ತೋ ಸುಟ್ಟ ಗಾಯವೋ ಹೇಳುವುದು ಕಷ್ಟ.

ಮೊಂಪರುಗಣ್ಣಿನಲ್ಲೇ ಎಡಗ್ಯೆ ಬೆರಳು ಬಲ ಮೊಣಕ್ಯೆ ಸವರಿಕೊಂಡಾಗ ವಾಸ್ತವ ಅರಿವಾಯಿತು. ಚಾಪೆ ಸುತ್ತಿ ಅಮ್ಮ ಕೊಟ್ಟ ಕಾಫಿ ಕುಡಿದು ಸುಮ್ಮನೆ ಹಾಗೆ ಸುತ್ತಾಡಿ ಬರೋಣವೆಂದು ಲಾಲ್‌ಬಾಗ್‌ಗೆ ಹೋದೆ. ಎಲ್ಲಡೆ ಪ್ರೇಮಿಗಳು ಕ್ಯೆ ಹಿಡಿದು ಹೋಗುತ್ತಿರುವುದನ್ನು ನೋಡಿ, ನಾನು ನನ್ನಾಕೆ ಜೊತೆ ಬರಬಹುದಿತ್ತಲ್ಲ ಅನ್ನಿಸಿತು. ಇಲ್ಲ, ವಾಸ್ತವವಾಗಿ ನಾನು ನೋಡಲು ಬಂದಿರುವುದು ಲಾಲ್‌ಬಾಗ್‌ನಲ್ಲಿಯಾದರೂ ಗುಬ್ಬಚ್ಚಿಗಳು ಕಾಣಿಸಬಹುದೆಂದು. ಕತ್ತಲಾದರೂ ಒಂದೂ ಗುಬ್ಬಚ್ಚಿ ಕಣ್ಣಿಗೆ ಬೀಳಲಿಲ್ಲ. 'ಇಲ್ಲೆಲ್ಲಾದರೂ ಗುಬ್ಬಚ್ಚಿ ನೋಡಿದೀರ ?' ಯಾರನ್ನಾದರೂ ಕೇಳುವ ಮನಸ್ಸಾಯಿತು.

'ಎಲ್ಲೋ ಹುಚ್ಚಾಸ್ಪತ್ರೆಯಿಂದ ತಪ್ಪಿಸಿಕೊಂಡು ಬಂದವನೆ' ಅಂತ ಆಡಿಕೊಳ್ತಾರೆ.... ಸುಮ್ಮನಾದೆ. ಅಸಮಾಧಾನದಿಂದಲೇ ಮನೆಗೆ ಹೊರಟೆ. ಎಷ್ಟು ಕಾದರೂ ಆಟೊ ಸಿಗದ ಕಾರಣ ಬಿಟಿಎಸ್ ಬಸ್ ಹತ್ತಿ ಜಯನಗರ ಕಾಂಪ್ಲೆಕ್ಸ್‌ಗೆ ಬಂದೆ. ಎಲ್ಲಿ ನೋಡಿದರೂ ಕಪ್ಪು ಹೊಗೆ ಉಗುಳುವ ವಾಹನಗಳೇ. ಬೆಂಗಳೂರಿನಲ್ಲಿ ಎಷ್ಟೊಂದು ಪಲ್ಲ್ಯೂಷನ್ ಆಗಿಬಿಟ್ಟಿದೆ ಅನ್ನಿಸಿತು. ಅಣ್ಣಾವ್ರ ಹಾಡು ಕೇಳಿಬರುತ್ತಿದ್ದ ಒಂದು ಮ್ಯೂಸಿಕ್ ಅಂಗಡಿ ಒಳಗೆ ನುಗ್ಗಿದೆ. ಕೆಲವು ಹಿಂದುಸ್ತಾನಿ ಹಾಗು ಕರ್ನಾಟಿಕ್ ಮ್ಯೂಸಿಕ್ ಕ್ಯಾಸೆಟ್ಟುಗಳನ್ನು ಕೊಂಡು ಹೊರಡುವುದರಲ್ಲಿದ್ದೆ. ಅನಂತಸ್ವಾಮಿಯವರ ಮಕ್ಕಳ ಹಾಡುಗಳು 'ಚಿಂವ್ ಚಿಂವ್ ಗುಬ್ಬಿ' ಅಂತ ಕನ್ನಡ ಕ್ಯಾಸೆಟ್ಟ್ ಕಂಡಾಗ ಅದನ್ನೂ ಕೊಂಡೆ. ಮಕ್ಕಳೇ ಹೇಳಿರುವ ಹಾಡುಗಳು, ನಮ್ಮ ಪುಟ್ಟಿಗೆ ಇಷ್ಟವಾಗಬಹುದು ಎಂದು ಅನ್ನಿಸಿದರೂ ಈ ಹಾಡನ್ನು ನಾನೇ ಮೊದಲು ಕೇಳಬೇಕು ಅಂತ ಗಡಿಬಿಡಿಯಿಂದ ಮನೆಗೆ ಹೊರಟೆ. ನಿಜ ಜೀವನದಲ್ಲಿ ಸಿಗದಿರುವ ವಸ್ತುವನ್ನು ಕವಿ ಬರೆದ ಕನಸಿನ ಊಹಾ ಲೋಕದಲ್ಲೆ ನೋಡಿ ಆನಂದಪಡ್ತಾರಲ್ಲ, ಜನ ಏಕೆ? ಪ್ರಶ್ನೆಗೆ ಉತ್ತರ ಹುಡುಕಲು ಮನಸ್ಸಿಗೆ ತಾಳ್ಮೆ ದೇಹಕ್ಕೆ ವಯಸ್ಸು ಎರಡೂ ಸಾಲದು ಅನ್ನಿಸಿತು. ಮನೆಗೆ ಬಂದಾಗ ರಾತ್ರಿ ಒಂಬತ್ತಾಗಿತ್ತು. ಪರಿಸರ ಮಲಿನದಿಂದಾಗಿ ಮೂಗಿನ ರಂದ್ರದೊಳಗೆ ಇಳಿಣದಂತೆ ಸೇರಿದ್ದ ಕಪ್ಪು ಹೊಗೆಯ ಕಲ್ಮಷವನ್ನೆಲ್ಲ ಶುಭ್ರಗೊಳಿಸಲು ಕೆಲ ಸಮಯವೇ ಬೇಕಾಯಿತು. ಅಬ್ಬ, ಇದೇ ರೀತಿ ಹೊಗೆ ಕುಡಿದರೆ ಅಕಾಲ ಮರಣ ಖಂಡಿತ ಅನಿಸಿತು.

ರಾತ್ರಿ ಎಂದಿನಂತೆ ಮಲಗುವಾಗ ಪುಟ್ಟಿಅಪ್ಪ ಕತೆ ಹೇಳಿದ್ರೇನೆ ನಾನು ಮಲಗಿಕೊಳ್ಳೋದು ಅಂತ ಹಠ ಮಾಡಿದಾಗ ಪಂಚತಂತ್ರದಿಂದ ಕತೆ ಹೇಳಲು ಶುರು ಮಾಡಿದೆ. ಒಂದಾದನಂತರ ಒಂದು ಕತೆ ಹೇಳಿದರೂ ಪುಟ್ಟಿಗೆ ನಿದ್ದೆ ಬರುವ ಸೂಚನೆ ಕಂಡುಬರಲಿಲ್ಲ. ಕೊನೆಗೆ ಅವಳಿಗಿಷ್ಟವಾದ ಗುಬ್ಬಚ್ಚಿ ಕತೆ ಶುರು ಮಾಡಿದೆ. 'ಒಂದೂರಿನಲ್ಲಿ ಒಬ್ಬ ರಾಜ ಇದ್ದ, ಅವನಿಗೊಬ್ಬಳು ರಾಜಕುಮಾರಿ, ಆ ರಾಜಕುಮಾರಿಗೆ ಯಾವಾಗಲೂ ಕತೆ ಕೇಳುವ ಹುಚ್ಚು.... ರಾಜ ಡಂಗುರ ಸಾರಿಸಿದ .... ಪಕ್ಕದೂರಿನ ರಾಜಕುಮಾರ ಹೇಳಿದ ಕತೆ ಒಂದು ಗುಬ್ಬಚ್ಚಿ ಬಂತು, ಒಂದು ಅಕ್ಕಿ ಕಾಳು ತಗೊಂಡು ಪುರ್ ಅಂತ ಹಾರಿಹೋಯಿತು, ಮತ್ತೊಂದು ಗುಬ್ಬಚ್ಚಿ ಬಂತು, ಮತ್ತೊಂದು ಕಾಳು ತಗೊಂಡು ಪುರ್ ಅಂತ ಹಾರಿ ಹೋಯಿತು.... ಹೀಗೆ ಕೊನೆ ಇಲ್ಲದ ಕತೆ ಹೇಳಿ ರಾಜಕುಮಾರಿಯನ್ನೇ ಮದುವೆ ಮಾಡಿಕೊಂಡು ಸುಖವಾಗಿದ್ದನಂತೆ'. ಪುಟ್ಟಿ ನಿದ್ದೆ ಮಾಡಿ ಎಷ್ಟೋ ಹೊತ್ತಾದರೂ ನಾನು ಇನ್ನು ಗುಬ್ಬಚ್ಚಿ ಕತೆ ಹೇಳುತ್ತಲೇ ಇದ್ದೆ. ಈ ಗುಬ್ಬಚ್ಚಿ ಕತೆ ಎಷ್ಟು ರಾತ್ರಿ ಪುಟ್ಟಿಯನ್ನು ಮಲಗಿಸಲು ಸಹಾಯ ಮಾಡಿದೆ ಅನಿಸಿತು. ಮುಂದೆ ಅವಳೂ ತನ್ನ ಮಗುವನ್ನು ಮಲಗಿಸಲು ಈ ಕತೆ ಹೇಳಬಹುದೆ ? ಅಥವಾ ಗುಬ್ಬಚ್ಚಿಗಳನ್ನೇ ನೋಡದ ಪುಟ್ಟಿಗೆ ಅವುಗಳನ್ನು ಮ್ಯೂಸಿಯಂಗಳಲ್ಲಿ ಡೈನೋಸರ್ ತರಹ ಬರಿ ಎಲುಬು ನೋಡುವ ಕಾಲ ಬಾರಬಹುದೆ?

ಸಾಮಾನ್ಯ ಗುಬ್ಬಚ್ಚಿಗೆ ಯಾರು ಮ್ಯೂಸಿಯಂ ಕಟ್ಟಲು ಸಾಧ್ಯ? ಅಂದರೆ ಅವುಗಳ ಎಲುಬು ನೋಡುವ ಭಾಗ್ಯ ಕೂಡ ನಮ್ಮ ಮುಂದಿನ ಪೀಳಿಗೆಗೆ ಇಲ್ಲವೆ ?

ಮರುದಿನ ಬೆಳಿಗ್ಗೆನೇ ಕೇಳಿ ಬರುತ್ತಿದ್ದ 'ಚಿಂವ್ ಚಿಂವ್ ಗುಬ್ಬಿ' ಹಾಡಿನಿಂದಲೇ ಗೊತ್ತಾಯಿತು. ಪುಟ್ಟಿ ತನ್ನ ಟೇಪ್ ರೆಕಾರ್ಡರಿನಲ್ಲಿ ಕೇಳುತ್ತ ಟೆರ್ರೇಸ್ ಮೇಲೆ ಡ್ಯಾನ್ಸ್ ಮಾಡುತ್ತಿದ್ದಾಳೆಂದು. ಆದರೆ ಕೆಲ ನಿಮಿಷಗಳ ನಂತರ ಪುಟ್ಟಿ ಅಳುವಿನ ಸದ್ದು ಕೇಳಿ ಅವಳಿದ್ದ ಜಾಗಕ್ಕೆ ಹೋದೆ. 'ಕಾ ಕಾ' ಎಂದು ಮುತ್ತುತ್ತಿದ್ದ ಕಾಗೆಗಳ ಗುಂಪು ನೋಡಿ ಹೆದರಿಕೊಂಡು ಅಳುತ್ತಿದ್ದಳು. ಕೈಯಲ್ಲಿ ಹಿಡಿದ ಪೊಟ್ಟಣದಲ್ಲಿ ಅಕ್ಕಿ ಕಾಳು ಸ್ವಲ್ಪವೇ ಉಳಿದಿತ್ತು. ನೆಲದ ಮೇಲೆಲ್ಲ ಚೆಲ್ಲಿದ್ದ ಅಕ್ಕಿ ಕಾಳುಗಳನ್ನು ಕಾಗೆಗಳು ಒಂದೂ ಬಿಡದೆ ತಿನ್ನುತ್ತಿದ್ದವು. ಅಪ್ಪ, ಅಪ್ಪ ಅಂತ ಅಳುತ್ತಿದ್ದ ಪುಟ್ಟಿಯನ್ನೂ ಸಮಾಧಾನ ಮಾಡಿ ಕಾರಣ ಕೇಳಿದೆ. ಹಿಂದಿನ ರಾತ್ರಿ ಹೇಳಿದ ರಾಜಕುಮಾರಿ ಕತೆಯಲ್ಲಿ ಬರುವ ಸನ್ನಿವೇಶವನ್ನು ತನ್ನದೇ ಪಾತ್ರದಲ್ಲಿ ಅಭಿನಯಿಸುತ್ತಿದಳು. ಅಕ್ಕಿ ಕಾಳುಗಳನ್ನು ಗುಬ್ಬಚ್ಚಿಗಳು ಒಂದೊಂದೇ ಬಂದು ತಿನ್ನುವ ಬದಲು ಕರಿ ಕಾಗೆಗಳೇ ಹಾರಿ ಕುಕ್ಕಲು ಬಂದಾಗ ಭಯದಿಂದ ಅಳು ಬಂದಿತ್ತು. 'ಯೂ ಲೈಡ್ ಟು ಮಿ' ಅಂತ ಇಂಗ್ಲಿಷ್‌ನಲ್ಲಿ ಅಳುತ್ತಲೇ ಹೇಳಿದಳು. ಇನ್ನೆಂದೂ ಗುಬ್ಬಚ್ಚಿ ಕತೆ ಹೇಳುವುದಿಲ್ಲವೆಂದು ನಿರ್ಧರಿಸಿದೆ.

ಮಾರನೆಯ ದಿನ ಭಾನುವಾರ ನನ್ನ ಗೆಳಯ ಆಜ಼ಾದ್ ಕೆಲಸದ ಮೇಲೆ ತುಮಕೂರಿಗೆ ಹೋಗ್ತಿದೀನಿ ನೀನು ಬರ್ತೀಯ ಅಂತ ಕೇಳಿದಾಗ ನಾನೂ ಅವನ ಜೊತೆ ಮೋಟಾರ್ ಬೈಕ್‌ನಲ್ಲಿ ಹೊರಟೆ. ತುಮಕೂರಿನಿಂದ ಕೇವಲ ೧೨ ಮೈಲಿ ದೂರ ಇರುವ ಗುಬ್ಬಿಗೆ ಅಲ್ಲಿಂದ ನಾನೊಬ್ಬನೆ ಹೋದೆ. ಮೂವತ್ತು ವರ್ಷಗಳ ನಂತರ ಗುಬ್ಬಿಗೆ ಹೋಗಿ ಅಲ್ಲಿಯಾದರೂ ಗುಬ್ಬಚ್ಚಿಗಳಿವೆಯೇ ಅಂತ ಹುಡುಕಾಡಿದೆ. ಅಲ್ಲಿಯೂ ಗುಬ್ಬಚ್ಚಿ ಕಾಣಲಿಲ್ಲ. ಗುಬ್ಬಿ ಕೂಡ ಪಾಳುಬಿದ್ದು, ನಾನು ಚಿಕ್ಕಂದಿನಲ್ಲಿ ನೋಡಿದ್ದ ಗುಬ್ಬಮ್ಮನ ಜಾತ್ರೆ ರಥ, ದೇವಸ್ಥಾನ ಎಲ್ಲ ಮುರುಕು ಸ್ಥಿತಿಯಲ್ಲಿ ಬಿದ್ದಿರುವುದನ್ನು ಕಂಡಾಗ ನಂಬಲೂ ಸಾಧ್ಯವಾಗಲಿಲ್ಲ. ಗುಬ್ಬಿಯ ಪ್ರತಿಯೊಂದು ದೃಶ್ಯವೂ ಕನಸು, ಕಲ್ಪನೆ ಮತ್ತು ನೆನಪಿನ ಸರಪಳಿಯಲ್ಲಿ ಮಿಶ್ರಣ ಗೊಂಡಂತಾಗಿತ್ತು. ಆದರೆ ಸತ್ಯಾಂಶವೇ ಬೇರೆಯಾಗಿತ್ತು. ಬಾಲ್ಯದ ಮುಗ್ಧತೆಯಲ್ಲಿ ವಿಸ್ಮಯಕಾರಿಯಾಗಿ ಕಂಡ ಒಂದೊಂದೂ ದೃಶ್ಯವೂ ಏಕೋ ಸ್ವಾರಸ್ಯ ಕಳೆದುಕೊಂಡ ವಸ್ತುವಿನಂತೆ ಅಲಿಪ್ತತೆ ತರಸಿದವು ನನ್ನಲ್ಲಿ. ಗಲ್ಲಿ ಗಲ್ಲಿ ಅಲೆದು ಸುಸ್ತಾಗಿ ಕೊನೆಗೆ ಊರಿನ ಹೊರಗಡೆ ಹೊಲಗಳ ಕಡೆ ಬೈಕ್ ಓಡಿಸಿದೆ. ಅಲ್ಲಿಯೂ ಗುಬ್ಬಚ್ಚಿಗಳ ಸುಳಿವಿರಲಿಲ್ಲ. ಆದರೆ ನನ್ನ ಗಮನ ಸೆಳೆದದ್ದು ಹೆಜ್ಜೆಗೊಂದು ಗೊಬ್ಬರ ಮಾರುವ ಅಂಗಡಿಗಳು ಮತ್ತು ಅದನ್ನು ಮಾರಾಟ ಮಾಡಲು ಜಾಹೀರಾತು ಇರುವ ದೊಡ್ಡದಾದ ಬೋರ್ಡ್‌ಗಳು. ಸುಂದರ. ಗ್ರಾಮೀಣ ಹೆಣ್ಣೊಂದು ಆಕರ್ಷವಾಗಿ ನಿಂತು ಸುಫಲ ಲಾಂಚನದ ಗೊಬ್ಬರವನ್ನೇ ಕೊಳ್ಳಲು ರೈತರಿಗೆ ಭಿನ್ನಹ ಮಾಡುತ್ತಿದ್ದ ಈ ಜಾಹೀರಾತುಗಳು

ಯಾರ ಕಣ್ಣನ್ನೂ ತಪ್ಪಿಸುವಂತಿರಲಿಲ್ಲ. ವೈಯಾರಿ ಹೆಣ್ಣಿನ ಜಾಹೀರಾತನ್ನು ಕಣ್ಣು ಮಿಟುಕಿಸದೆ ನಿಂತು ನೋಡುತ್ತಿದ್ದ ಕೆಲವು ರೈತರುಗಳ ಜೊತೆ ಸಂಭಾಷಣೆ ನಡಸಿದೆ. 'ಇಷ್ಟೊಂದು ಲಾರಿಯಲ್ಲಿ ತರಿಸಿಕೊಳ್ಳೋ ಈ ಗೊಬ್ಬರ ಯಾವ ಊರಿನಿಂದ ಬರ್ತದೆ ?' ಅಂತ ನಾನು ಕೇಳುವ ಮೊದಲೇ ಒಬ್ಬ ರೈತ ಕೋಪಗೊಂಡು 'ರೀ ಅದು ಗೊಬ್ಬರ ಅಲ್ಲರೀ. ಎನ್ ಕೆ ಪಿ ಇಪ್ಪತ್ತೆರಡು ಫರ್ಟಿಲೈಜ಼ರ್. ಹೊಲಕ್ಕೆ ಅದನ್ನ ಮೂಟೆಗಟ್ಟಲೆ ಹಾಕ್ದಿದ್ರೆ ನಮ್ಮ ಫಸಲು ಝೀರೊ ಆಗ್ಬುಡ್ತದೆ ರೀ. ಅದಕ್ಕೆ ಆ ಹೆಣ್ಣಿನ ಸೀರಿ ಹಂಗ ನಮ್ಮ ಹೊಲ ಸದಾ ಹಸಿರಾಗಿರೋದು' ಎಂದು ಆ ಜಾಹೀರಾತಿನ ಕಡೆ ಬೊಟ್ಟು ಮಾಡಿ ತೋರಿಸಿದ. ಈ ಪಚ್ಚೆ ಹಸರಿನ ಹೊಲದಲ್ಲಿ ನಾನಾಡುತ್ತಿದ್ದ ವೆಲ್ವೆಟ್ ಹುಳಗಳು ಕಾಣಬಹುದೆಂದು ಬಗ್ಗಿ ನೋಡಿದೆ. ಒಂದೂ ಕಾಣಲಿಲ್ಲ. ಒಬ್ಬ ರೈತ ಮತ್ತೊಬ್ಬನಿಗೆ 'ಏ ಕೆಂಪ, ಆ ತೊಗರಿಕಾಳ್ ಕೊಪ್ಪಲ್ದಾಗ ಹುಳ ಹೊಡ್ದೈತೆ. ಅದಕ್ಕೆ ವಸಿ ಜಾಸ್ತಿ ಈ ವಿಷ ಸ್ಪ್ರೇ ಮಾಡಿ ಬಾರ್ಲ' ಅಂತ ಒಂದು ದೊಡ್ಡ ತಗಡಿನ ಡಬ್ಬಿ ಕೊಟ್ಟಿದ್ದನ್ನ ನೋಡಿ ನನಗೆ ಗಾಬರಿಯೇ ಆಯಿತು. ಕೆಂಪು ಬಣ್ಣದ ತಲೆಬುರುಡೆ ಮುಂದೆ ಅಡ್ಡಲಾಗಿ ಚಿತ್ರಿಸಿದ್ದ ಎರಡು ಮೂಳೆಗಳ ಚಿನ್ಹೆ ಡಬ್ಬದ ಮೇಲೆ ನೋಡಿ ನನಗಂತೂ ಭಯವೇ ಆಯಿತು. ಇದೇನಿದು ಇಷ್ಟು ಅನಾಯಸವಾಗಿ ಕ್ರಿಮಿನಾಶಕವನ್ನು ಉಪಯೋಗಿಸುತ್ತಾರಲ್ಲ ಅಂತ ಯೋಚನೆ ಶುರುವಾಯಿತು. ಬೆಂಗಳೂರಿನಲ್ಲಿ ವಾಹನಗಳಿಂದಾದ ಪಲ್ಲ್ಯೂಷನ್ ಸೇವಿಸಿದ್ದು ಸಾಲದು ಎನ್ನುವಂತೆ ಈ ಹಳ್ಳಿಯಲ್ಲೂ ಕ್ರಿಮಿನಾಶಕದ ವಿಷ ಗಾಳಿ ಕುಡಿಯುವ ಪ್ರಸಂಗ ಬಂತಲ್ಲಪ್ಪ ಈಗ ಏನು ಮಾಡೋಣ ಎಂದು ಉಪಾಯ ಹುಡಿಕುತ್ತಿತ್ತು ನನ್ನ ಮನಸ್ಸು. ರಾಸಾಯನಿಕ ಗೊಬ್ಬರ ಮತ್ತು ಕ್ರಿಮಿನಾಶಕಗಳ ಕೆಟ್ಟ ಪರಿಣಾಮ ಎಲ್ಲೆಡೆ ಕಾಣುತ್ತಿತ್ತು. ಗುಬ್ಬಚ್ಚಿಗಳ ಅವಸಾನಕ್ಕೆ ಕಾರಣವೂ ಇದೇ ಇರಬಹುದೆಂದು ನನ್ನ ತರ್ಕ ತಲೆಯಲ್ಲಿ ಕೊರೆಯಲಾರಂಭಿಸಿತು. 'ಈ ಫರ್ಟಿಲೈಜರನ್ನು ಯಾವಾಗ ರೈತರು ಉಪಯೋಗಿಸಲು ಶುರು ಮಾಡಿದರೋ ಆಗಿನಿಂದಲೆ ಗುಬ್ಬಚ್ಚಿಯ ಮೊಟ್ಟೆಗಳ ಹೊರಭಾಗ ಕ್ರಮೇಣ ಗಟ್ಟಿಯಾಗಲು ಶುರುವಾಯಿತು. ಒಳಗಿದ್ದ ಗುಬ್ಬಚ್ಚಿ ಮರಿಗಳು ತಮ್ಮ ಕೊಕ್ಕಿನಿಂದ ಮೊಟ್ಟೆಯನ್ನು ಒಡೆದು ಹೊರಗೆ ಬರಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಮೊಟ್ಟೆಗಳು ಗಾಜಿನ ಗೋಲಿಯಂತೆ ಗಟ್ಟಿಯಾಗಿ ಒಂದಾದ ನಂತರ ಒಂದು ಗುಬ್ಬಿ ಸಂಸಾರಗಳು ಸಾವನ್ನಪ್ಪಿದವು. ಜೊತೆಗೆ ಕ್ರಿಮಿ ಕೀಟಗಳೆ ನಾಶವಾದ ಮೇಲೆ ಉಳಿದ ಗುಬ್ಬಚ್ಚಿ ಆಹಾರದ ಅಭಾವದಿಂದ ಸಾವನ್ನಪ್ಪಲು ಹೆಚ್ಚು ಸಮಯ ಬೇಕಾಗುವುದಿಲ್ಲ. ಪರಿಸರ ಮಲಿನದಿಂದಾಗುವ ಪ್ರಮಾಣಭೂತ ಉದಾಹರಣೆ ಇದು' ಎಂದು ಒತ್ತಿ ಹೇಳುತ್ತಿದ್ದ ನನ್ನ ಪ್ರೊಫೆಸರ್‌ರ ಜ್ಞಾಪಕ ಬಂತು.

ರೈತರಿಗೆ ವಿದಾಯ ಕೂಡ ಹೇಳದೆ, ಗುಬ್ಬಿ ಉತ್ತರ ತುದಿಯಲ್ಲಿದ್ದ ಚಿದಂಬರಾಶ್ರಮದ ಕಡೆ ಓಡಿಸಿದೆ ನನ್ನ ಬೈಕ್. ದಾರಿ ಮಧ್ಯದಲ್ಲಿ ಸಿಕ್ಕ ಬೈಲಾಂಜನ ಗುಡಿಯ ಬಳಿ ನಿಂತೆ. ಗುಡಿಯ ಬಾಗಿಲು ಹಾಕಿತ್ತಾದರೂ ಕೋತಿಗಳು ಕಂಡು ಬರಬಹುದೆಂದು ಇಣುಕಿ ನೋಡಿದೆ.

ನೈವೇದ್ಯಕ್ಕೆಂದು ಇಟ್ಟ ಬಾಳೆಹಣ್ಣುಗಳು ಹಾಗೇ ಇದ್ದವು. ಕೋತಿಗಳ ಸುಳಿವಂತೂ ಇರಲಿಲ್ಲ. ಅಲ್ಲೇ ಮುರುಕು ಸ್ಥಿತಿಯಲ್ಲಿದ್ದ ಹಲವಾರು ಕಬ್ಬಿಣದ ಬೋನುಗಳು ಮನುಷ್ಯನ ಕ್ರೂರತೆಗೆ ಮೂಕ ಸಾಕ್ಷಿಯಂತೆ ಬಿದ್ದಿದ್ದವು. ಬಾಳೆ ಹಣ್ಣಿನ ಲಾಲಸೆ ತೋರಿಸಿ ಕೋತಿಗಳನ್ನು ಬೋನಿನೊಳಗೆ ಹಿಡಿದು ಪ್ರಯೋಗ ಶಾಲೆಗಳಿಗೆ ಮಾರಿರಬಹುದಾದ ಪುರಾವೆಗಳು ಎಲ್ಲೆಲ್ಲೂ ಕಂಡುಬರುತ್ತಿತ್ತು. ಆಂಜನೇಯನ ಭಕ್ತರು ಈ ನಿಜ ಜೀವನದ ಆಂಜನೇಯನಿಗಾದ ಅನ್ಯಾಯ ಸಹಿಸಿದ್ದಾದರೂ ಹೇಗೆ ?

ಆಶ್ರಮದೊಳಗೆ ಮತ್ತೇನು ಆಶಾಭಂಗ ಕಾದಿದೆಯೋ ಎಂಬ ಯೋಚನೆಯಲ್ಲೇ ಒಳ ಹೊಕ್ಕೆ. ಆದರೆ ಸನಿಹದಿಂದಲೇ ಕೇಳಿ ಬಂದ ವೇದಘೋಷಗಳ ಪಠನ ಕಿವಿಗೆ ಹಿತವಾಗಿತ್ತು. ಆಶ್ರಮದ ಪ್ರಶಾಂತ ವಾತಾವರಣ ಮತ್ತು ಸೌಗಂಧಭರಿತ ಪರಿಮಳ ನನ್ನ ಬಾಲ್ಯದ ನೆನಪುಗಳನ್ನ ಮರುಕಳಿಸಿತು. ನಾಗಪುಷ್ಪವಲ್ಲಿ ಮರಗಳಿಂದ ಬರುತ್ತಿದ್ದ ಆ ಸುವಾಸನೆ ಆಹ್ಲಾದಕರವಾಗಿತ್ತು. ಎಲ್ಲೆಲ್ಲೂ ವನರಾಶಿಯ ಸಿರಿಯೇ. ಆಶ್ರಮದ ಹಿಂಬದಿಯಲ್ಲಿ ಹರಿಯುತ್ತಿದ್ದ ನದಿ ಹಸುರಿಗೆ ಮೆರಗು ಕೊಟ್ಟಿತ್ತು. ಎತ್ತರಕ್ಕೆ ಬೆಳೆದ ಜಂಬೂ ನೇರಳೆಯ ಮರದಡಿ ಬಿದ್ದಿದ್ದ ಕೆನ್ನೀಲಿ ಬಣ್ಣದ ಹಣ್ಣುಗಳು, ರೆಕ್ಕೆಗಳನ್ನು ಹರಡಿ ಅಲ್ಲೇ ರಮಿಸುತ್ತಿದ್ದ ನವಿಲಿನ ಕಣ್ಣುಗಳು ಒಂದನ್ನೊಂದು ಸರಿದೂಗುತ್ತಿತ್ತು. ಹಕ್ಕಿಗಳ ಇಂಚರದೊಂದಿಗೆ ದುಂಬಿಯ ಝೇಂಕಾರ ಬೆರೆತ ಈ ನಂದನವನದ ಮೂಲೆ ಮೂಲೆಯೂ ಪರಿಚಿತವೆನಿಸಿತು. ಆಗ ಹಠಾತ್ತನೆ ಜ್ಞಾಪಕ ಬಂತು. ಗುಬ್ಬಿ ಹೆಸರಿನ ಹಿಂದಿದ್ದ ಸ್ಥಳ ಪುರಾಣ. ಈ ಆಶ್ರಮದ ಗುಬ್ಬಿಯೊಂದು ದಿನ ನಿತ್ಯವೂ ನದಿಯಲ್ಲಿ ಮಿಂದು ವೇದ ಪಠನದ ಸಮಯದಲ್ಲಿ ಗುರುಗಳೊಂದಿಗೆ ಕುಳಿತು ತಾನೂ ಇಂಪಾಗಿ ಹಾಡುತ್ತಿತ್ತಂತೆ! ವೇದಪಾರಂಗತನಾದ ಆ ಗುಬ್ಬಚ್ಚಿ ಹುಟ್ಟಿದ ಜಾಗಕ್ಕೆ ಗುಬ್ಬಿ ಎಂದು ನಾಮಕರಣ ಮಾಡಿದರಂತೆ. ನಮ್ಮ ಪೂರ್ವಿಕರ ಸುಂದರ ಕಲ್ಪನೆ. ಛೇ, ಅದನ್ನು ಮತ್ತೆ ಕೇಳುವ ಭಾಗ್ಯ ನಮಗಿಲ್ಲವಾಯಿತಲ್ಲ ಎಂದು ಹತಾಶನಾಗಿ ಅಲ್ಲೇ ಇದ್ದ ಒಂದು ಬಂಡೆಯ ಮೇಲೆ ಕುಳಿತೆ.

ಹಕ್ಕಿಯೊಂದು ನನ್ನ ಬಳಿಯೇ ಹಾರಿ ಹೋದಾಗ ನನ್ನ ಕಣ್ಣುಗಳು ಅರಿವಿಲ್ಲದಯೇ ಅದನ್ನು ಹಿಂಬಾಲಿಸಿದವು. ಗೂಡೊಂದರ ಬಳಿ ಕುಳಿತ ಆ ಹಕ್ಕಿ ಮೇಲೆ ನನ್ನ ಗಮನ ಕಡಿಮೆಯಾದರೂ 'ಚಿಂವ್ ಚಿಂವ್ 'ಎಂದು ಶಬ್ದ ಕೇಳಿ ಬಂದಾಗ ನನ್ನ ದೃಷ್ಟಿ ಮತ್ತು ಕಿವಿ ಎರಡೂ ಚುರುಕಾದವು. ಅಮ್ಮ ಹಕ್ಕಿ ಹಸಿದ ಮರಿಗಳನ್ನು ಮುದ್ದಿಸಿ ಎಬ್ಬಿಸಿದಾಗ ಮತ್ತೆಲ್ಲಿಂದಲೋ 'ಫುರ್' ಅಂತ ಹಾರಿ ಬಂದ ಅಪ್ಪ ಹಕ್ಕಿ ಕೊಟ್ಟದ್ದು ಭರ್ಜರಿ ಊಟ. ಗುಬ್ಬಿಗಳ 'ಚಿಂವ್ ಚಿಂವ್' ಆಶ್ರಮದಿಂದ ಕೇಳಿ ಬರುತ್ತಿದ್ದ ವೇದಗೋಷ್ಠಿಯಂತೆ ಹಿತವಾಗಿತ್ತು.

●

# ಕೊಟ್ಟ ಹೆಣ್ಣು...

– ಶಶಿಕಲಾ ಚಂದ್ರಶೇಖರ್

ಹಾಯುವ ಹಾದಿಗೆ, ನೋಡುವ ದೃಶ್ಯಕ್ಕೆ, ತುಟಿಯಿಂದ ಬರುವ ಶಬ್ದಕ್ಕೆ, ಸುಳಿದಾಡುವ ಪರಿಸರಕ್ಕೆ ಜೀವ ತುಂಬಬಲ್ಲ ಜೀವದಾಯಿನಿ ನಂದ. ಪ್ರಪಂಚದಲ್ಲಿ ಅಣು ಕಣಗಳಿಂದಾದ ಸಕಲ ಚರಾಚರಗಳಲ್ಲಿ ಜೀವಕಳೆ ಗುರ್ತಿಸುವ ಸೂಕ್ಷ್ಮ ಮನದವಳು. ಸಮಯಕೊಟ್ಟು ಗಮನ ಇಟ್ಟು ಕೇಳಿದಲ್ಲಿ ಎಲ್ಲಾ ಚರಾಚರವೂ ನಮ್ಮೊಂದಿಗೆ ಮಾತನಾಡಬಲ್ಲವು ಎಂಬ ಬಲವಾದ ನಂಬಿಕೆ ಅವಳದು. ನಿಸ್ಪೃಹವಾಗಿ ಮಾತನಾಡಿದಲ್ಲಿ ಅವುಗಳೂ ನಾವು ಹೇಳಿದ್ದನ್ನು ನಿಸ್ಸಂದೇಹವಾಗಿ ಕೇಳುತ್ತವೆ ಎನ್ನುವುದು ಅವಳ ಗಾಢ ವಿಶ್ವಾಸ.

ನಂದಾಳ ಚಂದವಾದ ಮನೆ ಪುಟಾಣಿ ಗುಡ್ಡದ ಮೇಲಿದೆ. ಮನೆಯಿಂದ ಫ್ರೆಡ್ರಿಕ್ ಕಣಿವೆ ಕಾಣುತ್ತದೆ. ಕಣಿವೆಯ ಪಕ್ಕ ಸಣ್ಣದೊಂದು ಬೆಟ್ಟ, ಹೆಸರು ಶುಗರ್ ಲೋಫ್ ಮೌಂಟನ್ (ನಂದ ಅದಕ್ಕಿಟ್ಟುರುವ ಹೆಸರು ಸಕ್ಕರೆಬೆಟ್ಟ). ಅದರ ಹೆಸರಿನ ತುದಿಗೆ ಮೌಂಟನ್ ಎಂದಿದ್ರೂ, ಅದು ಪರ್ವತವಲ್ಲ. ಹಿಲ್ ಅಷ್ಟೆ. ಇದೇ ಬೆಟ್ಟದ ಮೇಲೆ ರಟ್ಟೆ ಗಾತ್ರದ ನೀರು ಧುಮುಕುತ್ತೆ. ಅದಕ್ಕೆ ಕನ್ನಿಂಗ್‌ಹ್ಯಾಮ್ ಫಾಲ್ಸ್ ಅಂತಾರೆ (ನಂದ ಕೊಟ್ಟಿರುವ ಹೆಸರು ಕರಿಗಿರಿರಂಗನ ಧಾರೆ). ಹೆಚ್ಚೆಂದ್ರೆ ಹತ್ತು ಅಡಿ ನೀರು ಧುಮುಕುತ್ತೆ. ಬಂಡೆ ಹತ್ತಿ ಹೋದ್ರೆ ಇನ್ನೊಂದೆರಡು ಕಡೆ ಹತ್ತರಿಂದ ಹದಿನೈದು ಅಡಿ ನೀರು ಬೀಳುವುದು ಕಾಣುತ್ತೆ. 'ಜೋಗ್, ಕಲ್ಲತ್ತಿಗಿರಿ, ಶಿವನಸಮುದ್ರ ನೋಡಿದವರನ್ನು ಫಾಲ್ಸ್ ತೋರಿಸ್ತಿನಿ ಬನ್ನಿ' ಎಂದು ಕರೆದುಕೊಂಡೇನಾದ್ರೂ ಹೋಗಿ ತೋರಿಸಿದರೆ ಇದನ್ನು 'ಫಾಲ್ಸ್ ಎಂದು ಕರೆತೀಯಾ ಎಂದು ನಕ್ಕಾರು' ಎಂದಿದ್ದಳು ನಂದ ಈ ಊರಿಗೆ ಬಂದ ಹೊಸದರಲ್ಲಿ ಫಾಲ್ಸ್ ನೋಡಲು ಹೋಗಿದ್ದಾಗ. ನಂದಾಳ ಮನೆಯ ಮೇಲಿನ ಕಿಟಕಿಯಿಂದ ಆ ಬೆಟ್ಟದ ಮೇಲಿಂದ ತೆಕ್ಕೆ ತೆಕ್ಕೆ ಹಕ್ಕಿಗಳು ಹಾರೋದು ನೋಡುವುದೊಂದು ಚಂದವೇ.

ಅವಳ ಅಡುಗೆ ಮನೆಯ ಹ್ಯಾಂಗಿಂಗ್ ಕ್ಯಾಬಿನೆಟ್ ಮೇಲೆ ಮರದ ಸ್ಕ್ಯಾಂಡಿನೇವಿಯನ್ ಬೊಂಬೆಗಳಿವೆ. ಅದರ ಕೈ, ಕಾಲು, ಮುಖ, ಸೊಂಟ ಹೇಗೆಬೇಕಿದ್ರೂ ತಿರುಗಿಸಿ ಇಡಬಹುದು. ಒಂದೊಂದೂ, ಒಂದೊಂದು ಭಂಗಿಯಲ್ಲಿ ಜೋಡಿಸಿಟ್ಟಿರುವ ಈ ಬೊಂಬೆಗಳನ್ನು ಕಂಡಾಗ, ಇಣುಕಿ ನೋಡುವ ತುಂಟ ಹುಡುಗರಂತೆ ಕಾಣುತ್ತಾರೆ. ಮೊದಲನೆಯವನು ಆಂಡಿ, ಎರಡನೆಯವನು ಬ್ರ್ಯಾಂಡನ್, ಮೂರನೆಯವನು ಚಾರ್ಲಿ, ನಾಲ್ಕನೆಯವನು ಡೇವಿಡ್, ಐದನೆಯವನು ಈತನ್. ಇವರೆಲ್ಲರ ಮಧ್ಯೆ ಚನ್ನಪಟ್ಟಣದಿಂದ ಬಂದ ಕಟ್ಟಿಗೆ ಹಿಡಿದಿರುವ ವೆಂಕ, ಕೊಡ ಹೊತ್ತ ಚೆನ್ನಿ ಮತ್ತು ಶ್ರೀ ರಂಗಪಟ್ಟಣದಿಂದ ಬಂದಿರುವ ಪೇಪರ್ ಮಷೇ ಶ್ರೀನಿವಾಸ ಶೆಟ್ಟರು, ಊಟ ಮುಗಿಸಿ ಡೊಳ್ಳು ಹೊಟ್ಟೆ ಬಿಟ್ಟುಕೊಂಡು ಕೂತಿದ್ದರೆ, ಪಕ್ಕದಲ್ಲಿ ಎಲೆ ಅಡಿಕೆ ಕುಟ್ಟುತ್ತಿರುವ ಸುಂದ್ರಮ್ಮ ಬೊಂಬೆ. ನಂದಾ ಮನೆಯಲ್ಲಿ ಒಬ್ಬಳೇ ಇದ್ದಾಗ ಅವರೊಂದಿಗೆ ಸಂಭಾಷಣೆಗೆ ತೊಡಗುತ್ತಾಳೆ. ಕೆಲವೊಮ್ಮೆ ಏಕಪಾತ್ರಾಭಿನಯಿಯಂತೆ, ಅಮ್ಮ ಅಪ್ಪ, ತಂಗಿ, ಅಕ್ಕ, ಸ್ನೇಹಿತೆಯಾಗಿ, ಅವರು ತಾನಾಗಿ, ತಾನು ಅವರಾಗಿ ಮಾತನಾಡಿಕೊಳ್ಳುತ್ತಾಳೆ. ಒಟ್ಟಾರೆ ದೈಹಿಕವಾಗಿ ಊರಿಂದ ಹೊರಗಿದ್ದರೂ ಅವಳ ಊರು ಅವಳ ಒಳಗಿಂದ ಹೊರಗೆ ಇದ್ದ ಕ್ಷಣವೊಂದು ಇಲ್ಲವೇ ಇಲ್ಲ. ಅವಳಾಡಿದ ಕೆರೆದಂಡೆ, ಕದ್ದು ಹುಣುಸೇ ಹಣ್ಣು ಕುಟ್ಟಿದ ಜಗುಲಿ, ಹುಣಸೇ ಬೀಜ ಉಜ್ಜಿದ ಕಾಡುಗಲ್ಲ ಕಟ್ಟೆ, ಹಿತ್ತಲಲ್ಲಿ ಬೆಳೆಸಿದ ಸೀಬೆ, ಕೆಂಡಸಂಪಿಗೆ ಗಿಡ, ಮಲ್ಲಿಗೆ ಅಂಟು ಒರಗಿಸಿಕೊಂಡು ತುದಿಯಲ್ಲಿ ಕೆಂಪು ಹೂ ಬಿಟ್ಟ ಆಲವಾನದ ಮರ, ಊರು ಸುತ್ತ ಇರುವ ಬೆಟ್ಟ ಗುಡ್ಡ ಎಲ್ಲಾ ಜೀವಂತ ಅವಳೊಳಗೆ. ಒಟ್ಟಾಗಿ ಆಡಿದವರು, ಜೊತೆಯಾಗಿ ಬೆಳೆದವರು, ಬೈದು ಬುದ್ಧಿ ಕಲಿಸಿದವರು, ಜಡೆ ಹೆಣೆದು ಮಲ್ಲಿಗೆ ದಂಡೆ ಮುಡಿಸಿದವರು ಶಾಲೆ ಒಳ ಹೊರಗೆ ಪಾಠ ಕಲಿಸಿದವರು, ಪೇಟೆ ಬೀದಿಯಲ್ಲಿ ಬಳೆ, ಟೇಪು, ನೆಲ್ಲಿಕಾಯಿ, ಬೇಲದಹಣ್ಣು, ತರಕಾರಿ ಮಾರಿದ ಎಲ್ಲಾ ಜನರೂ ಗಂಧರ್ವರಿಲ್ಲಿ. ಹಾಂ! ಸಿಂಕ್ ಮೇಲಿನ ಕಿಟಕಿ ಮತ್ತು ಸ್ಕ್ರೀನ್ ಡೋರಿನ ಮಧ್ಯೆ ೨ ಜಂಟಿ ಗಡಿಯಾರಗಳಿವೆ. ಒಂದು ಅಮೆರಿಕೆಯ ಸಮಯ ತೋರಿಸಿದರೆ, ಮತ್ತೊಂದು ಅವಳೂರಿನ ಗಂಟೆ ತೋರಿಸುತ್ತೆ.

ಹಲವು –ಹಲವಾರು, ಕೆಲವು– ಕೆಲವಾರು ವರುಷ ಕಳೆದರೂ, ಕೆಡದ ಉತ್ಸಾಹ ಅವಳಲ್ಲಿ; ವಾರಕ್ಕೊಮ್ಮೆ ಊರಿನವರೊಂದಿಗೆ ಟೆಲಿಫೋನ್‌ನಲ್ಲಿ ಮಾತನಾಡುವಾಗ. ಇಂದಿಗೂ ವ್ಯತ್ಯಾಸ ಒಂದಿಷ್ಟೂ ಇಲ್ಲ –– ತನ್ನ ಬದುಕನ್ನು ಅವರೊಂದಿಗೆ ಹಂಚಿಕೊಳ್ಳುವ ಪರಿಯಲ್ಲಿ. ಗೆಳತಿಯರ ಮನೆಗೆ ಬಂದ ಅವರ ತಂದೆ ತಾಯಿ, ಬಂಧು ಬಳಗ ಎಲ್ಲರನ್ನೂ ಕರೆದು ಆದರಿಸುತ್ತಾಳೆ. ಊರಿನ ವರ್ತಮಾನಗಳನ್ನು ಒಂದಿಷ್ಟೂ ಬಿಡದೆ ಆಲಿಸುತ್ತಾಳೆ. ಆಗೆಲ್ಲಾ ಊರ ವರ್ತುಲದೊಳಗೇ ಇದ್ದಷ್ಟು ಸಮಾಧಾನ ಅವಳಲ್ಲಿ.

ಮನೆಯ ಹೊರಗೆ ದುಡಿಯಲು ಅವಳಿಗೆ ಕೆಲಸವೊಂದಿದೆ. ಅವಳ ಕೆಲಸದ ಸ್ಥಳ ವಾಷಿಂಗ್ಟನ್ ಡಿ.ಸಿಯ ಕನೆಕ್ಟಿಕಟ್ ಅವಿನ್ಯೂ ಮೇಲಿದೆ. ಅವಳ ಆಫೀಸಿಗೆ ಎರಡು ಬ್ಲಾಕ್

ಮೊದಲು ವಾಶಿಂಗ್‌ಟನ್ ನ್ಯಾಶನಲ್ ಜೂ ಇದೆ. ಜೂ ಬಾಗಿಲಲ್ಲಿ ನಿಂತಿರುವ ಎರಡು ಸಿಂಹಕ್ಕೆ ನಂದ ಇಟ್ಟಿರುವ ಹೆಸರು 'ಇರುಪಾಕ್ಷಿ' 'ಶೇಷಾದ್ರಿ'. ದಿನಾ ಅದರ ಮುಂದೆ ಡ್ರೆವ್ ಮಾಡುವಾಗೆಲ್ಲಾ, ಇಬ್ಬರಿಗೂ ಹಲೋ ಹೇಳುವುದು ಅವಳ ಅಭ್ಯಾಸ. ಅವಳ ಆಫೀಸ್ ಕಟ್ಟಡ ಮುಗಿಯುತ್ತಿದ್ದಂತೆಯೇ ಒಣ ಕಿಲುಬು ಬಣ್ಣದ (ಈ ಊರಿನವರು ಇದಕ್ಕೆ ಸೀ ಗ್ರೀನ್ ಅಂತಾರೆ) ಸೇತುವೆಯೊಂದಿದೆ. ಇದರ ಇಕ್ಕೆಲಗಳಲ್ಲಿ ದಪ್ಪಕ್ಕೆ ೨೦ ಅಡಿ ಎತ್ತರವಾಗಿರುವ ಬೀದಿ ದೀಪ. ವಿಶಾಲವಾದ ಈ ಸೇತುವೆಯ ಮೇಲೆ ೪ ರಸ್ತೆಗಳು ಉದ್ದಕ್ಕೆ ಹರಿದಿವೆ. ಸೇತುವೆ ದ್ವಾರಕ್ಕೆ ಬೃಹದಾಕಾರದ ಊದಾ ಬಣ್ಣದ ಸಿಂಹಗಳು ಠೀವಿಯಿಂದ ನಿಂತಿವೆ. ಹೊರದೇಶದ ಛಾಯಾಚಿತ್ರ ಎಂಬ ಶೀರ್ಷಿಕೆಯಡಿ ಚೌಕಟ್ಟು ಹಾಕಿ ಗೋಡೆಗೆ ನೇತುಹಾಕಬಹುದಾದ ದೃಶ್ಯ. ನಂದ, ಬಲಕ್ಕೆ ಇರುವ ಸಿಂಹಕ್ಕೆ 'ಕಪ್ಪಣ' ಎಂತಲೂ, ಎಡಕ್ಕೆ ಇರುವ ಸಿಂಹಕ್ಕೆ 'ಸುಬ್ಬಣ್ಣ' ಎಂದೂ ಹೆಸರಿಟ್ಟಿದ್ದಾಳೆ. 'ಇರುಪಾಕ್ಷಿ,ಶೇಷಾದ್ರಿಯಂತೆ' ಇವರೂ ಅವಳ ಸ್ನೇಹಿತರೇ! ಮಧ್ಯಾಹ್ನ ಊಟದ ಬಿಡುವಿನಲ್ಲಿ ಈ ಸೇತುವೆಯ ಮೇಲೆ ಓಡಾಡುವುದು ಅವಳಿಗಿಷ್ಟ. ಕೆಲವೊಮ್ಮೆ ಚೆಲ್ಸಿ, ಪ್ಯಾಟ್ರಿಕ್, ಶೆರಲ್ ಜೊತೆಯಾಗ್ತಾರೆ ಅವಳ ವಾಯು ವಿಹಾರಕ್ಕೆ. ಸೇತುವೆಯ ನಡುಭಾಗದಲ್ಲಿ ನಿಂತು ಕೆಳಗೆ ನೋಡಿದರೆ ರಾಕ್ ಕ್ರೀಕ್ ಪಾರ್ಕ್ ಕಾಣುತ್ತೆ. ಆ ಪಾರ್ಕಿನ ಮಧ್ಯದಲ್ಲಿ ಮಾಟವಾದ ರಸ್ತೆಯೊಂದು ಹಾದುಹೋಗಿದೆ. ರಸ್ತೆಯ ೩೦ ಅಡಿ ಎಡಕ್ಕೆ ತಿಳಿನೀರ ಪುಟ್ಟ ಝರಿ ಹರಿಯುತ್ತೆ. ಈ ಝರಿಗೆ ನಂದ ಇಟ್ಟಿರುವ ಹೆಸರು ಸುವರ್ಣಮುಖಿ (ಅವಳ ಜಿಲ್ಲೆಯಲ್ಲಿ ಹರಿಯುವ ನದಿಯ ನೆನಪಿನಲ್ಲಿ).

ನಂದಾಳ ಇಬ್ಬರು ಮಕ್ಕಳು, ಗೌರಿ, ಸಿರಿ. ೧ ರಿಂದ ೧೦೦ ರವರಗೆ ಕನ್ನಡದಲ್ಲಿ ಅಂಕಿ ಎಣಿಸಬಲ್ಲ ಈ ಹುಡುಗಿಯರು, ಕುವೆಂಪು, ಬೇಂದ್ರೆ, ಬಸವ, ಕಾರಂತರ ಭಾವಚಿತ್ರ ನೋಡಿ ಗುರುತಿಸಬಲ್ಲರು. ಪುಲ್ಲಿಂಗ, ಸ್ತ್ರೀಲಿಂಗ, ಏಕವಚನ ಬಹುವಚನಗಳನ್ನು ಅದುಲು ಬದಲು ಮಾಡಿದರೂ ಅಜ್ಜಿ ತಾತನ ಜೊತೆ ಆತ್ಮೀಯವಾಗಿ ಕನ್ನಡದಲ್ಲಿ ಸಂಭಾಷಣೆ ನಡೆಸಬಲ್ಲರು. ರಾಗಿ ಮುದ್ದೆ ಜಗಿಯದೆ ನುಂಗಬಲ್ಲರು. ಒಬ್ಬಟ್ಟು ಅವರ ಪ್ರಿಯವಾದ ಡೆಸರ್ಟ್. ಒಟ್ಟಾರೆ ಕನ್ನಡತಿಯರೆನ್ನುವ ಯೋಗ್ಯತೆಯುಳ್ಳವರು.

ನಂದಾಳ ದಿನಚರಿಗೆ ಒಂದು ನಿರ್ದಿಷ್ಟವಾದ ಲಯವಿದೆ. ಸೋಮವಾರದಿಂದ ಶುಕ್ರವಾರದ ಮಧ್ಯೆ ಮಕ್ಕಳನ್ನು ವಿಶೇಷ ತರಗತಿಗಳಿಗೆ ಕರೆದೊಯ್ಯುವುದು(ಭರತನಾಟ್ಯ, ಪಿಯಾನೊ, ಜಿಮ್ನಾಸ್ಟಿಕ್, ಬ್ಯಾಲೆ, ಕರ್ನಾಟಕ ಸಂಗೀತ), ಶನಿವಾರ ಭಾನುವಾರ ದಿನಸಿ ಧಾನ್ಯ ತರುವುದು, ಬಚ್ಚಲು ತಿಕ್ಕಿ, ಕಸ ಮುಸುರೆ ಮಾಡಿಕೊಂಡು, ಕೈ ತೋಟ ನೋಡಿಕೊಳ್ಳುವುದು. ಇದರ ಮಧ್ಯೆ ಪರಿಚಿತರ ಮನೆಗೆ ಔತಣಕ್ಕೆ ಹೋಗುವುದು, ಅವರನ್ನು ಔತಣಕ್ಕೆ ಕರೆಯುವುದರ ಜೊತೆ ಜೊತೆಗೆ ನಗರಪಾಲಿಕೆಯಲ್ಲಿ ನಡೆಯುತ್ತಲೇ ಇರುವ

ಸಂಗೀತ, ಸಾಹಿತ್ಯ, ಕನ್ನಡ ಸಿನೆಮಾಗಳಿಗೆ ಹೋಗಿಬರುವುದು. ಹಗಲಿನಿಂದ ರಾತ್ರಿಯವರೆಗೆ ಒಂದೇಸಮನೆ ಕೆಲಸದಲ್ಲಿ ತೊಡಗಿರುವ ನಂದಾ ಎಂದೂ ಕೆಲಸದ ಬಗ್ಗೆ ಮುನಿಸು ತೋರಿಸಿಯೇ ಇಲ್ಲ. ಮುನಿಸು ತೋರಿದರೆ, ಹೆಣಭಾರವಾಗಿ ಹೆಗಲೇರುವ ಹಾಗೂ ಸ್ನೇಹ ತೋರಿದರೆ ಹಗುರಾಗಿ ಹಾಯೆಸುವ ಗುಣ ಕೆಲಸಕ್ಕೆ ಇದೆಯೆಂದು ಅವಳಿಗೆ ಗೊತ್ತು.

ಈದಿನ ಬೆಳಗ್ಗೆ....

ಉಕ್ಕಿ ಬರುವ ಬಿಕ್ಕುಗಳನ್ನು ಒಳಗೆ ತಳ್ಳುವ ಪ್ರಯತ್ನ ಮಾಡುತ್ತಾ, ಹರಿಯುವ ಕಾರುಗಳ ಗಾಲಿ ಕೆಳಗೆ ಕಪ್ಪಗೆ ತೆಪ್ಪಗೆ ಮೈ ಚಾಚಿ ಮಲಗಿದ್ದ ಹೆದ್ದಾರಿ ೪೯೫ ಮೇಲೆ ಕಾರನ್ನು ಓಡಿಸುತ್ತಿದ್ದಳು ನಂದಾ. ಅವಳು ಮನೆ ಬಿಟ್ಟಾಗ ಕೆಂಪಗಿದ್ದ ಆಕಾಶ ಹೊಂಬಣ್ಣವಾಗಿ ಮಾರ್ಪಟ್ಟು, ತೆಳು ನೀಲಿಯಾಗಲಿತ್ತು ಜೂ ಬಳಿ ಬರುವ ವೇಳೆಗೆ. ನಂದಾ ಬರುವ ದಾರಿ ಕಾಯುತ್ತಾ ಕುಳಿತಂತೆ ಕಾಣುವ 'ಇರುಪಾಕ್ಷ' 'ಶೇಷಾದ್ರಿ' ಜಗಿದೇಳಲೇ ಇಲ್ಲ. ಜೀವದಾಯಿನಿ ನಂದಾ ಸಪ್ಪಗಿದ್ದಳೆಂದು.

ಅವಳು ಕ್ಯೂಬಿಕಲ್ನಲ್ಲಿ ಕೂತಾಗಲೂ ಅಕ್ಕನ ಮಾತು, ಅಮ್ಮನ ಅಳು ನುಂಗಿ ಮಾತನಾಡುತ್ತಿದ್ದ ಧ್ವನಿಯೇ ತಲೆಯ ತುಂಬಾ ಸುತ್ತುತ್ತಿತ್ತು. ಈ ದಿನ ಬೆಳಗಿನ ಜಾವ ಮೂರುವರೆ ಗಂಟೆಗೆ ಟೆಲೆಫೋನ್ ರಿಂಗಾದಾಗ ನಂದಾ ದಿಗ್ಗನೆದ್ದು ಕುಳಿತಿದ್ದಳು. ಮಧ್ಯರಾತ್ರಿಯಲ್ಲಿ ಫೋನ್ ಬಂತೆಂದರೆ, ಊರಿಂದ ಬಂದದ್ದೇ ಎನ್ನುವುದು ಖಚಿತ. ಗಂಟೆಯ ನಿನಾದ ಕಿವಿಗೆಬಿದ್ದದ್ದೇ, ಉಸಿರು ಸೀಸದ ದ್ರವ್ಯವಾಗಿ ಒಳ ಹೊರಗೆ ಹೋಗಿ ಬಾರದಂತೆ ನಾಳದ ನಡುವೆ ಸಿಲುಕಿಕೊಂಡು ಕೈಕಾಲು ಶಕ್ತಿ ಸೋರಿ ಹೋಗುವ ಅನುಭವ. ಎಚ್ಚರ/ನಿದ್ದೆಯ ಮಧ್ಯೆ ಊರಿನ ಎಲ್ಲರ ಮುಖಗಳು ಗರ್‍ರನೆ ಸುತ್ತಿ 'ಯಾರಿರಬಹುದು ?' ಎಂದು ತಿಳಿಯದೆ ತುಟಿ ಅಲುಗದೆ, ಫೋನ್ ಎತ್ತುವ ಪ್ರಯತ್ನಪಟ್ಟರೂ ಆಗದಂತಾಗಿ, ಎಚ್ಚರ ತಪ್ಪಬಹುದೇನೋ ಎನ್ನುವ ಮನಃಸ್ಥಿತಿ. ಪ್ರಜ್ಞಾಪೂರ್ವಕ ಪಯತ್ನಪಟ್ಟು ನೈಟ್ ಸ್ಟಾಂಡ್ ಮೇಲಿದ್ದ ಫೋನ್ ಎತ್ತಿಕೊಂಡಳು ನಂದಾ.

'ಹಲೋ'

'ಹಲೋ'

'ಕೇಳ್ತಾ ಇದೆ ತಾನೆ?'

'ಕೇಳ್ತಾ ಇದೆ ಹೇಳಕ್ಕಾ'

'ಎಷ್ಟು ಗಂಟೆ ಈಗ ಅಲ್ಲಿ?'

ಇಷ್ಟು ಹೊತ್ತಿಗೆ ಪೂರ್ಣ ಎಚ್ಚರವಾಗಿದ್ದ ನಂದಾಗೆ ಇರುಸು ಮುರುಸಾಯ್ತು. ಇಷ್ಟು ವರ್ಷ ಕಳೆದರೂ, ಏಪ್ರಿಲ್‌ನಿಂದ ಅಕ್ಟೋಬರ್ ಕೊನೆಯವರೆಗೆ ಒಂಬತ್ತೂವರೆ ಮತ್ತು

ನವೆಂಬರ್‌ನಿಂದ ಮಾರ್ಚ್ ಕೊನೆಯವರೆಗೆ ಹತ್ತೂವರೆ ಗಂಟೆ ಹಿಂದಿದ್ದೇನೆ, ಎಂದು ಎಷ್ಟು ಹೇಳಿದ್ರೂ ಊರಿನ ಜನಕ್ಕೆ ಅರ್ಥವೇ ಆಗೋಲ್ಲ. ಪ್ರತೀ ಸಲ ಕರೆದಾಗಲೂ, 'ಎಷ್ಟು ಗಂಟೆ ಅಲ್ಲಿ?' ಅಂತಾನೇ ಮಾತು ಶುರು ಮಾಡುವುದು. ಅಕ್ಕನ ಗಂಟಲಲ್ಲಿ ಯಾವ ಅಪಾಯದ ಸೂಚನೆಯೂ ಕಾಣದೆ ಇದ್ದಿದ್ದರಿಂದ ಸಮಾಧಾನ ಎನ್ನಿಸಿ, 'ಈ ಅಪರಾತ್ರಿಯಲ್ಲಿ ಗಂಟೆ ಎಷ್ಟು ಎಂದು ಕೇಳಲು ಕರೆದಿದ್ದೀಯಾ?' ಎಂದು ಗದರಿಸೋಣ ಎನ್ನಿಸಿದರೂ, ಗದರದೆ ಪ್ರೀತಿಯಿಂದ:

'ಬೆಳಗಿನ ಜಾವ ಮೂರುವರೆ ಗಂಟೆ – ನಿನಗೆ ಮಧ್ಯಾಹ್ನ ಒಂದು ಗಂಟೆ ಅಲ್ವಾ? ಅಮ್ಮ ಅಪ್ಪಾಜಿ ನೀವೆಲ್ಲಾ ಚನ್ನಾಗಿದ್ದೀರಿ ತಾನೆ?'

'ಹಿತಾ ಮದುವೆ ಗೊತ್ತಾಯ್ತು. ಇವತ್ತು ದಿನ ಚನ್ನಾಗಿದೆ ಹೆಣ್ಣು ನೋಡಲು ಬರ್ತಿವಿ ಎಂದಿದ್ದರು. ಬಂದವರು ನಿಮ್ಮ ಮನೆಯ ಹೆಣ್ಣುಮಗಳು ನಮ್ಮ ಮನೆ ತುಂಬುವುದಾದರೆ ನಮ್ಮ ಪುಣ್ಯ ಎಂದು ಹೇಳಿ ಕುಂಕುಮ ಹಚ್ಚಿ ಮಡಿಲು ತುಂಬೇಬಿಟ್ಟರು....' ಈಚೆಗಷ್ಟೇ ಬಿ.ಇ ಮುಗಿಸಿದ್ದ ಹಿತಾ ಮದುವೆಯ ಬಗ್ಗೆ ಮಾತುಕತೆ ನಡೆಯುತ್ತಿತ್ತು. ಹೆರದಿದ್ದರೂ ಹೆತ್ತವಳಷ್ಟೇ ಪ್ರೀತಿಯಿಂದ ನಂದಾ ಎತ್ತಿ ಆಡಿಸಿದ ಮಗು ಹಿತಾ. ಎರಡು ವರ್ಷದ ಮಗು ಹಿತಾ ಯಾವಾಗಲೂ ಮುದ್ದಾಗಿ ತೊದಲುತ್ತಾ, 'ನಾನು ದಂದಾ ತಿಕ್ಕಿ ಮಗಾಲು' ಎನ್ನುತ್ತಿತ್ತು. ಹಿತಾ ಮಾನಸಿಕವಾಗಿ ನಂದಾಳ ಮೊದಲ ಮಗಳೇ.

'ಓ ಮೈ ಗಾಡ್ ಮೈ ಬೇಬಿ ಈಸ್ ಗೆಟ್ಟಿಂಗ್ ಮ್ಯಾರೀಡ್....ಹುಡುಗನ ಹೆಸರೇನು? ಅವನಿಗೆ ಏನು ಕೆಲಸ? ಅವನ ಅಪ್ಪ ಅಮ್ಮ ಏನು ಮಾಡ್ತಾರೆ? ಹುಡುಗನ ವಿಷಯ ಸರಿಯಾಗಿ ವಿಚಾರಿಸಿದ್ದೀರಿತಾನೆ ?' ಎಂದು ಒಂದೇ ಉಸುರಿಗೆ ಹತ್ತು ಹದಿನಾರು ಪ್ರಶ್ನೆಗಳನ್ನು ಒಟ್ಟಾಗಿ ಕೇಳಿದಳು. ಎಲ್ಲಕ್ಕೂ ಸಮಂಜಸವಾದ ಉತ್ತರ ಕೊಟ್ಟ ಅಕ್ಕ, ಕಡೆಯಲ್ಲಿ 'ಈ ತಿಂಗಳ ೨೫ಕ್ಕೆ ಪ್ರಶಸ್ತವಾದ ಲಗ್ನವೊಂದಿದೆ, ನಮ್ಮ ಪುಣ್ಯ ನೋಡು ಅವತ್ತು ನಡೆಯಬೇಕಿದ್ದ ಮದುವೆ ಕಡೇ ಗಳಿಗೆಯಲ್ಲಿ ಕ್ಯಾನ್ಸಲ್ ಆಗಿ ಭಾವಿಕಟ್ಟೇ ಛತ್ರ ಖಾಲಿ ಇದೆ. ನಿಮ್ಮ ಭಾವ ಅಡ್ವಾನ್ಸ್ ಕೊಡಲು ಹೋಗಿದ್ದಾರೆ....' ಮುಂದೆ ಹೇಳಿದ್ದೇನೂ ನಂದಾಳ ಕಿವಿಯೊಳಗೆ ಇಳಿಯಲೇ ಇಲ್ಲ. 'ಅಮ್ಮ ಮಾತಾಡ್ತಾರಂತೆ ತೊಗೋ....' ಎಂದಳು ನಂದಾಳ ಅಕ್ಕ. 'ನಂದೂಮರಿ ಮದುವೆಗೆ ಬರೋಕ್ಕೆ ಆಗುತ್ತೆ ತಾನೆ ?' ಉತ್ತರಕ್ಕೆ ಬದಲು ನಂದಾ 'ಅಮ್ಮಾ ಈ ಪ್ರಶ್ನೆ ಕೇಳಲು ತಡ ಆಗ್ಲಿಲ್ವಾ?' ಎಂದು ಕೇಳಿದಳು. ಅಷ್ಟರಲ್ಲಿ ಅವಳ ಗಂಟಲು ತುಂಬಿ ಬಂದಿತ್ತು. ಅವಳ ಅಮ್ಮನ ಕಣ್ಣು ಕೂಡಿ ಬಂದಿರಬೇಕು, ಅವರ ಧ್ವನಿಯಲ್ಲೂ ದುಃಖವಿತ್ತು. 'ನಾನೂ ಹೇಳಿದೆ....' ಮುಂದೇನು ಹೇಳಿದರೋ, ಇಟ್ ಡಿಡ್ ನಾಟ್ ಮ್ಯಾಟರ್ ಎನಿಮೋರ್. ಮಕ್ಕಳು ಹಿತಾ ಮದುವೆಯನ್ನು ವರ್ಷಗಳಿಂದ ಎದುರು ನೋಡುತ್ತಿದ್ದರು. ಆರತಿ ಎತ್ತುವ ಸಂಭ್ರಮಕ್ಕಾಗಿ, ಬಳೆ, ಬಾಗಿಣಕ್ಕಾಗಿ, ಗೋರಂಟಿ

ಚಿತ್ತರಕ್ಕಾಗಿ, ವಡವೆ ಸೀರೆ ಆಯ್ಕೆಗಾಗಿ, ಹಿತಾ ಜೊತೆ ಹಸೆಯ ಪಕ್ಕ ಕುಳಿತುಕೊಳ್ಳುವ ಖುಷಿಗಾಗಿ ಕಾದಿದ್ದರು. ನಂದಾ ಎಷ್ಟೋ ವರ್ಷಗಳಿಂದ ಹೇಳುತ್ತಲೇ ಬಂದಿದ್ದಾಳೆ: 'ಹಿತಾ ಮದುವೆ ಜೂನ್, ಜುಲೈ, ಆಗಸ್ಟನಲ್ಲೇ ಮಾಡಿ' ಎಂದು. ಈ ಗಳಿಗೆ ಅವರು ಅದನ್ನು ಗಮನಕ್ಕೆ ತೆಗೆದುಕೊಂಡ ಲಕ್ಷಣ ಕಾಣಲಿಲ್ಲ ನಂದಾಗೆ.

'೨೫ರ ನಂತರ ಜೇಷ್ಠಮಾಸ. ಇಬ್ಬರೂ ಮೊದಲ ಮಕ್ಕಳಾದ್ದರಿಂದ ಜೂನ್‌ನಲ್ಲಿ ಆಗೋಲ್ಲ. ಅದಾದ ನಂತರ ಮಾಡ್ಕೋಕ್ಕೆ, ತುಂಬಾ ತಡ ಆಗುತ್ತೆ. ಮದುವೆ ಗೊತ್ತಾದ ನಂತರ ತಡ ಮಾಡುವುದು ಒಳ್ಳೆಯದಲ್ಲ. ಮೇಲಾಗಿ ಮೇ ೨೫ರ ಲಗ್ನ ಬಹಳ ಪ್ರಶಸ್ತವಂತೆ.....' ಮಕ್ಕಳಿಗೆ ಇದನ್ನೆಲಾ ನಂದಾ ಹೇಗೆ ಅರ್ಥೈಸಿ ಹೇಳಿಯಾಳು? ಹಾಗೆ ಮಕ್ಕಳ ನಿರಾಸೆಯನ್ನು ಅವರಿಗೆ ಹೇಗೆ ತಿಳಿಹೇಳಿಯಾಳು? ಅವರಿಗೆ ಅವರದೇ ಆದ ಕಾರಣಗಳಿವೆ, ಆತಂಕಗಳಿವೆ, ಸೀಮಿತಗಳಿವೆ. ಎಲ್ಲರಿಗೂ ಹಿತಾಳ ಹಿತ ಮುಖ್ಯತಾನೆ ಎರಡು ತೀರಗಳ ನಡುವಿನ ನಡುವೆ ಕೈ ಚಾಚಿ ನಿಂತ ನಂದಾ ಮಾತ್ರ ನಿಸ್ಸಹಾಯಕಳು.

ಮಕ್ಕಳನ್ನು ಹಿಂದೆ ಬಿಟ್ಟು ವಿಮಾನ ಏರುವುದು ಸುಲಭದ ಮಾತಾಗಿರಲಿಲ್ಲ, ಹೋಗದೆ ಇರಲೂ ಆಗದು. ಹಿತಾಳನ್ನು ನೋಯಿಸಲು ಸಾಧ್ಯವೇ ಇರಲಿಲ್ಲ. ಹಿತಾಳಿಗಾಗಿ ಸಂಗ್ರಹಿಸಿ ಇಟ್ಟುಕೊಂಡಿದ್ದ ಮದುಮಗಳ ವಿಶೇಷ ಉಡುಗೆ, ಶೂ, ಮೇಕಪ್ ಕಿಟ್, ಕ್ಲಿಪ್ಸ್ ಎಲ್ಲ ಪ್ಯಾಕ್ ಮಾಡಿ ತಂದಿತ್ತ ಗೌರಿ 'ದೆ ಕುಡ್ ಹ್ಯಾವ್ ವೈಟೆಡ್ ಥ್ರೀ ಮೋರ್ ಡೇಸ್. ನನ್ನ ಎಕ್ಸಾಮ್ಸ್ ಮುಗಿದು ಹೋಗ್ತಿತ್ತು. ಐ ವಾಂಟೆಡ್ ಟು ಬಿ ಪಾರ್ಟ್ ಆಫ್ ದ ಮದ್ವೆ. ಹಿತಾ ನನ್ನಕ್ಕ. ಅಜ್ಜಿಗೆ ಗೊತ್ತು, ಹೌ ಮಚ್ ಇಟ್ ಮೀನ್ಸ್ ಟು ಅಸ್. ಅಜ್ಜಿ ತಾತ ನಮ್ಮ ಕಡೆ ಅಂದ್ಕೊಂಡಿದ್ದೆ' ಎಂದು ಬಿಕ್ಕಿದಳು. ಅವಳ ಹಿಂದೆಯೇ ಬಂದ ಸಿರಿ ಅಕ್ಕನಂತೆಯೇ ದುಃಖದಲ್ಲಿ 'ದೆ ಡೊಂಟ್ ಕೇರ್ ಎಬೌಟ್ ಅಸ್. ಡು ದೆ?' ಎಂದಳು, ಮ್ಯೂಸಿಕ್ ಸಿ.ಡಿ, ಡಿ.ವಿ.ಡಿ ಪ್ಯಾಕ್ ಕೊಡುತ್ತಾ. ಉಹೂಂ ನಂದಾ ಬಳಿ ಅವರನ್ನು ಸಮಾಧಾನಪಡಿಸುವ ಪದಗಳಿರಲಿಲ್ಲ.

ನಂದಾ ಬರುವುದನ್ನೇ ಕಾಯುತ್ತಿದ್ದ ಹಿತಾ ಬಂದೋಡಿ ತಬ್ಬಿಕೊಂಡಳು ತನ್ನ ನೆಚ್ಚಿನ ಚಿಕ್ಕಿಯನ್ನು. 'ಚಿಕ್ಕಿ ಸದ್ಯ ಬಂದೆಯಲ್ಲಾ. ಸಾರಿ.... ಚಿಕ್ಕಿ ಚಿಕ್ಕಪ್ಪ, ಗೌರಿ ಮತ್ತೆ ಸಿರಿಗೆ ಮದುವೆಗೆ ಬರಲು ಆಗಲಿಲ್ಲ. ನನ್ನ ಮಾತು ಯಾರೂ ಕೇಳಲೇ ಇಲ್ಲಾ. ಇವರೆಲ್ಲಾ ಯಾವ ಕಾಲದಲ್ಲಿದ್ದಾರೋ ಗೊತ್ತಿಲ್ಲಾ. ನಿಧಾನವಾಗಿ ಮದ್ವೆ ಮಾಡಿದ್ರೆ ನಾನೇನು ಓಡಿ ಹೋಗ್ತಿರಲಿಲ್ಲ.... ನೀನಿದ್ದೀಯಲ್ಲ ಸಾಕು. ಚಿಕ್ಕಿ ನೀನು ಊರಿಗೆ ಹೋಗುವ ಮುಂಚೆ ಗೌರಿಗೆ, ಸಿರಿಗೆ ಒಳ್ಳೊಳ್ಳೆ ಪಾರ್ಟಿ ಡ್ರೆಸ್ ತೆಕ್ಕೊಡ್ತೀನಿ'. ನಾನು ಬಂದ ಸಂತೋಷ, ಚಿಕ್ಕಪ್ಪ, ಮಕ್ಕಳು ಬರಲಾರದಿದ್ದ ನಿರಾಸೆಯನ್ನು ಮರೆಮಾಚಿಸಲು ಅವಳೊಳಗೆ ಪುಳಕಗಳಿದ್ದವು. ಇಂಟರ್‌ನ್ಯಾಷನಲ್ ಕಂಪೆನಿಯಲ್ಲಿನ ಅವಳ ಕೆಲಸ, ಭಾವಿ ಗಂಡ, ಅವನ ಒಡನಾಟ, ಅತ್ತೆ, ಮಾವ, ಸೀರೆ, ಒಡವೆ.... ಇಷ್ಟೆಲ್ಲಾ ಮಾತನಾಡಿದ ಹಿತಾ

ಮತ್ತೆ ನಂದಾಗೆ ಸಿಕ್ಕಿದ್ದು ಮದುವೆಯ ಹಿಂದಿನ ದಿನವೇ. ಅವಳ ಕೆಲಸವಿದ್ದದ್ದು ರಾಜಧಾನಿಯಲ್ಲಿ.

ಮರುದಿನ ಮದುವೆಗಾಗಿ ತಂದ ಸೀರೆಗಳನ್ನು ತೋರಿಸಿದರು. ಮಾಲಕ್ಕ, ಸುಮ ಒಂದೇ ತರಹದ ಸೀರೆ ತೆಗೆದುಕೊಂಡಿದ್ದರು. ಅಮ್ಮ 'ನೀನು ಬಂದ ಮೇಲೆ ಎಲ್ಲಾ ಸೀರೆ ತರೋಣ ಎಂದಿದ್ದೆವು. ಬೀಗರಿಗೆ ಬೇರೆ ದಿನ ಆಗ್ತಿರಲಿಲ್ಲ, ಅದಕ್ಕೆ ಅರ್ಜೆಂಟಾಗಿ ಮದ್ರಾಸಿಗೆ ಹೋಗಿ ಸೀರೆ ತೆಗೆದುಕೊಂಡು ಬಂದೆವು. ನಿನಗೆ ಇಷ್ಟವಾದದ್ದನ್ನು ಆಯ್ದುಕೋ. ಇದ್ಯಾವುದೂ ಬೇಡಾಂದ್ರೆ ಬೇರೆ ತರೋಣ' ಎಂದರು.

'ನಾನು ಮಾಲಕ್ಕ ಒಂದೇ ತರಹದ ಸೀರೆ ಉಡೋಣ ಅಂದ್ಕೋಂಡಿದೀವಿ. ನಿನಗೂ ಬೇಕಿದ್ರೆ ಅಂತಹದೇ ತರಬಹುದು. ನೀನು ಊರಲ್ಲಿ ಅಂತಹ ಸೀರೆ ಉಡ್ತೀಯೋ ಇಲ್ವೊ, ನಿನಗೆ ಇಷ್ಟ ಆಗುತ್ತೋ ಇಲ್ವೋ ಕೇಳಿ ತರೋಣ ಎಂದು ನಿನಗೆ ತರಲಿಲ್ಲ' ಎಂದಳು ಸುಮ. ನಂದಾ ಆಚೆ ಬರಲು ಸಿದ್ಧವಾಗಿದ್ದ ಕಣ್ಣೀರಿನ ಜೊತೆ ಹೋರಾಡತೊಡಗಿದಳು. ನಂದಾಗೆ ಸೀರೆಯ ಆಯ್ಕೆ ವಿಷಯ, ಅವಳು ಕಲ್ಪಿಸಿಕೊಂಡ ಮದುವೆಯ ಸಂಭ್ರಮದ ಮುಖ್ಯ ಭಾಗವಾಗಿತ್ತು. ನಂದಾಗೆ ಅಕ್ಕ-ತಂಗಿ ಜೊತೆಯಲ್ಲಿ ಅಂಗಡಿ ಅಲೆದು ಸಂತೋಷ ಹಂಚಿಕೊಳ್ಳುವ ಹಂಬಲವಿತ್ತು. ಅವಳ ಕಲ್ಪನೆಯ ಚಿತ್ರ ಹರಿದಿತ್ತು. ಸುಮಳ ಮಾತು ಸಹಜವಾಗಿಯೇ ಇತ್ತು. ನೋವನ್ನು ನುಂಗುತ್ತಾ, ಹೊಸ ಸೀರೆಯ ಸೆರಗ ನೋಡುವ ನೆವ ಮಾಡಿ ಮುಖಕ್ಕೆ ಅಡ್ಡ ಮಾಡಿಕೊಂಡು 'ಬೇಡ ನಾನು ಅಲ್ಲಿ ಸೀರೆ ಉಡುವುದೇ ಕಮ್ಮಿ. ತಂದಿರುವುದರಲ್ಲೇ ಯಾವುದಾದ್ರೂ ಉಡ್ತೀನಿ' ಎಂದಳು.

ಪ್ರಯಾಸದಿಂದ ಉತ್ಸಾಹ ತುಂಬಿಕೊಂಡು'ಮದುವೆಗೆ ಕರೆಯುಲು ಶುರು ಮಾಡಬೇಕಲ್ಲಾ? ನಾನಂತೂ ರೆಡಿ ನನಗೆ ಜೆಟ್ ಲ್ಯಾಗ್ ಇಲ್ವೇ ಇಲ್ಲ' ಎಂದಳು. 'ಭಾವ, ಈಚೆಗೆ ಜನರಿಗೆ ನೂರೆಂಟು ಪ್ರೋಗ್ರಾಮ್‌ಗಳು. ಬೇಗ ಹೇಳದಿದ್ರೆ ಬೇರೆ ಕಡೆ ಒಪ್ಪಿಕೊಂಡುಬಿಡ್ತಾರೆ ಅಂತ ಹೋದವಾರವೇ ಮುಖ್ಯವಾದ ಮನೆಯವರನ್ನೆಲ್ಲಾ ಸುಮ -ನರೇಂದ್ರ ಕರೆದುಬಿಟ್ಟಿದ್ದಾರೆ'. ನಂದಾಳ ಮತ್ತೊಂದು ಕಲ್ಪನೆಯ ಚಿತ್ರಕ್ಕೂ ಬರಲಿಲ್ಲ ಜೀವ. 'ಇಲ್ಲೇ ಹತ್ತಿರದ ಕೆಲಮನೆಯುವರನ್ನು ಕರೆದಿಲ್ಲ. ನಾಳೆ ನೀನೆ ಕರೆಯುವೆಯಂತೆ'ಎಂದರು ಅಮ್ಮ.

ಮುಂದಿನ ದಿನಗಳಲ್ಲಿ ಹೂವಿನವರು, ಅಡುಗೆಯವರು, ಊಟದವರು, ಚಪ್ಪರ, ಓಲಗದ ಜನ ಬಂದರು, ಬಂದವರು ಸುಮಳೋ, ಮಲಕ್ಕನೋ, ಭಾವನೋ, ಸುಮನ ಗಂಡ ನರೇಂದ್ರನೋ, ಅಪ್ಪಾಜಿ ಅಮ್ಮನ ಜೊತೆಯೋ ಮಾತನಾಡಿ ಹೋಗುತ್ತಿದ್ದರು. ಯಾರಾದರೂ ಕರೆದರೆ ನಂದಳೂ ಹೋಗಿ ಅವರ ಮಧ್ಯೆ ಕುಳಿತುಕೊಳ್ಳುತ್ತಿದ್ದಳು. ಬಂದವರು,

ಪಕ್ಕದಲ್ಲಿ ಕುಳಿತ ಅವಳನ್ನು ನೋಡಿ 'ಇವರ್ಯಾರು ?' ಎನ್ನುತ್ತಿದ್ದರು. ಆಗೆಲ್ಲಾ ನಂದಾಗೆ ತಾನು ಅಪರಿಚಿತಳು ಎನ್ನಿಸುತ್ತಿತ್ತು

ಅಮ್ಮ, ಗಂಡ ಮಕ್ಕಳನ್ನು ಬಿಟ್ಟುಬಂದಿರುವ ಇವಳ ಮನಸ್ಸನ್ನು ಅರಿತವರಂತೆ; ಅವಳನ್ನು ಸಮಧಾನ ಮಾಡಲು, ಸುತ್ತಿಕೊಂಡು ಬಂದ ಪರಿಸ್ಥಿತಿಯ ಬಗ್ಗೆ, ಒದಗಿ ಬಂದ ಸಂಬಂಧದ ಬಗ್ಗೆ ಹೇಳಿದರು. ಎಲ್ಲರಿಗೂ ನಿರಾಸೆಯಾಗಿದೆ, ಗಂಡಿನ ಕಡೆಯುವರ ಅನುಕೂಲ ನೋಡಬೇಕಲ್ಲಾ ಎಂದರು. ವಾಲಕ್ಕ, ಭಾವನೂ ಅವಳ ಹತ್ತಿರ ಅಕ್ಕರೆಯಿಂದಲೇ ವಿಷಯುಗಳನ್ನು ಹಂಚಿಕೊಂಡರು. ಎಲ್ಲರ ಭಾವನೆಗಳು ಪ್ರಾಮಾಣಿಕವಾಗಿಯೇ ಇದ್ದವು. ಸದ್ಯದ ಪರಿಸರದಲ್ಲಿ ನಂದಾಳ ಇರುವು ಯಾರಿಗೂ ಅನಿವಾರ್ಯವಾಗಿರಲಿಲ್ಲ. ಕಷ್ಟಕ್ಕೆ ಸುಖಕ್ಕೆ ಆಗಲು ಭೌತಿಕವಾಗಿ ಅವರೆಲ್ಲಾ ಹತ್ತಿರದಲ್ಲೇ ಇದ್ದಾರೆ. ದೂರದೂರಿನಲ್ಲಿ ಕುಳಿತು, ತನ್ನವರನ್ನು ಮನದಲ್ಲೇ ಜೀವಂತವಾಗಿಟ್ಟುಕೊಂಡು ಬದುಕುವ ಏಕಾಂಗಿ ನಂದಗೆ ಅವರೆಲ್ಲಾ ಅನಿವಾರ್ಯ. ದಿಸ್ಟೆನ್ಸ್ ಟೇಕ್ಸ್ ಇಟ್ಸ್ ಟೋಲ್!

ಸಂಜೆ ಅಮ್ಮ ಹೇಳಿದ ಮನೆಯವರನ್ನು ಮದುವೆಗೆ ಕರೆಯಲು ಹೋದ ನಂದಾಳನ್ನು ಆ ಮನೆಯವರು 'ನೀವ್ಯಾರು ?' ಎಂದರು. 'ನಾನು ನಂದಾ' ಎಂದು ಉತ್ತರಿಸಿದಳು. 'ನಂದಾ, ಅಂದ್ರೆ? ಯಾರು ?' ಪಕ್ಕದಲ್ಲಿದ್ದ ಸುಮ ಮಗಳು 'ನನ್ನ ಚಿಕ್ಕಮ್ಮ' ಎಂದಳು. 'ಹೌದಾ, ನೀವಿರೋದೇ ಗೊತ್ತಿರಲಿಲ್ಲ' ಎಂದರು. ಅವಳ ಅಸ್ತಿತ್ವವೇ ಪಾರದರ್ಶಕ ಎನಿಸಿಬಿಟ್ಟಿತು ಆ ಗಳಿಗೆ. ನಂದ ಮತ್ತಾರನ್ನೂ ಕರೆಯಲು ಹೊಗಲೇ ಇಲ್ಲಾ.

ತನ್ನ ಯಾವ ಅಸಮಾಧಾನ, ನೋವು, ನಿರಾಸೆ ತೋರಿಸಿಕೊಳ್ಳದೆ ಖುಷಿ ಯಿಂದಲೇ ಓಡಾಡಿಕೊಂಡಿದ್ದಳು. ಮಕ್ಕಳ ಜೊತೆ ಮಾತನಾಡಿದಾಗ, ಗೆಳತಿ ಜಮುನ ನಾಲ್ಕೈದು ಬಗೆಯ ಪಲ್ಯ, ಸಾರು ತಂದಿಟ್ಟು ಹೋಗಿದ್ದಾಳೆ, ಸುಜ ಚಪಾತಿ ಥಾಲ್, ಗೊಜ್ಜು ಕೊಟ್ಟಿದ್ದಾಳೆ ಎಂದರು. ಮಕ್ಕಳಿಗೆ ಮದುವೆ ಸಂಭ್ರಮವನ್ನು ವರ್ಣಿಸಿದಳು. 'ವಿ ಆರ್ ಹ್ಯಾಪಿ ಫಾರ್ ಯು' ಎಂದವು ಮಕ್ಕಳು. ಶರಲ್ 'ಆಲ್ ಆಫ್ ಅಸ್ ಆರ್ ಮಿಸ್ಸಿಂಗ್ ಯು. ಕಮ್ ಹೋಂ ಸೂನ್' ಎಂದು ಇ-ಮೈಲ್ ಕಳುಹಿಸಿದ್ದಳು.

ರಿಸಪ್ಶನ್ ಸಂಜೆ ಬ್ಯೂಟಿಶಿಯನ್ ಹಿತಾಗೆ ಅಲಂಕಾರ ಮಾಡುತ್ತಿದ್ದಳು. ನಂದಾ ಗುಂಪಿನಲ್ಲಿದ್ದವರಂತೆ ನಾಜೂಕಾಗಿ ಸೀರೆ ಉಡಲು ಬಾರದೆ, ಯಾರಾದ್ರೂ ಸಹಾಯ ಮಾಡುವರೋ ಎಂದು ಕೈಯ್ಯಲ್ಲಿ ಸೀರೆ ಹಿಡಿದು ನಿಂತಿದ್ದಳು. ಅಷ್ಟರಲ್ಲಿ ನಂದಾಳ ದೊಡ್ಡಮ್ಮನ ಮಗಳು ಮುಕ್ತಾ ಒಳ ಬಂದಳು. ನಂದಾ ಮುಗುಳ್ನಕ್ಕು 'ಚೆನ್ನಾಗಿದ್ದಿಯಾ ಮುಕ್ತಾ' ಎನ್ನಬೇಕೆನ್ನುವಷ್ಟರಲ್ಲಿ 'ಏನು ಅಮೆರಿಕಾದಲ್ಲಿ ಡಯಟ್ ಗಿಯಟ್ ಅನ್ನುವುದು ಏನೂ ಇಲ್ಲವಾ?' ಎಂದು ದೊಡ್ಡದಾಗಿ ನಗುತ್ತಾ ಮತ್ತಾರಿಗೋ ಸೀರೆ ನೆರಿಗೆ ಹಿಡಿಯಲು ಸಹಾಯು ಮಾಡಲು ಹೋದಳು. ಪೆಟ್ಟಿಕೋಟ್‌ನಲ್ಲಿನಿಂತ ನಂದಾ ಮುದುರಿ

ಹೋದಳು.ಅಚ್ಚುಕಟ್ಟಾಗಿ ಸೀರೆ ಉಟ್ಟು ಮುದ್ದಾಗಿ ಕಾಣುತ್ತಿದ್ದ ಸುಮ ಒಳ ಬಂದವಳೇ, 'ಬೇಗ ಬೇಗ ರೆಡಿಯಾಗಿ ಬನ್ನಿ. ಜನರೆಲ್ಲಾ ಬರುತ್ತಿದ್ದಾರೆ' ಎಂದು ಹೇಳಿ ಗಡಿಬಿಡಿಯಲ್ಲಿ ಹೊರಟು ಹೋದಳು. ಯಾರನ್ನೂ ಸಹಾಯ ಕೇಳುವ ಮನಸ್ಸಾಗದೆ, ನಂದಾ ತನಗೆ ಬಂದಂತೆ ನೆರಿಗೆ ಹಿಡಿದು ಹೊಟ್ಟೆಯಲ್ಲಿ ತುರುಕಿ, ಸೆರಗು ಹೊದ್ದು ದೊಡ್ಡ ಪಿನ್ನು ಚುಚ್ಚಿ ಹೊರಬಂದಳು.

ಮಕ್ಕಳು ಚಿಕ್ಕವರಿದ್ದಾಗ ೨-೩ ತಿಂಗಳಿದ್ದು ಹೋಗುತ್ತಿದ್ದವಳು. ಹೊರಗೆ ಕೆಲಸ ಶುರುಮಾಡಿದಂದಿನಿಂದ ೨-೩ ವಾರ ಇದ್ದು ಹೋಗಲು ಶುರುಮಾಡಿದಳು. ಆ ಅವಧಿಯಲ್ಲಿ ಅತ್ತೆ ಮನೆ, ಅಮ್ಮನ ಮನೆ ಎನ್ನುವುದರಲ್ಲಿ ನೆಂಟರಿಷ್ಟರನ್ನು ನೋಡುವುದು ಕಡಿಮೆಯಾಯ್ತು. ಬರುಬರುತ್ತಾ ಅವರ ಸಂಪರ್ಕ ಕಮ್ಮಿಯಾಗುತ್ತಾ ಬಂತು. ಬಳಗದವರೆಲ್ಲರಿಗೂ ಮಾಲ, ಸುಮಾಳ ಬಳಕೆಯೇ ಹೆಚ್ಚು. ಆದರೂ ಅವರೆಲ್ಲರ ವಿಷಯ ಮನೆಯವರಿಂದ ತಿಳಿದಿದ್ದಳು. ಹಾಗೆಂದೇ ಅವಳ ವಲಯದಲ್ಲಿ ಅವರೆಲ್ಲಾ ಇದ್ದರೂ, ಅವರ ವಲಯದೊಳಗೆ ಇವಳಿಲ್ಲಾ.

ಕ್ಯಾಮರ ಬೆಳಕನ್ನು ಹಾದು, ಪರಿಚಿತರನ್ನು ಹುಡುಕಿ ಹೊರಟವಳಿಗೆ ಕಂಡದ್ದು, ಸೋದರ ಮಾವನ ಹೆಂಡತಿಯ ಅಣ್ಣ. ಖುಷಿಯಿಂದ ಹತ್ತಿರ ಬಂದ ನಂದಾಳನ್ನು ನೋಡಿ 'ಹೇಗಿದ್ದೀಯಾ ನಂದಾ? ಗಂಡ, ಮಕ್ಕಳನ್ನು ಬಿಟ್ಟು ಒಬ್ಬಳೇ ಬಂದಿದ್ದೀಯಾ ? ಪಕ್ಕದಲ್ಲಿ ನಿಂತವನನ್ನು ತೋರಿಸುತ್ತಾ..... ನನ್ನ ಅಳಿಯ ಕೀರ್ತಿ' ಎಂದರು. ಕೀರ್ತಿ ಮುಗುಳ್ನಕ್ಕ. ಅಳಿಯನ ಸಂಪತ್ತಿನ ಬಗ್ಗೆ ಕೊರೆದರು. ಅವನ ಸಾಫ್ಟ್‌ವೇರ್ ಕಂಪೆನಿಯ ಬಗ್ಗೆ, ಮಲ್ಟಿನ್ಯಾಶನಲ್ ಕಾಂಟ್ರಾಕ್ಟ್ ಬಗ್ಗೆ ಹೇಳಿದರು. 'ನ್ಯೂಯಾರ್ಕ್ ಫಾರಿನ್ ಅಫೇರ್ಸ್ ಕಾಲಮಿಸ್ಟ್ ಥಾಮಸ್ ಫ್ರೀಡ್‌ಮನ್ ಬರೆದಿರೋ **ದ ವರ್ಲ್ಡ್ ಈಸ್ ಫ್ಲಾಟ್** ಪುಸ್ತಕ ಓದಿದ್ದೀಯಾ? ಅವನು ಪುಸ್ತಕದಲ್ಲಿ ಬರೆದಿರುವ ಪ್ರಕಾರ ೨೦೪೦ರ ಹೊತ್ತಿಗೆ ಪ್ರತೀ ಚೈನೀ ಪ್ರಜೆಯು ಇವತ್ತಿನ ಸ್ವಿಸ್ ಪ್ರಜೆಯಷ್ಟೇ ಸಾಹುಕಾರನಾಗಿರುತ್ತಾನಂತೆ. ಪ್ರತೀ ಭಾರತೀಯನೂ ಇವತ್ತಿನ ಇಸ್ರೇಲ್ ಪ್ರಜೆಯಷ್ಟೇ ಸಾಹುಕಾರನಾಗಿರುತ್ತನಂತೆ !....' ಚಿಕ್ಕಪ್ಪ ಇಷ್ಟು ಹೇಳುವ ಹೊತ್ತಿಗೆ ಅವರ ಸುತ್ತ ಜನರ ಒಂದು ಸಣ್ಣ ಗುಂಪೇ ಸೇರಿತ್ತು.

'ಅಮೆರಿಕಾದವರು ಇವತ್ತಿನ ಸಾಧಾರಣ ಇಂಡಿಯನ್ ಅಷ್ಟು ಬಡವರಾಗಿರ್ತಾರೆ ಅಲ್ವಾ ಅಂಕಲ್' ಕುಹಕದಿಂದ ನಕ್ಕ ಹುಡುಗನನ್ನು ದಿಟ್ಟಿಸಿ ನೋಡಿದವಳಿಗೆ ಅವನು, ಸೊದರತ್ತೆಯ ಮಗಳು ನಳಿನಿಯ ಮಗ ಎಂದು ಗೊತ್ತಾಯ್ತು. 'ನಿಮ್ಮ ಅಮೆರಿಕಾದವರಿಗೆ ಕೊಬ್ಬು. ಪ್ರಪಂಚದಲ್ಲೆಲ್ಲಾ ನಾವೇ ಪವರ್‌ಫುಲ್ ಅಂತ, ಎಲ್ಲಿ ಆಯಿಲ್ ಇದೆ ಅಂದ್ರೆ ಅಲ್ಲಿ ಹೋಗಿ ರಾಜಕೀಯ ಮಾಡ್ತೀರಲ್ಲಾ, ಈಗ ನೋಡಿ ಏನಾಗ್ತಿದೆ ನಿಮಗೆ. ಸರಿಯಾಗಿ ಹೊಡೆಸಿಕೊಳ್ಳುತ್ತಿದ್ದೀರಿ ಇರಾಕಿನಲ್ಲಿ. ಹೋಂ ಲ್ಯಾಂಡ್ ಸೆಕ್ಯುರಿಟಿ ಅಂತ ಬಿಲಿಯನ್ ಡಾಲರ್‌ಗಟ್ಟಲೆ ಹಣ ಸುರಿದು, ಯಾವ ಗಳಿಗೆಯಲ್ಲಿ ಜನ ಬಂದು ಬಾಂಬ್ ಹಾಕ್ತಾರೋ ಅಂತ ಹೆದರಿ ಕೂತಿದ್ದೀರಿ' ಎಂದ ಗುಂಪಿನಲ್ಲಿದ್ದ ಹುಡುಗನೊಬ್ಬ.

ನಂದಾ ಗಲಿಬಿಲಿಗೊಂಡಳು. ಅಷ್ಟರಲ್ಲಿ ಚೆಲುವಾದ ಮುಖದ ಹುಡುಗಿಯೊಬ್ಬಳು 'ಆಂಟಿ ವಿ ಆರ್ ಗೋಯಿಂಗ್ ಟು ಟೇಕ್ ಒವರ್ ದ ವರ್ಲ್ಡ್ ಇನ್ ಐಟಿ ಇಂಡಸ್ಟ್ರಿ. ನೋ ವನ್ ಕ್ಯಾನ್ ಬೀಟ್ ಅಸ್. ನೋಡ್ತಾ ಇರಿ, ಅಮೆರಿಕಾ ಒಂದು ಡಾಲರ್ ಇಂಡಿಯಾ ಒಂದು ರುಪಾಯಿಗೆ ಸಮ ಆಗುತ್ತೆ' ಎಂದಳು. 'ನೀನು ಸುನಂದಾ ಮಗಳಲ್ವಾ ?' ಎಂದದ್ದಕ್ಕೆ ತಲೆ ಆಡಿಸಿ ಗುಂಪಿನಲ್ಲಿ ಯಾರೋ ಕಂಡರು ಎಂದು ಕೈ ಬೀಸಿ ಛಂಗನೆ ಎಗರಿ ಓಡಿ ಹೋದಳು, ತನ್ನ ಬೆತ್ತಲೆ ಬೆನ್ನು ತಿರುಗಿಸಿ. ಚಿಕ್ಕವರಾಗಿದ್ದಾಗ ನಾನು ನೋಡಿದ ಮಕ್ಕಳಿವರು. ನಾನು ತರುತ್ತಿದ್ದ ಟಾಯ್ಸ್ ಆರ್ ಅಸ್ ಆಟ ಸಾಮಾನು, ಚಾಕಲೇಟ್, ಟಿಶರ್ಟ್ ಆಸೆಯಿಂದ ತೆಗೆದುಕೊಂಡು ಸಂಕೋಚದಿಂದ ಕುಳಿತಿರುತ್ತಿದ್ದ ಪುಟಾಣಿಗಳಿವು ಎಂದು ನೆನಪು ಮಾಡಿಕೊಂಡಳು ನಂದಾ. ಯಾರೋ ಕೇಳಿದ್ರು 'ಏನಂತಾನೆ ನಿಮ್ಮ ಬುಶ್?', 'ಬುಶ್ ನನ್ನವನಾಗಿದ್ದು ಯಾವಾಗ? ೧೮ ವರ್ಷದ ನಂತರವೂ ಭಾರತೀಯಳಾಗೆ ಇರುವ ನಾನು ಅವನಿಗೆ ಓಟ್ ಕೂಡ ಮಾಡಿಲ್ಲ. ನನ್ನ ಅಮೆರಿಕಾ. . . ? ' ಎಂದೆಲ್ಲಾ ಯೋಚಿಸುವ ಹೊತ್ತಿಗೆ ಅಲ್ಲಿದ್ದ ಗುಂಪು ದೊಡ್ಡದಾಗಿ, ಅಮೆರಿಕಾ ಧೋರಣೆ, ಸ್ಟಾಕ್ ಮಾರುಕಟ್ಟೆ ಕುಸಿತದ ಬಗ್ಗೆ, ಬಲವಾಗುತ್ತಿರುವ ಚೈನಾ, ಇಂಡಿಯಾದ ಮಾರುಕಟ್ಟೆಯ ಬಗ್ಗೆ ಅತೀ ಉತ್ಸಾಹದಲ್ಲಿ ಮಾತನಾಡತೊಡಗಿದ್ದರು. ಸದ್ದು ಮಾಡದೆ ನಿಧಾನವಾಗಿ ಒಂದೊಂದೇ ಹೆಜ್ಜೆ ಹಿಂದಕ್ಕೆ ಇಟ್ಟು ನಡೆಯತೊಡಗಿದ ನಂದಾಳನ್ನು ಯಾರೂ ಗಮನಿಸಿದಂತೆ ಕಾಣಲಿಲ್ಲ. ಅರಿಸಿನ ಕುಂಕುಮದ ಟೇಬಲ್ ಬಳಿ ನಿಲ್ಲೋಣ ಎಂದುಕೊಂಡವಳು, ಸೀರೇ ಅಂಗಡಿ ಬೊಂಬೆಗಳಂತೆ ಸಿಂಗರಿಸಿಕೊಂಡು ನಿಂತಿದ್ದ ಚಲುವೆಯರನ್ನು ಕಂಡು ಅಲ್ಲಿಗೆ ಹೊಗಲೇ ಇಲ್ಲ. ಮೇಲಾಗಿ ಅವರ್‍ಯಾರ ಪರಿಚಯವೂ ಅವಳಿಗಿರಲಿಲ್ಲ. ಅಲ್ಲಿ ಇಲ್ಲಿ ಕಂಡ ಪರಿಚಿತರನ್ನು ಮಾತನಾಡಿಸಿ, ರಿಸಪ್ಷನ್ ಸ್ಟೇಜ್ ಬಳಿ ಬಂದಳು. ಅಷ್ಟು ಹೊತ್ತಿಗೆ ಬಂದ ಜನರೆಲ್ಲಾ ಖಾಲಿಯಾಗುತ್ತಾ ಬಂದಿದ್ದರು. ಫೋಟೋಗ್ರಾಫರ್ ಮಾಲಕ್ಕ ಮತ್ತು ಭಾವನ ಫೋಟೋ ತೆಗೆಯುತ್ತಿದ್ದ. ನಂತರ ಸುಮ, ನರೇಂದ್ರ ಮತ್ತು ಮಕ್ಕಳನ್ನು ನಿಲ್ಲಲು ಹೇಳಿದ. ಸುಮ ಮಗಳು ಪರಿ 'ನಂದಾ ಚಿಕ್ಕಿ ನೀನೂ ಫೋಟೋಗೆ ಬಾ' ಎಂದು ಕರೆಯತೊಡಗಿದಳು. ಸುಮ ಮಗಳ ಕೈ ಮೇಲೆ ಒಂದು ಕೊಟ್ಟು 'ಸುಮ್ನೆ ನಿಂತ್ಕೋ ಫೋಟೋ ಕೆಡುತ್ತೆ' ಎಂದಳು. ಮಾಲಕ್ಕ ನಂದಾನ್ನ ಗಮನಿಸುತ್ತಾ. 'ಎಲ್ಲಿ ಹೋಗಿದ್ದೆ? ನಿನಗಾಗಿ ಹುಡುಕುತ್ತಿದ್ದೆವು, ಫೋಟೋಗೆ ಬಾ' ಎಂದರು. ನಂದಾ ಮೇಲೆ ಹೋಗುವ ಹೊತ್ತಿಗೆ ಮಾಲಕ್ಕನ ಬೀಗಿತ್ತಿ ಯಾರಿಗೋ ಪರಿಚಯಿಸಲು ಕರೆದುಕೊಂಡು ಹೋದರು. ಸುಮಾನ ಮತ್ತ್ಯಾರೋ ಕರೆದರು. ನಂದಾ ಒಂಟಿಯಾಗಿ ನಿಂತಳು. ಹಿತಾ ಹೆಗಲ ಮೇಲೆ ಕೈ ಹಾಕಿ, 'ನಮ್ಮಿಬ್ಬರ ಮಧ್ಯೆ ನಿಂತ್ಕೋ ಚಿಕ್ಕಿ. ಸ್ಪೆಶಲ್ ಫೋಟೋ ತೆಗಿಸಿಕೊಳ್ಳೋಣ. ನನ್ನ ಕಂಪೂಟರ್ ಸ್ಕ್ರೀನ್ ಸೇವರ್‌ಗೆ ಹಾಕ್ತೀನಿ' ಎಂದಳು ಸಿಹಿಯಾಗಿ. ಅದೇ ಸಮಯಕ್ಕೆ ಸರಿಯಾಗಿ ಫೋಟೋಗ್ರಾಫರ್ 'ರೀಲ್ ಮುಗಿದಿದೆ ಒಂದು ನಿಮಿಷ ಬಂದೆ....' ಎಂದು ಮರೆಯಾಗಿ ಹೋದ. ಬೆಪ್ಪಾಗಿ ನಿಂತ ಅವಳ ಬಳಿ ಬಂದ ಅಮ್ಮ, 'ರತ್ನ, ಶಾಂತ, ರಮೇಶ, ಸುಮ ಮಕ್ಕಳು ಎಲ್ಲಾ ಮನೆಗೆ

ಹೋಗ್ತಿದಾರೆ. ನೀನೂ ಮನೆಗೆ ಹೋಗಿ ಮಲಗು. ಛತ್ರದಲ್ಲಿ ಹಾಸಿಕೆ, ಹೊದಿಕೆ ಎಲ್ಲಾ ಸರಿ ಇಲ್ಲಾ' ಎಂದರು.

ಮರುದಿನ ಬೆಳಗ್ಗೆ ಎಚ್ಚರಾದಾಗ ಮನೆಯಲ್ಲಿ ಆಳೊಬ್ಬಳನ್ನು ಬಿಟ್ಟರೆ ಯಾರೂ ಇರಲಿಲ್ಲ. ಮನೆಗೆ ಮಲಗಲು ಬಂದವರೆಲ್ಲಾ ಛತ್ರಕ್ಕೆ ಹೋಗಿಯಾಗಿತ್ತು. 'ನೀವು ರೆಡಿಯಾದ ಮೇಲೆ ಆಟೋದಲ್ಲಿ ಛತ್ರಕ್ಕೆ ಕರ್‍ಕೊಂಡು ಬಾ ಅಂದವ್ರೆ. ಬೇಗ ರೆಡಿಯಾಗಿ' ಎಂದಳು.

ನಂದಾ ಬೇಗ ತಯಾರಾದಳು. ಅವಳು ನಿನ್ನೆ ಸಂಜೆ ಮುಡಿದಿದ್ದ ಮಲ್ಲಿಗೆಯ ದಂಡೆಯನ್ನು ರಾತ್ರಿ ಮಲಗುವ ಮುನ್ನ ಜೋಪಾನವಾಗಿ ಪಾತ್ರೆಯ ಅಡಿಯಲ್ಲಿ ಮುಚ್ಚಿಟ್ಟಿದ್ದಳು. ಸ್ವಲ್ಪ ಬಾಡಿದ ಆ ದಂಡೆಯನ್ನು ಮುಡಿದು ಛತ್ರಕ್ಕೆ ಹೊರಟವಳನ್ನು ಕೆಲಸದ ಹುಡುಗಿ ವಿಚಿತ್ರವಾಗಿ ನೋಡಿದ್ದನ್ನು ನಂದಾ ಗಮನಿಸಲಿಲ್ಲ.

ಛತ್ರ ತಲುಪುವ ವೇಳೆಗೆ ಮಾಲಕ್ಕ, ಭಾವ ಪೂಜೆಗೆ ಕುಳಿತಿದ್ದರು. ಹಿತಾ ಕೋಣೆಗೆ ಬರುವ ಹೊತ್ತಿಗೆ, ಹಿತಾ ಗೌರಿ ಪೂಜೆ ಮಾಡುತ್ತಿದ್ದಳು. ಕಳಸ.... ಖಳ ಖಳೆಯಾದ ಅರಿಸಿನದ ಗೌರಿ .... ಎತ್ತರದ ಬೆಳ್ಳಿ ದೀಪ .... ಅರಿಸಿನ ಕುಂಕುಮದ ತಟ್ಟೆ.... ಮರದ ಬಾಗಿನ.... ಬುಟ್ಟಿಯಲ್ಲಿಟ್ಟ ದುಂಡು ಮಲ್ಲಿಗೆ ದಂಡೆಗಳು, ಇದೆಲ್ಲದರ ಮಧ್ಯೆ ಪಟದ ಗೌರಿಯಷ್ಟೆ ಸುಂದರವಾಗಿ ಕಾಣುತ್ತಿದ್ದ ಮದುವಣಗಿತ್ತಿಯನ್ನೇ ನೋಡುತ್ತಾ ನಂದಾ ಮೈಮರೆತು ನಿಂತಳು. ದೇವಸ್ಥಾನದಿಂದ ಗಂಡು ಕರೆದುಕೊಂಡು ಬಂದಿರಬೇಕು. ಓಲಗದ ಸದ್ದು ಕೇಳತೊಡಗಿತು. ಅವಸರದಲ್ಲಿ ಬಂದ ಸುಮ ಬುಟ್ಟಿಯಲ್ಲಿದ್ದ ಎರಡು ಮಲ್ಲಿಗೆ ದಂಡೆಯನ್ನು ಸೇರಿಸಿ ಮಾಲೆಮಾಡಿ ತನ್ನ ಉದ್ದದ ಜಡೆಗೆ ಮುಡಿದಳು. ಉಳಿದ ಇನ್ನೊಂದು ದಂಡೆಯನ್ನು ಹೊರಗೆ ಪೂಜೆಗೆ ಕುಳಿತಿದ್ದ ಮಾಲಕ್ಕನ ತಲೆಗೆ ಮುಡಿಸಿದಳು. ಆ ಕ್ಷಣ ನಂದಾ ಮಂಜಿನ ಗಡ್ಡೆಯಲ್ಲಿ ಕಡೆದಿಟ್ಟ ಬೊಂಬೆಯಾದಳು. ಕಣ್ಣಿಂದ ತುಳುಕಿದ ನೀರ ಬಿಸಿಗೆ ಎಚ್ಚರಾಗಿ, ಛತ್ರದ ಆಚೆ ಚಪ್ಪರದಡೆಗೆ ನಡೆದಳು. ಕುರ್ಚಿಯೊಂದರಲ್ಲಿ ಕುಳಿತ ಅವಳ ಅಪ್ಪಾಜಿ ಕಂಡರು. ಅವರ ಪಕ್ಕದ ಕುರ್ಚಿಯಲ್ಲಿ ಕುಳಿತ ನಂದಾ ಅವರ ಎಡ ಭುಜಕ್ಕೊರಗಿ ಕುಳಿತಳು. ಅವರ ಬಲಗೈ ಅವಳ ತಲೆ ನೇವರಿಸ ತೊಡಗಿತು. ಇದುವರೆಗೆ ತಡೆದ ಕಣ್ಣೀರು ದಳ ದಳ ಸುರಿಯತೊಡಗಿತು.

'ಅಪ್ಪಾಜಿ'

'ಹೂಂ....'

'ನನಗೆ ಮಲ್ಲಿಗೆ ದಂಡೆ ಬೇಕು ಕೊಡಿಸ್ತೀರಾ?'

'ಹೂಂ'

ಎದೆಯ ಮೇಲಿದ್ದ ಮಗಳ ಕೈಯನ್ನು ಒತ್ತಿ ಹಿಡಿದಿದ್ದರು ನಂದಾಳ ಅಪ್ಪಾಜಿ.

•

# ಮಿತಿ

**– ಗೋಪಿನಾಥ ತಾತಾಚಾರ್**

ಹಳೆ ಕೆಲಸ ಬಿಟ್ಟು ನಾಕು ವಾರವಾಗಿತ್ತಷ್ಟೆ. ಹೊಸ ಕೆಲಸ. ಹೊಸ ಜನ. ಹೊಸ ಜಾಗ. ಎಲ್ಲವು ಹೊಸದೆ. ಆದರೂ ವೆಂಕಿಗೆ ಯಾವುದು ಹೊಸದು ಅನಿಸಿರಲಿಲ್ಲ. ಗ್ರೀನ್ಕಾರ್ಡ್ ಸಿಕ್ಕ ಮೂರು ವರ್ಷದಲ್ಲಿ ಇದು ಎರಡನೆಯ ಕೆಲಸ. ಎಂಟು ವರ್ಷದ ಅನುಭವದಲ್ಲಿ ಬದಲಾವಣೆಗಳೂ ಯಾಂತ್ರಿಕವಾಗಿತ್ತು. ಎದ್ದಾಗ ಘಂಟೆ ಐದುಕಾಲು. ಬೇಗನೆ ಹೋಗಬೇಕು ಕೆಲಸಕ್ಕೆ. ಮೈನಿಡಿದುಕೊಂಡು, ದಿನವಿಧಿಗಳನ್ನು ಪೂರೈಸಿ ಬರೋದರಲ್ಲಿ ಕಾಫಿ ರೆಡಿ. ಹಾಲು, ಸಕ್ಕರೆಯಿಲ್ಲದೆ ಬರಿಯ ಬ್ಲಾಕ್ ಕಾಫಿ ಅಭ್ಯಾಸವಾಗಿತ್ತು. ಹೀರುತ್ತಾ ಟೈ ಬಿಗಿದು, ಹದಿನೆಂಟನೆಯ ಬಾರಿ ಮುಖನೋಡುತ್ತಾ, ಕೂದಲನ್ನು ನೇವರಿಸಿಕೊಂಡಿದ್ದ. ಸಾಮಾನ್ಯ ಗಾತ್ರದ ತೆಳ್ಳಗಿನ, ಬೆಳ್ಳಗಿನ ಮೈ. ಸಾಧಾರಣವಾದ ಎತ್ತರ. ಗಂಭೀರ ಮುಖದಲ್ಲಿ ಹೊಳೆವ ಕಣ್ಣು ಅವನ ಸೂಕ್ಷ್ಮಬುದ್ಧಿಯ ಪ್ರತೀಕ. ಬುದ್ಧಿ ಎಷ್ಟು ತೀಕ್ಷ್ಣವೋ, ನಾಲಗೆ ಅಷ್ಟೇ ಹರಿತ. 'ಏಕ್ ಮಾರ್ ದೊ ತುಖಡ – ಒಂದು ಮಾತಿಗೆ ತುಂಡೆರೆಡು ಎನ್ನುವಂತಹ ಮಾತನಾಡೊಕ್ಕೆ ಯಾವ ಕಣಿ, ಮುಲಾಜ್ ಇಲ್ಲ. ಗುಜ್ಜ ಮೂಗಿನ ತುದಿಯಲ್ಲಿ ಯಾವಾಗಲು ಕೋಪ. ಸದಾಸಿಡುಕಿನ ಮೂವ್ವೊತ್ತೊಂದು ವರುಷದ ಯುವಕ. ಹರ ಇಲ್ಲ ಶುಭ ಇಲ್ಲ. ತಾನಾಯ್ತು ತನ್ನ ಕೆಲಸವಾಯ್ತು. ಯಾರೊಂದಿಗೂ ಹೆಚ್ಚಾಗಿ ಮಾತು ಬೆಳಸಿ ಸಂಭಾಷಣೆಗೆ ತೊಡುಗುವ ಜಾತಿಯಲ್ಲ. ಕೆಲಸಕ್ಕೆ ಬಾರದ ಮಾತು ಇನ್ನೂ ವಿರಳ. ಇವನ ಕೂಡ ಮಾತು ಬಯಸಿ ಬಂದವರೂ ವಿರಳವೆ. ಮಾತನಾಡುವುದಕ್ಕೆ ಹಿಂಜರಿದವರೆ ಜಾಸ್ತಿ. ಆ ಕೋಪ, ಆ ಹುಬ್ಬುಗಂಟು, ಆ ಸಿಡುಕುತನ, ಸ್ವಲ್ಪ ದಿನದಲ್ಲಿ ಎಲ್ಲರಿಗೂ ಪರಿಚಯವಾಗಿ, ಎಲ್ಲರಿಗೂ ಒಂದು ತೆರನಾದ ಹೆದರಿಕೆ. ಆದರೆ ಬುದ್ಧಿಶಕ್ತಿಗೆ ಸರಿಸಮನಾದ ಬಿಚ್ಚುಮನಸ್ಸು ವೆಂಕಿಗೆ. ಆಪ್ತರು ಸಿಕ್ಕಾಗ, ಮನಸ್ಸು ಬಂದವರೊಡನೆ, ಬಂದಾಗ ಮಾತ್ರ ವಾಚಾಳಿ.

ನಮ್ಮ ಈ ಮೈಸೂರಿನ ವೆಂಕಟರಾಮನಿಗೂ(ವೆಂಕಿ), ಮಂಗಳೂರಿನ ಪೀಟರ್ ಡಿಸೋಜಾನಿಗೂ ಪರಿಚಯವಾಗಿದ್ದು ನ್ಯೂಯಾರ್ಕಿನಲ್ಲಿ. ಹೊಸದಾಗಿ ಸೇರಿದ್ದ ಕಂಪೆನಿಯಲ್ಲಿ ಪೀಟರ್ ಎಂಟು ವರ್ಷದಿಂದ ಕೆಲಸದಲ್ಲಿದ್ದ. ಅವನ ಮುಖದಲ್ಲಿ ಯಾವಾಗಲು ಒಂದು

ಬಗೆಯ ತುಂಟ ನಗೆ. ಆ ಮೃದುಹಾಸ, ಕಾಂತಿ ತುಂಬಿದ ಕಣ್ಣು ಅವನ ತೀಕ್ಷ್ಣಬುದ್ಧಿಗೆ ಕನ್ನಡಿಯಂತಿತ್ತು. ಅದಕ್ಕೆ ಸಾಕ್ಷಿಯೆಂಬಂತೆ ಬೊಕ್ಕತಲೆ. ಅಲ್ಲಿ ಇಲ್ಲಿ ನಾಕು ಕೂದಲಿದ್ದರೆ ಹೆಚ್ಚು. ಬಿಗಿಯಾದ ಮೈಕಟ್ಟು. ತೋಳುಗಳಲ್ಲಿ ಎದ್ದು ನಿಂತ ಮಾಂಸಖಂಡ. ಬಲಶಾಲಿ. ಸಾಧಾರಣ ಎತ್ತರ. ಆದರೂ ದೇಹ ದಾರ್ಢ್ಯತೆ ಅದನ್ನು ಕುಗ್ಗಿಸಿ ಕುಳ್ಳನಾಗಿ ತೋರುತ್ತಿದ್ದ. ಪೀಟರ್ ಸ್ವಭಾವದಲ್ಲಿ ವೆಂಕಿಗೆ ತದ್ವಿರುದ್ಧ. ಪ್ರತಿ ಮಾತಿನಲ್ಲು ನಯ, ನಾಜುಕು. ಬೆಣ್ಣೆಯಲ್ಲಿ ಕೂದಲು ತೆಗೆದ ಹಾಗೆ ಮಾತು. ಅಂಗ್ರೇಜ಼ಿ ಭಾಷೆ ಸುಲಲಿತವಾಗಿ, ಸ್ವಲ್ಪವೂ ತಪ್ಪಿಲದೆ ಮಾತಾಡಬಲ್ಲ ಪ್ರೌಢಿಮೆ. ಅದಕ್ಕೆ ತಕ್ಕ ನವ್ಯಕಾಲದ ಉಚ್ಚಾರಣೆ. ಸರಿಸಮನಾದ ಡಿಪ್ಲೊಮೆಸಿ. ಸಹಜ ಸುಲಭವೆನ್ನುವಂತೆ ಹುಡುಗಿಯರನ್ನು ಮಾತಿನಲ್ಲಿ ಮೋಡಿ ಮಾಡಬಲ್ಲ ವ್ಯಕ್ತಿತ್ವ. ಮರುಳಾಗಿ ಮಾರು ಹೋದವರು ಇದ್ದಾರು! ಹುಡುಗಿಯರೊಂದಿಗೆ ಸೋಗಸಾಗಿ ಬೆರೆಯುತ್ತಾನೆ. ಋಜು ಸ್ವಭಾವ. ಅವನ ಏಷ್ಟೋ ನಡೆನುಡಿಗಳು ಕೂಡ ಸುಸಂಸ್ಕೃತ ಹುಡುಗಿಯರ ನಡೆನುಡಿಗಳಿಗೆ ಹೋಲುತ್ತೆ. ಅವನಿಗೆ ಎಲ್ಲರೂ ಬೇಕು; ಎಲ್ಲರಿಗೂ ಅವನೂ....

ನಾಕು ವಾರದ ಪರಿಚಯ ಸ್ನೇಹವಾಗಿತ್ತು. ದಿನನಿತ್ಯ ಎರಡೂ ಇಲ್ಲ ಮೂರು ಬಾರಿಯ ಬೇಟಿ. ದಿನಕ್ಕೆ ಎರಡು ತಾಸಿನ ಮಾತುಕತೆ. ಆ ಬರಿಯ ಎರಡು ಘಂಟೆಗಳ ಕಾಲದಲ್ಲಿ ಬೆಳೆದುಬಂದ ಸ್ನೇಹ. ಸಾಮಾನ್ಯವಾಗಿ ಕೆಲಸಕ್ಕೆ ಸಂಬಂಧಪಟ್ಟ ಚರ್ಚೆಗಳೇ ಹೆಚ್ಚು. ಅದು ಯಾಕೆ ಹೀಗೆ ? ಇದು ಯಾಕೆ ಹೀಗೆ ? ಎಂದು ಎತ್ತಿದ ತಾಂತ್ರಿಕ ಪ್ರಶ್ನೆಗಳು ಚರ್ಚೆಯಾಗಿ ಬೆಳೆದು, ಹಲವು ಬಾರಿ ತರ್ಕ ವಾದಗಳನ್ನು ಮೀರಿ, ಜಗಳದ ರೂಪವನ್ನೂ ತಾಳಿತ್ತು! ಯೌವನದ ಸಹಜ ಲಕ್ಷಣವೆಂಬಂತೆ ಅನೇಕ ವಿಷಯಗಳಲ್ಲಿ ಅವರಿಬ್ಬರದ್ದು ಇನ್ನೂ ಪರಿಪಕ್ವವಾಗದಂಥ ಅನುಭವಗಳು. ಆರೆಂಟು ವಾರದಲ್ಲಿ ವೆಂಕಿಯ ತಾಂತ್ರಿಕ ತಿಳುವಳಿಕೆ, ತಿಳಿಸುವಿಕೆ ಎಲ್ಲರಿಗೂ ತಿಳಿದು ಅವನು ಮಾಸ್ಟ್ರೊ ವೆಂಕಿ ಆಗಿದ್ದ. ಪೀಟರಿಗೂ ವೆಂಕಿಯ ತಿಳುವಳಿಕೆ, ಜ್ಞಾನದ ಮೇಲೆ ನಂಬಿಕೆ, ವಿಶ್ವಾಸಗಳು ಮೂಡಿತ್ತು. ಇತ್ತೀಚೆಗೆ ಕೆಲಸಕ್ಕೆ ಸಂಬಂಧಪಟ್ಟ ಮುಖ್ಯವಾದ ತೀರ್ಮಾನಗಳನ್ನು ವೆಂಕಿಯ ಅಭಿಪ್ರಾಯ ಪಡೆದು ಮಾಡುತ್ತಿದ್ದ. ಪರಿಚಯವಾದ ಆರಂಭದಲ್ಲಿ ಪೀಟರ್ ನೂರು ಮಾತಾಡಿದರೆ ವೆಂಕಿ ನಾಕು. ಆ ನಾಕು ಬೆಳೆದು ಅರವತ್ತು ಆಗುವುದರಲ್ಲಿ ಒಂದು ವರ್ಷವಾಗಿತ್ತು. ಈಗ ದಿನವು ಒಟ್ಟಿಗೆ ಲಂಚ್ ಮಾಡುತ್ತಾರೆ. ಪೀಟರ್‌ಗೆ ಕ್ಯಾಪಚಿನೊ ಇಷ್ಟವಾದದ್ದರಿಂದ ದಿನವೂ ಎದುರಿನಲ್ಲಿದ್ದ ಇಟಾಲಿಯನ್ ಕೇಫ಼ೆಗೆ ಹೋಗುತ್ತಾರೆ. ವಾರಕ್ಕೊಮ್ಮೆಯಾದರು ಪಬ್ಬಿಗೆ ಹೋಗುವುದುಂಟು.

ವಾಲ್‌ಸ್ಟ್ರೀಟಿನ ನೌಕರಿಯೆಂದರೆ ಒತ್ತಡದ ಕೆಲಸ. ಎಷ್ಟು ಜಾಸ್ತಿಯೆಂದರೆ ರಾತ್ರೆ ಮನೆಗೆ ಬರುವುದು ಕೇವಲ ಮಲಗುವುದಕ್ಕೆ ಎಂಬಂತೆಯೇ ಆಗಿತ್ತು. ಎಷ್ಟೋ ದಿನಗಳು ಮಧ್ಯಾನದ ಊಟವನ್ನು ಸಹಜವಾಗಿ ಮರೆಯುವುದುಂಟು. ಕೆಲವು ದಿನ ಅಂದು

ಕೆರದುಕೊಳ್ಳುವುದಕ್ಕು ಟೈಮ್ ಇರುವುದಿಲ್ಲ! ಅಂಥಾ ದಿನಗಳು, ಕೆಲವೊಮ್ಮೆ, ಡೆಸ್ಕಿನ ಹಿಂದೆ ನಿಂತು ಪೀಟರ್ ಮಾಡುತಿದ್ದ ಐದು ನಿಮಿಷದ ಮಸಾಜ್ ವೆಂಕಿಗೆ ಹಿತವೆನಿಸುತಿತ್ತು. ಕತ್ತು, ಭುಜಗಳನ್ನು ನೀವಿ ಕೊಡುತ್ತಿದ್ದ! ವೆಂಕಿಗೆ ನಿಜಕ್ಕೂ ರಿಲಾಕ್ಸ್ ಆಗೋದು. ಮೊದಲನೆಯ ಬಾರಿ ಅಚ್ಚರಿಪಟ್ಟು ಹೇಗೆ ಕಲಿತನೆಂದು ಕೇಳಿದ್ದ. 'ಬಸ್ ಐಸಾಹಿ, ಮುಂಬೈ ಸಬ್ ಸಿಕಾ ದೇತಿ ಹೈ' ಎಂದಿದ್ದ. ಮತ್ತೆ ಕೆಲವೊಮ್ಮೆ ವೆಂಕಿ ಸಿಡಿಮಿಡಿಗುಟ್ಟುತ್ತಿದ್ದರೆ, 'ಯು ಆರ್ ಬಿಚ್ಚಿ ಟುಡೇ' ಎಂದು ನಕ್ಕು ಏನಾದರು ಹೇಳಿ ಸಂದರ್ಭವನ್ನು ತಿಳಿಯಾಗಿಸಿಬಿಡುತ್ತಿದ್ದ.

ವೆಂಕಿ ಹುಟ್ಟಿದ್ದು ಬೆಂಗಳೂರು. ಬೆಳೆದದ್ದು ಮೈಸೂರಿನ ಅಗ್ರಹಾರದ ಮನೆಯಲ್ಲಿ. ಇವನಿಗೆ ತೊಟ್ಟಿಲಶಾಸ್ತ್ರವಾದಾಗ ಅರವತ್ತು ಸಂವತ್ಸರದ ಸುಣ್ಣ ಬಣ್ಣವನ್ನು ಕಂಡಿತ್ತು ಆ ಮನೆ. ಬಾಲ್ಯದಿಂದ ಹಿಡಿದು ಯೌವ್ವನದ ಹೊಸಿಲನ್ನು ದಾಟಿಸಿದ ನಂಟು ಬಾಂಧವ್ಯ. ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬ. ವಿದ್ಯೆ ಓದಿ, ಪರಿಕ್ಷೆ ಬರೆದು, ಪಾಸಗಿ ಇಂಜಿನಿಯರ್ ಆಗಿದ್ದ. ಅಂತಿಮ ವರ್ಷದ ಅಂತಿಮ ಸೆಮಿಸ್ಟರ್‌ನಲ್ಲಿ ಎಂಟನೆಯ ರ್ಯಾಂಕ್ ಗಳಿಸಿದ್ದ. ಕಾಲೇಜಿನ ವಾರ್ಷಿಕೋತ್ಸವದಲ್ಲಿ ಇವನ ಹೆಸರಿಡಿದು ಸನ್ಮಾನಿಸಲು ಕರೆದಾಗ ಬೇಕೆಂದೇ ಹೋಗಿರಲಿಲ್ಲ. ತನ್ನದೆ ವ್ಯಾಸಂಗ, ತನ್ನದೆ ಅಭ್ಯಾಸ. ಅದಕ್ಕೆ ತಕ್ಕ ಧೈರ್ಯ ಸ್ಥೈರ್ಯ. ಚುರುಕು ಬುದ್ಧಿಯ ಜೊತೆ ಜೊತೆಗೆ ಆತ್ಮವಿಶ್ವಾಸದ ಹಮ್ಮು. ಅಮೆರಿಕಾಗೆ ಬಂದು ಸ್ನಾತಕೋತ್ತರ ಪದವಿಯನ್ನು ಎರಡು ವರ್ಷದಲ್ಲಿ ಗಿಟ್ಟಿಸಿದ್ದ.

ಪೀಟರ್ ಹುಟ್ಟಿದ್ದು ಮಂಗಳೂರಿನಲ್ಲಿ. ಚಿಕ್ಕಂದಿನಲ್ಲೆ ತಂದೆ, ತಾಯಿಯನ್ನು ಕಳೆದುಕೊಂಡ ತಬ್ಬಲಿ. ಮುಂಬೈನ ಮಲಬಾರಹಿಲ್ನಲ್ಲಿದ್ದ ಚಿಕ್ಕಪ್ಪನ ಮನೆಯಲ್ಲಿ ಬೆಳೆದಿದ್ದು. ಮಧ್ಯಮ ವರ್ಗದ ಕುಟುಂಬವಾದರೂ, ಸಾಕಷ್ಟು ಅನುಕೂಲಸ್ಥರು. ಯಾವುದಕ್ಕು ಕಡಿಮೆಯಿರಲಿಲ್ಲ. ಹಿಂದಕ್ಕೆ ಅರಬ್ಬಿ ಸಮುದ್ರ. ಕಡಲಿನಲ್ಲಿ ಅಟವಾಡುತ್ತ ಬೆಳೆದ ನಂಟು, ಬಾಂಧವ್ಯ. ಚಿಕ್ಕಪ್ಪನಿಗೆ ಒಬ್ಬಳೇ ಮಗಳು. ರೋಸಿ ಪ್ರಾಯದಲ್ಲಿ ಪೀಟರ್‌ಗೆ ಎರಡು ವರ್ಷ ದೊಡ್ಡವಳು. ಗಂಡು ಮಗನಿಲ್ಲದ್ದಕ್ಕೋ ಏನೋ ಚಿಕ್ಕಮ್ಮನಿಗೂ ಇವನನ್ನ ಕಂಡರೆ ಮೊದಲಿಂದಲೂ ಇಷ್ಟ. ಹುಡುಗರಿಗೆ ಸ್ವಾಭಾವಿಕವಾದ ತಂಟೆ, ತುಂಟಾಟಗಳಿಲ್ಲದೆ ಬೆಳದ ಹುಡುಗ. ಚಿಕ್ಕವನಿದ್ದಾಗ ಮೌನಿಯೆ. ಸಾಧು ಮಗು. ಹಾಗೆ ನೋಡಿದರೆ ರೋಸಿಯೆ ತುಂಟಿ. ಅವಳ ಚಿಕ್ಕಂದಿನ ತುಂಟಾಟ, ರಗಳೆಗಳಿಗೆ ಕೊನೆ ಮೊದಲಿಲ್ಲ. ಇವನು ವಿದ್ಯೆ ಕಲಿತು ಇಂಜಿನಿಯರ್ ಆಗೋದರಲ್ಲಿ, ರೋಸಿ ಮದುವೆಯಾಗಿ ರಿಯಾದಿಗೆ ಹೋರಟು ಹೋಗಿದ್ದಳು. ಆನಂತರ ಅಮೆರಿಕಾಗೆ ಬಂದು ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದ. ಹಿಂದಿ, ಇಂಗ್ಲಿಷಿನಲ್ಲಿ ಸುಲಲಿತವಾಗಿ ಮಾತನಾಡುವ ಹಾಗೆ ಕನ್ನಡದಲ್ಲಿ ಮಾತನಾಡಲಾರ. ಆದರೆ ಕನ್ನಡದ ಮಾತು ಚೆನ್ನಾಗಿ ಅರ್ಥವಾಗುತ್ತೆ. ಅದೂ ಒಂದು ಕಾರಣವಿದ್ದರಬೇಕು ಅವರಿಬ್ಬರನ್ನು ಹತ್ತಿರ ತರಲು.

ಪ್ರತಿ ಸೋಮವಾರದಂತೆ ವೆಂಕಿ ಅಂದು ಕೆಲಸಕ್ಕೆ ಬೇಗನೆ ಬಂದಿದ್ದ. ಕ್ಯೂಬಿಗೆ ಬಂದು ಛೇರಲ್ಲಿ ಕೂತು ತಂದಿದ್ದ ಕಾಫಿ ಇನ್ನು ಹೀರಿರಲಿಲ್ಲ, ಅಷ್ಟರಲ್ಲಿ ಕೂಗಿತ್ತು ಫೋನ್! ಅದಾದ ಒಂದೆರೆಡು ಗಂಟೆ ಪುರುಸೊತ್ತಿಲ್ಲದೆ ಒಂದೇ ಸಮ ಕೆಲಸವಾಯ್ತು. ಪೀಟರ್ ಬಂದು ಕಾಫಿಗೆ ಕರೆದಾಗ ಸ್ವಲ್ಪ ಬಿಡುವಾಗಿತ್ತು. ಅಲ್ಲೇ ಎದುರಲ್ಲಿದ್ದ ಕೆಫೆಗೆ ಹೋಗಿ ಕೂತಿದ್ದರು. ಸಿನಮನ್ ಪೌಡರ್ ಸಿಂಪಡಿಸಿದ್ದ ನೊರೆಯ ಟೋಪಿಯನ್ನು ಸ್ಪೂನಿನಲ್ಲಿ ತೆಗೆದು ಚಪ್ಪರಿಸಿ, ಕ್ಯಾಪಚಿನೊ ಹೀರಿದಾಗ ಅಹ್ಲಾದಕರವಾಗಿತ್ತು. ವೆಂಕಿ, ಪೀಟರ್ ಇದ್ದಕಿದ್ದಂತೆ ದಿಢೀರನೆ 'ಪೀಟರ್, ಐ ಆಮ್ ಗೇ' ಎಂದು ಹೇಳಿದ್ದ. ಸ್ವಲ್ಪ ಮುಂದಕ್ಕೆ ಬಗ್ಗಿ, ಮೆತ್ತಗೆ ಹೇಳಿದ್ದರೂ, ವೆಂಕಿಗೆ ಸ್ಪಷ್ಟವಾಗಿ ಕೇಳಿಸಿತ್ತು. ಆ ಮಾತಿನ ಅರ್ಥ ಪೂರ್ತಿಯಾಗಿ ಇನ್ನು ಮನಸ್ಸಿಗೆ ತಟ್ಟಿರಲಿಲ್ಲ. ಆದರೂ 'ಗುಡ್' ಎಂಬ ಶಬ್ದ ವೆಂಕಿಯ ಬಾಯಿಂದ ಹೊರಬಿದ್ದಿತ್ತು! 'ಗುಡ್ ಪೀಟರ್!' ಅಶ್ಚರ್ಯವಾಗಿ ಕೇಳಿದ್ದ 'ಯೆಸ್' ಎಂದಷ್ಟೆ ಹೇಳಿದ್ದ ವೆಂಕಿ. ಇಬ್ಬರೂ ಕಾಫಿ ಮುಗಿಸಿ ಕೆಲಸಕ್ಕೆ ವಾಪಸ್ ಬಂದಿದ್ದರು. ಅಂದು ಮತ್ತೆ ಭೇಟಿಯಾಗಿರಲಿಲ್ಲ.

'ಗುಡ್' ಅಂದಿದ್ದು ರೂಢಿಯಿಂದ ಹೊರಬಿದ್ದ ಶಬ್ದವೆಂದು ಡೆಸ್ಕಿಗೆ ಬಂದ ಸ್ವಲ್ಪ ಹೊತ್ತಿಗಾಗಲೆ ವೆಂಕಿಗೆ ತಿಳಿದಿತ್ತು. 'ವೆಂಕಿ, ನಾನು ಗೇ' ಎಂಬ ಮಾತಿನ ಅತೀವ ಸಹಜತೆ, ನಿರ್ವಿಕಾರತೆಗಳು ವೆಂಕಿಯನ್ನು ಇಡೀ ದಿನ ಕಾಡಿತ್ತು. ಕದಡಿದ ಮನಸ್ಸಿಗೆ ಘಾಸಿಯಾಗಿತ್ತು. ಉದಾಸೀನನಾಗಿದ್ದ. ಒಂದು ವರ್ಷದ ಅಪ್ತತೆಯೆ ಇದಕ್ಕೆ ಕಾರಣವಿದ್ದಿರಬಹುದು.

ಅಂದು ತಾಯಿ ತೀರಿಕೊಂಡ ದುರ್ವಾರ್ತೆ ಅಪರಾತ್ರಿಯಲ್ಲಿ ವೆಂಕಿಗೆ ಫೋನ್ ಮೂಲಕ ತಿಳಿದುಬಂತು. ಸಾಯೋ ವಯಸ್ಸೇನಲ್ಲ. ಇಡೀ ಜೀವನ ಮಕ್ಕಳು, ಅವರ ಸಂಸಾರ, ಗಂಡ, ಮೊಮ್ಮಕ್ಕಳಿಗಾಗೆ ಮುಡಿಪಿಟ್ಟ ಜೀವ. ಬೆಳಿಗ್ಗೆ ಒಂಬತ್ತರ ಬ್ರಿಟಿಶ್ ಏರ್ವೆಸ್ ಫ್ಲೈಟ್ನಲ್ಲಿ ಸೀಟ್ ಸಿಕ್ಕಿತ್ತು. ಏರ್ಪೋರ್ಟಿಂದ ಪೀಟರ್‌ಗೆ ಫೋನ್ ಮಾಡಿ ಮೂರು ಅಥವಾ ನಾಕು ವಾರಗಳಾದರೂ ಅಗಬಹುದು ಎಂದು ಮ್ಯಾನೇಜರ್‌ಗೆ ತಿಳಿಸಲು ಹೇಳಿ ಮೈಸೂರಿಗೆ ಹೋಗಿದ್ದ. ವೆಂಕಿ ಮೈಸೂರು ತಲಪಿದ್ದು ಇನ್ನೊಂದು ಕತೆ.

ವೈಕುಂಠ ಸಮಾರಾಧನೆ ಮುಗಿದು ನಾಕ್ಕೈದು ದಿನವಾಗಿತ್ತು. ಶುಕ್ರವಾರ ಅಂದರೆ ನಾಳಿದ್ದು ವೆಂಕಿ ವಾಪಸ್ಸ್ ಹೋಗಬೇಕು. ವೆಂಕಿ ಅಗ್ರಹಾರದ ಬಾಲಗಳೊಂದಿಗೆ (ತಾಯಿ ದೊಸ್ತಿಗಳನ್ನು ಕರೆಯುತ್ತಿದ್ದಿದ್ದು ಹಾಗೆ) ಪ್ರಭಾ ಥಿಯೇಟರ್ರಿನ ಪಕ್ಕದಲ್ಲಿ ರೂಫ್ಟ್-ಟಾಪಿನ ಮೇಲಿರುವ ಶಿಲ್ಪಶ್ರೀ ಬಾರಿಗೆ ಹೋಗಿದ್ದ. ಚಿಲ್ಲಿ ಚಿಕನ್ನು, ಚಿಲ್ಲಿ ಪೋರ್ಕು, ರಾಜ ಸ್ಪೆಶಲ್, ಎಳೆ ಸೌತೆಕಾಯಿ, ಮತ್ತೆ ಇನ್ನು ಏನೇನೋ ಟೇಬಲ್ ತುಂಬ ತುಂಬಿತ್ತು. ವೆಂಕಿ ತಣ್ಣನೆಯ ಯು.ಬಿ ಹೀರುತ್ತಿದ್ದ. ಒಂದೆರೆಡು ಗಂಟೆ ಉರುಳಿರಬೇಕು. ಮಾತು ಎಲ್ಲೆಲ್ಲೋ ತಿರುಗಿ ಕೊನೆಗೆ ನ್ಯೂಯಾರ್ಕಿಗೆ ಬಂದು ನಿಂತಿತ್ತು. ವೆಂಕಿಗೆ ಯಾರೊಂದಿಗಾದರೂ ಪೀಟರ್ ಬಗ್ಗೆ

ಹೇಳಲೇಬೇಕೆಂಬ ಒತ್ತಡ. ಎರಡು ವಾರದಿಂದ ಹೇಳಲಾರದ ತವಕ ಬಾಧಿಸಿತ್ತು. ಒಂದು ತೆರನಾದ ಇರಸು ಮುರಸು. ಬಾಲ್ಯ ಸ್ನೇಹಿತರಿಗೆ ಎಲ್ಲವನ್ನು ಹೇಳಿದ್ದ.

ಶೇಖರ 'ಥೀ.... ತೂ....' ಎಂದು ಬೈದಿದ್ದ. ಅದು ಅನೈಸರ್ಗಿಕ ಸಂಬಂಧವೆಂದು ಅವನ ವಾದ. 'ಅಂಥಾ ಮನುಷ್ಯನ ಜೊತೆ ನೀನು ದೋಸ್ತಿ ಇಟ್ಕೋಬಾರದು ವೆಂಕಿ' ಅಂತ ಹೇಳಿ ಮುಗಿಸುವಷ್ಟರಲ್ಲಿ ಅವನ ಮೇಲೆ ಮಾಧವರಾವ್ ಎಗರಿದ್ದ. ಮೊದಲಿನಿಂದಲೂ ಒಳ್ಳೆಯ ಮಾಹಿತಿಗಾರ ಮಾಧವರಾವ್. ಪಾಂಡಿತ್ಯವಿಲ್ಲದಿದ್ದರೂ ಅಲ್ಲಿ ಇಲ್ಲಿ ಕೇಳಿದ್ದನ್ನ ಸ್ಮರಣೆಯಲ್ಲಿ ಇಟ್ಟು ಸಮಯಕ್ಕೆ ಸರಿಯಾಗಿ ಯೂಸ್ ಮಾಡಿಕೊಳ್ಳುತ್ತಾನೆ.

'ಶೇಖರ ಇದು ನಿನ್ನೆ ಮೊನ್ನೆ ಹುಟ್ಟಿದ ಫ್ಲ್ಯಾಶನ್ನು ಅಲ್ಲೋ. ನಿನ್ನ ತಾತ, ಕೊಳ್ಳತಾತ ಅವರ ಕಾಲದಿಂದಲೂ ಇರೋ ಅಂತದ್ದು. ಎತೆಂತ ಘಟಾನುಘಟಿಗಳು ಆ ತರಹ ಬದುಕಿದಾರೆ ಗೊತ್ತಾ ನಿನಗೆ. ಸುಮ್ಮನೆ ಥೀ ತೂ ಅಂತಿಯ. ಬುದ್ಧಿವಂತರಿಗೆ ಎಲ್ಲಾನು ಅನುಭವಿಸಿ ನೋಡೋ ಕುತೂಹಲ ಇರುತ್ತೋ'.

ಶೇಖರಂಗೆ ಕೋಪ ಹತ್ತಿತ್ತು, 'ಸರಿ ಕಣೊ ನಾನು, ನೀನು ಇಪ್ಪತ್ತು ವರ್ಷದಿಂದ ದೋಸ್ತಿ. ನೀನು ಬುದ್ಧಿವಂತ. ಇದನೆಲ್ಲಾ ತಿಳ್ಕೊಂಡಿದೀಯ. ನನ್ನ ಜೊತೆ ಗುದ್ದು ಗುದುಮುರಿ ಮಾಡಬೇಕು ಅನಿಸಿಸುತ್ತ ನಿನಗೆ?'

'ನನಗೆ ಅನಿಸಲ್ಲೋ.... ಅನಿಸಿದರೆ ತಪ್ಪಲ್ಲ ಅಂತ ನಾ ಹೇಳಿದ್ದು. ತೀಟೆ ತೀರಿಸೊಕ್ಕೆ ವೆಂಕಿ ಮನೆ ಹಿಂದೆ ಸೂಳೆ ಮನೆ ಇಲ್ಲವೇ. ಗುದ್ದು ಗುದುಮುರಿಯೇನು, ಗಜಾಂಗೋಷ್ಠಿನೇ ನಡೆಸಬಹುದು. ಅಲ್ಲೋ ವೆಂಕಿ ನ್ಯೂಯಾರ್ಕಿಗೆ ಹೋಗಬೇಕೆನೋ ಇದಕ್ಕೆ. ನಮ್ಮ ತಳಿಕ್(ಅಡುಗೆ) ಸುಂದರಂ ಇಲ್ಲವೆ, ನಿಮ್ಮ ಮನೆಗೆ ಪುಡಿ ಮಾಡಿಕೋಡ್ಲೊಕ್ಕೆ ಬರಲ್ಲವೇನೋ ಅಲಮೇಲಮ್ಮ, ಅವರ ತಮ್ಮ- ಅಯ್ಯಂಗಾರಿ. ಅವನನ್ನ ಕೇಳು ಇನ್ನು ಒಳ್ಳೆ ಕತೆಗಳನ್ನ ರಸವತ್ತಾಗಿ ಹೇಳ್ತಾನೆ. ಮದುವೆ ಅಡುಗೆ ಕೆಲಸಕ್ಕೆ ಬರೋ ಅರ್ಧಕ್ಕರ್ಧ ಬ್ರಾಹ್ಮಣ ಹುಡುಗರು ರಾತ್ರಿ ಒಟ್ಟಿಗೆ ಮಲಗ್ತಾವೆ. ಸುಮ್ಮನೆ ಹೋಗಿ ನೋಡು. ನಿನಗೆ ಎಲ್ಲ ಅರ್ಥವಾಗುತ್ತೆ. ನಿನ್ನ ದೋಸ್ತಿ ಹೀಗೆ ಅಂತ ನೀನು ತಲೆ ಕೆಡಿಸಿಕೊಂಡಿದೀಯ. ಅದು ಅರ್ಥವಾಗುತ್ತೆ' ಸಿಗರೇಟಿನ ಧೂಪವನ್ನು ಹೊರಬಿಡುತ್ತ, ಹೆಬ್ಬೆಟ್ಟಿನಲ್ಲಿ ಕೆನ್ನೆಯನ್ನು ಕೆರೆಯುತ್ತ ಹೇಳಿದ್ದ.

ವೆಂಕಿ ಏನು ಹೇಳಿರಲಿಲ್ಲ. ಆದರೆ ಮನಸ್ಸು ಎಲ್ಲೆಲ್ಲೋ ಜಾರಿತ್ತು. ಅವನ ಸೋದರಮಾವನ ಮನೆಗೆ ಬಹಳ ಹಿಂದೆ ಯಾವಗಲೋ ಹೋಗಿದ್ದ ನೆನಪು. ಹತ್ತೋ, ಹನ್ನೆರೆಡೋ ವರ್ಷವಾಗಿರಬೇಕು. ಮನೆ ಚಿಕ್ಕದು. ಎಲ್ಲರೂ ಒಟ್ಟಿಗೆ ಮಲಗಬೇಕು.

ಶಿಖೆ. ತಾನು ಶರ್ಟ್ ತೊಟ್ಟಿದ್ದ. ಸೋದರಮಾವನ ಮಗ ಚೀನಿ ಶರ್ಟ್ ಹಾಕಿರಲಿಲ್ಲ. ವೆಂಕಿಗೆ ಅಂದು ರಾತ್ರಿ ಚೀನಿಯ ಎದೆಯ ಮೇಲೆ ಕೈ ಆಡಿಸಿ ತಡವಿದ ನೆನಪು. ಆದರೆ ಖಚಿತವಾಗಿ ಅದು ನಿಜವೋ, ಸುಳ್ಳೋ ಹೇಳಲಾರ. ಸ್ಮರಣೆಗೆ ಏನೂ ಸರಿಯಾಗಿ ಬರೋಲ್ಲ. ತಡವಿದ್ದರೂ ಏನು? ಅದಕ್ಕೆ ಏನು ಅರ್ಥವಿಲ್ಲ ಅಂದುಕೊಂಡ.

ದೇವ ಕತೆ ಹೇಳ್ತಿದ್ದ. 'ಅದ್ಯಾವ ಹಳೆ ಅಡುಗೆಯವರು ತೆಗೀಲೆ. ನಮ್ಮ ಇವಾಂ ಇಲ್ಲಾವ .... ಅದೇ ಇವರ ತಾಯಿ ಡಾಕ್ಟರ್ರು. ಏನ್ಲಾ ಅವನ ಹೆಸರು.... ಈಶ್ವರನ್.... ಹುಂ ಅವನೆನೆಯ ಮತ್ತೆ.... ಹೀಗೆ ನಾಕು ತಿಂಗಳ ಹಿಂದೆ ಹೋಗಿದ್ದೆ. ನನಗೆ ಆಗ ಸದಾ ಹೊಟ್ಟೆ ನೋವು ಬರ್ತಿತ್ತಲ್ಲ. ಆ ಪಾರ್ಟಿ ನನ್ನ ಹೆಗಲ ಮೇಲಿಂದ ಕೈ ತೆಗೆದಿದ್ದರೆ ಕೇಳು. ಸವರ್ತ್ತಾನೆ ಇದ್ದ ಬೆನ್ನ. ನಾನು ಹೊಕೊಳ್ಳಿ ಡಾಕ್ಟರ್ರು ಅಂತ ಸುಮ್ಮ್ಕನೆ ಇದ್ದೆ.... ನಾ ಬೇರೆ ನಮ್ಮ – ವಿಷ್ಣೂ ತರಹ ಕೆಂಪಗಿರಕ್ಕೂ, ಆ ಮಗ ಮೊಖ ಹತ್ತಿರ ಹತ್ತಿರ ತರೊಕ್ಕೂ.... ತುಟಿ ಕಚ್ಚೆ ಬಿಡ್ತಾನೆ ಅಂತ ಮಾಡಿದ್ದೆ.... ಅವನವ್ವನ .... ಮೂವತ್ತು ರೂಪಾಯಿ ಎಸದು ಸೀದ ಎದ್ದು ಬಂದಿದ್ದೆ....' ಎಲ್ಲರೂ ನಕ್ಕಿದ್ದರು.

ವೆಂಕಿ ಬಿಯರ್ ಮುಗಿಸಿ ಒಂದು ಲಾರ್ಜ್ ಟ್ರಿಪಲ್ ಎಕ್ಸ್ ರಮ್ ಹೇಳಿದ್ದ. 'ಅಣ್ಣಾ ಈಗ ಫ಼ಾರಮ್ಗೆ ಬರ್ತಾವರೆ' ಅಂದ ಮಾಧವರಾವ್. ಅಷ್ಟರಲ್ಲಿ ಮೂರೋ, ನಾಕೋ ಆಗಿದ್ದ ಮುರಳಿ ಗಂಟಲು ಸರಿಮಾಡಿಕೊಳ್ಳುತ್ತ ಶುರುಮಾಡಿದ. ಮುರಳಿ, ವೆಂಕಿ ಇಬ್ಬರೂ ಒಂದೆ ಸ್ಕೂಲ್ನಲ್ಲಿ ಓದಿದವರು. ಓದೋದರಲ್ಲಿ ವೆಂಕಿಗಿಂತ ಬುದ್ಧಿವಂತ. ಅಮೆರಿಕ ಅಂದರೆ ಯಾಕೋ, ಏನೋ ಮೊದಲಿಂದಲು ಒಂದು ತಿರಸ್ಕಾರ. ಮದ್ರಾಸ್ ಐ.ಐ.ಟಿಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಈಗ ಬೆಂಗಳೂರಿನಲ್ಲಿ ದೊಡ್ಡ ಹುದ್ದೆಯಲ್ಲಿದ್ದ.

ವೆಂಕಿ, ಇದನ್ನ ಹೇಳಿದ್ದು ನೀನೆ.

'ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಮ್ ಸಾ ಸ್ವಭಾವಜ
ಸಾತ್ವಿಕಿ ರಾಜಸಿ ಚೈವ ತಾಮಸಿ ಚೇತಿ ತಾಮ್ ಶೃಣು'

'ಜ್ಞಾಪಕ ಇದೇಯಾ ನಿನಗೆ? ದೊಡ್ಡ ಭಾಷಣ ಬಿಗಿದಿದ್ದೆ. ಮುರಳಿ, ಎಲ್ಲರಿಗು ಅರಿವು ಅನ್ನೋದು ಇರುತ್ತೆ. ಅಂದರೆ ಒಳ ಅರಿವು. ಅದು ಯಾವ, ಯಾವ ಹಂತದಲ್ಲಿ ಇರುತ್ತೆ ಅನ್ನೋದು, ಅವರವರ ಸಂಸ್ಕಾರಕ್ಕೆ ಸಂಬಂಧಪಟ್ಟಿದ್ದು. ಕೆಲವರಿಗೆ ಯಾವಾಗಲೂ ಮಲಗಿರುತ್ತೆ – ತಾಮಸ. ಕೆಲವರಿಗೆ ಕೆಲವೊಮ್ಮೆ ಕೆಲವು ಹೊಳಿಯುತ್ತೆ – ಸಾತ್ವಿಕ. ಈ ಹೊಳೆಯೋದನ್ನ ಮುಚ್ಚುತ್ತೆ ನೋಡು ಧೂಳು ಅದು – ರಜಸ್ಸು! ಒಳ್ಳೆ ಮನುಷ್ಯರಾಗೋದು ಅಂದರೆ ಸರಿ, ತಪ್ಪು; ನ್ಯಾಯ, ಅನ್ಯಾಯ; ಒಳ್ಳೆದು, ಕೆಟ್ಟದ್ದು; ಅನ್ನೋದನ್ನ ವಿವೇಕಪೂರ್ಣವಾಗಿ ವಿಚಾರ ಮಾಡಿ ಸ್ವಂತವಾಗಿ ನಿರ್ಧಾರ ಮಾಡೋ ಕಲೆ; ಅದು ಯೋಗ. ಅದನ್ನ ಚೆನ್ನಾಗಿ ಬೆಳೆಸೋದು ಮುಖ್ಯ. ನೋಡಪ್ಪ ನನಗೆ ಈಗ ಹೊಳೆದಿದ್ದು

ಅಂದರೆ ಅದು ! ಹದಿನೈದು ವರ್ಷ ಆಯ್ತಾ ನೀನು ಹೇಳಿ !'

'ಶ್ಲೋಕ ಜ್ಞಾಪಕ ಇದೆ, ಭಾಷಣ ಇಲ್ಲ. ಕನ್ನಡಿ ಮೇಲೆ ಒಂದು ಇಂಚು ಧೂಳಿದ್ದರೆ, ನಮ್ಮ ಮೊಖ ನಮಗೆ ಸರಿಯಾಗಿ ಕಾಣೋಲ್ಲ ಅಲ್ವಾ' ಮುರಳಿ.

'ಇದಕ್ಕೆ ನನಗೆ ನಿನ್ನ ಜೊತೆ ಮಾತನಾಡೋಕ್ಕೆ ಖುಶಿಯಾಗೋದು. ನಮ್ಮ ಮುಖಾನೆ ಸರಿಯಾಗಿ ಕಾಣಿಸದೆ ಇದ್ದಾಗ ಬೇರೆಯವರಿಗೆ ನಿಮ್ಮ ಕನ್ನಡೀಲಿ ಕಾಣಸ್ತಿರೋದು ನೀವಲ್ಲ, ಅಂದರೆ ನಗೆಪಾಟಲು ಆಗೋಲ್ಲವೆ ?'

ದೇವ ಅಷ್ಟೊತ್ತಿಗೆ 'ಲೇ ಸಾಕು ಕಣ್ರೋ.... ಗುಂಡು, ತುಂಡು, ಒಳ್ಳೆ ರಾತ್ರಿ. ಒಳ್ಳೆ ತೊಂಡೆಹಣ್ಣಿನ ವಿಚಾರ ಮಾತಾಡಿ ರಂಗೇರಿಸೋದು ಬಿಟ್ಟು, ಇಷ್ಟೊತ್ತಿನಲ್ಲಿ ಕನ್ನಡಿ, ಧೂಳು, ಸ್ಲೋಕ.... ತಲೆನೋವಾಯ್ತಲ್ಲೋ ನಿಮ್ಮದು.... ಅಲ್ಲೋ ವೆಂಕಿ, ದಂಡಿಗೆ ಹೆದರಲಿಲ್ಲ ದಾಳಿಗೆ ಹೆದರಲಿಲ್ಲ ದಾಸಯ್ಯನ ಕುಮ್ಮಣಿಗೆ ಹೆದರತ್ತಾರೇನೋ! ಬೇರೆ ಏನಾದರು ಮಾತಾಡ್ರಲ್ಲ....'ಅಂತಂದ. ಎಲ್ಲರು ತಲೆ ಕುಣಿಸುತ್ತ ಸಮ್ಮತಿ ಸೂಚಿಸಿದ್ದರು.

ಬಾರ್ ಮುಚ್ಚಿ ಬಹಳ ಹೊತ್ತಾಗಿತ್ತು. ಆದರೆ ಇವರ ಗುಂಪಿಗೆ ಗುಂಡಿನ ಸರ್ವಿಸ್ ಮುಗಿದಾಗ ರಾತ್ರಿ ಎರಡಾಗಿತ್ತು. ವೆಂಕಿ ಮನೆಗೆ ಬಂದು ಮಲಗಿದ್ದ.

ಮನಸ್ಸು ಕಲಸುಮೇಲೋಗರವಾಗಿತ್ತು. ಅರ್ಥವಿಲ್ಲದ ಚಿತ್ರಗಳು ಮೂಡಿ ಬರುತಿತ್ತು. ಕುಡಿದಮತ್ತು ನ್ಯೂಯಾರ್ಕಿನ ಪಬ್ಬಿನ ಮುಂದೆ ಪೀಟರ್. ಯಾರಿಗೋ ಬಲವಂತ ಮಾಡ್ತಿದಾನೆ. ನಗುತ್ತ ಎಲ್ಲರು ಒಳಗೆ ಹೋಗಿದ್ದರು. ಇಬ್ಬರು ಹುಡುಗಿಯರು, ವೆಂಕಿನು ಇದ್ದ. ಮಬ್ಬು ಮಬ್ಬಾಗಿದೆ. ಹುಡುಗಿಯರಿಗೆ ಏನನ್ನೋ ಮಾಡಿ ತೋರಿಸುವ ಹಾಗೆ ಪೀಟರ್ ನಗುತ್ತ ಮುಂದೆ ಹೋಗಿದ್ದ. ಮಿಂಚೋ ಬೆಳಕು. ವೀಡಿಯೋ ಗೇಮ್ ಆಟದ ಶಬ್ದ. ಬಿಲ್ಲಿಯರ್ಡ್ಸ್ ಟೇಬಲ್ ಸುತ್ತ ನಾಕಾರು ಮಂದಿ. ಯಾವನೋ ಉದ್ದನೆಯ ಕೋಲೊಂದರ ತುದಿಯನ್ನು ಉಜ್ಜುತ್ತಿದ್ದಾನೆ. ಅಲ್ಲಿ ಇಲ್ಲಿ ಟೇಬಲ್ ಮೇಲೆ ಬಿಯರ್ ಬಾಟಲಿ. ಪಬ್ಬಿನ ಹಿಂಬಾಗಿಲು. ಪೀಟರ್ ಕಣ್ಮರೆಯಾಗಿದ್ದ. ಇನ್ನೊಂದು ಚಿತ್ರ. ವ್ಯಕ್ತಿಯೊಂದು ಬಂತು. ಇಟಾಲಿಯನ್ ಸೂಟು, ಕಪ್ಪು ಬೂಟು. ವಿಚಿತ್ರವಾಗಿತ್ತು ಬೂಟಿನ ಮುಂಬಾಗ. ಚೂಪಾದ ಕೊಕ್ಕರೆ ಕೊಕ್ಕಿನಂತೆ. ತಲೆಗೆ ಸುಂದರವಾದ ಹ್ಯಾಟ್. ಎಡ ಬಲ ಹಳ್ಳ. ಮುಂದಕ್ಕೆ ನಿಗರಿ ನಿಂತ ಮಧ್ಯ. ಮಾಚೊ ಕೌಬಾಯ್ ವಿಥ್ ಎ ಸೂಟ್! ವ್ಯಕ್ತಿ ಯಾರು ಗೊತ್ತಿಲ್ಲ. ತನ್ನ ಮೊಣಕೈಯನ್ನು ವಿಸ್ತರಿಸಿತ್ತು. ನೆರಳೊಂದು ಆಗಲೇ ತನ್ನ ಎಡಗೈಯನ್ನು ಅಲ್ಲಿ ತೂರಿಸಿತ್ತು. ಸಂತೋಷದಿಂದ ಭುಜ ಸೆಟಸಿ, ತಲೆ ಎತ್ತಿ ನಡೆದಿದ್ದರು. 'ಪೀಟರ್....' ವೆಂಕಿ ಕೂಗಿದ್ದ. ಹ್ಯಾಟಿನ ಹಿಂದೆ ಸಣ್ಣ ರಂದ್ರವೊಂದು ಕಣ್ಣಿಗೆ ಬಿದ್ದಿತ್ತು. ಸುತ್ತಾಮುತ್ತ ಕಸರತ್ತು ಮಾಡೋ ಫೈಲ್ವಾನರು. ಹನುಮಾನ್ ಕಾಚ. ಮೈಗೆಲ್ಲ ಎಣ್ಣೆ. ಪುಟ್ಬೈಲಸು, ಸೂರ್ಯ ನಮಸ್ಕಾರ,

ಗದೆ ತಿರುಗಿಸುತ್ತಾರೆ. ರುದ್ರ ಊರುಘ್ ಮೂಗನ ಗರಡಿ. ಕನಸು. ನಿದ್ದೆ ಹತ್ತಿದ್ದು ಗೊತ್ತಾಗಲಿಲ್ಲ.

ವಾಪಸ್ಸ್ ಬಂದ ಮೊದಲೆರಡು ವಾರ ವೆಂಕಿಗೆ ಬಹಳ ಕೆಲಸವಿತ್ತು. ಸಹಾಯಕ್ಕೆ ಪೀಟರ್ ಒದಗಿ ಬಂದಿದ್ದ. ವೆಂಕಿಯ ಗೈರುಹಾಜರಿಯಲ್ಲಿ ಅವನ ಕೆಲಸವನ್ನು ತಕ್ಕಮಟ್ಟಿಗೆ ದಕ್ಷತೆಯಿಂದ ನಿರ್ವಹಿಸಿದ್ದ. ಸಮಯ ಉರುಳಿತ್ತು. ಚಳಿಗಾಲ. ಪೀಟರ್‌ನ ಸಲಿಂಗಪ್ರವೃತ್ತಿಯ ಬದುಕಿನ ಬಗ್ಗೆ ಈಗ ಸ್ವಲ್ಪ ಹೆಚ್ಚಿನ ವಿವರ ತಿಳಿದಿತ್ತು ವೆಂಕಿಗೆ.

ಟಾಮ್ ಇಟಾಲಿಯನ್ ಅಮೆರಿಕನ್. ಹಾರ್ಲೆಮ್‌ನಲ್ಲಿ ಯಾವುದೋ ಆಸ್ಪತ್ರೆಯಲ್ಲಿ ಬೈಯೊಕೆಮಿಸ್ಟ್. ಸಂಜೆ ಹೊತ್ತಿನಲ್ಲಿ ಸ್ಕೂಲಿಗೆ ಹೋಗಿ ಸೆಕ್ಸಾಲಜಿ ಮಾಡ್ತಾ ಇದಾನೆ. ಈ ವರ್ಷ ಥೀಸಿಸ್ ಸಬ್ಮಿಟ್ ಮಾಡಬಹುದು. ಹನ್ನೆರೆಡು ವರ್ಷದ ನಂಟು, ಸಹಬಾಳ್ವೆ. ಅವನ ಮಾತಲ್ಲೆ ಹೇಳುವುದಾದರೆ ಇವರು  ಗುಂಪಿಗೆ ಸೇರೋಲ್ಲ. ಮೊದಲು ಭೇಟಿಯಾಗಿದ್ದು ಮುಂಬೈನ ಬಾಂದ್ರದಲ್ಲಿ. ಆಗಿನ್ನು ಫೈನಲ್ ಇಯನರ್‌ನಲ್ಲಿದ್ದನಂತೆ ಪೀಟರ್. ಆಗ ಪ್ರತ್ಯೇಕವಾಗಿದ್ದರೂ, ಇಬ್ಬರದ್ದು ಹೈ ರಿಸ್ಕಿನ ಸಂಗವಾಳಿ! ಆಕರ್ಷಣೆ ಪ್ರೀತಿಯಲ್ಲಿ ಬದಲಾಗಿತ್ತು. ಪೀಟರ್ ಅಮೆರಿಕಾಗೆ ಬರಲು ಅವನೇ  ಕಾರಣ. ಇಲ್ಲದಿದ್ದರೆ ಮುಂಬೈಯಲ್ಲಿ ಸಂತೋಷವಾಗಿ ಇರುತಿದ್ದ ತನ್ನವರೊಂದಿಗೆ. ಅಂದಿನಿಂದ ಇಂದಿನವರಗಿನ ಸಂಸಾರ ಸುಖವಾಗಿ ಸಾಗಿದ್ದರೂ, ಸಾಧಾರಣ ಏರಿಳಿತಗಳು ಇಲ್ಲವೆಂದಲ್ಲ. ಅಕ್ಕ ರೋಸಿ ಅಮೆರಿಕಾಗೆ ಒಂದು ತಿಂಗಳಿನ ರಜಾಕ್ಕೆ ಬರುವವಳಿದ್ದಳು ! ಸಂಸಾರ ಸಮೇತ. ತಾತ್ಕಾಲಿಕ ತೊಂದರೆ. ಸದ್ಯಕ್ಕೆ ಅವನ ದೊಡ್ಡ ತಲೆನೋವಾಗಿತ್ತು. ಮನೆಯವರಿಗೆ ತಿಳಿದ ವಿಷಯವಲ್ಲ. ಟಾಮ್ ಕೂಡ ಮುಂಬೈಯಲ್ಲಿರುವ ಮನೆಗೆ ಹೋಗಿ ಎಲ್ಲವನ್ನು ಹೇಳಬೇಕೆಂದಿದ್ದಾನೆ. ಆಗಿಲ್ಲವಷ್ಟೇ.

ಆಗಲೇ ಪೀಟರ್ ಮೊದಲನೆಯ ಬಾರಿ ವೆಂಕಿಯನ್ನು ಮನೆಗೆ ಕರೆದಿದ್ದು. ವೆಂಕಿ ಮತ್ತೆ ಎಂದಾದರು ಬರುತ್ತೇನೆಂದು ಜಾರಿಕೊಂಡಿದ್ದ. ಏನೊ ಒಂದು ತೆರನಾದ ಇರಸು ಮುರಸು. ಆದಾದ ಎರಡು ವಾರದಲ್ಲಿ ಮತ್ತೆ ಕರೆದಿದ್ದ. ಈ ಬಾರಿ ಪರಿಚಯವಿದ್ದ ಏರ್-ಇಂಡಿಯಾದ ಏರ್ ಹೋಸ್ಟೆಸ್ ಊಟಕ್ಕೆ ಬರುವಳೆಂದು ಕಣ್ಣು ಮಿಟುಕಿಸಿದ್ದ. ಟಾಮ್ ಒಳ್ಳೆಯ ಕುಕ್ ಎಂದು ಹೇಳಿ ಬಲವಂತ ಮಾಡಿದ್ದ. ವೆಂಕಿ ಆ ಬಾರಿಯು ಹೋಗಲಿಲ್ಲ.

ಪೀಟರ್‌ನ ಆಗಿನ ಮನಃಸ್ಥಿತಿ ವೆಂಕಿಗೆ ತಿಳಿದಿತ್ತೆಂದು ಹೇಳಲಾಗದು. ಅವನ ಪರಿಸ್ಥಿತಿಯ ಒತ್ತಡಗಳಿಗೆ ಸ್ಪಂದಿಸಿರಲಿಲ್ಲ. ಅದು ಸ್ಪಷ್ಟವಾಗಿತ್ತು. ವೆಂಕಿ ತನ್ನದೆ ಆದ ಒಂದು ಧೃಢ ತೀರ್ಮಾನ ಮಾಡಿದವನಂತಿದ್ದ. ಮುಂಚಿನ ಒಳ ಮಿಡಿತ ಕಡಿಮೆಯಾಗಿತ್ತೊ, ಇಲ್ಲ ಹತ್ತಿಕ್ಕಿದ್ದನೋ ತಿಳಿಯದು. ವ್ಯಾವಹಾರಿಕವಾಗಿ, ಬಾಹ್ಯರೂಪದಲ್ಲಿ ಯಾವ ಬದಲಾವಣೆಗಳು

ಕಾಣುತ್ತಿರಲಿಲ್ಲ. ಆದರೂ ಸೂಕ್ಷ್ಮ ಬದಲಾವಣೆಗಳು ಇಬ್ಬರಲ್ಲೂ ಆಗಿತ್ತು. ಮುಂಚಿನ ಹಾಗೆ ಪೀಟರ್ ಮಸಾಜ್ ಮಾಡಲು ಬಂದರೆ, ವೆಂಕಿ ಏನಾದರು ಹೇಳಿಯೋ, ಮಾಡಿಯೋ ಅದನ್ನು ತಪ್ಪಿಸುತ್ತಾನೆ. ಪೀಟರ್‌ನ ಪ್ರತಿ ನಡೆನುಡಿಯಲ್ಲು ಗಂಡಸರಿಗೆ ಅಸ್ವಾಭಾವಿಕವಾದ ಹಾವಭಾವಗಳನ್ನು ಕಾಣುತ್ತಾನೆ. ಅವನ ನೋಟ, ತುಟಿಗಳ ಸೂಕ್ಷ್ಮವಾದ ಚಲನೆ, ನಗು ಎಲ್ಲವು ಅಸಹಜವೆನಿಸಿದೆ ವೆಂಕಿಗೆ. ನಾಕಾರು ವಾರ ಹೀಗೆಯೆ ಸಂದಿತ್ತು.

ಅಂದು ಸಂಜೆ ಕೆಲಸವಾದ ಮೇಲೆ ಇಬ್ಬರು ಒಟ್ಟಿಗೆ ಹೊರಬಿದ್ದಿದ್ದರು. ವೆಂಕಿಯೇ ಒಂದು ಬಿಯರ್ ಕುಡಿದು ಹೋಗೋಣವೆಂದು ಕರೆದಿದ್ದ. ಇಬ್ಬರೂ ಗ್ರಾಂಡ್ ಸೆಂಟ್ರಲ್ ಸ್ಟೆಷನ್‌ನಲ್ಲಿರುವ ಬಾರ್‌ನಲ್ಲಿ ಎತ್ತರದ ಕುರ್ಚಿಗಳಲ್ಲಿ ಕುತಿದ್ದರು. ಪೀಟರ್ ಅಂದು ಸಂತೋಷದಿಂದ ಇದ್ದದ್ದನ್ನು ವೆಂಕಿ ಗಮನಿಸಿದ್ದ.

'ರೋಸಿಗೆ ವೀಸಾ ಸಿಗಲಿಲ್ಲ!' ಪೀಟರ್ ಹೇಳಿದ್ದ. 'ನೋಡು ವೆಂಕಿ ಇದೊಂದು ದೊಡ್ಡ ತೊಂದರೆ ನಮ್ಮಂತವರಿಗೆ. ಹೇಳೋ ಹಾಗಿಲ್ಲ ಬಿಡೋ ಹಾಗಿಲ್ಲ. ಅಜಯ್ ಅಂತ ನನ್ನ ಸ್ನೇಹಿತ. ಬೆಂಗಳೂರಿನ ಹುಡುಗ. ಲಾಂಗ್ಐಲಾಂಡಿನಲ್ಲಿ ವಾಸ. ನೀನು ಮೈಸೂರಿಗೆ ಹೋದಾಗ ಇಂಡಿಯಾದಿಂದ ಬಂದಿದ್ದರು ಅವರಪ್ಪ. ವಿಷಯ ತಿಳೀತು. ದೊಡ್ಡ ಗಲಾಟೆ. ಮನೇಲಿ ಪೂಜೆ, ಪುನಸ್ಕಾರ ಮಾಡಿದರು. ದುಶ್ಶಟಗಳನ್ನ ಬಿಡಲಿ ಅಂತ. ಆ ಪರಿಸ್ಥಿತಿಯನ್ನು ನೀನು ಕಲ್ಪಿಸಿಕೊಳ್ಳಲಾರೆಯೇನೋ? ಏನು ಆಗಲಿಲ್ಲ. ಹೋದರು ವಾಪಸ್ಸು. ಬಹಳ ಡೌನ್ ಆಗಿದ್ದ. ಅವನು ಸ್ಟೆಡಿಯಾಗಿ ಹೋಗುತ್ತಿದ್ದವನು ಬಿಟ್ಟ. ಬಹಳ ಕಷ್ಟ. ಈಗ ಯಾರೊಂದಿಗು ಸ್ಟೆಡಿಯಾಗಿ ಹೋಗೋಲ್ಲ. ಇನ್ಕಾರ್ ಮಾಡ್ತಾನೆ. ರಿಯಲಿ ಹೈರಿಸ್ಕ್. ಜೊತೆಗೆ ಕುಡಿಯೋದು ಜಾಸ್ತಿ. ಡಿಪ್ರೆಸ್ಸಿಂಗ್ ಸ್ಟೋರಿ'. ವೆಂಕಿ ಏನು ಹೇಳಿರಲಿಲ್ಲ.

ಪೀಟರ್ ಮುಂದುವರಿಸಿದ್ದ. 'ನಾನು ಹೀಗೆ ಎಂದು ಗೊತ್ತಾದಾಗ ನನಗಿನ್ನು ಹದಿನೆಂಟು. ಇಂಜಿನಿಯರಿಂಗ್ ಎರಡನೆಯ ವರ್ಷದಲ್ಲಿದ್ದೆ'. ಪೂರ್ತಿಯಾಗಿ ಪೂರ್ವಕತೆ ಕೇಳೊ ಇಷ್ಟವಿರಲಿಲ್ಲವೆನೋ...

'ನಿನಗೆ ಹೇಗೆ ಗೊತ್ತು ನೀನು ಗೆ ಎಂದು?' ಕೇಳಿದ್ದ ವೆಂಕಿ.

ಪೀಟರ್‌ಗೆ ಆಶ್ಚರ್ಯವಾಗಿತ್ತು. ನಕ್ಕು, 'ನಾನು ಚಿಕ್ಕವನಾಗಿದ್ದಾಗಲೇ ಚಿಕ್ಕಪ್ಪ ಸ್ನಾನ ಮಾಡೋದನ್ನ ಕದ್ದು ನೋಡೋ ಚಟವಿತ್ತು. ರಮಿಸಿದ್ದೆ. ನೋಡುತ್ತ ಹಲವಾರು ಬಾರಿ ಉದ್ರೇಕವಾಗಿದ್ದು ನೆನಪಿದೆ'. ಎಂದು ಇನ್ನೇನೋ ಹೇಳುವಷ್ಟರಲ್ಲಿ 'ಬಟ್ ದಟ್ ಡಸ್ ನಾಟ್ ಮೇಕ್ ಯು ಗೆ' ಎಂದಂದು ಬಿಟ್ಟ ವೆಂಕಿ.

ಪೀಟರ್‌ನ ಮುಖ ಕೆಂಪೇರಿತ್ತು. ಕಿವಿಗಳು ಕೆಂಪಾಗಿ ಅದುರಿದ್ದು ಆ ಮಂದ ಬೆಳಕಲ್ಲು ಕಂಡಿತ್ತು. ಕಷ್ಟಪಟ್ಟು ನಕ್ಕಿದ್ದ. 'ದಯವಿಟ್ಟು ನಾನು ಏನು, ಯಾಕೆ ಅನ್ನೋದನ್ನ ನನಗೇ

ಹೇಳೋಕ್ಕೆ ಬಿಡು ವೆಂಕಿ. ನಾನು ಬೇರೆಯಲ್ಲ ನನ್ನ ಸಲಿಂಗತನ ಬೇರೆಯಲ್ಲ. ನನಗಿರಲಿ ನನ್ನ ಸಲಿಂಗತನ. ನಿನಗದರ ಚಿಂತೆ ಬೇಡ ವೆಂಕಿ. ದಯವಿಟ್ಟು ನಾನು ಇದಲ್ಲ ಅದು ಅಂತ ಹೇಳೋ ಕೆಳಮಟ್ಟಕ್ಕೆ ನೀನು ಇಳಿಬೇಡ. ನಮ್ಮ ಸ್ನೇಹ ಅದಕ್ಕಿಂತ ಸ್ವಲ್ಪವಾದರು ಹೆಚ್ಚಿನದು ಎಂದು ನಂಬಿದ್ದೆ'.

ಇಬ್ಬರೂ ಮತ್ತೆ ಮಾತನಾಡಲಿಲ್ಲ. ಬಿಯರ್ ಮುಗಿಸಿ ಅವರವರ ದಾರಿ ಹಿಡಿದು ಹೋಗಿದ್ದರು.

•

# ಕಥೆಯುಂ ಕೇಳಲೊ ಕಂದ

– ವೈ. ಶ್ರೀ. ನಟರಾಜ

೧

ನರಸಿಂಹ ಟಾಟಾ ಇನ್‌ಸ್ಟಿಟ್ಯೂಟಿನಲ್ಲಿ ಗಣಿತಶಾಸ್ತ್ರದಲ್ಲಿ ಪಿಎಚ್‌ಡಿ ಮುಗಿಸಿದಾಗ ಅವನ ಜೀವನದ ಒಂದು ದೊಡ್ಡ ಧ್ಯೇಯವನ್ನು ಸಾಧಿಸಿದ ಹೆಮ್ಮೆಯ ಭಾವ ಅವನ ಮುಖದ ಮೇಲೆ ಬೀಗುತ್ತಿತ್ತು. ಕಾರ್ನೆಗೀ–ಮೆಲನ್ ವಿಶ್ವವಿದ್ಯಾನಿಲಯದ ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ಮತ್ತು ಗಣಿತಶಾಸ್ತ್ರ, ಇವೆರಡೂ ವಿಭಾಗಗಳ ಪ್ರಾಧ್ಯಾಪಕರೂ ಆಧುನಿಕ ಟೆಲಿಕಮ್ಯೂನಿಕೇಷನ್ನಿಗೆ ಸಂಬಂಧಿಸಿದ ತಾಂತ್ರಿಕ ಸಂಶೋಧನೆಯಲ್ಲಿ ವಿಶ್ವವಿಖ್ಯಾತರೂ ಆಗಿದ್ದ ಪ್ರೊಫೆಸರ್ ನ್ಯೂಮನ್, ಇವನ ಮಹಾಪ್ರಬಂಧದ ಬಾಹ್ಯಪರೀಕ್ಷಕರಾಗಿದ್ದದ್ದು ಮತ್ತೊಂದು ಹೆಮ್ಮೆಯ ವಿಷಯ. ನರಸಿಂಹನ ಸಂಶೋಧನಾ ಪ್ರಬಂಧದ ವಿಷಯ ನ್ಯೂಮನ್ನರ ಹೃದಯಕ್ಕೆ ಹತ್ತಿರವಾದದ್ದು, ಅಷ್ಟೇ ಅಲ್ಲ, ಅವನ ಸಂಶೋಧನೆಯಲ್ಲಿ ಸಿಕ್ಕ ಕೆಲವು ಸುಳಿವುಗಳು ಮುಂದಿನ ದಶಕದಲ್ಲಿ ನಡೆಯುಬಹುದಾದ ಅನೇಕ ಸಂಶೋಧನೆಗಳಿಗೆ ಮಾರ್ಗದರ್ಶಿಯಾಗಬಹುದಾದ ಸಾಧ್ಯತೆ ಇದೆ ಎಂಬುದನ್ನು ಪ್ರೊಫೆಸರ್ ನ್ಯೂಮನ್ ಗುರುತಿಸಿದ್ದರು. ಹೀಗಾಗಿ, ಅವರು ನರಸಿಂಹನನ್ನು ಪದವಿಯೋತ್ತರ ಸಂಶೋಧಕನಾಗಿ ಪಿಟ್ಸ್‌ಬರ್ಗಿಗೆ ಬರಲು ಆಹ್ವಾನಿಸಿದ್ದರು. ತಮ್ಮದೇ ಸಂಶೋಧನಾ ವಿಭಾಗದಲ್ಲಿ ಫೆಲೋಷಿಪ್ ವೇತನದ ಏರ್ಪಾಡನ್ನೆಲ್ಲ ತಾವೇ ವಹಿಸಿಕೊಂಡಿದ್ದರು. ನರಸಿಂಹನಿಗೆ ಭಾರತದಲ್ಲೇ ಉಳಿಯಲೇಬೇಕಾದ ಯಾವ ಬದ್ಧತೆಗಳೂ ಉಳಿದಿರಲಿಲ್ಲ. ತನ್ನ ಭೂತಕಾಲದ ನೆನಪಿನ ದೋಣಿಯಲ್ಲಿ ಬೀಸಿದ್ದ ಚಂಡಮಾರುತಗಳನ್ನೆಲ್ಲ ಮರೆತುಬಿಡಲು ಇದೊಂದು ಅಪೂರ್ವ ಸದಾವಕಾಶ ಒದಗಿ ಬಂದಿತ್ತು. ಯಾವ ಯೋಚನೆಯನ್ನೂ ಮಾಡದೆ ಕಾರ್ನೆಗೀ–ಮೆಲನ್ ವಿಶ್ವವಿದ್ಯಾಲಯದವರು ಕಳಿಸಿದ ಕಾಗದಪತ್ರಗಳಿಗೆಲ್ಲ ಸಹಿ ಹಾಕಿ ಸುಮಾರು ಇಪ್ಪತ್ತೈದು ವರ್ಷಗಳೇ ಕಳೆದಿವೆ. ಇವನ ಸಾಧನೆಗೆ ಕಾರಣಕರ್ತರಾಗಿದ್ದ ಟಾಟಾ ಇನ್‌ಸ್ಟಿಟ್ಯೂಟಿನ ಪ್ರೊಫೆಸರ್ ತ್ರಿವೇದಿಯವರೂ ಕಣ್ಮುಚ್ಚಿ ಅನೇಕ ವರ್ಷಗಳೇ ಕಳೆದಿವೆ.

ಇನ್ಸ್‌ಟಿಟ್ಯೂಟಿನಲ್ಲಿ ಕಳೆದ ಐದು ವರ್ಷಗಳಾಗಲೀ, ಪಿಟ್ಸ್‌ಬರ್ಗಿನಲ್ಲಿ ಕಳೆದ ಹತ್ತು ವರ್ಷಗಳಾಗಲೀ, ಅಲ್ಲಿಂದ ಮುಂದೆ ಬೆಲ್ ಲ್ಯಾಬೊರೇಟರಿಗೆ ಸಲಹೆಗಾರನಾಗಿ ಪೇಟೆಂಟ್ ಮೇಲೆ ಪೇಟೆಂಟ್ ಪಡೆಯುತ್ತ ನ್ಯೂಜೆರ್ಸಿಯಲ್ಲಿ ಕಳೆದ ಹತ್ತು ವರ್ಷಗಾಳಾಗಲೀ, ಮತ್ತೆ ಸಂಶೋಧಕ-ಪ್ರಾಧ್ಯಾಪಕನಾಗಿ ಎಮ್.ಐ.ಟಿ.ಯಲ್ಲಿ ಕಳೆದ ಐದು ವರ್ಷಗಳಾಗಲೀ ಅವನ ಮೇಲೆ ಯಾವ ಮಹತ್ತರವಾದ ಪರಿಣಾಮವನ್ನೂ ಬೀರಿಲ್ಲ. ತಾರುಣ್ಯದ ಜೀವನದಲ್ಲಿನ ಕಹಿಯನ್ನು ಮರೆಯಲು ಅವನು ಪಿಶಾಚಿ ಹಿಡಿದವನಂತೆ ದಿನಕ್ಕೆ ಕನಿಷ್ಠ ಹದಿನೈದು ಘಂಟೆ ದುಡಿದಿದ್ದು ಮಾತ್ರ ಅವನಿಗೆ ಅನುಭವವಾಗಿದೆ. ಕೂದಲು ಸಂಪೂರ್ಣವಾಗಿ ಮಾಯವಾಗಿ ಹೊಳೆಯುವ ಬೊಕ್ಕ ತಲೆಯಾಗಿದೆ. ಇವನ ಕೆಲಸದ ಮೇಲಿನ ಅತಿಮಗ್ನತೆಯನ್ನು ತಾಳಲಾರದೇ ಇವನ ಹೆಂಡತಿ ಇವನ ಕೈಬಿಟ್ಟು ಹತ್ತಿರ ಹತ್ತಿರ ಐದು ವರ್ಷವಾಗಿದೆ. ಆದರೂ ತನ್ನ ಹತ್ತಿರದ ಒಂದು ವ್ಯಕ್ತಿ ತನ್ನ ಜೀವನದಿಂದ ಮರೆಯಾದ ಅನುಭವ ಅವನಿಗಾದಂತಿಲ್ಲ. ಹಾಗೆ ನೋಡಿದರೆ, ನರಸಿಂಹ ತನ್ನ ವಿವಾಹ ವಿಚ್ಛೇದನವನ್ನು ಸುಲಭವಾಗಿ ಮತ್ತು ದಿಟ್ಟವಾಗಿ ಎದುರಿಸಿದ ರೀತಿ ಎಲ್ಲರಿಗೂ ಅಚ್ಚರಿ ಉಂಟುಮಾಡಿತ್ತು. ಕೆಟ್ಟ ನೆನಪುಗಳನ್ನು ಎದುರಿಸಲು ಅವನು ಒಂದು ಉಪಾಯ ಕಂಡುಕೊಂಡಿದ್ದ, ಅದೇನೆಂದರೆ ಪಲಾಯನ. ಆಗಲೇ ಅವನು ನ್ಯೂಜೆರ್ಸಿಯಿಂದ ಬಾಸ್ಟನ್ನಿಗೆ ಹೋಗಿ ನೆಲಸಿದ್ದು.

ತಾನು ಇನ್ಸ್‌ಟಿಟ್ಯೂಟಿನಲ್ಲಿದ್ದಾಗ ಜೀವ-ರಸಾಯನಶಾಸ್ತ್ರದಲ್ಲಿ ಪಿಎಚ್‌ಡಿ ಮಾಡುತ್ತಿದ್ದ ಮಯೂರಿ ಇವನ ಜೀವನ ಸಂಗಾತಿಯಾದದ್ದು ಸಹ ಅವರಿಬ್ಬರ ಹಳೆಯ ಸಂಬಂಧದಿಂದ. ಹಾಸನದ ಕಾಲೇಜಿನಿಂದಲೇ ಚಿಗುರಿದ ಗೆಳೆತನ ಬೆಂಗಳೂರಿನಲ್ಲಿ ಮುಂದುವರೆದು ವಿವಾಹದಲ್ಲಿ ಪರ್ಯಾವಸಾನವಾಗಿತ್ತು. ಆದರೆ, ಅಮೆರಿಕಕ್ಕೆ ಬಂದಮೇಲೆ ಜೀವ-ರಸಾಯನಶಾಸ್ತ್ರಕ್ಕಿಂತ ಸ್ತ್ರೀಸ್ವಾತಂತ್ರ್ಯದ ಕಡೆಗೇ ಮಯೂರಿಯ ಆಕರ್ಷಣೆ ಬೆಳೆದದ್ದು ಮಾತ್ರ ನರಸಿಂಹನ ಜೀವನದ ವಿಪರ್ಯಾಸಗಳಲ್ಲಿ ಒಂದು. ಎಂತೆಂಥ ಆಘಾತಗಳನ್ನು ಎದುರಿಸಿದ ನರಸಿಂಹನಿಗೆ ಹಿಂದೆಂದೂ ಆಗದ ನೋವು ಇಂದು ಸಂಭವಿಸಿದೆ, ಭೌತಿಕವಾಗಿ, ಅದಕ್ಕಿಂತಲೂ ಹೆಚ್ಚು ಮಾನಸಿಕವಾಗಿ. ಇವನ ಜೀವನದ ಆಸೆಗಳೆಲ್ಲ ಪೂರೈಸಿವೆ, ಈಗ ಅವನಿಗೆ ಬೇಕಾಗಿರುವುದು ಮಾನಸಿಕ ಶಾಂತಿ. ಅಂಬುಗದ ತೋಟದಲ್ಲಿ ರಸಬಾಳೇ ಗೊನೆಗಳ ನಡುವೆ ತನ್ನ ತಂದೆ ಕಂಡುಕೊಂಡ ಶಾಂತಿ-ಸಮಾಧಾನಗಳನ್ನು ತಾನೂ ಕಂಡುಕೊಳ್ಳಬೇಕು, ತನ್ನ ಮನಸ್ಸಿಗೆ ಹತ್ತಿರವಾದ, ತನ್ನ ಅಜ್ಜ ಹೇಳಿಕೊಡಲು ಪ್ರಾರಂಭಿಸಿದ್ದ ಸಂಸ್ಕೃತ ಕಾವ್ಯಗಳನ್ನು ಸುದೀರ್ಘವಾಗಿ ಅಧ್ಯಯನ ಮಾಡುತ್ತ ತನ್ನ ವಿಶ್ರಾಂತಿಜೀವನವನ್ನು ತಮ್ಮ ವಂಶಜರು ಬಿಟ್ಟುಹೋಗಿದ್ದ ತೋಟದ ಮನೆಯಲ್ಲೇ ಕಳೆಯಬೇಕೆಂಬುದು ಅವನ ಜೀವನದ ಕೊನೆಯ ಆಸೆಯಾಗಿತ್ತು. ಆದರೆ ಮಿಕ್ಕ ತನ್ನ ಜೀವನವನ್ನು ಅವನೊಂದಿಗೆ

ಕಳೆಯುವ ಆಸೆ ಮಯೂರಿಗಿರಲಿಲ್ಲ. ಸಾವಿರಾರು ಡಾಲರ್ ಖರ್ಚುಮಾಡಿ ಆಧುನಿಕ ಸೌಲಭ್ಯಗಳುಳ್ಳ ಒಂದು ಭವ್ಯ ಬಂಗಲೆಯನ್ನು ಅಂಬುಗದ ತೋಟದಲ್ಲಿ ಕಟ್ಟಿದ್ದೇ ಇವನ ಮತ್ತು ಮಯೂರಿಯ ಮಧ್ಯೆ ವಿರಸ ಹೆಚ್ಚಾಗುವುದಕ್ಕೆ ಕಾರಣವಾಗಿತ್ತು. ಇವನೊಂದಿಗೆ ಮಯೂರಿ ಭಾರತಕ್ಕೆ ಹಿಂದಿರುಗುವುದಕ್ಕೆ ಖಡಾಖಂಡಿತವಾಗಿ ನಿರಾಕರಿಸಿದ್ದಳು. ಕೈಹಿಡಿದ ಹೆಂಡತಿಯೇ ತನ್ನ ಕೈಬಿಟ್ಟಾಗ, ಅದೂ ತನ್ನಂತೆ ಭಾರತದಲ್ಲೇ ಜನಿಸಿ, ಭಾರತದಲ್ಲೇ ಬೆಳೆದ ಹೆಣ್ಣು ಭಾರತದ ಬಗ್ಗೆ ಅಷ್ಟೊಂದು ತಾತ್ಸಾರವಾಗಿ ಮಾತಾಡಿದಾಗ ಅವನಿಗೆ ಹೇಸಿಗೆ ಎನಿಸಿತ್ತು. ಇನ್ನು ಅಮೆರಿಕದಲ್ಲಿ ಹುಟ್ಟಿ ಬೆಳೆದ ತನ್ನ ಮಗ ಭಾರತದ ಬಗ್ಗೆ ನಿರಭಿಮಾನಿಯಾದರೆ ಅದರಲ್ಲೇನಾಶ್ಚರ್ಯ? ಇವನ ದೃಷ್ಟಿಯಲ್ಲಿ ಅತಿ ಸಾಧಾರಣನೆನಿಸುವ ತನ್ನ ಮಗ ಇವನ ಯಾವ ಹಿರಿಮೆಯನ್ನೂ ಗಮನಿಸದೇ ತುಚ್ಛವಾಗಿ ಮಾತಾಡಿದ್ದು ಅವನನ್ನು ಇರಿದು ಚುಚ್ಚುತ್ತಿತ್ತು.

ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಗಣಿತಶಾಸ್ತ್ರ ಈ ಮೂರೂ ವಿಷಯಗಳಲ್ಲಿ ಇಂಟರ್ ಪರೀಕ್ಷೆಯಲ್ಲಿ ಫೇಲಾಗಿದ್ದ ತಾನು, ತನ್ನ ತಾರುಣ್ಯದ ಒಂದು ಅತ್ಯಂತ ದೊಡ್ಡ ಸಂಕಟದಿಂದ ಪಾರಾಗಲು ಮತ್ತೆ ಪರೀಕ್ಷೆಗೆ ಕಟ್ಟಿ ಸವಾಲನ್ನು ಜೀವನ್ಮರಣದ ಪ್ರಶ್ನೆ ಎಂಬಂತೆ ಎದುರಿಸಿ, ಎಲ್ಲ ಐಚ್ಛಿಕ ವಿಷಯಗಳಲ್ಲೂ ವಿಕ್ರಮ ಸಾಧಿಸಿದ್ದ. ಗಣಿತಶಾಸ್ತ್ರದಲ್ಲಿ ಆನರ್ಸ್ ಪಡೆದು, ಟಾಟಾ ಇನ್‌ಸ್ಟಿಟ್ಯೂಟ್ ಸೇರಿ, ಡಾ. ತ್ರಿವೇದಿಯವರ ನಿರ್ದೇಶನದಲ್ಲಿ ಅಪ್ಲೈಡ್ ಮ್ಯಾಥೆಮ್ಯಾಟಿಕ್ಸಿನಲ್ಲಿ ಪಿಎಚ್‌ಡಿ ಪಡೆದುಕೊಂಡು, ಪಾಶ್ಚಿಮಾತ್ಯರೊಂದಿಗೆ ಸ್ಪರ್ಧಿಸಿ, ಗಣಿತಜಗತ್ತಿನಲ್ಲಿ ಮನೆಮಾತಾಗಿ ಸೈ ಅನ್ನಿಸಿಕೊಂಡ ತನ್ನನ್ನು ಸ್ವಂತ ಮಗ, ಯೂ ಆರ್ ಎ ಲೂಸರ್ ಎಂದಿದ್ದ. ಅಷ್ಟೇ ಅಂದಿದ್ದರೆ ಅವನು ಸಹಿಸಿಕೊಳ್ಳುತ್ತಿದ್ದನೋ ಏನೊ. 'ಓನ್ಲಿ ಎ ಫೂಲ್ ವಿಲ್ ಎವರ್ ರಿಟರ್ನ್ ಟು ಎ ಲೂಸರ್ ಕಂಟ್ರಿ ಲೈಕ್ ಇಂಡಿಯ' ಎಂದಾಗ ಮಾತ್ರ ತನ್ನ ಕೋಪವನ್ನು ತಾಳಲಾರದೇ ನರಸಿಂಹ ಮಗನಿಗೆ ಎತ್ತಿ ಕಪಾಳಕ್ಕೆ ಹೊಡೆದಿದ್ದ. ಅದಷ್ಟೇ ನೆನಪು, ಮುಂದಿನದೆಲ್ಲ ಬರೀ ಮಸುಕು, ಯಾವುದೂ ಸರಿಯಾಗಿ ನೆನಪಿಲ್ಲ.

ಚರಿತ್ರೆ ಎಂಬ ಚಕ್ರ ಪುನಃ ಪುನಃ ಸುತ್ತಿ ಹಿಂದೆಂದೋ ನಡೆದ ಘಟನೆಯನ್ನೇ ಮತ್ತೆ ಜೀವಂತವಾಗಿಸುತ್ತದೆಯಷ್ಟೇ? ಕಥೆ ಅದೇ, ಪಾತ್ರಧಾರಿಗಳು ಬೇರೆ! ಘಟನೆ ಒಂದೇ, ದೇಶ ಮತ್ತು ಕಾಲ ಬೇರೆ. ತಲೆ ತಿರುಗಿದ್ದು ನೆನಪು, ದೊಪ್ಪನೆ ನೆಲದಮೇಲೆ ಬಿದ್ದದ್ದು ಅರ್ಧಂಬರ್ಧ ನೆನಪು. ಬಿಳಿ ಸಮವಸ್ತ್ರದ ಹೆಂಗಸರು – ಇವರು ನರ್ಸುಗಳೇ ಇರಬೇಕು. ಹಸಿರು ಬಟ್ಟೆ, ಹಸಿರು ಟೋಪಿ, ಹಸಿರು ಮುಸುಕಿನ ಹಲವು ಮುಖಗಳ ಗುಸುಗುಸು ಪಿಸಿಪಿಸಿ ಮಾತುಗಳು – ಇವರು ವೈದ್ಯರಿರಬೇಕು. ಎಲ್ಲಾ ಮಸುಕು ಮಸುಕು. ಮಧ್ಯೆಮಧ್ಯೆ, ತನ್ನೂರಾದ ಹಾಸನದ ರಸ್ತೆಗಳು, ಅಪ್ಪ ತನ್ನನ್ನು ಧಬಧಬ ಗುದ್ದುತ್ತಿರುವುದು, ಅಜ್ಜ

ಫಟೀರ್ ಎಂದು ಕಪಾಳಕ್ಕೆ ಹೊಡೆಯುತ್ತಿರುವುದು, ಅಮ್ಮ, ಅಜ್ಜಿ, ಅಲಮೇಲು, ಕೇಶವ, ಎಲ್ಲರೂ ಅಳುತ್ತಿರುವುದು, ಯಾರೋ ಎದೆಯಮೇಲೆ ಕೈಯಿಟ್ಟು ಮೈಯ ಭಾರವನ್ನೆಲ್ಲ ಉಪಯೋಗಿಸುತ್ತ ಅದುಮಿ ತಿದಿ ಒತ್ತುತ್ತಿರುವುದು. ಮೈಮೇಲೆ ಆನೆ ಕುಣಿದಾಡಿದಂಥ ಒತ್ತಡ. ಯಾವುದು ಕನಸು, ಯಾವುದು ನನಸು, ಯಾವುದು ಭೂತ, ಯಾವುದು ವರ್ತಮಾನ, ಯಾವುದು ಭಾರತ, ಯಾವುದು ಅಮೆರಿಕಾ ಒಂದೂ ತೋಚುತ್ತಿಲ್ಲ. ಯಾರೋ ತನ್ನ ಹೃದಯವನ್ನು ಕುಯ್ದು, ತನ್ನ ದೇಹದಿಂದ ಬೇರ್ಪಡಿಸಿದಂತೆ ಅನುಭವ. 'ಅಯ್ಯೋ, ಮಗನೆ, ನೀನೆಲ್ಲಿದ್ದಿ? ನಿನಗೆ ಹೇಳಬೇಕಾದ್ದು ಬಹಳ ಇದೆ. ನಾನು ನಿನ್ನ ಕಪಾಳಕ್ಕೆ ಹೊಡೆಯಬಾರದಿತ್ತು, ಆದರೆ ಏನು ಮಾಡಲಿ? ನಿನ್ನ ಮಾತುಗಳು ನನ್ನನ್ನು ಕುದಿಸಿಬಿಟ್ಟವು' ಎಂದು ಪಶ್ಚಾತ್ತಾಪಪಟ್ಟ ಅನುಭವ. ಕೋಪದ ಒತ್ತಡಕ್ಕೆ ಎದೆ ಒಡೆದುಹೋಗುವಂತೆ ಭಾಸವಾಯಿತು. ಕುಸಿಯುತ್ತಿದ್ದ ತನ್ನನ್ನು ಯಾರೋ ಬಂದು ಎತ್ತಿಕೊಂಡು ಹೋದ ನೆನಪು. 'ಮಗನೇ, ನನ್ನ ಉಸಿರು ನಿಲ್ಲುವ ಮೊದಲೇ ನಿನ್ನೊಂದಿಗೆ ರಾಜಿ ಮಾಡಿಕೊಳ್ಳಬೇಕು. ಬಾ, ನನ್ನ ಪಕ್ಕ ಕುಳಿತುಕೋ, ನನ್ನ ಕತೆಯನ್ನು ಸವಿಸ್ತಾರವಾಗಿ ಹೇಳುತ್ತೇನೆ. ನನ್ನ ಕತೆ ಬೇರೆಯಲ್ಲ, ನಿನ್ನ ಕತೆ ಬೇರೆಯಲ್ಲ' ಎಂದು ಕನವರಿಸಿದಂತೆ ಭಾಸ.

೨

ನರಸಿಂಹ ಬಸ್ ನಿಲ್ದಾಣಕ್ಕೆ ಬಂದಾಗ ಸುಮಾರು ಮೂರು ಘಂಟೆ. ಅವತ್ತು ಮಂಗಳವಾರ, ಹಾಸನದಲ್ಲಿ ಸಂತೆ. ಬಸ್ ನಿಲ್ದಾಣದಲ್ಲಿ ಕಾಲಿಡಲೂ ಜಾಗವಿಲ್ಲ. ಯಾವ ಬಸ್ಸಿನಲ್ಲೂ ಕೂರಲು ಸ್ಥಳವಿಲ್ಲ. ಎಲ್ಲಿಗೆ ಹೋಗಬೇಕೆಂಬ ತೀರ್ಮಾನ ಮಾಡದೇ ಮನೆ ಬಿಟ್ಟಾಗಿತ್ತು. ಯಾವುದೋ ಒಂದು ಬಸ್ಸನ್ನು ಹತ್ತಿದ. ಹಾಗೇ ಜಾಗಮಾಡಿಕೊಂಡು, ಮೂರು ಜನರ ಸೀಟಿನಲ್ಲಿ ಇಬ್ಬರು ದೊಡ್ಡವರು, ಒಂದು ಚಿಕ್ಕ ಹುಡುಗ ಕೂತಿದ್ದನ್ನು ಕಂಡು ಸ್ವಲ್ಪ ಜರಗಿ ಎನ್ನುತ್ತ ಸ್ಥಳ ಮಾಡಿಕೊಂಡು ಕೂತ. ಕೆಲವೇ ನಿಮಿಷಗಳಲ್ಲಿ ಕಂಡಕ್ಟರ್ ಬಸ್‌ಹತ್ತಿ, 'ಯಾರ್ರೀ ಬೇಲೂರ್, ಯಾರ್ರೀ?' ಎನ್ನುತ್ತ ಶೀಟಿ ಹಾಕಿದ. ಕೆಳಗೆ ಅಯ್ಯರ್ ಹೋಟೇಲಿನಲ್ಲಿ ಕಾಫೀ ಕುಡಿಯುತ್ತಿದ್ದ ಡ್ರೈವರ್ ಶೀಟಿ ಕೇಳಿದವನೇ ಪ್ರತ್ಯಕ್ಷನಾದ. ಅವನು ಸ್ವಸ್ಥಾನವನ್ನು ಏರಿ ಜೇಬಿನಲ್ಲಿಟ್ಟಿದ್ದ ಮಲ್ಲಿಗೆ ಹಾರವನ್ನು ಕರೀಕಟ್ಟಿನ ಬೆಳ್ಳಿ ಗಣಪತಿಗೆ ಅಲಂಕರಿಸಿ ಒಂದು ಊದುಗಡ್ಡಿ ಹತ್ತಿಸಿ ಮಂಗಳಾರತಿ ಮಾಡಿ ಮೂಲೆಗೆ ಸಿಕ್ಕಿಸಿ ಕೈ ಮುಗಿದ. ಬೀಡಿ ಸಿಗರೇಟು ವಗೈರೆ ಸೇದಕೂಡದು ಎಂಬ ಅರ್ಧ ಸವೆದ ಅಕ್ಷರಗಳನ್ನು ನೋಡಿಯೂ ಲೆಕ್ಕಿಸದೇ ಡ್ರೈವರ್ ಜೇಬಿನಿಂದ ಬೀಡಿ ಹೊರಬಂದದ್ದನ್ನು ನೋಡಿ ಯಾರೋ ಪ್ರಯಾಣಿಕರು ಕೂಗಿದರು 'ಏನ್ರೀ ಡ್ರೈವರ್ ಸಾಹೇಬ್ರೇ ನೀವೆ ಸೇದಕ್ ಸುರು ಮಾಡಿದ್ರೆ ಬ್ಯಾರೇವ್ರು ಬುಡ್ತಾರ?' ಡ್ರೈವರ್ ಕೇರ್ ಮಾಡಲಿಲ್ಲ, ಎಂಜಿನ್

ಚಾಲೂ ಮಾಡಿದವನೆ ಗೇರ್ ಬದಲಿಸುತ್ತ 'ರೈಟ್ ಕೊಡ್ರೀ ಕಂಡಕ್ಟ್ರೇ, ಹೊತ್ತಾಯ್ತು'ಎನ್ನುತ್ತ ಕಂಡಕ್ಟರನ ಶೀಟಿಗೆ ಕಾಯದೇ ರಿವರ್ಸ್ ಮಾಡಿಕೊಂಡ. ಅಷ್ಟು ಹೊತ್ತಿಗೆ ಕಂಡಕ್ಟರ್ ನರಸಿಂಹನ ಮುಂದೆ ಬಂದು ನಿಂತಿದ್ದ. 'ಎಲ್ಲಿಗ್ರೀ ? ಏನ್‌ಹಂಗ್ ನೊಡ್ತೀರಿ, ಟಿಕೆಟ್ ಬೇಕೋ ಬ್ಯಾಡ್ವೋ' ಎನ್ನುತ್ತ ಟಿಕೆಟ್‌ನಲ್ಲಿ ತೂತು ಹೊಡೆಯುವ ಪ್ಲಯರನ್ನು ಟಿಕ್‌ಟಿಕಾಯಿಸಿದ. ನರಸಿಂಹನ ಬಾಯಿ ಒಣಗಿತ್ತು. ಆಲೂರಿಗೋ? ಬೇಲೂರಿಗೋ? ಎಂದು ಯೋಚಿಸುತ್ತ ಹಿಂತೆಗೆದ. 'ತನಗೆ ತಿಳಿದವರು ಯಾರಾದರೂ ಬಸ್ಸಿನಲ್ಲಿ ಕುಳಿತಿದ್ದರೆ? ' ಎಂಬ ಭಯದಿಂದ ಮೈಯೆಲ್ಲ ನಡುಗಿತು, ಆ ನಡುಕದಲ್ಲೂ ಮೈ ಬೆವರಿತು. ಧೈರ್ಯ ಮಾಡಿ 'ಬೇಲೂರು' ಎಂದುಬಿಟ್ಟ. ಕಂಡಕ್ಟರ್ 'ಆರೂವರಾಣೆ ಕೊಡ್ರೀ' ಎನ್ನುತ್ತ ಟಿಕೆಟ್ ಕತ್ತರಿಸಿ ತೂತ ಹೊಡೆದ. ನರಸಿಂಹ ಎಂಟಾಣೆ ಬಿಲ್ಲೆ ಕೊಟ್ಟು ಒಂದೂವರಾಣೆ ಚಿಲ್ಲರೆ ಪಡೆದ. ಪಕ್ಕದ ಸೀಟಿನವ ಬೀಡಿ ಹತ್ತಿಸಿದ ತಕ್ಷಣ ನರಸಿಂಹನಿಗೆ ವಾಕರಿಕೆ ಶುರುವಾಯಿತು. ಸಂತೆಯಾದ್ದರಿಂದ, ದಾರಿಯುದ್ದಕ್ಕೂ ಜನ ಕೈ ತೋರಿಸುತ್ತಲೇ ಇದ್ದರು, ಎಲ್ಲೆಲ್ಲಿ ಜನ ಕೈತೋರಿಸಿದರೋ ಅಲ್ಲೆಲ್ಲ ಬಸ್ ನಿಲ್ಲಿಸಿ ಜನರನ್ನು ತುಂಬಿಕೊಳ್ಳುತ್ತಲೇ ಇದ್ದರು. ಪುಷ್ಪಕ ವಿಮಾನದಂತೆ, ಎಷ್ಟು ಜನರನ್ನು ತುಂಬಿದರೂ ಇನ್ನಷ್ಟು ಜನಕ್ಕೆ ಅಲ್ಲಿ ಸ್ಥಳ ಇದ್ದೇ ಇರುತ್ತಿತ್ತು. ಸಾಧಾರಣ ಒಂದು–ಒಂದೂವರೆ ಘಂಟೆಯ ಪ್ರಯಾಣ ಅಂದು ಎರಡೂವರೆ ಘಂಟೆ ತೆಗೆದುಕೊಂಡಿತ್ತು. 'ಇಳ್‌ಕೊಳ್ರೀ ಬೇಲೂರ್, ಬೇಲೂರ್' ಎಂಬ ಕೂಗಿನ ಜೊತೆಗೇ ಶೀಟಿಯೂ ಕೇಳಿಬಂದಾಗ ನರಸಿಂಹನ ತಲೆ ಸಿಡಿಯುತ್ತಿತ್ತು. ಕೈಯಲ್ಲಿದ್ದ ಒಂದು ಸಣ್ಣ ನೇತುಹಾಕಿಕೊಳ್ಳುವ ಹಡಪದಂಥ ಹತ್ತಿ ಚೀಲವೊಂದನ್ನು ಬಿಟ್ಟರೆ ನರಸಿಂಹನ ಬಳಿ ಇನ್ನೇನೂ ಇರಲಿಲ್ಲ. ಇಡೀ ಬಸ್ಸು ಖಾಲಿಯಾಯಿತು. ಡ್ರೈವರ್ ಬೇಲೂರು ಎಂಬ ಬೋರ್ಡನ್ನು ತಿರುಗಿಸಿ ಹಾಸನ ಎಂಬ ಬೋರ್ಡಿಗೆ ಬದಲಾಯಿಸಿದ. ನರಸಿಂಹನಿಗೆ ಒಂದು ಯೋಚನೆ ಬಂತು, ಹೇಗಿದ್ದರೂ ಹಾಸನಕ್ಕೆ ಹಿಂದಿರುಗುವ ಬಸ್ಸು ಇದು, ಇದರಲ್ಲೇ ಯಾಕೆ ಹಿಂದಿರುಗಿಬಿಡಬಾರದು? ಹೇಗಿದ್ದರೂ ತಾನು ಬಂದಿರುವುದು ಯಾರಿಗೂ ಗೊತ್ತಿಲ್ಲ, ಇದೇ ಬಸ್ಸಿನಲ್ಲಿ ಹಿಂದಿರುಗಿಬಿಟ್ಟರೆ ಯಾರಿಗೂ ತಿಳಿಯದಂತೆ ಮನೆ ಸೇರಿಬಿಡಬಹುದು. 'ಎಲ್ಲಿ ಹಾಳಾಗಿ ಹೋಗಿದ್ದ್ಯೋ ಬೆಳಿಗ್ಗೆಯಿಂದ, ಊಟಕ್ಕೂ ಬರದೇ?' ಎಂಬ ಪ್ರಶ್ನೆಗೆ ಏನು ಉತ್ತರ ಹೇಳಬಹುದು ಎಂದು ಚಿಂತಿಸುತ್ತಿರುವಲ್ಲೇ ಕಂಡಕ್ಟರ್ ಕೂಗಿದ, 'ಯಾರ್ರೀ, ಇಳ್ಕೊಳ್ರೀ, ಬಸ್ಸು ಡಿಪೋಗೆ ಹೋಗುತ್ತೆ, ಬಸ್ ತೊಳಿಸ್ಕೊಂಡು ಆರೂವರೆಗೆ ಹಾಸನ' ಎನ್ನುತ್ತಿರುವಾಗ ಬಸ್ ಹಿಂದಕ್ಕೆ ಸರಿಯುತ್ತಿತ್ತು. ತಕ್ಷಣ ನರಸಿಂಹ ಬಸ್ಸಿನ ಹಿಂಭಾಗದಿಂದ ಸರಸರನೆ ಇಳಿದ.

ಬಸ್ ನಿಲ್ದಾಣಕ್ಕೂ ಚೆನ್ನಕೇಶವ ದೇವಸ್ಥಾನಕ್ಕೂ ದೂರವೇನಿಲ್ಲ. ಬೇರೆ ಬೇರೆ ಊರುಗಳಿಂದ ಮನೆಗೆ ಬರುವ ನೆಂಟರಿಷ್ಟರಿಗೆಲ್ಲ ಬೇಲೂರು –ಹಳೇಬೀಡು ತೋರಿಸುವುದು ನರಸಿಂಹನ ಕರ್ತವ್ಯಗಳಲ್ಲಿ ಒಂದಾಗಿತ್ತು. ಮೊದಮೊದಲು ಎರಡು ರೂಪಾಯಿ ತೆತ್ತು

ಗೈಡುಗಳನ್ನು ಗೊತ್ತು ಮಾಡಿಕೊಳ್ಳುತ್ತಿದ್ದ, ಆದರೆ ಇತ್ತೀಚೆಗೆ ಆ ಗೈಡುಗಳು ಹೇಳುವುದೆಲ್ಲ ಇವನಿಗೆ ಬಾಯಿಪಾಠವಾಗಿಬಿಟ್ಟಿದೆಯಾದ್ದರಿಂದ ಇವನೇ ಆ ಕೆಲಸವನ್ನು ಮಾಡಿ ಅತಿಥಿಗಳಿಗೆ ಎರಡು ರೂಪಾಯಿನ ಉಳಿತಾಯಮಾಡಿಸಿ ಹೊಗಳಿಸಿಕೊಳ್ಳುತ್ತಿದ್ದ. ಇಂಟರ್ ಫೇಲಾಗಿ ಮನೆಯಲ್ಲಿ ಕೂತ ಮೇಲೆ ಇಂಥ ಬೇಲೂರು–ಹಳೇಬೀಡು ದರ್ಶನಾಕಾಂಕ್ಷಿ ಅತಿಥಿಗಳಿಗಾಗಿ ನರಸಿಂಹ ಕಾದು ಕೂರುತ್ತಿದ್ದ. ಬಹಳಷ್ಟು ದಿನ ಅತಿಥಿಗಳ ಆಗಮನ ಆಗದಿದ್ದರೆ, ಹೈಸ್ಕೂಲು ದೋಸ್ತಿ ಸಂಪತ್ತಯ್ಯಂಗಾರಿ ಮತ್ತು ಗೋಪಾಲರನ್ನು ಹುಡುಕಿಕೊಂಡು ಹೋಗಿ ಎರಡು ಸೈಕಲ್ಲಿನಲ್ಲಿ ಮೂರುಜನ, ಅಂದರೆ ಒಬ್ಬರಿಗೇ ತೊಂದರೆ ಆಗದ ಹಾಗೆ ಬೇರೆ ಬೇರೆ ಜೋಡಿಗಳು ಡಬ್ಬಲ್ ರೈಡುಮಾಡುತ್ತ ಬೇಲೂರಿಗೋ ಹಳೇಬೀಡಿಗೋ ಅಥವಾ ಶ್ರವಣಬೆಳಗೊಳಕ್ಕೋ ಹೋಗುವ ಪರಿಪಾಠವೂ ಇತ್ತು. ಸಂಪತ್ತಯ್ಯಂಗಾರಿ ಮತ್ತು ಗೋಪಾಲಿ ಇಬ್ಬರೂ ಹೈಸ್ಕೂಲಿನಲ್ಲೇ ಫೇಲಾಗಿ ಸಿನಿಮಾ ನೋಡಿಕೊಂಡು ಹಾಸನಾಂಬಾ ನಾಟಕ ಮಂಡಲಿಯ ಪ್ರಮುಖ ನಟ ಹಾಗೂ ನಟಿಯಾಗಿ ಕಾಲಹರಣ ಮಾಡುತ್ತಿದ್ದರು. ಗೋಪಾಲಿ ಹೆಣ್ಣು ವೇಷ ಧರಿಸಿದನೆಂದರೆ ನಾಟಕ ಮುಗಿದ ಮೇಲೆ ಜೊತೆಯ ಸಹಪಾಠಿಗಳೆಲ್ಲ ಅವನ ಕೆನ್ನೆಗೆ ಮುತ್ತು ಕೊಟ್ಟು ಚಪಲ ತೀರಿಸಿಕೊಳ್ಳುವಷ್ಟು ಸುಂದರಿಯಾಗಿ ಕಾಣುತ್ತಿದ್ದ. 'ಅಯ್ಯೋ ಅವರನ್ನಾದರೂ ಜೊತೆಗೆ ಕರೆತರಬಾರದಿತ್ತೇ' ಎಂದು ನರಸಿಂಹ ಮನಸ್ಸಿನಲ್ಲೇ ಗೋಳಾಡಿದ. ಬೆಳಗಿನಿಂದ ಏನೂ ತಿನ್ನದೇ ಹೊಟ್ಟೆ ಚುರುಗುಡುತ್ತಿತ್ತು. ಈಗಾಗಲೇ ಆರು ಘಂಟೆ ಸಮಯ, ಇನ್ನು ಈಗ ತಿಂಡಿ ತಿಂದರೆ ಊಟಕ್ಕೆ ಮತ್ತೆ ಖರ್ಚು ಮಾಡಬೇಕು, ಜೇಬಿನಲ್ಲಿರುವುದು ಒಟ್ಟು ಹದಿನೈದು ಚಿಲ್ಲರೆ, ಇನ್ನೂ ಎಷ್ಟು ದಿನ ಇದೇ ದುಡ್ಡಿನಲ್ಲಿ ನಿಭಾಯಿಸಬೇಕೋ ದೇವರಿಗೇ ಗೊತ್ತು. ಕಾಫೀ ತಿಂಡಿ ಖರ್ಚಿಗಾಗಲೀ ಸಿನಿಮಾ ಖರ್ಚಿಗಾಗಲೀ ನರಸಿಂಹನಿಗೆ ಪಾಕೆಟ್ ಮನಿ ಸಿಕ್ಕುತ್ತಿರಲಿಲ್ಲ. ಅಮ್ಮ ಅಡುಗೆ ಮನೆಯ ಬಡುವಿನ ಹಿಂಭಾಗದಲ್ಲಿ ಜಿರಲೆಗಳು ಓಡಾಡುವ ಜಾಗದಲ್ಲಿ ಅಪ್ಪನಿಗೆ ಗೊತ್ತಿಲ್ಲದಂತೆ ಒಂದಿಷ್ಟು ಹಣ ಇಟ್ಟಿರುತ್ತಿದ್ದುದು ನರಸಿಂಹನಿಗೆ ಚೆನ್ನಾಗಿ ಗೊತ್ತಿತ್ತು. ಆ ಡಬ್ಬದಿಂದ ಆಗಾಗ್ಗೆ ಅವನು ಹಣವನ್ನು ತೆಗೆದುಕೊಳ್ಳುತ್ತಿದ್ದುದ್ದೂ ಅಮ್ಮನಿಗೆ ಗೊತ್ತಿತ್ತು. ಹಾಗೆ ಆಗಾಗ್ಗೆ ತೆಗೆದುಕೊಂಡಿದ್ದ ಹಣದಲ್ಲಿ ಹದಿನೈದು ರೂಪಾಯಿ ಚಿಲ್ಲರೆ ಇವನ ಭವಿಷ್ಯಕ್ಕೆ ಬಂಡವಾಳ. ಈ ಊರಿನಲ್ಲಿ ಯಾವುದಾದರೂ ಹೊಟೇಲಿನಲ್ಲಿ ಸರ್ವರ್ ಕೆಲಸವಾದರೂ ಸಿಕ್ಕಿದರೆ, ಅಲ್ಲೇ ಊಟ ತಿಂಡಿ ಕೊಡುತ್ತಾರೆ, ಅಲ್ಲೆ ಹಿಂದಿನ ಕೋಣೆಯಲ್ಲಿ ಮಲಗಲು ಸ್ಥಳ ಸಿಕ್ಕರೆ ಹೇಗೋ ನಡೆದೀತು ಎಂದೆಲ್ಲ ಯೋಚಿಸುತ್ತಿರುವಲ್ಲೆ ಶ್ರೀ ಚೆನ್ನಕೇಶವ ಬ್ರಾಹ್ಮಣರ ಫಲಹಾರ ಮಂದಿರ ಕಾಣಿಸಿತು. ಒಳಗೆ ಹೋಗಿ ದೋಸೆ ತಿಂದು ಕಾಫೀ ಕುಡಿದರೆ ಇವತ್ತಿನ ಬಾಬತ್ತು ಅಷ್ಟೇ, ಇನ್ನು ರಾತ್ರಿ ನಲ್ಲಿ ನೀರು ಕುಡಿದು ಮಲಗುವುದೇ ಸರಿ ಎಂದು ಯೋಚಿಸುತ್ತ ಹೊಟೇಲಿನ ಒಳಗೆ ನಡೆದ. ಮಾಣಿ ಬಂದ ಕೂಡಲೇ ಮಸಾಲೆದೋಸೆ ಆರ್ಡರ್ ಮಾಡಿದ. 'ಮಸ್ಸಾಲೆ ಒಂದು, ಒಂದು ಮಸ್ಸಾಲೆ' ಎಂದು

ಮಾಣಿ ಕೂಗಿ ಮುಗಿಸುವ ಮೊದಲೇ ಕಾವಲಿ ಮೇಲೆ ನೀರೆರಚಿ ಮಾಡಿದ ಭೊಂಯ್–ಭೊಂಯ್ ಸದ್ದು, ಅದರ ಹಿಂದೇ ದೋಸೆ ಹುಯ್ದ ಸದ್ದು, ಅದರ ಹಿಂದೇ ಈರುಳ್ಳಿ–ಆಲೂಗಡ್ಡೆ ಮಸಾಲೆಯ ಘಮಘಮ, ಇವುಗಳಿಂದ ನರಸಿಂಹನ ಹಸಿವು ನೂರ್ಮಡಿಸಿ ಬಾಯಲ್ಲಿ ನೀರು ಸುರಿಯಿತು. ಗರಿಗರಿ ದೋಸೆಯೂ ಬಂತು, ಗಬಗಬ ತಿಂದು ನೀರು ಕುಡಿಯುವಾಗ ಹೊಟೇಲ್ ಖರ್ಚಿಗೆ ತಿಂಗಳಿಗೆ ಹತ್ತು ರೂಪಾಯಿ ಪಾಕೆಟ್ ಮನಿಯನ್ನೂ ಕೊಡದೆ 'ಭೂಮಿಗೆ ಭಾರವಾಗಿ ಇನ್ನೂ ಎಷ್ಟು ದಿವಸ ಹೀಗೇ ಬದುಕುತ್ತೀ' ಎಂದು ಮೂದಲಿಸುತ್ತಿದ್ದ ಅಪ್ಪನ ಸಿಡುಕಲು ಮುಖ ಮುಂದೆ ಸುಳಿದು ಮನಸ್ಸಿನಲ್ಲಿ ಒಮ್ಮೆ ಕೋಪ ಉಮ್ಮಳಿಸಿತು. ಮಗ ಮನೆಗೆ ಬಂದಿಲ್ಲವೆಂಬ ಅರಿವಾದರೂ ಆ ಅಪ್ಪನಿಗೆ ಇದೆಯೋ ಎಂಬ ಅನುಮಾನ ಬಂದರೂ, ಅಮ್ಮ ಇಲ್ಲವೇ, ನಾನು ಕಾಲಕಾಲಕ್ಕೆ ಊಟಕ್ಕೆ ಬಾರದಿದ್ದರೆ ಎಷ್ಟೊಂದು ಹಾತೊರೆಯುತ್ತಾಳೆ, ಅವಳಿಗಾದರೂ ನಾನು ಹೇಳಿ ಬರಬೇಕಾಗಿತ್ತು ಎಂದು ನರಸಿಂಹ ಸ್ವಲ್ಪ ಚಡಪಡಿಸಿದ. ಕಾಫೀ ಕುಡಿದ ಮೇಲೆ ಬಿಲ್ ಪಾವತಿ ಮಾಡುವಾಗ ಸರ್ವರ್ ಕೆಲಸದ ಬಗ್ಗೆ ವಿಚಾರಿಸಲೇ ಎಂದುಕೊಳ್ಳುತ್ತಿರುವಾಗಲೇ ಗಲ್ಲದ ಬಳಿ ಕುಳಿತಿದ್ದ ಸಾವುಕಾರನನ್ನು ಕಂಡು ಮೈಯೆಲ್ಲಾ ಏಕೋ ನಡುಗಿದಂತಾಗಿ ನರಸಿಂಹ ಸುಮ್ಮನೆ ದುಡ್ಡು ಕೊಟ್ಟು ಹೊರಬಂದ.

ಏನು ಮಾಡಬೇಕೆಂದು ತೋಚದೇ ಹಾಗೇ ಚಿರಪರಿಚಿತವಾದ ಚನ್ನಕೇಶವ ದೇವಾಲಯದ ಬಳಿ ಹೆಜ್ಜೆ ಹಾಕಿದ. ದೇವಸ್ಥಾನದ ಸಂಜೆ ಪೂಜೆಗೆ ಜನ ಜಮಾಯಿಸುತ್ತಿದ್ದರು, ನರಸಿಂಹನೂ ಹೋಗಿ ಸೇರಿಕೊಂಡ. ದೇವರಿಗೆ ಮಾಡಿದ ಅಲಂಕಾರವನ್ನು ನೋಡಿದರೆ, ಏನೋ ವಿಶೇಷ ಪೂಜೆ ಇರಬೇಕು ಎನ್ನಿಸಿತು. ಹಾಗೇ ಸಂದಿ ಬಿಡಿಸಿಕೊಂಡು ಭಕ್ತರ ಮಧ್ಯೆ ಸೇರಿಕೊಂಡ. ಆಗಾಗ್ಗೆ ತನ್ನ ಕಿಸೆಯಲ್ಲಿ ಭದ್ರವಾಗಿರಿಸಿದ್ದ ಐದರ ಮೂರು ನೋಟುಗಳ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸಿದ್ದ, ಏಕೆಂದರೆ ಇಂಥ ಜನಜಂಗುಳಿಯಲ್ಲಿ ಕೆಲವು ಭಕ್ತರು ಕಿಸೆ ಕತ್ತರಿಸುವುದಕ್ಕೇ ಬಂದಿರುತ್ತಾರೆ ಎಂಬ ಅಂಶವನ್ನು ಅರಿಯದ ಮೂರ್ಖನಲ್ಲ, ನರಸಿಂಹ. ಸುದೀರ್ಘವಾದ ಪೂಜೆ ಎಲ್ಲ ನಡೆದು ಪರದೆ ಮುಚ್ಚಿ ಅಲಂಕಾರವೆಲ್ಲ ಮಾಡಿ, 'ಋಗ್ವೇದಮವಧಾರಯ, ಯಜುರ್ವೇದಮವಧಾರಯ, ಸಾಮವೇದ ಮವಧಾರಯ. (ನರಸಿಂಹನಿಗೆ ಸಾಮವೇದದ -- ಹಾವೂಊ ಉಉ ಕೇಳುವದಕ್ಕೆ ಇಷ್ಟ. 'ಹಾವೂ–ಊ ಚೇಳೂ–ಊ' ಎಂದು ಹಾಸ್ಯಮಾಡಿ ಅಜ್ಜನ ಕೈಯ್ಯಲ್ಲಿ ಬೈಯ್ಯಿಸಿಕೊಳ್ಳುವುದೂ ಅಷ್ಟೇ ಇಷ್ಟ.) ಕೊನೆಗೆ ಅಲ್ಲಾಂಡುಪಲ್ಲಾಂಡು ಎಲ್ಲ ಆದಮೇಲೆ, 'ಮಹಂತೋ–ಭವಂತೋರ–ಗೃಣ್ಣಂತೊ–ತಥಾಸ್ತೋ' ಎಂಬ ಭಾಗವೂ ನರಸಿಂಹನ ಮನಸ್ಸಿಗೆ ಖುಷಿ ಕೊಡುವ ಭಾಗವೇ. ಈ ಪೂಜಾರಿಯ ಸಂಸ್ಕೃತ ಉಚ್ಚಾರಣೆಯನ್ನು ಅಜ್ಜ ಕೇಳಿದ್ದರೆ, ಯಾರ ಮುಲಾಜೂ ಇಲ್ಲದೆ ಮುಖಕ್ಕೆ ಮಂಗಳಾರತಿ ಮಾಡಿಬಿಡುತ್ತಿದ್ದರು. ಅಂತು ಪೂಜಾವಿಧಿ ಮುಗಿದು ಮಹಾಮಂಗಳಾರತಿ ತೀರ್ಥ ಇವೆಲ್ಲ ಪಡೆದು ಹೊರಾಂಗಣಕ್ಕೆ ಬರುವಾಗ

ಅಂದಿನ ವಿಶೇಷ ಪೂಜೆಗೆ ಯಾರೋ ಸ್ಥಳೀಯ ಪುಣ್ಯಾತ್ಮರು ಪ್ರಸಾದವಿನಿಯೋಗ ಮಾಡುತ್ತಿದ್ದರು. ಎರಡೆರಡು ದೊನ್ನೆಗಳಲ್ಲಿ -- ಒಂದರಲ್ಲಿ ಪುಳಿಯೊಗರೆ, ಮತ್ತೊಂದರಲ್ಲಿ ಮೊಸರನ್ನ ಹಂಚುತ್ತಿದ್ದರು. ನರಸಿಂಹ ಚೆನ್ನಕೇಶವನಿಗೆ ಮನಸ್ಸಿನಲ್ಲೇ ಮತ್ತೊಮ್ಮೆ ಕೈಮುಗಿದ. ಸ್ವಾಮಿ ಕೈ ಬಿಡಲಿಲ್ಲ, ರಾತ್ರಿ ಪ್ರಸಾದವನ್ನು ತಿಂದು ನಲ್ಲಿ ನೀರು ಕುಡಿದರೆ ಊಟವಿಲ್ಲದಿದ್ದರೂ ನಡೆಯುತ್ತದೆ ಎಂಬ ಧೈರ್ಯದಿಂದ ಎರಡು ದೊನ್ನೆಗಳಲ್ಲಿ ಕೊಟ್ಟ ಪ್ರಸಾದವನ್ನು ಪಡೆದು ದೇವಸ್ಥಾನದ ಪೌಳಿಯಲ್ಲಿ ಬಂದು ಕುಳಿತ. ಷ್ಟರಲ್ಲಿ, ರಾತ್ರಿ ಎಲ್ಲಿ ಮಲಗುವುದು? ಎಂಬ ಚಿಂತೆ ಹತ್ತಿತು.

ಇಲ್ಲೇ ಕಲ್ಲಿನ ಮೇಲೆ ಮಲಗಿದರಾಗದೇ ? ನಿತ್ಯ ಹಾಸಿಗೆಯಲ್ಲಿ ಮಲಗಿ ಅಭ್ಯಾಸವಾದವನು ಹಾಸಲು ಹೊದೆಯಲು ಇಲ್ಲದೆ, ದಿಂಬಿಗೂ ಇಲ್ಲದೇ ಸುಮ್ಮನೇ ಕಲ್ಲಿನಮೇಲೆ ಮಲಗೋಣ ಎಂದರೇನು ? ನರಸಿಂಹ ಜೀವಮಾನದಲ್ಲಿ ಎಂದೂ ತಲೆಯ ಮೇಲೆ ಸೂರಿಲ್ಲದೇ ಹೊರಗೆ ಮಲಗಿದವನಲ್ಲ, ಇನ್ನು ಕಲ್ಲಿನ ಮೇಲೆ ಮಲಗುವ ವಿಷಯ ಹಾಗಿರಲಿ. ಅಯ್ಯೋ ಒಂದು ಬೆಡ್‌ಶೀಟನ್ನಾದರೂ ತರಬಾರದಿತ್ತೆ ಎಂದುಕೊಳ್ಳುತ್ತಿರುವಾಗ, ಬಸ್ಸಿನಲ್ಲಿ ಬರುವಾಗ ನೋಡಿದ ಟೆಂಟ್‌ಸಿನಿಮಾದ ಸ್ಥಳ ನೆನಪಾಯಿತು. ಏನಿಲ್ಲದಿದ್ದರೂ ಮಧ್ಯರಾತ್ರಿಯವರೆಗೂ ಟೆಂಟಿನಲ್ಲಿ ಕಳೆಯುವ ಯೋಚನೆ ಮನಸ್ಸಿಗೆ ತುಂಬಾ ಆಕರ್ಷಣೀಯವೆನಿಸತೊಡಗಿತು. ತಕ್ಷಣ ಪುಳಿಯೊಗರೆ ಮೊಸರನ್ನವನ್ನು ತಿಂದು ಮುಗಿಸಿದ, ಎದ್ದು ಸೆಕೆಂಡ್ ಷೋ ನೋಡಲು ಹೊತ್ತಾಗಬಾರದೆಂದು ಶ್ರೀಚಾಮುಂಡೇಶ್ವರಿ ಟೂರಿಂಗ್ ಟಾಕೀಸ್ ಹಾಕಿದ್ದ ಟೆಂಟ್ ಬಳಿ ಬಂದು ಸೇರಿದಾಗ ಇನ್ನೂ ಎಂಟೂ ಮುಕ್ಕಾಲು.

ಅಂದಿನ ಸಿನಿಮಾ ರಾಜ್‌ಕುಮಾರ್ ಪಾತ್ರ ವಹಿಸಿದ್ದ 'ಬೇಡರ ಕಣ್ಣಪ್ಪ' ಆಗಲೇ ಹಾಸನದಲ್ಲೇ ನೋಡಾಗಿತ್ತು. 'ಆದರೇನು, ತೂಕಡಿಸಲು ತಲೆಯ ಮೇಲೊಂದು ಛಾವಣಿ ಇರುವ ಸ್ಥಳಕ್ಕಾಗಿ ಆರಾಣೆ ಬಾಡಿಗೆ ಕೊಟ್ಟರೂ ಚಿಂತೆಯಿಲ್ಲ' ಎಂದುಕೊಂಡು ಟಿಕೆಟ್ ಕೊಂಡ. ಬಾಯಿ ಒಗ್ಗರಣೆಗೆ ಒಂದಷ್ಟು ಕಡಲೆಬೀಜ ಮತ್ತು ಮಸಾಲೆಪುರಿ ಕೊಂಡುಕೊಂಡ. ಹಾಸನದ ಪಿಕ್ಚರ್ ಪ್ಯಾಲೆಸ್ ಪಕ್ಕದಲ್ಲಿ ಮಾರುವ ಮಸಾಲೆಪುರಿಗೆ ಬೆಳ್ಳುಳ್ಳಿ ಕರಿದು ಸೇರಿಸುತ್ತಾರೆ, ಮುಂಡೇದು ಅದೇನು ರುಚಿ, ಇಲ್ಲಿಯದು ಹೇಗಿರುತ್ತದೋ ನೋಡಬೇಕು. ಮಸಾಲೆ ಮಂಡಕ್ಕಿಗೆ ಬೆಳ್ಳುಳ್ಳಿ ಎಂದಕೂಡಲೆ ಅಜ್ಜಿಯ ನೆನಪಾಗಿ ನರಸಿಂಹನಿಗೆ ತುಂಬಾ ಮುಜುಗರವಾಯಿತು. ಸಿನಿಮಾ ನೋಡಿಬಂದ ದಿನ ಅಜ್ಜಿ ತಪ್ಪದೆ ತನ್ನ ಬಾಯಿ–ಮೂಗಿನ ಉಸಿರಿನಿಂದ ಬರುವ ವಾಸನೆಯಿಂದಲೇ ತಾನು ಬೆಳ್ಳುಳ್ಳಿ ಬೆರೆಸಿದ ಮಂಡಕ್ಕಿ ತಿಂದು ಬಂದಿರುವುದನ್ನು ಪತ್ತೆ ಹಚ್ಚಿ ಅಜ್ಜನ ಕೈಯ್ಯಲ್ಲಿ ಚಾಡಿ ಹೇಳಿ ಬಯ್ಯಿಸುತ್ತಿದ್ದರು.

'ಎಲ್ಲಾ ಬಿಟ್ಟು ಇವನಿಗೆ ಮುಂಜಿ ಮಾಡಿದಿರಿ. ಇವನು ಸಂಧ್ಯಾವಂದನೆ ಮಾಡುವುದಿರಲಿ, ಶುದ್ಧ ಪರಯರಿಗಿಂತ ಕಡೆ, ಅದೂ ಇದೂ ತಿನ್ನುತ್ತಾನೆ. ಮುಂದೆ

ಮೊಟ್ಟೆ-ಮಾಂಸ-ಮಡ್ಡಿ ತಿನ್ನುತ್ತಾನೋ ನೋಡಬೇಕು. ಇವನ ಉದ್ಧಾರ ಆದಹಾಗೆ' ಎಂದು ತಲೆ ಚಚ್ಚಿಕೊಳ್ಳುತ್ತಿದ್ದರು. ಮರುಕ್ಷಣವೇ ಎಲ್ಲವನ್ನೂ ಮರೆತು ಊಟಕ್ಕೆ ಬಡಿಸಿ, 'ಯಾವ ಸಿನಿಮಾಕ್ ಹೋಗಿದ್ಯೋ, ಯಾರ್ಯಾರು ಮಾಡಿದ್ರೋ, ಏನು ಬರೀ ಹೊಡೆದಾಟ-ಬಡಿದಾಟವೋ, ಏನ್ ಕಥೆಯೋ?' ಮುಂತಾಗಿ ಪ್ರೀತಿಯಿಂದ ಮಾತಾಡಿಸಿ ಒಂದೆರಡು ತುತ್ತು ಹೆಚ್ಚಾಗೇ ತಿನ್ನುವಂತೆ ಬಲಾತ್ಕಾರ ಮಾಡುತ್ತಿದ್ದರು. ಅಯ್ಯೋ, ಅಜ್ಜಿಗೂ ಹೇಳದೇ ಬಂದುಬಿಟ್ಟೆನೇ, ಅವರಿಗೆ ಇಷ್ಟು ಹೊತ್ತಿಗೆ ಗೊತ್ತಾಗಿಯೇ ಇರುತ್ತೆ, ಮನೆಯಲ್ಲಿ ತುಂಬಾ ರಂಪ ಆಗಿರುತ್ತೆ, ಅಮ್ಮ ಅತ್ತು ಅತ್ತು ಗೋಳಾಡಿ ಸೊರಗಿ ಮಲಗಿರಬಹುದು ಮುಂತಾಗಿ ಯೋಚಿಸುತ್ತಿರುವಾಗ ನ್ಯೂಸ್‌ರೀಲ್ ಶುರುವಾಗಿತ್ತು.

ಸಿನಿಮಾ ಮುಗಿಯುವ ಹೊತ್ತಿಗೆ ಒಂದು ಘಂಟೆಯ ಮೇಲಾಗಿತ್ತು. ಎಲ್ಲರೂ ಹೊರಗೆ ಹೊರಟರೂ ನರಸಿಂಹ ಮಾತ್ರ ಒಳಗೇ ಇದ್ದ. ಖಾಕೀ ಬಟ್ಟೆಯ ದಪ್ಪಮೀಸೆಯ ಕಾವಲುಗಾರ ಕೈಯ್ಯಲ್ಲಿ ಲಾಠಿ ತಿರುಗಿಸುತ್ತ ಎಲ್ಲರೂ ಹೊರಗೆ ಹೋಗುವುದನ್ನೇ ಕಾಯುತ್ತಿದ್ದ. ಟೆಂಟ್ ಖಾಲಿಯಾದ ಮೇಲೆ ಬಟ್ಟೆಯಂಥಾ ಬಾಗಿಲನ್ನು ಕೆಳಗಿಳಿಸಿ ಹಗ್ಗದಿಂದ ಬಿಗಿದುಕಟ್ಟಿ ಇತರ ಕೆಲಸಗಾರರ ಜೊತೆ ಟೆಂಟಿನ ಹಿಂಭಾಗದಲ್ಲಿ ಅವರಿಗಾಗಿ ಇದ್ದ ಮಲಗುವ ಸ್ಥಳಕ್ಕೆ ಹೋಗುವುದು ಅವನ ರೂಢಿ. ಆರಾಣೆ ವಿಭಾಗದಲ್ಲಿ ಒಬ್ಬನೇ ಉಳಿದಿದ್ದ ನರಸಿಂಹನನ್ನು ಕುರಿತು 'ಯಾರಯ್ಯೋ, ಏನ್ ಇಲ್ಲೇ ಕುಂತಿರ್ತೀಯೇನಯ್ಯೋ? ಲೈಟ್ ಆಫ್ ಆಯ್ತೀತೆ ಕಣಯ್ಯೋ, ಬ್ಯಾಗನ್‌ನಡ್ಯಯ್ಯೋ' ಎಂದು ಗದರಿಸಿದ. ಟೆಂಟಿನ ಪ್ರವೇಶದ್ವಾರದ ಬಳಿ ಬಂದು ನರಸಿಂಹ ದೈನ್ಯದಿಂದ ಕಾವಲುಗಾರನನ್ನು ಕೇಳಿದ 'ರೀ, ನಮ್ದು, ಆಸನ ಕಣ್ರೀ, ಕೊನೇ ಬಸ್ಸು ತಪ್ಪೋಯ್ತು, ಅದ್ಕೇ ಸಿನಿಮಾ ನೋಡಾಕ್ ಬಂದೆ, ವಸಿ ರಾತ್ರಿ ಇಲ್ಲೇ ಟೆಂಟ್‌ನಾಗೆ ಮಲಗಿದ್ದು ಬೆಳಗಿನ್ ಗಾಡಿ ಇಡ್ಕೊಂಡ್ ಓಗೋಣಾಂತಿವ್ನಿ, ಇಲ್ಲೇ ಮಲಗ್‌ಭೋದ, ಅಂಗಾರೆ' ಎಂದು ತನಗೆ ತಿಳಿದ ಅಳ್ಳಿ ಬಾಸೆಯಲ್ಲಿ ತೊದಲಿದ. 'ಯೋ, ಓಗಯ್ಯೋ, ಸಾವ್ಕಾರ್ರು ಬಂದ್ರೆ ನನ್ ಗಾಸಾರ ಬುಡುಸ್ತಾರೆ ಕಣಯ್ಯೋ' ಎನ್ನುತ್ತಾ ನಿರ್ದಾಕ್ಷಿಣ್ಯವಾಗಿ ನರಸಿಂಹನನ್ನು ಆಚೆ ದಬ್ಬಿದ. ಏನು ಮಾಡಲೂ ತೋಚದೇ ಪುನಃ ಚೆನ್ನಕೇಶವ ದೇವಾಸ್ಥಾನದ ಬಳಿ ಬಂದರೆ ಅದರ ಮಹಾದ್ವಾರವೂ ಮುಚ್ಚಿಯಾಗಿತ್ತು. ಮೆಟ್ಟಿಲನ್ನಿಳಿದು ಹತ್ತಿರದಲ್ಲೇ ಇದ್ದ ಅರಳೀಮರದ ಕಟ್ಟೆಯಲ್ಲಿ ಬಂದು ಕುಳಿತ. ತನ್ನ ಕೈಚೀಲವನ್ನೇ ತಲೆದಿಂಬಾಗಿಸಿಕೊಂಡು ಹಾಗೇ ಕಾಲು ಚಾಚಿದ. ನಿದ್ರೆ ಮಾತ್ರ ಹತ್ತಲಿಲ್ಲ. ಎದುರುಬದುರಿನ ಅಂಗಡಿ ಮುಂಗಟ್ಟುಗಳೆಲ್ಲ ಬಾಗಿಲು ಮುಚ್ಚಿ ಎಷ್ಟೋ ಹೊತ್ತಾಗಿತ್ತು. ಸ್ವಲ್ಪದೂರದ ಕಾಫೀ ಹೊಟೇಲಿನ ದೀಪವೂ ಮುಕ್ಕಾಲೆಲ್ಲ ಆರಿದ್ದರೂ ಕ್ಲೀನರ್‌ಗಳು ತೊಳೆಯುತ್ತಿದ್ದ ಅಲ್ಯೂಮಿನಿಯಮ್, ಗಾಜು ಮತ್ತು ಪಿಂಗಾಣಿ ಬಟ್ಟಲು, ಲೋಟ, ತಟ್ಟೆಗಳ ಠಣ್-ಟಳ್ ಶಬ್ದ ಮಾತ್ರ ಕೇಳುತ್ತಲೇ ಇತ್ತು. ಮರದಡಿಯ ತಂಗಾಳಿಯಿಂದ ಹೊದಿಕೆ

ಬೇಕೆನಿಸುತ್ತಿತ್ತು. ಒಂದೊಂದೇ ಸೊಳ್ಳೆಗಳು ನಿಧಾನವಾಗಿ ಮನುಜರಕ್ತದ ವಾಸನೆಯನ್ನು ಕಂಡುಕೊಂಡವೋ ಎಂಬಂತೆ ಮುತ್ತಿಗೆ ಪ್ರಾರಂಭಿಸಿದವು. ಅಷ್ಟರಲ್ಲಿ ಮರದ ಮೇಲಿನ ಪಕ್ಷಿಯೊಂದು ಪಿಚ್ಚೆಂದು ತೊಪ್ಪೆ ಹಾಕಿದ್ದು ನೇರ ನರಸಿಂಹನ ಹಣೆಯ ಮೇಲೆ ಬಿತ್ತು. ನರಸಿಂಹನಿಗೆ ಜೀವನದ ಮೇಲೆ ನಂಬಿಕೆಯೇ ಹೋದಂತಾಗಿ ಝಗ್ಗನೆದ್ದು ಕುಳಿತ. ಇಡೀ ಬೇಲೂರಿನಲ್ಲಿ ತನಗೆ ತಿಳಿದವರು ಯಾರೂ ಇಲ್ಲವೇ ಎಂದು ಚಿಂತಿಸಿದಾಗ, ಹಾಸನದಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಸ್ಕೌಟ್ ಮಾಸ್ಟರ್ ಆಗಿದ್ದ ಖಂಡೇರಾಯರು ಬೇಲೂರಿಗೆ ವರ್ಗವಾಗಿ ಬಂದು ಇಲ್ಲೇ ರಿಟೈರ್ ಆಗಿದ್ದು ನೆನಪಾಯಿತು. ಅವರ ಮನೆಗೆ ಹೋಗಿ ಬಾಗಿಲು ತಟ್ಟುವುದೆಂದು ತೀರ್ಮಾನಿಸಿದ. ಆದರೆ, ಈ ನಡುರಾತ್ರಿಯಲ್ಲಿ ಅವರ ಮನೆ ಹುಡುಕುವುದಾದರೂ ಹೇಗೆ? ಅದೂ, ಅವರ ವಿಳಾಸವೂ ಗೊತ್ತಿಲ್ಲದ ಮೇಲೆ? ಆ ವಿಚಾರವನ್ನು ಕೈಬಿಟ್ಟು, ಅಲ್ಲೇ ಬಿದ್ದಿದ್ದ ಅರಳೀ ಎಲೆಯೊಂದರಿಂದ ಹಣೆಯಮೇಲಿನ ಖಗವಿಷ್ಠೆಯನ್ನು ಒರೆಸಿಕೊಳ್ಳುತ್ತ ಮತ್ತೆ ಕೈಚೀಲದ ದಿಂಬಿಗೆ ತಲೆಯಿಟ್ಟ. ಕಣ್ಣಿನಲ್ಲಿ ಒಂದೊಂದೇ ಹನಿ ಶುರುವಾಯಿತು ಕೊನೆಗೆ ಅದು ಕೋಡಿಯಂತೆ ಹರಿಯಲಾರಂಭಿಸಿತು. ಅಪ್ಪ, ಅಮ್ಮ, ಅಜ್ಜ, ಅಜ್ಜಿ ಮತ್ತು ತಮ್ಮ ತಂಗಿಯರ ನೆನಪಿನಿಂದ ನರಸಿಂಹ ಬಿಕ್ಕಿ ಬಿಕ್ಕಿ ಅತ್ತುಬಿಟ್ಟ. ಅದೆಷ್ಟುಹೊತ್ತು ಹಾಗೆ ಅತ್ತನೋ, ಯಾವಾಗ ಕಣ್ಣಿಗೆ ನಿದ್ರೆ ಹತ್ತಿತೋ ಅವನಿಗೇ ತಿಳಿಯದು.

೨

ಹಾಸನದ ಉತ್ತರಬಡಾವಣೆಯಲ್ಲಿ ಗೌರಮ್ಮನ ಕಂಪೌಂಡ್ ಎಂಬ ವಠಾರದ ಎದುರಿನಲ್ಲಿ, ಸರ್ಕಾರೀ ಪ್ರೌಢಶಾಲೆಯಲ್ಲಿ ಸುಮಾರು ಮೂವತ್ತೈದು ವರ್ಷ ಸಂಸ್ಕೃತ ಪಂಡಿತರಾಗಿ ದುಡಿದು ನಿವೃತ್ತರಾಗಿದ್ದ ಶಾಮಯ್ಯಂಗಾರ್ರು ವಾಸವಾಗಿದ್ದ ನಾಡುಹಂಚಿನ ಮನೆ ಏನಿಲ್ಲವೆಂದರೂ ನೂರು ವರ್ಷಗಳ ಹಿಂದೆ ಕಟ್ಟಿದ ಮನೆ. ಶಾಮಯ್ಯಂಗಾರ್ರು ಹುಟ್ಟಿದ್ದು ಮದುವೆ ಆದದ್ದು ಮತ್ತು ತಮ್ಮಏಕಮಾತ್ರ ಪುತ್ರ ಸಿಂಗೈಯ್ಯಂಗಾರಿಯನ್ನು ಸಾಕಿದ್ದು, ಆತನಿಗೆ ಮದುವೆ ಮಾಡಿದ್ದು, ಎಲ್ಲ ಅಲ್ಲೇ. ಶಾಮೈಯ್ಯಂಗಾರ್ರ ಅರ್ಧಾಂಗಿ ಜಾನಕಮ್ಮನೇ ಮನೆಗೆ ನಿಜವಾದ ಯಜಮಾನ್ತಿ. ಸಿಂಗೈಯ್ಯಂಗಾರ್ ಹೈಸ್ಕೂಲಿನಲ್ಲಿ ಪಾಸಾಗದೆ ವಂಶದ ಹಿರಿಯರು ಬಿಟ್ಟುಹೋಗಿದ್ದ ಹೊಲ ಗದ್ದೆ ತೋಟಗಳನ್ನು ನೋಡಿಕೊಳ್ಳುವುದರಲ್ಲಿ ಮುತುವರ್ಜಿ ವಹಿಸಿದ್ದು ಶಾಮಯ್ಯಂಗಾರ್ರಿಗೆ ಅಷ್ಟೇನೂ ಸಮಾಧಾನದ ವಿಷಯವಾಗಿರಲಿಲ್ಲ. ವಿದ್ಯೆ ಹತ್ತದ ಮೇಲೆ, ಜೀವನೋಪಾಯಕ್ಕೆ ಏನಾದರೂ ಮಾರ್ಗವಿರಬೇಕಲ್ಲ, ಎಂದು ನಿಟ್ಟುಸಿರುಬಿಟ್ಟು ಸುಮ್ಮನಾಗಿದ್ದರು. ಸಿಂಗಯ್ಯಂಗಾರ್ ಮಾತ್ರ ಹಾಸನಕ್ಕೆ ಸುಮಾರು ಐದು ಮೈಲಿ ದೂರದಲ್ಲಿ ಕೌಶಿಕ ಮತ್ತು ಅಂಬುಗಗಳ ನಡುವೆ ತಮ್ಮ ಪೂರ್ವಿಕರ ಬಾಳೆಯ ತೋಟದಲ್ಲಿ ತನ್ನ ಸಮಯವನ್ನು ಆರಾಮವಾಗಿ ಕಳೆಯುತ್ತಿದ್ದ.

ಆತನಿಗೆ ಅಂಬುಗದಿಂದಲೇ ಶೆಲ್ಲಮ್ಮ ಎಂಬ ಬಡವರ ಮನೆ ಹೆಣ್ಣನ್ನು ತಂದುಕೊಂಡಿದ್ದು. ಶೆಲ್ಲಮ್ಮ ಸಿಂಗಯ್ಯಂಗಾರಿಗೆ ಒಳ್ಳೇ ಅನುರೂಪಳಾದ ಪತ್ನಿ. ಅವಳೂ ಮಾಧ್ಯಮಿಕ ಶಾಲೆಯಿಂದ ಮುಂದೆ ಹೋದವಳಲ್ಲ, ಆದರೆ ಮನೆಗೆಲಸದಲ್ಲಿ ಚುರುಕು. ಮದುವೆಯಾದ ಎರಡು ವರ್ಷದೊಳಗೇ ನರಸಿಂಹ ಹುಟ್ಟಿದ್ದು. ಅವನಾದ ಮೇಲೆ ಅಲಮೇಲು, ನಂತರ ಕೇಶವ ಒಬ್ಬರ ಮೇಲೆ ಒಬ್ಬರು ಹುಟ್ಟಿದ್ದರು. ಸಿಂಗಯ್ಯಂಗಾರಿ ಹಾಸನಕ್ಕೂ ತೋಟದ ಮನೆಗೂ ಓಡಾಡಿಕೊಂದಿದ್ದ. ಅವನ ದಿನದ ಅತಿ ಮುಖ್ಯ ಕೆಲಸವೆಂದರೆ ಅರಸೀಕೆರೆಯಿಂದ ಮೈಸೂರಿಗೆ, ಮೈಸೂರಿನಿಂದ ಅರಸೀಕೆರೆಗೆ ಓಡಾಡುವ ಮೂರೂ ರೈಲಿನ ಪ್ರಯಾಣಿಕರಿಗೆ ಕೌಶಿಕ ಸ್ಟೇಷನ್ನಿನಲ್ಲಿ ತನ್ನ ತೋಟದ ರಸಬಾಳೇ ಹಣ್ಣನ್ನು ತಂದು ಮಾರುವುದು. ಪ್ರತಿ ರೈಲಿಗೂ ಒಂದೊಂದು ಗೊನೆ. ಮೊದಲು ಟಿಕೆಟ್ ಕಲೆಕ್ಟರ್ರಿಗೆ ಎರಡು, ಕೊನೆಗೆ ಇಂಜಿನ್ ಡ್ರೈವರ್ರಿಗೆ ಎರಡು, ಉತ್ಕೃಷ್ಟವಾದ ರಸಬಾಳೆಯನ್ನು ಒಪ್ಪಿಸಿಬಿಟ್ಟರೆ ಸರಿ, ಪೂರಾ ಗೊನೆ ಖರ್ಚಾಗಿ ಅವನು ಹಣ ಪಡೆಯುವ ತನಕ ಹಸಿರು ಬಾವುಟ ಬೀಸುತ್ತಿರಲಿಲ್ಲ.

ಇಂಟರ್ಮೀಡಿಯೇಟ್ ಫೇಲಾದ ಮಗನನ್ನು ತನ್ನ ಕದಲೀಪ್ರಪಂಚಕ್ಕೆ ಸೇರಿಸಿಕೊಳ್ಳಬೇಕೆಂಬ ಸಿಂಗಯ್ಯಂಗಾರ ಮಹದಾಸೆಯನ್ನು ಪೂರೈಸಲು ನರಸಿಂಹ ತಯಾರಿರಲಿಲ್ಲ. ಅವನು ಪಿಸಿಯೆಮ್ಮಿನಲ್ಲಿ ಡುಮ್ಕಿ ಹೊಡೆದಿದ್ದರೂ ಅಜ್ಜನ ತಯಾರಿಯಲ್ಲಿ ಸಂಸ್ಕೃತದಲ್ಲಿ ಶೇಕಡ ೯೫ ಅಂಕ ಪಡೆದು ಇಡೀ ಕಾಲೇಜಿಗೇ ಏಕೆ, ರಾಜ್ಯಕ್ಕೇ ಮೊದಲಿಗನಾಗಿದ್ದ. ಅಜ್ಜ ಶಾಮಯ್ಯಾಂಗಾರ್ರು ನರಸಿಂಹನನ್ನು ಪ್ರೋತ್ಸಾಹಿಸಿದ್ದರು: 'ನೀನು ಹೇಗಾರೂ ಮಾಡಿ ಜೀವನಾಂಶ ಪಡೆದು ಪಿಸಿಎಮ್ ಪಾಸುಮಾಡು. ನಿನಗೆ ಸಂಸ್ಕೃತ ಆನರ್ಸಿಗೆ ಸೀಟು ಖಂಡಿತ ಸಿಕ್ಕತ್ತೆ, ನಾನೇ ಮೈಸೂರಿಗೆ ಬಂದು ನಿನಗೆ ಆನರ್ಸಿನ ಪಾಠ ಹೇಳಿ ರ್‍ಯಾಂಕ್ ಬರುವಂತೆ ಮಾಡದಿದ್ದರೆ ನನ್ನ ಹೆಸರೇ ಶಾಮಯ್ಯಂಗಾರ್ ಅಲ್ಲ' ಎನ್ನುತ್ತಿದ್ದರು. ಅಜ್ಜಿ ಜಾನಕಮ್ಮನಿಗೆ ಮೊಮ್ಮಗ ಸಂಸ್ಕೃತ ಪಂಡಿತನಾಗುವುದು ಸುತರಾಂ ಇಷ್ಟವಿರಲಿಲ್ಲ. ತಾಯಿ ಶೆಲ್ಲಮ್ಮನಿಗೂ ಮಗ ಓದಿ ಇಂಜಿನಿಯರೋ ಡಾಕ್ಟರೋ ಆಗಲೆಂಬ ಕನಸು. ಆದರೆ ನರಸಿಂಹನಿಗೆ ಮಾತ್ರ ಓದೇ ಬೇಡ. ಮೂರು ಕಾಸಿನ ಉಪಯೋಗವೂ ಇಲ್ಲದ ತನ್ನ ಮಗ, ಬಾಳೇ ತೋಟದ ಮನೆಯಲ್ಲಿ ತನ್ನೊಂದಿಗಿದ್ದು ಬೇಸಾಯ ಮಾಡಿಕೊಂಡಿರಬಾರದೇಕೆ ಎಂಬ ಯೋಚನೆ ಸಿಂಗಯ್ಯಂಗಾರಿಯದು. ಬೆಳಿಗ್ಗೆ ಎಂಟಾದರೂ ಏಳುವುದಿಲ್ಲ, ನಂತರ ತಿಂಡಿ ತಿಂದು ಮನೆ ಬಿಟ್ಟರೆ ಮಾರ್ನಿಂಗ್ ಷೋ ಅದೂ ಇದೂ ಎಂದು ಬೀದಿ ಅಲೆದು ಊಟದ ಹೊತ್ತಿಗೆ ಮನೆಗೆ ಹಾಜರ್. ಮಧ್ಯಾಹ್ನ ಮತ್ತೆ ಶಯನೋತ್ಸವ. ಅನಂತರ ಎದ್ದು ಕಾಫೀ ಕುಡಿದು ಗೆಳೆಯರೊಂದಿಗೆ ಪೇಟೆಯಲ್ಲಿ ತಿರುಗಾಟ. ಊಟದ ಹೊತ್ತಿಗೆ ಮನೆಗೆ ಹಾಜರ್. ಊಟವಾದಮೇಲೆ ಮತ್ತೊಮ್ಮೆ ಹೊರಗೆ. ಇದೆಂಥ ನಿಷ್ಪ್ರಯೋಜಕ ಜೀವನ? ಪ್ರೀತಿಯಿಂದ ಬೆಳೆಸಿದ ಅಜ್ಜ ಅಜ್ಜಿಗೂ ತಮ್ಮ ಮೊಮ್ಮಗನ

ಮೇಲೆ ತುಂಬಾ ನಿರಾಸೆಯುಂಟಾಗಿತ್ತು. ಒಂದು ದಿನ ಸಿಂಗಯ್ಯಂಗಾರಿಗೂ ಶಾಮಯ್ಯಂಗಾರ್ರಿಗೂ ಮಹಾ ಕಾಳಗವೇ ನಡೆದುಹೋಯಿತು. 'ನೀವಿಬ್ರೂ ಮುದ್ದ್ ಮಾಡಿ ನನ್‌ಮಗನ್ನ ಹಾಳ್‌ಮಾಡಿದೀರಿ, ಅದಕ್ಕೇ ಅವನು ಓದ್ದೇ ಪೋಲಿ ಬಿದ್ದಿದಾನೆ. ನನಗ್ ವಿದ್ಯೆ ಹತ್ತಿಲ್ಲಾಂತ ಅವನ್ ಮುಂದೇ ನನ್ನ್ ಮೂದಲ್ಸಿ, ನನ್ನ್ ಸ್ವಂತ್ ಮಗಂಗೇ ನನ್ನ್ಮೇಲೇ ಚೂರೂ ಗೌರವ ಇಲ್ಲ್‌ದ್‌ಹಂಗ್ ಮಾಡಿದೀರಿ. ಈಗ್ ನೋಡಿ, ಫಲಿತಾಂಶ. ಈ ಮನೆಹಾಳ ಇವತ್ತು ಮನೇಗ್ ಬರ್ಲಿ ತೀರಿಸ್‌ಬಿಡ್ತೀನಿ' ಎಂದೆಲ್ಲ ಕೂಗಾಡುತ್ತಿದ್ದ ಮಗನ ಮೇಲೆ ಶಾಮಯ್ಯಂಗಾರ್ರಿಗೂ ಜಾನಕಮ್ಮನವರಿಗೂ ಮರುಕ ಉಂಟಾಗಿತ್ತು. 'ವಯಸ್ಸಿಗೆ ಬಂದ ಹುಡುಗ, ಏನು ಮಾಡಲು ಸಾಧ್ಯ ಸಿಂಗಣ್ಣಿ, ನೀನು ಸುಮ್ಮನಿರು, ಅವನಿವತ್ತು ಮನೆಗೆ ಬರಲಿ, ನಾನು ಬುದ್ಧಿ ಹೇಳುತ್ತೇನೆ' ಎಂದು ಶಾಮಯ್ಯಂಗಾರ್ರು ಮಗನನ್ನು ಸಮಾಧಾನಪಡಿಸಲು ಯತ್ನಿಸಿದ್ದರು. ನರಸಿಂಹ ಅವತ್ತು ಎರಡನೆಯ ಷೋ ಸಿನಿಮಾಕ್ಕೆ ಹೋಗಿದ್ದು ಪರಿಸ್ಥಿತಿಯನ್ನು ಮತ್ತಷ್ಟು ವಿಪರೀತಕ್ಕೆ ಕೊಂಡೊಯ್ದಿತ್ತು. ಸುಮಾರು ಹನ್ನೆರಡೂವರೆಯ ಸಮಯದಲ್ಲಿ ಹಿಂದಿರುಗಿದ ನರಸಿಂಹ ಮನೆಯೊಳಕ್ಕೆ ಕಾಲಿಟ್ಟಿದ್ದೇ ತಡ, ಅಪ್ಪ ಅವನಮೇಲೆರಗಿ ಧಬಧಬ ಬಡಿದು 'ದರಿದ್ರ ಮುಂಡೇದೆ, ಇನ್ನೆಷ್ಟು ವರ್ಷ ಹೀಗೆ ಕಾಲಕಳೆಯುತ್ತಿ, ನಾಳೆಯಿಂದ ನನ್ನ ಜೊತೆ ಬಾಳೆತೋಟಕ್ಕೆ ಬಂದು ಸಹಾಯಮಾಡದಿದ್ದರೆ ನಿನ್ನನ್ನು ಹುಟ್ಟಲಿಲ್ಲ ಅನ್ನಿಸುತ್ತೇನೆ' ಎಂದು ಹೂಂಕರಿದ್ದ. ಎಂದೂ ಇಷ್ಟು ಕೋಪವನ್ನು ತೋರಿಸದ ಸಿಂಗಣ್ಣಿಯ ಈ ರೌದ್ರವನ್ನು ಕಂಡು ಶೆಲ್ಲಮ್ಮ ನಡುಗಿಹೋದಳು. ನರಸಿಂಹ ಅನಿರೀಕ್ಷಿತವಾಗಿ ಬಂದೊದಗಿದ ದಾಳಿಯಿಂದ ಚೇತರಿಸಿಕೊಂಡವನೆ ಎದ್ದು ನಿಂತು 'ಜೀವ ಬಿಟ್ಟರೂ ಸರಿ, ನಾನು ಬಾಳೆಗೊನೆ ಹೊರಲು ಖಂಡಿತ ಬರುವುದಿಲ್ಲ. ಆ ದರಿದ್ರ ಹಳ್ಳಿ ರೈಲ್ವೇ ಸ್ಟೇಷನ್ನಿನಲ್ಲಿ ಬಾಳೆಹಣ್ಣು ಮಾರಲು ನಾನೇನೂ ಮೂರ್ಖನಲ್ಲ' ಎಂದುಬಿಟ್ಟ. ಅಂದಿನವರೆಗೆ ಎಂದೂ ತಂದೆಯೊಂದಿಗೆ ವಾದಿಸುವ ಅವಕಾಶವೇ ಬಾರದಂತೆ ಅಜ್ಜ ನೋಡಿಕೊಂಡಿದ್ದರು. ಅವನಿಚ್ಛೆಯನ್ನೂ ಮೀರಿ ನರಸಿಂಹನ ಬಾಯಿಂದ ಬಂದ ಮಾತಿನಿಂದ ಶಾಮಯ್ಯಂಗಾರ್ರಿಗೂ ಸಿಟ್ಟು ತಡೆಯಲಾಗಲಿಲ್ಲ. 'ಎಲಾ ಧೂರ್ತ, ಹಾಗಾದರೆ ನಿನ್ನಭಿಪ್ರಾಯದಲ್ಲಿ ಬಾಳೆಗೊನೆ ಹೊರೋರು, ಬಾಳೆಹಣ್ಣು ಮಾರೋರು ಮೂರ್ಖರೇನೋ? ನಿನ್ನ ಬಾಯಲ್ಲಿ ನಿನ್ನ ತಂದೆಯ ಬಗ್ಗೆ ಇಂಥ ಮಾತು ಬರಬಹುದೇನೋ ಚಂಡಾಲ' ಎನ್ನುತ್ತ ರೊಯ್ಯನೆ ಕೈಬೀಸಿ ನರಸಿಂಹನ ಕಪಾಳಕ್ಕೆ ಒಂದು ಕೊಟ್ಟರು. ನರಸಿಂಹ ತತ್ತರಿಸಿ ಹೋದ. ತಂದೆಯ ಹೊಡೆತ ಎಷ್ಟು ಅನಿರೀಕ್ಷಿತವಾಗಿತ್ತೋ ಅದಕ್ಕೆ ನೂರರಷ್ಟು ಅನಿರೀಕ್ಷಿತವಾಗಿತ್ತು ಅಜ್ಜನ ಹೊಡೆತ. ಪ್ರೀತಿಯಿಂದ ತಲೆಮೇಲೆ ಹೊತ್ತು ತಿರುಗುತ್ತಿದ್ದ ಅಜ್ಜ ಎಂದೂ ಮೊಮ್ಮಗನ ಮೇಲೆ ಕೈಮಾಡಿರಲಿಲ್ಲ. ಗಟ್ಟಿಯಾಗಿ ಮಾತು ಕೂಡಾ ಆಡದ ಅಜ್ಜ ಮತ್ತು ಎಂದೂ ಇಷ್ಟೊಂದು ಕೋಪ ತೋರದ ತಂದೆ, ಇಬ್ಬರಿಂದಲೂ ಒಂದೇ ದಿನ ಹೊಡೆತವನ್ನು ತಿಂದದ್ದು, ಅದೂ ವಯಸ್ಸಿಗೆ ಬಂದ ಮೇಲೆ ಹೀಗಾದದ್ದು,

ಸಿನಿಮಾ ನೋಡಿ ಖುಷಿಯಿಂದ ಹಿಂದಿರುಗಿದ್ದ ನರಸಿಂಹನ ಬೇಜವಾಬ್ದಾರೀ ಜೀವನವನ್ನು ಅಲ್ಲಾಡಿಸಿ, ನಡುಗಿಸಿಬಿಟ್ಟಿತ್ತು. ಅಂದಿನ ಪ್ರಶಾಂತ ಮಧ್ಯರಾತ್ರಿಯಲ್ಲಿ ಅಲ್ಲೋಲಕಲ್ಲೋಲವಾದಂತೆನಿಸಿತು. ಅಕ್ಕಪಕ್ಕದವರಿಗೆಲ್ಲ ತಿಳಿಯುವಷ್ಟು ಗದ್ದಲ ನಡೆದು ಹೋಗಿತ್ತು. ಜಾನಕಮ್ಮ, ಶೆಲ್ಲಮ್ಮ ತಲೆ ಚಚ್ಚಿಕೊಳ್ಳುತ್ತ ಬಿಕ್ಕಿಬಿಕ್ಕಿ ಅಳುತ್ತಿದ್ದರು. ನರಸಿಂಹನ ಆಗಮನವನ್ನೇ ಕಾಯುತ್ತ ಅಂದಿನ ರಾತ್ರಿ ದೊಡ್ಡವರು ಯಾರೂ ಊಟ ಮಾಡಿರಲಿಲ್ಲ. ಕಿರುಚಾಟದ ಗಲಾಟೆಯಿಂದ ಅಲಮೇಲು ಮತ್ತು ಕೇಶವರೂ ಎದ್ದು, ಅಡುಗೆ ಮನೆಯಲ್ಲಿ ಬಿಕ್ಕುತ್ತಿದ್ದ ತಾಯಿಯ ಬಳಿ ಹೋಗಿ ಕುಳಿತರು. ಯಾವಾಗ ಯಾರಿಗೆ ನಿದ್ರೆ ಬಂತೋ ದೇವರೇ ಬಲ್ಲ.

೪

ಸಿಂಗಣ್ಣಿ ಬೆಳಗಿನ ಜಾವ ಎದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಮಂಗಳವಾರದ ಸಂತೆಯಲ್ಲಿ ಮಾರಲೆಂದು ತಂದು ಉಗ್ರಾಣದಲ್ಲಿ ನೇತುಹಾಕಿದ್ದ ಇಪ್ಪತ್ತು-ಮೂವತ್ತು ಬಾಳೆಗೊನೆಗಳನ್ನು ಗಾಡಿಗೆ ಏರಿಸಿ ಗೋಣೀಚೀಲಗಳಿಂದ ಮುಚ್ಚಿ, ಹಿತ್ತಲಿನಲ್ಲಿ ಮಲಗಿದ್ದ ಒಂಟಿ ಎತ್ತನ್ನು ಎಬ್ಬಿಸಿಕೊಂಡುಬಂದ. ಶೆಲ್ಲಮ್ಮ ಅಷ್ಟು ಹೊತ್ತಿಗೆ ಎದ್ದು ಗಂಡನಿಗೆಂದು ಮಾಡಿಟ್ಟಿದ್ದ ಕಾಫಿಯನ್ನು ಕುಡಿದು ಹೊರಟ. ಸಂತೆಯ ದಿನವೆಂದರೆ, ಸಿಂಗಣ್ಣಿ ಸ್ನಾನ ಮಾಡದೇ ಹೋಗುವುದೇ ಅವನ ಕ್ರಮ. ಶಾಮಯ್ಯಂಗಾರ್ರಿಗೆ ಅವನ ಪದ್ಧತಿ ಹಿಡಿಸುತ್ತಿರಲಿಲ್ಲ. ಆದರೆ ಜಾನಕಮ್ಮ ಅದಕ್ಕೆ ಅನುಮತಿ ಕೊಟ್ಟಿದ್ದರು. ಆ ಸಂತೆಯ ಮೈಲಿಗೆಯಲ್ಲಿ ವ್ಯಾಪಾರಗಳನ್ನೆಲ್ಲ ಮುಗಿಸಿಕೊಂಡು ಬಂದಮೇಲೆ ಸ್ನಾನಮಾಡುವುದೇ ಒಳ್ಳೆಯ ಅಭ್ಯಾಸವೆಂಬುದು ಅವರ ವಾದವಾಗಿತ್ತು. ಅಂತೂ, ಸಂತೆಯದಿನ ಸಿಂಗಣ್ಣಿ ಬೆಳಗಾಗೆದ್ದು ಹೊರಟನೆಂದರೆ ಹಿಂದಿರುಗುವುದಿನ್ನು ಸಂಜೆಯೇ. ಹಿಂದಿನ ರಾತ್ರಿಯ ರಂಪ ನಡೆಯಲೇ ಇಲ್ಲವೇನೋ ಎನ್ನುವಷ್ಟರಮಟ್ಟಿಗೆ ಮಾಮೂಲಿನ ಶಾಂತಿಯಿಂದಲೇ ಸಿಂಗಣ್ಣಿ ಹೊರಟುಹೋಗಿದ್ದ. ಜಾನಕಮ್ಮ ಎದ್ದು ತಮ್ಮ ದಿನನಿತ್ಯದಂತೆ ಮಡಿಯುಟ್ಟು ತುಳಸೀಪೂಜೆ ಇತ್ಯಾದಿ ಜಪತಪಗಳನ್ನು ಮುಗಿಸಿ ಕಾಫೀ ಕುಡಿಯಲು ಬಂದರೂ ಶಾಮಯ್ಯಂಗಾರ್ರು ಇನ್ನೂ ಎದ್ದಿರಲಿಲ್ಲ. ನರಸಿಂಹ ಎದ್ದು ಮುಖ ತೊಳೆದುಕೊಂಡು ಕಾಫಿಯನ್ನೂ ಕುಡಿಯದೇ ಹೆಗಲಿಗೊಂದು ಹತ್ತೀ ಚೀಲವನ್ನು ನೇತುಹಾಕಿಕೊಂಡು ಹೊರಬಿದ್ದ. ಕಾಫಿಯನ್ನೂ ಕುಡಿಯದೇ ಎಲ್ಲಿಗೋ ಹೊರಟೆ ಎಂದು ಶೆಲ್ಲಮ್ಮ ಕೂಗಿಕೊಂಡರೂ ಕಿವಿಗೆ ಹಾಕಿಕೊಳ್ಳದೇ ಹೊರಟುಹೋಗಿದ್ದ.

೫

ನರಸಿಂಹ ಮಲಗಿದ್ದ ಅರಳೀಕಟ್ಟೆಯ ಮೇಲೆ ಸೂರ್ಯಕಿರಣಗಳು ಬಿದ್ದಾಗ ಸುಮಾರು ಬೆಳಗಿನ ಆರೂವರೆ ಇರಬಹುದು. ನರಸಿಂಹ ಕಣ್ಣು ಬಿಟ್ಟ. ತಾನು ಎಲ್ಲಿದ್ದೇನೆ ಎಂಬ

ಅರಿವು ಅವನಿಗೆ ತಕ್ಷಣ ಆಗಲಿಲ್ಲ. ಕಟ್ಟೆಯ ಕೆಳಗೆ ಒಂದು ನಾಯಿ ಬಾಲ ಅಲ್ಲಾಡಿಸುತ್ತಾ ನಿಂತಿದೆ. ಕೊಂಬೆಗಳ ಮೇಲೆ ಅನೇಕ ಕಾಗೆ–ಗುಬ್ಬಿಗಳು ಕುಳಿತಿವೆ, ಕೆಲವು ಹಕ್ಕಿಗಳು ಕೊಂಬೆಯಿಂದ ಕೊಂಬೆಗೆ ನೆಗೆಯುತ್ತಿವೆ. ಸ್ವಲ್ಪ ಹೊರಳಿದರೆ ಚೆನ್ನಕೇಶವ ದೇಗುಲದ ಗೋಪುರ ಮತ್ತು ಮಹಾದ್ವಾರ ಕಾಣುತ್ತಿವೆ. ಯಾರೋ ಹಾಲಿನವನು ಡಬ್ಬವನ್ನು ಕ್ಯಾರಿಯರ್ರಿನ ಮೇಲಿಟ್ಟುಕೊಂಡು ದಬ್ಬಿಕೊಂಡು ಹೋಗುತ್ತಿದ್ದಾನೆ. ಈ ಮೂಲೆಯಲ್ಲಿ ಮಲಗಿರುವ ಹಸುವೊಂದು ಮೆಲಕುಹಾಕುತ್ತ ತಾನೇ ಹಾಕಿದ ಸಗಣಿ ಮತ್ತು ತಾನೇ ಹುಯ್ದ ಗಂಜಳದಾಚೆಗೆ ಸರಿಯಲು ಯತ್ನಿಸುತ್ತಿದೆ. ತಕ್ಷಣ ನೆನಪಾಯಿತು, ತಾನು ಬೇಲೂರಿಗೆ ಬಸ್ಸು ಹತ್ತಿ ಬಂದದ್ದು. ಸೊಮವಾರ ರಾತ್ರಿ ಸೆಕೆಂಡ್ ಷೋ ಸಿನಿಮಾದಿಂದ ಹಿಂದಿರುಗಿದಾಗ ಅಪ್ಪ ಮತ್ತು ಅಜ್ಜರ ಕೈಯ್ಯಲ್ಲಿ ಹೊಡೆತ ತಿಂದು ಮಲಗಿದ್ದು, ಮಂಗಳವಾರ ಮನೆ ಬಿಟ್ಟು ಹೊರಟಿದ್ದು, ಮಾರ್ನಿಂಗ್ ಷೋ ನೋಡಿದ್ದು, ಊರೆಲ್ಲ ಅಲೆದು ಮನೆಗೆ ಹಿಂದಿರುಗಲು ಮನಸ್ಸಾಗದೇ ಬೇಲೂರಿಗೆ ಬಸ್ಸು ಹಿಡಿದದ್ದು, ಹೊಟೇಲಿನಲ್ಲಿ ದೋಸೆ ತಿಂದಿದ್ದು, ದೇವಸ್ಥಾನದಲ್ಲಿ ಚರ್ಪಿನ ಪುಳಿಯೊಗರೆ–ಮೊಸರನ್ನ ತಿಂದು ಬೇಡರ ಕಣ್ಣಪ್ಪ ಸಿನಿಮಾವನ್ನು ಮೂರನೆಯ ಸಲ – ಆದರೆ ಮೊದಲಬಾರಿಗೆ ಬೇಲೂರಿನ ಟೆಂಟ್ ಸಿನಿಮಾದಲ್ಲಿ – ನೋಡಿದ್ದು, ಎಲ್ಲ ಒಂದೊಂದಾಗಿ ಕಣ್ಮುಂದೆ ಬಂತು. ಎದ್ದು ಕುಳಿತು ಯೋಚಿಸತೊಡಗಿದ, 'ಎಲ್ಲಿ ಮುಖ ತೊಳೆಯುವುದು, ಎಲ್ಲಿ ಜಲ–ಮಲ ವಿಸರ್ಜನೆ ? ಎಲ್ಲಿ ಸ್ನಾನ, ತಿಂಡಿ, ಊಟ ???? 'ಮೈ ಬೆವರಿತು. ಇಡೀ ರಾತ್ರಿ ತಂಗಾಳಿಯಲ್ಲಿ ಮಲಗಿ ಮೂಗೆಲ್ಲ ಕಟ್ಟಿಕೊಂಡಿತ್ತು. ಹಾಸನಕ್ಕೆ ಮೊದಲನೆಯ ಬಸ್ಸು ಏಳಕ್ಕೋ ಎಂಟಕ್ಕೋ ಇದ್ದೇ ಇರುತ್ತದೆ, ತೆಪ್ಪನೆ ಹಿಂದಿರುಗುವುದೇ ಕ್ಷೇಮವೆನಿಸಿತು. ಆದರೆ, ಅಪ್ಪನನ್ನು ಎದುರಿಸುವುದೆಂತು? ಅವನ ಹಂಗು ತನಗೇಕೆ? ತಾನು ಕೂಲಿಯವರಂತೆ ಬಾಳೆಗೊನೆ ಹೊರುವುದು ಸಾಲದೇನೋ, ನನ್ನನ್ನೂ ಅದೇ ಜೀವನೋಪಾಯಕ್ಕೆ ಹಾಕಿಕೊಂಡು ದುಡಿಸಿಕೊಳ್ಳಲು ಯೋಚಿಸಿದ್ದಾನೆ ಈ ಅಪ್ಪ. ನಾನು ಖಂಡಿತ ಅಲ್ಲಿ ಹಿಂದಿರುಗಿ ಬದುಕಲಾರೆ. ಎಂದೂ ನನ್ನ ಮೇಲೆ ಕೈಮಾಡದಿದ್ದ ಅಜ್ಜನಿಗೂ ನನ್ನ ಮೇಲೆ ಎಷ್ಟು ಕೋಪ ಬಂದಿತ್ತು? ಅಜ್ಜನ ಮುಖ ಕಣ್ಮುಂದೆ ಸುಳಿಯಿತು. ಅವರು ಅರ್ಧಚಂದ್ರಾಕಾರದಲ್ಲಿ ನೆತ್ತಿಯ ಮೇಲ್ಭಾಗವನ್ನು ಹೆರೆಸಿಕೊಂಡು ಕೂದಲನ್ನು ಹಿಂದಕ್ಕೆ ಬಿಗಿದು ಕಟ್ಟುವ ಜುಟ್ಟು, ಭ್ರೂಮಧ್ಯದಿಂದ ಹೊರಟು ಹಣೆಯತುಂಬ ಹಾಕುವ ಎರಡು ಬಿಳೀ ಮತ್ತು ಮಧ್ಯದ ಕೆಂಪು ನಾಮಗಳ ದಿವ್ಯತೇಜಸ್ಸಿನ ಮುಂದೆ ಬೇಲೂರ ಚೆನ್ನಕೇಶವನೂ ಸಾಟಿಯಾಗಲಾರನೆಂಬ ಅಭಿಮಾನ ಉಕ್ಕಿ 'ಅಯ್ಯೋ ಅಜ್ಜ, ನನ್ನ ಕಪಾಳಕ್ಕೆ ಹೊಡೆಯಲು ನಿಮಗೆ ಹೇಗೆ ಮನಸ್ಸು ಬಂದಿತು?'ಎಂದು ಗಟ್ಟಿಯಾಗೇ ಕೂಗಿಕೊಂಡಾಗ ರಸ್ತೆಯಲ್ಲಿ ಹೋಗುತ್ತಿದ್ದ ಒಬ್ಬ ಇವನ ಕಡೆ ತಿರುತಿರುಗಿ ನೋಡಿದ.

ಅಪ್ಪನ ಮುಖ ಮುಂದೆ ಸುಳಿಯಿತು. ಅಪ್ಪ, ಅಜ್ಜನ ಹಾಗೆ ಜುಟ್ಟು ಬಿಟ್ಟಿರಲಿಲ್ಲ. ನಾಮವನ್ನು ಮೂರರಿಂದ ಒಂದೇ ಕೆಂಪು ನಾಮಕ್ಕೆ ಇಳಿಸಿದ್ದ. ಅದು ಕಂಡೂ ಕಾಣದಂತೆ

ಚಿಕ್ಕದಾಗಿ ಇಟ್ಟುಕೊಳ್ಳುತ್ತಿದ್ದ. ಅಜ್ಜ ನಿರರ್ಗಳವಾಗಿ ಪಂಚಸೂಕ್ತಗಳನ್ನು ನಿತ್ಯಪಾಠ ಮಾಡದೇ, ವಿಷ್ಣುಸಹಸ್ರನಾಮವನ್ನು ಪಠಿಸದೇ ಒಂದು ಲೋಟ ನೀರೂ ಕುಡಿಯುತ್ತಿರಲಿಲ್ಲ. ಅಪ್ಪ ಹಾಗಲ್ಲ, ಸ್ನಾನವನ್ನೂ ಮಾಡದೆ ತೋಟದ ಕೆಲಸಕ್ಕೆಂದು ಹೊರಟು ಹೋಗುತ್ತಾನೆ. ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳಲ್ಲಿ ಯಾವ ಆಸಕ್ತಿಯೂ ಅಪ್ಪನಿಗಿದ್ದಂತಿಲ್ಲ. ಅಷ್ಟಾದರೂ' ನಾನು ಸಂಧ್ಯಾವಂದನೆ ಮಾಡುವುದಿಲ್ಲ' ಎಂದು ಗೊಣಗುತ್ತಾನೆ.

ಇದ್ದಕ್ಕಿದ್ದಂತೆ ಹೈಸ್ಕೂಲ್ ಓದುವಾಗ ತನ್ನ ಜುಟ್ಟನ್ನು ತಾನೇ ಕತ್ತರಿಸಿಕೊಂಡು ಇನ್ನುಮುಂದೆ ಕ್ರಾಪ್ ಬೆಳೆಸುತ್ತೇನೆಂದು ಹಟಮಾಡಿದ್ದು, ಶಾಲೆಗೆ ನಾಮ ಹಾಕಿಕೊಂಡು ಹೋಗುವುದಿಲ್ಲವೆಂದು ರಂಪ ಮಾಡಿದ್ದು ಎಲ್ಲ ನೆನಪಾಗಿ ಒಂದು ರೀತಿ ವಿಜಯ ಸಾಧಿಸಿದ ಹೆಮ್ಮೆ ಉಂಟಾಯಿತು. ಅಮ್ಮ, ಅಜ್ಜಿಯರ ಸೌಮ್ಯ ಮುಖಗಳು ಕಣ್ಮುಂದೆ ಬಂದವು. ಆಶ್ಚರ್ಯವೆಂದರೆ, ಅಪ್ಪ ನನ್ನನ್ನು ದನ ಬಡಿದ ಹಾಗೆ ಬಡಿಯುತ್ತಿದ್ದರೂ ಅಮ್ಮನಾಗಲೀ ಅಜ್ಜಿಯಾಗಲೀ ನನ್ನನ್ನು ಬಿಡಿಸಿಕೊಳ್ಳದಿರಲು ಕಾರಣವೇನು ? ಬಾಳೆಗೊನೆ ಮಾರುವ ಕೆಲಸವನ್ನು ಮಾಡುವವರೆಲ್ಲ ಮೂರ್ಖರು ಎನ್ನುವ ಅರ್ಥ ಬರುವ ಹಾಗೆ ನಾನು ಮಾತಾಡಬಾರದಾಗಿತ್ತು ಎಂಬ ಪಶ್ಚಾತ್ತಾಪ ಮನಸ್ಸಿಗೆ ಬಂತು. ಹಾಗೆ ನೋಡಿದರೆ, ನನಗೂ ಅಪ್ಪನಿಗೂ ಏನೂ ಶಾನೆ ವ್ಯತ್ಯಾಸವಿಲ್ಲ, ಅವನು ಹೈಸ್ಕೂಲಿನಲ್ಲಿ ಫೇಲಾದ, ನಾನು ಇಂಟರಿನಲ್ಲಿ ಫೇಲಾದೆ. ನನ್ನ ನೆಚ್ಚಿನ ವಿಷಯ ಸಂಸ್ಕೃತ ಇಲ್ಲದಿದ್ದರೆ ಇಡೀ ವಿದ್ಯಾಭ್ಯಾಸವೇ ವ್ಯರ್ಥವೆನಿಸುತ್ತಿತ್ತು. ಅಜ್ಜ ಹೇಳುವುದೇ ಸರಿ, ನಿಜವಾಗೂ, ನಾನು ಇಂಟರ್ ಪಾಸ್ ಮಾಡಿ ಸಂಸ್ಕೃತ ಆನರ್ಸಿಗೆ ಸೇರಬೇಕು. ಮಿಡಲ್‌ಸ್ಕೂಲಿನಲ್ಲಿ ಅಜ್ಜ ಉರುಹೊಡೆಸಿದ ಅಮರಕೋಶ ಇವತ್ತಿಗೂ ಮರೆತಿಲ್ಲ. ಅವರು ಹೇಳಿಕೊಟ್ಟ ವ್ಯಾಕರಣ ಯಾವ ಕಾಲೇಜಿನ ಪ್ರೊಫೆಸ್ಸರ್ರೂ ಹೇಳಿಕೊಡಲಾರ ಎಂಬ ವಿಚಾರ ಮನಸ್ಸಿಗೆ ಬಂದಕೂಡಲೇ, 'ಇಕಾರಾಂತಸ್ತ್ರೀಲಿಂಗೋ ಮತಿ ಶಬ್ದಃ 'ಎಂದು ಮತಿಶಬ್ದವನ್ನು ಚಾಚೂ ತಪ್ಪದೇ -- ಎರಡೆರಡು ಪರ್ಯಾಯಶಬ್ದಗಳ ಸಹಿತ -- ಗಟ್ಟಿಯಾಗಿ ಹೇಳಿಕೊಂಡ. ಮನೆಗೆ ಹೋಗಿ ಅಜ್ಜನ ಕಾಲಿಗೆ ಬಿದ್ದು ಕ್ಷಮೆ ಕೇಳಿಕೊಳ್ಳುವುದೇ ಸರಿಯಾದ ಪರಿಹಾರ. ನನಗೋಸ್ಕರ ಅವರು ಅಜ್ಜಿಯ ಸಮೇತ ಮೈಸೂರಿಗೆ ಬಂದು ನೆಲೆಸಲು ಸಿದ್ಧ ಎಂದು ಎಷ್ಟೋ ಸಲ ಹೇಳಿದರೂ ನಾನು ಮಾತ್ರ ಮೂರ್ಖನ ಹಾಗೆ ಸಪ್ಲಿಮೆಂಟರಿ ಪರೀಕ್ಷೆಗೆ ಕೂರದೇ ಸಿನಿಮಾ ನೋಡಿಕೊಂಡು ಸಮಯ ಹಾಳುಮಾಡುತ್ತಿದ್ದೇನೆ. ಮೈಸೂರಿಗೆ ಹೋಗಿಬಿಟ್ಟರೆ ಅಪ್ಪನ ಕಾಟವೂ ತಪ್ಪುತ್ತದೆ ಎಂದು ನರಸಿಂಹನಿಗೆ ಮನಸ್ಸಿನಲ್ಲೇ ಸಮಾಧಾನವೆನಿಸಿದರೂ ಅಮ್ಮ? ಅಮ್ಮನೇನು ತಪ್ಪು ಮಾಡಿದ್ದಾಳೆ? ಅವಳಿಗೇಕೆ ನಾನು ಇಷ್ಟೊಂದು ಚಿತ್ರಹಿಂಸೆ ಕೊಟ್ಟೆ ಎಂದು ನೊಂದುಕೊಂಡ. ಅವನಿಗೇ ತಿಳಿಯದಂತೆ ಅವನು ಅರಳೀಕಟ್ಟೆಯಿಂದ ಇಳಿದಿದ್ದ. ಅವನ ಕಣ್ಣು ಮತ್ತು ಕಾಲುಗಳು ಚಪ್ಪಲಿಯನ್ನು ಹುಡುಕುತ್ತಿದ್ದವು. ರಾತ್ರಿ ಇವನು ಮಲಗಿದ್ದಾಗ ಯಾವನೋ ಪುಣ್ಯಾತ್ಮ ಇವನ ಚಪ್ಪಲಿಗಳನ್ನು ಕದ್ದಿದ್ದ! ಗೋಡೆ-

ಸೂರುಗಳಿಲ್ಲದ ಪ್ರಪಂಚ ಎಷ್ಟು ಕ್ರೂರ ಎಂಬ ಅರಿವು ಮೊಟ್ಟಮೊದಲಬಾರಿಗೆ ನರಸಿಂಹನಿಗೆ ಆಗಿತ್ತು. ಭೂಮಿಯೇ ಹಾಸಿಗೆ, ಆಕಾಶವೇ ಹೊದ್ದಿಕೆಯಾದಾಗ ಮನೆ ಮತ್ತು ಮನೆಯವರು ನೀಡುವ ಭದ್ರತೆ ಎಂಥದ್ದು ಎಂಬ ಅರಿವೂ ಅವನಿಗಾಗಿತ್ತು.

ಬರಿಗಾಲಿನಲ್ಲಿ ನಡೆಯುತ್ತ ದೇವಸ್ಥಾನದ ಪೌಳಿಯ ಹಿಂದೆ ಹೋಗಿ ಎಲ್ಲರೂ ಉಪಯೋಗಿಸುತ್ತಿದ್ದಂತೆ ಯಾವುದೋ ಗುತ್ತಿಯ ಹಿಂದೆ ನಿಂತು ಜಲವಿಸರ್ಜನೆ ಮುಗಿಸಿದ. ಎರಡನೆಯದಕ್ಕೆ ಅವಸರವಿದ್ದರೂ ನೀರನ್ನು ಎಲ್ಲಿಂದ ತರುವುದು ಎಂದು ಹೇಗೋ ತಡೆದುಕೊಂಡ. ಹಿಂದಿನ ದಿನ ದೋಸೆ ತಿಂದ ಹೊಟೇಲಿಗೆ ಬಂದು ಅಲ್ಲೇ ಇದ್ದ ಸಿಂಕಿನ ನಲ್ಲಿಯಲ್ಲಿ ಬಾಯಿ ಮುಕ್ಕಳಿಸಿ ಕೈಬೆರಳಿನಿಂದಲೇ ದಂತಮಾರ್ಜನ ಮುಗಿಸಿದ ಶಾಸ್ತ್ರಮಾಡಿ, ಕೈಚೀಲದಲ್ಲಿದ್ದ ಕರವಸ್ತ್ರದಿಂದ ಮುಖ ಒರೆಸಿಕೊಂಡು, ಬಾಚಣಿಗೆಯಿಂದ ತಲೆಬಾಚಿಕೊಂಡ. ಎರಡೆರಡು ಇಡ್ಲಿ ವಡೆ ಸಾಂಬಾರ್ ಮತ್ತು ಕಾಫೀ ಆರ್ಡರ್ ಮಾಡಿ ಕುಳಿತ. ತಿಂಡೀ ಕಾಫೀ ಮುಗಿಸಿ ತಾನಿನ್ನೂ ಸ್ವತಂತ್ರ ಬದುಕಿಗೆ ಲಾಯಕ್ಕಲ್ಲವೆಂಬುದನ್ನು ಖಚಿತಪಡಿಸಿ ಕೊಂಡಂತವನಾಗಿ ಹಾಸನಕ್ಕೆ ಹೊರಡುವ ಯಾವ ಬಸ್ಸಾದರೂ ಸರಿ, ಹತ್ತುವುದೊಂದೇ ಮಾರ್ಗವೆಂದು ತೀರ್ಮಾನಿಸಿ ಹೊರಬಿದ್ದ.

೬

ಒಂಬತ್ತು ಘಂಟೆಯಾದಮೇಲೂ ಶಾಮಯ್ಯಂಗಾರ್‍ರು ಏಳದಿದ್ದನ್ನು ಕಂಡು ಶೆಲ್ಲಮ್ಮನಿಗೆ ಸ್ವಲ್ಪ ಗಾಬರಿ ಆಯಿತು. ಅವರು ಮಲಗುವ ಕೋಣೆಯಲ್ಲಿ ಹೋಗಿ ನೋಡಿದರೆ, ಮಾವನವರ ಹಾಸಿಗೆ ಅಸ್ತವ್ಯಸ್ತವಾಗಿತ್ತು. ಅವರು ಮಲಗಿದ್ದ ಭಂಗಿ ಯಾರನ್ನಾದರೂ ಗಾಬರಿಗೊಳಿಸುವಂತಿತ್ತು. ಶೆಲ್ಲಮ್ಮ ಏನೂ ತೋಚದೆ ಅತ್ತೆಯವರನ್ನು ಕೂಗಿದಳು. ಅವಳು ಕೂಗಿದ ಧ್ವನಿಯಿಂದಲೇ ಹೆದರಿದ ಜಾನಕಮ್ಮ ಕೈಯ್ಯಲ್ಲಿದ್ದ ಕಾಫೀಬಟ್ಟಲನ್ನು ಮೈಮೇಲೆ ಬೀಳಿಸಿಕೊಂಡರು. ಸೀರೆಯ ಸೆರಗೆಲ್ಲ ಒದ್ದೆಯಾದದ್ದನ್ನೂ ಲೆಕ್ಕಿಸದೆ ಯಜಮಾನರು ಮಲಗಿದ್ದ ಕೋಣೆಗೆ ಓಡಿಬಂದರು. ಯಜಮಾನರನ್ನು ಎಚ್ಚರಿಸಲು ಎಷ್ಟು ಯತ್ನಿಸಿದರೂ ಉಪಯೋಗವಾಗಲಿಲ್ಲ. ಕೇಶ್ವಾ, ಕೇಶ್ವಾ ಎಂದು ಮೊಮ್ಮಗನನ್ನು ಕೂಗಿ, 'ಹೋಗೋ, ಬೇಗ ಸೈಕಲ್ಲಿನಲ್ಲಿ ಸಂತೆಮಾಳಕ್ಕೆ ಹೋಗಿ ಸಿಂಗಣ್ಣಿಯನ್ನು ಕರೆದುಕೊಂಡು ಬಾ, ಅಜ್ಜನಿಗೆ ಹುಷಾರಿಲ್ಲ' ಎಂದು ಅಳಲಾರಂಭಿಸಿದರು. ಕೇಶವ ಓಡಿದ. ಶೆಲ್ಲಮ್ಮ ತಂದುಕೊಟ್ಟ ನೀರನ್ನು ಒಂದಿಷ್ಟು ಮುಖದಮೇಲೆ ಸಿಂಪಡಿಸಿ ಉಪಚರಿಸಲು ನೋಡಿದರು. ಅಲಮೇಲು ಅಳುತ್ತಾ ಪಕ್ಕದಮನೆಯಲ್ಲಿದ್ದ ಸುಬ್ರಾಯರನ್ನ ಕರೆತರಲು ಓಡಿದಳು. ಸುಬ್ರಾಯರೂ ಶಾಮಯ್ಯಂಗಾರ್‍ರು ಗಳಸ್ಯ-ಕಂಠಸ್ಯ, ಲಾಗಾಯ್ತಿನಿಂದಲೂ ಸ್ನೇಹಿತರು. ಅಲಮೇಲು ಕರೆದೊಡನೆಯೇ ಓಡಿಬಂದ ಸುಬ್ರಾಯರು ಶಾಮಯ್ಯಂಗಾರ್‍ರ ಮೈಕೈ ಮುಟ್ಟಿ ನೋಡಿದರು,

ಹಣೆ ಮುಟ್ಟಿದರು, ಕಾಲು ತಣ್ಣಗಾಗಿದೆಯೋ ನೋಡಿದರು. ಮೂಗಿನಬಳಿ ಕೈ ಇಟ್ಟು ನೋಡಿದರು, ಪ್ರಾಣ ಇದೆಯೋ ಇಲ್ಲವೋ ಅನುಮಾನಬರುವಷ್ಟು ಮೆಲ್ಲಗೆ ನಡೆಯುತ್ತಿದ್ದ ಉಸಿರನ್ನು ಖಚಿತಪಡಿಸಿಕೊಳ್ಳಲು ತಮ್ಮ ಪಂಚೆಯಿಂದ ಒಂದು ಎಳೆ ದಾರವನ್ನು ಕಿತ್ತು ಮೂಗಿನಬಳಿ ಹಿಡಿದಾಗ ಅದರ ಚಲನೆಯಿಂದ ಇನ್ನೂ ಪ್ರಾಣವಿದೆ ಎಂದು ತೋರಿತು. ಆಸ್ಪತ್ರೆಗೆ ಸೇರಿಸಬೇಕೋ ಚಕ್ರಪಾಣಿ ಡಾಕ್ಟರನ್ನು ಕರೆಸಬೇಕೋ ಎಂದು ಯೋಚಿದರು. ಸಿಂಗಣ್ಣಿಯೂ ಮನೆಯಲ್ಲಿಲ್ಲ, ಹೆಂಗಸರನ್ನು ಮಾತ್ರ ಬಿಟ್ಟು ಹೋಗುವುದು ಇಂಥ ಸಂದರ್ಭದಲ್ಲಿ ಉಚಿತವಲ್ಲವೆಂದು ಹಾಗೇ ಮಂಕಾಗಿ ಕುಳಿತರು. ಜಾನಕಮ್ಮ ಗಟ್ಟಿಯಾಗಿ ರೋಧಿಸತೊಡಗಿದರು. 'ಅಯ್ಯೋ, ಮಾವಿನಕೆರೆ ರಂಗ ನನ್ನ ಮಾಂಗಲ್ಯ ಕಾಪಾಡೋ'ಎಂದು ಕೂಗಿಕೊಂಡರು. ಸುಬ್ರಾಯರು ತಮ್ಮ ಮೊಮ್ಮಗ ಶೇಷಾದ್ರಿಯನ್ನು ಕರೆದು ತಕ್ಷಣವೇ ಸೈಕಲ್ಲಿನಲ್ಲಿ ಹೋಗಿ ಚಕ್ರಪಾಣಿ ಡಾಕ್ಟರನ್ನು ಕರೆತರಲು ಓಡಿಸಿದರು. 'ಶಾಮಯ್ಯಂಗಾರ್ರಿಗೆ ತುಂಬಾ ಸೀರಿಯಸ್ಸಾಗಿದೆಯಂತೆ, ಕೂಡಲೆ ಬರಬೇಕಂತೆ ಅಂತ ಹೇಳು, ಹೇಗಿದ್ದರೆ ಹಾಗೇ ಬರಲಿ, ಒಂದುವೇಳೆ ಚಕ್ರಪಾಣಿಗಳು ಶಾಪಿನಲ್ಲಿಲ್ಲದಿದ್ದರೆ ಹಾಗೇ ಮಾರ್ಕೆಟ್ಟಿನ ಕಡೆ ಹೋಗಿ ಜಗನ್ನಾಥ ಡಾಕ್ಟರನ್ನ ಕರಿ 'ಎನ್ನುತ್ತಿರುವಾಗಲೇ ಶೇಷ ಕತ್ತರಿಕಾಲಿನಲ್ಲಿ ಸೈಕಲ್ ತುಳಿಯುತ್ತ ಒಂದೇಸಮ ಓಡಿಸಿದ. ಚಕ್ರಪಾಣಿಗಳ ಶಾಪು ಶಾಮಯ್ಯಂಗಾರ್ರ ಮನೆಯಿಂದ ಹೆಚ್ಚೇನೂ ದೂರವಿಲ್ಲ. ಸಾರ್ವಜನಿಕ ಪುಸ್ತಕಭಂಡಾರದ ಮಗ್ಗುಲಿನಲ್ಲೆ ಅವರ ಚಿಕಿತ್ಸಾಲಯ. ಇಂಥ ತುರ್ತಿನ ಸಮಯಗಳಲ್ಲಿ ಚಕ್ರಪಾಣಿಗಳೇ ಆಗಲೀ, ಅಥವಾ ಇದೀಗ ಹೊಸದಾಗಿ ಪ್ರಾಕ್ಟೀಸ್ ಶುರುಮಾಡಿದ್ದ ಜಗನ್ನಾಥರೇ ಆಗಲಿ ವಾಯುವೇಗದಲ್ಲಿ ಬಂದು ಚಿಕಿತ್ಸೆ ನಡೆಸುವಂಥ ಧನ್ವಂತರಿಗಳು. ಸುಮಾರು ಇಪ್ಪತ್ತು ನಿಮಿಷವೂ ಆಗಿರಲಿಲ್ಲ, ಚಕ್ರಪಾಣಿಗಳು ತಮ್ಮ ಚರ್ಮದ ಕೈಚೀಲದೊಂದಿಗೆ ಬಂದಿಳಿದರು. ಶೆಲ್ಲಮ್ಮ ಮಾವನವರಿಗೆ ಗಾಳಿ ಹಾಕುತ್ತಿದ್ದರು. ಮೂಲೆಯಲ್ಲಿ ಜಾನಕಮ್ಮ ಅಳುತ್ತ ಸೆರಗಿನ ತುದಿಯಿಂದ ಕಣ್ಣು ಮೂಗು ಒರಸಿಕೊಳ್ಳುತ್ತ ಕೂತಿದ್ದರು. ಚಕ್ರಪಾಣಿ ಡಾಕ್ಟರನ್ನು ಕಂಡ ಕೂಡಲೆ ಅವರ ರೋಧನ ಹೆಚ್ಚಾಯಿತು ಎಷ್ಟು ಸಮಾಧಾನಮಾಡಿದರೂ ಅಳು ನಿಲ್ಲಿಸಲಿಲ್ಲ. ಚಕ್ರಪಾಣಿಗಳು ನಾಡಿಹಿಡಿದು ಪರೀಕ್ಷಿಸಿದರು, ನಾಡಿ ತುಂಬ ಕ್ಷೀಣವಾಗಿತ್ತು. ಸ್ಟೆಥೊ ಇಟ್ಟು ಪರೀಕ್ಷಿಸಿ, ತಮ್ಮ ಚೀಲದಿಂದ ಒಂದು ಟ್ಯೂಬನ್ನು ಹೊರತೆಗೆದು ಎಲ್ಲರನ್ನು ಹೊರಗೆ ಕಳುಹಿಸಿದರು. ಸುಬ್ರಾಯರು ಮಾತ್ರ ಒಳಗೇ ಇದ್ದು ಇಂಜೆಕ್ಷನ್ ಕೊಡುವಾಗ ಶಾಮಯ್ಯಂಗಾರ್ರ ದೇಹವನ್ನು ಪಕ್ಕಕ್ಕೆ ತಿರುಗಿಸಲು ಸಹಾಯ ಮಾಡಿದರು. ಇಂಜೆಕ್ಷನ್ ಕೊಟ್ಟಾದಮೇಲೆ 'ನನ್ನ ಶಾಪಿಗೆ ಹುಡುಗನನ್ನು ಕಳುಹಿಸಿ, ಒಂದಿಷ್ಟು ಮಾತ್ರೆ ಬರೆದು ಕೊಡುತ್ತೇನೆ' ಎನ್ನುತ್ತ ಹೊರಟ ಚಕ್ರಪಾಣಿ ಡಾಕ್ಟರು ಸೈಕಲ್ ಹತ್ತುವ ಮುನ್ನ ಸುಬ್ರಾಯರು ಹಿಂದಿನ ರಾತ್ರಿ ನಡೆದ ರಂಪದ ಬಗ್ಗೆ ತಮಗೆ ತಿಳಿದಷ್ಟನ್ನು ಪಿಸುಮಾತಿನಲ್ಲಿ ಹೇಳಿದರು. ಅಪ್ಪನನ್ನು ಹುಡುಕಿಕೊಂಡು

ಹೊರಟ ಕೇಶವ, ಹಾಗೂ ಹೀಗೂ ಸಂತೆಮಾಳವನ್ನೆಲ್ಲ ಶೋಧಿಸಿ ಕೊನೆಗೂ ಅವನಿರುವ ಸ್ಥಳವನ್ನು ಕಂಡುಹಿಡಿದ. ಸಿಂಗಣ್ಣಿ ಕೇಶವನಿಂದ ಸುದ್ದಿ ತಿಳಿಯುತ್ತಲೇ ಪಕ್ಕದ ಮಳಿಗೆಯವನಾದ ಅಂಬುಗದ ಶೀನಪ್ಪನಿಗೆ ತಮ್ಮ ಇನ್ನೂ ಮಾರಾಟವಾಗದ ಬಾಳೆಗೊನೆಗಳನ್ನು ಒಪ್ಪಿಸಿ, ತಮ್ಮ ಎತ್ತಿನ ಗಾಡಿಯಮೇಲೆ ನಿಗಾ ಇಡಬೇಕೆಂದು ಕೇಳಿಕೊಂಡ.

ನಾನ್ ನೋಡ್ಕೊಂತೀನ್ ಓಗಿ ಸಾಮಿ, ನಿಮ್ ತಂದ್ಯಾರನ್ ನೋಡ್ಕೊಳಿ ಎಂದು ಶೀನಪ್ಪ ಮಾತುಕೊಟ್ಟಮೇಲೆ, ಮಗನನ್ನು ಕ್ಯಾರಿಯರ್ ಮೇಲೆ ಹತ್ತಿಸಿ, ಡಬ್ಬಲ್ ರೈಡ್ ಮಾಡಿಕೊಂಡು ಮನೆ ತಲಪುವ ವೇಳೆಗೆ ಮಟಮಟ ಮಧ್ಯಾಹ್ನವಾಗಿತ್ತು. ಮನೆ ಸೇರಿದ ಕೂಡಲೆ ತಂದೆಯವರ ಕೊಠಡಿಗೆ ಹೋಗಿ ಅಲ್ಲೇ ಕುಳಿತಿದ್ದ ಸುಬ್ರಾಯರಿಂದ ಪರಿಸ್ಥಿತಿಯ ಬಗ್ಗೆ ಎಲ್ಲ ವಿವರಗಳನ್ನು ಪಡೆದ. ಅವನಿಗೆ ಏನು ಮಾಡಲೂ ತೋಚಲಿಲ್ಲ. ಮೈಯ್ಯೆಲ್ಲ ಧೂಳಾಗಿತ್ತು, ನಾಲ್ಕು ಚೊಂಬು ನೀರು ಹುಯ್ದುಕೊಂಡು ಸ್ನಾನದ ಶಾಸ್ತ್ರ ಮುಗಿಸಿ ಬಂದವನೇ ಗಟ್ಟಿಯಾಗಿ ಒಂದು ಸಾರಿ ಅತ್ತ. ಸುಬ್ರಾಯ್ರೇ, ಅಪ್ಪ ದಿನಾ ವಿಷ್ಣುಸಹಸ್ರನಾಮ ಪಠಿಸದೇ ಒಂದು ತೊಟ್ಟು ನೀರೂ ಕುಡಿಯುತ್ತಿರಲಿಲ್ಲ, ನಾವೇ ಓದೋದ? ಎಂದು ಕೇಳಿ ಉತ್ತರಕ್ಕೆ ಕಾಯದೇ ಪಠಿಸಲು ಶುರುಮಾಡಿದ. ಸುಬ್ರಾಯರೂ ದನಿಗೂಡಿಸಿದರು. ಸಂಜೆ ಸೂರ್ಯಾಸ್ತವಾದರೂ ಪರಿಸ್ಥಿತಿ ಸುಧಾರಿಸಲಿಲ್ಲ. ಈ ಗಲಾಟೆಯಲ್ಲಿ ನರಸಿಂಹ ಮನೆಯಲ್ಲಿಲ್ಲ ಎಂಬ ವಿಷಯ ಯಾರಿಗೂ ಹೊಳದೇ ಇರಲಿಲ್ಲ.

೭

ಬುಧವಾರ ಬೆಳಗಿನ ಎಂಟು ಘಂಟೆಗೆ ಬೇಲೂರು ಬಿಡುವ ಮೊದಲ ಬಸ್ಸು ಹಿಡಿದು ನರಸಿಂಹ ಸುಮಾರು ಒಂಬತ್ತೂವರೆಯ ಹೊತ್ತಿಗೆ ಹಾಸನ ತಲುಪಿದ. ಬಸ್ಸಿನಿಂದಿಳಿದು, ಮನೆಯಕಡೆ ಹೆಜ್ಜೆ ಹಾಕುವಾಗ, ಬೇಲೂರಿನಲ್ಲಿ ಖಂಡೇರಾಯರನ್ನಾದರೂ ಕಂಡಿದ್ದರೆ ಏನಾದರೂ ಕೆಲಸಗಿಲಸ ಕೊಡಿಸುತ್ತಿದ್ದರೋ ಏನೋ, ಈಗ ಅಪ್ಪ, ಅಮ್ಮ, ಅಜ್ಜ ಅಜ್ಜಿ, ಕೇಶವ ಮತ್ತು ಅಲಮೇಲು ಅವರಿಗೆಲ್ಲ ಹೇಗೆ ಮುಖ ತೋರಿಸಲಿ ? ಅವರೊಂದಿಗೆ ಹೇಗೆ ಮಾತಾಡಲಿ ಎಂದು ಕಸಿವಿಸಿಗೊಂಡ. ಮಹಾರಾಜಾ ಪಾರ್ಕಿನ ಮೂಲಕ ನಡೆದು ಎಡಕ್ಕೆ ತಿರುಗಿ ಎಕ್ಸ್‌ಟೆನ್ಷನ್ ಮಿಡಲ್ ಸ್ಕೂಲಿನ ಹಿಂಭಾಗದ ಮೋಟುಗೋಡೆಯಲ್ಲಿ ತೂರಿಕೊಂಡುಹೋಗುವುದಕ್ಕೆಂದೇ ಹುಡುಗರು ಕೊರೆದಿದ್ದ ದೊಡ್ಡ ತೂತಿನ ಮೂಲಕ ನುಸುಳಿ ಮನೆಯ ಹತ್ತಿರ ಬಂದ. ಮನೆಯ ಮುಂಭಾಗದ ಬೇಲಿಯ ಬಳಿ ಹತ್ತಾರು ಜನರು ಕಂಡುಬಂದದ್ದರಿಂದ ಒಳಗೆ ಹೋಗಲೋ ಬೇಡವೋ ಎಂದು ಹಿಂದೆಗೆಯುತ್ತಿರುವಷ್ಟರಲ್ಲೆ, ಸುಬ್ರಾಯರು ಕಾಣಿಸಿದರು. ಅವರು ಎಲ್ಲಯ್ಯಾ ಹೋಗಿದ್ದೆ, ಇಡೀ ರಾತ್ರಿ ಮನೆಗೆ ಹಿಂದಿರುಗದೇ? ಎಂದಿದ್ದು ಇವನ ಕಿವಿಗೆ ಕೇಳಿಸಿತೋ ಇಲ್ಲವೋ, ಮನೆಯ ಮುಂದಿನ ಮೆಟ್ಟಲಿಗೆ ಹತ್ತು ಹೆಜ್ಜೆ ಮುಂದೆ ಸಣ್ಣದಾಗಿ ಬೆಂಕಿ ಹೊಗೆಯಾಡುತ್ತಿದ್ದುದು

ಸ್ಪಷ್ಟವಾಗಿ ಗೋಚರವಾಯಿತು. ಒಂದಿಬ್ಬರು ಮಧ್ಯವಯಸ್ಕರು -- ಅಂಬುಗದ ಜನ ಎಂದು ನೋಡಿದರೆ ಹೇಳಿಬಿಡಬಹುದು-- ಬೊಂಬುಗಳನ್ನು ಕತ್ತರಿಸಿ ಏಣಿಯಂತೆ ಜೋಡಿಸಿ ಹಗ್ಗದಿಂದ ಬಿಗಿಯುತ್ತಿದ್ದರು. ನರಸಿಂಹನ ಜಂಘಾಬಲವೆಲ್ಲ ಉಡುಗಿದಂತಾಗಿ ಬಾಯೆಲ್ಲ ಒಣಗಿತು.

'ಏನಯ್ಯ, ನಿಮ್ಮಜ್ಜನ ಕೊನೇ ದರ್ಶನ ಕಳ್ಕೊಂಡ್‌ಬಿಟ್ಯಲ್ಲ, ನಿನ್ನೆ ಬೆಳಗ್ಗೆ ಹೋದ ಜ್ಞಾನ ರಾತ್ರಿಯಾದ್ರೂ ಬರ್ಲೇ ಇಲ್ಲ. ಮಧ್ಯರಾತ್ರಿ ಒಂದ್ಸಾರಿ ಕಣ್‌ಬಿಟ್ಟು ಸುತ್ಲೂ ನೋಡಿದರು, ನಿನ್‌ಗಾಗೇ ಹುಡುಕ್ತಿದ್ವೇನೋ ಆ ಕಣ್ಣುಗಳು. ಅವರು ನಚ್ಚಿಮ್ಮ, ನಚ್ಚಿಮ್ಮ, ಅನ್‌ತಿದ್‌ಹಂಗೇ ನಿಮ್ಮಪ್ಪ ನಿಮ್ಮಜ್ಜನ್ ಬಾಯ್ಗೆ ಗಂಗಾಜಲ ಸುರಿದ ಕಣಯ್ಯ. ನೀನು ಹೀಗೆ ಮಾಡಬಾರದಿತ್ತು. ಸರಿ, ಸರಿ, ನಡಿ ಒಳಕ್ಕೆ 'ಎನ್ನುತ್ತ ಮೌನದಲ್ಲಿ ಕಣ್ಣೀರು ಸುರಿಸುತ್ತಿದ್ದ ನರಸಿಂಹನನ್ನು ಒಳಕ್ಕೆ ಕರೆ ತಂದರು. ಅಜ್ಜನ ಕಾಲಬಳಿ ಅಜ್ಜಿ, ತಲೆಯಬಳಿ ಒಂದುಕಡೆ ಅಪ್ಪ ಇನ್ನೊಂದುಕಡೆ ಅಮ್ಮ ಕುಳಿತಿದ್ದರು. ನರಸಿಂಹ ಒಳಗೆ ಹೆಜ್ಜೆ ಇಟ್ಟದ್ದೇ ತಡ ಶೆಲ್ಲಮ್ಮ ಮತ್ತು ಜಾನಕಮ್ಮ ಗಟ್ಟಿಯಾಗಿ ಅಳುತ್ತ ತಮ್ಮ ಸೆರಗನ್ನು ಬಾಯಿಗೆ ತುರಿಕಿಕೊಂಡು ನಿಶ್ಯಬ್ದರಾಗಲು ಯತ್ನಿಸಿ ವಿಫಲರಾದರು. ಹಿಂದಿನರಾತ್ರಿ ಅಪ್ಪ ಸಾಯುತ್ತಿರುವಾಗ ಶೆಲ್ಲಮ್ಮ 'ನರಸಿಂಹ ಎಲ್ಲಿದ್ದಾನೋ?' ಎಂದು ಪೇಚಾಡಿಕೊಂಡಾಗ ಸಿಂಗಣ್ಣಿ ಕೆಂಡಾಮಂಡಲವಾಗಿದ್ದ. 'ಅವನ ಸುದ್ದಿ ಎತ್ತೀರಿ ಜೋಕೆ, ಅವನಿಂದಲೇ ಇಷ್ಟೆಲ್ಲ ಅನಾಹುತವಾಗಿದ್ದು' ಎಂದು ಹೂಂಕರಿಸಿದ್ದ, ಅಂಥ ದುಃಖದ ಸಮಯದಲ್ಲಿ ಸಹ. ನರಸಿಂಹ ಅಜ್ಜನ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು ಅತ್ತುಬಿಟ್ಟ. ಸುಬ್ರಾಯರು ಅವನನ್ನು ಎಷ್ಟು ಸಮಾಧಾನಪಡಿಸಿದರೂ ಅವನ ಅಳು ನಿಲ್ಲಲಿಲ್ಲ. ಸಿಂಗಣ್ಣಿಗೆ ಮಗನ ಮೇಲೆ ಬಂದಿದ್ದ ಕೋಪವೆಲ್ಲ ಮರುಕಕ್ಕೆ ತಿರುಗಿ ಅವನ ಕಣ್ಣಿನಲ್ಲೂ ಕೋಡಿ ಹರಿಯಿತು. ಅಪ್ಪ-ಮಗ ಅಳುತ್ತಿರುವುದನ್ನು ಕಂಡು ಅತ್ತೆ-ಸೊಸೆಯರು ಒಬ್ಬರನ್ನೊಬ್ಬರು ತಬ್ಬಿಕೊಂಡು ಬಿಕ್ಕಿದರು. ಅವರನ್ನೆಲ್ಲ ಸಮಾಧಾನಪಡಿಸುವುದು ದುಸ್ಸಾಧ್ಯವೆನಿಸಿ ಸುಬ್ರಾಯರು ಎದ್ದು ಹೊರಗೆ ಬಂದರು, ಅತ್ತು ಸ್ವಲ್ಪ ಹಗುರಮಾಡಿಕೊಳ್ಳಲಿ ಎಂದು. ಹೊರಗಡೆ ಮುಂಬಾಗಿಲಿನ ಹತ್ತಿರ ಅಲಮೇಲು ಕೇಶವ ಇಬ್ಬರೂ ಅಳುತ್ತಿದ್ದರು. ಕೇವಲ ಇಪ್ಪತ್ನಾಲ್ಕು ಘಂಟೆಗಳಲ್ಲಿ ಸದಾ ಲವಲವಿಕೆಯಿಂದ ಕೂಡಿದ್ದ, ತುಂಬಿದ ಸಂಸಾರ ಇದ್ದಕ್ಕಿದ್ದಂತೆ ಅಮಿತ ದುಃಖದ ಕಡಲಿನಲ್ಲಿ ಮುಳುಗಿಬಿಟ್ಟಿತ್ತು.

ಅಂಬುಗದ ಮೂರುಜನ ಹತ್ತಿರದ ಬಂಧುಗಳು ಮತ್ತು ಬಾಲ್ಯಸ್ನೇಹಿತ ಸುಬ್ರಾಯರು ನಾಲ್ಕನೆಯವರಾಗಿ, ಶಾಮಯ್ಯಂಗಾರ‍್ರ ದೇಹಕ್ಕೆ ಹೆಗಲುಕೊಟ್ಟು ಹೊರಡುವಾಗ ನರಸಿಂಹನನ್ನು ರುದ್ರಭೂಮಿಗೆ ಬರಕೂಡದೆಂದು ಮನೆಯಲ್ಲೇ ನಿಲ್ಲಿಸಿ, ಸಿಂಗಣ್ಣಿ ಅಗ್ನಿಯನ್ನು ಕೈಯ್ಯಲ್ಲಿ ಹಿಡಿದು ಮುಂದೆ ನಡೆದ. ರುದ್ರಭೂಮಿಗೆ ಹೋಗದಿದ್ದರೂ, ಸಂಪ್ರದಾಯದಂತೆ, ನರಸಿಂಹ ಮತ್ತು ಕೇಶವರು ದೀವಟಿಗೆ ಹಿಡಿದು ಹಿಂಬಾಲಿಸಿ, ಕೊಂಚ ದೂರ ನಡೆದು, ಅಜ್ಜನ

ಅಂತಿಮಯಾತ್ರೆಯಲ್ಲಿ ಭಾಗವಹಿಸಿ ಹಿಂದಿರುಗಿದರು. ಅಲಮೇಲುವನ್ನು ಶೆಲ್ಲಮ್ಮ ಸಮಾಧಾನ ಪಡಿಸುತ್ತಿದ್ದರು. ನರಸಿಂಹ ಅಜ್ಜಿಯನ್ನು ಅಪ್ಪಿಕೊಂಡು ಮಗುವಿನಂತೆ ಬಿಕ್ಕಳಿಸಿದ. ಅಜ್ಜಿ ಮೊಮ್ಮಗ ಅದೆಷ್ಟು ಹೊತ್ತು ಹಾಗೇ ಕುಳಿತಿದ್ದರೋ, ಆ ನಿಶ್ಶಬ್ದದಲ್ಲಿ ಪರಸ್ಪರ ಒಬ್ಬರನ್ನೊಬ್ಬರು ಸಮಾಧಾನಮಾಡುತ್ತ ಇಡೀ ದಿನವನ್ನು ಕಳೆದರು.

೮

ನರಸಿಂಹ ಕಣ್ಣುಬಿಟ್ಟಾಗ ತಾನು ಅಂಬುಗದ ಮನೆಯಲ್ಲಿದ್ದೇನೆಂಬ ಭ್ರಮೆಯಿಂದಲೇ ಸುತ್ತ ನೋಡಿದ. ಆದರೆ ಅವನು ಇದ್ದದ್ದು ಬಾಸ್ಟನ್ ನಗರದ ಪ್ರಮುಖ ಆಸ್ಪತ್ರೆಗಳಲ್ಲಿ ಒಂದಾದ ಮ್ಯಾಸ್ ಜನರಲ್ ಆಸ್ಪತ್ರೆಯ ತುರ್ತು ಚಿಕಿತ್ಸಾ ವಿಭಾಗದ ಚೇತರಿಸಿಕೊಳ್ಳುವ ಕೋಣೆ ಎಂಬುದು ಅವನಿಗೆ ಗೊತ್ತಿರಲಿಲ್ಲ. ಎದುರಿಗೆ ಮಸುಕುಮಸುಕಾಗಿ ಕಂಡ ಹೆಣ್ಣು, ಮಯೂರಿಯೇ ಇರಬೇಕು ಎನ್ನಿಸಿದ್ದು ಕೇವಲ ಕಲ್ಪನೆಯೋ, ನಿಜವಾಗಿ ಅವಳು ತನ್ನನ್ನು ಈ ಸ್ಥಿತಿಯಲ್ಲಿ ನೋಡಲು ಬಂದಿದ್ದಳೋ, ಅದು ಕೂಡ ಅವನ ಗ್ರಹಿಕೆಗೆ ಸಿಲುಕದ ವಿಚಾರವಾಗಿತ್ತು. ತನ್ನ ಕೈಯ್ಯನ್ನು ಮೃದುವಾಗಿ, ಆದರೆ ಭದ್ರವಾಗಿ ಹಿಡಿದು ನೇವರಿಸುತ್ತಿದ್ದವನು ತನ್ನ ಮಗ ವಿಕ್ರಮನೇ ಇರಬೇಕೆಂದು ನಂಬಿ ಮತ್ತೆ ಕಣ್ಮುಚ್ಚಿದ. ಹೃದಯ ಕ್ಷೀಣವಾಗಿ ಬಡಿಯುವ ಅನುಭವ ಆಗುತ್ತಿದ್ದರೂ ತನ್ನ ಮೂಗು–ಬಾಯಿ ಮಣಿಕಟ್ಟು ಮುಂತಾದ ಅಂಗಗಳಿಗೆ ಲಗತ್ತಿಸಿದ್ದ ಪ್ಲಾಸ್ಟಿಕ್ ಕೊಳವೆಗಳು ತನ್ನ ರಕ್ತ ಪರಿಚಲನೆ ಮತ್ತು ಉಸಿರಾಟವನ್ನು ನಿಯಂತ್ರಿಸುತ್ತಿರುವ ಅರಿವೂ ಅವನಿಗೆ ಆಗಿರಬೇಕು. ತಾನು ಹೇಳಬೇಕಾದ ಕತೆಯನ್ನು ಮಗನಿಗೆ ಹೇಳಿದ್ದಾಯಿತೆಂಬ ಭ್ರಮೆಯೂ ಸತ್ಯಕ್ಕಿಂತ ಭಿನ್ನವೆನಿಸದ ಸ್ಥಿತಿಯನ್ನು ಅವನು ತಲುಪಿದ್ದ.

•

# ಶಬ್ದ

– ಶರತ್ ಜಿ. ನೊಣಬೂರು

ಇದು ಮೂರನೆಯ ಬಾರಿ ಅಮೆರಿಕಕ್ಕೆ ಬರ್ತಾ ಇರೋದು. ಈ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳಲ್ಲಿ ಕೆಲಸ ಮಾಡೋರಿಗೆ ಇದೊಂದು ಗೋಳು. ಎಲ್ಲೂ ಶಾಶ್ವತವಾಗಿ ಟೆಂಟ್ ಹಾಕ್ಕೊಂಡು ಕೂರಕ್ಕಾಗಲ್ಲ. ಪ್ರಾಜೆಕ್ಟ್ ಇದ್ದ ಕಡೆ ಹೋಗ್ಬೇಕು, ಪ್ರಾಜೆಕ್ಟ್ ಮುಗ್ಯೋವರೆಗೆ ಆ ಜಾಗ, ಆ ದೇಶ ನಮ್ದು ಅಂದ್ಕೋಬೇಕು. ಪ್ರಾಜೆಕ್ಟ್ ಮುಗಿತೀದ್ದಂಗೆ ಮತ್ತೆ ಸಾಮಾನು, ಸರಂಜಾಮು ಪ್ಯಾಕ್ ಮಾಡೋದು, ಮರಳಿ ನಮ್ಮೂರಿಗೆ ಶಿಫ್ಟ್ ಮಾಡೋದು, ವಿಮಾನ ಹತ್ತೋದು. ಕೆಲವೊಮ್ಮೆ ಬೇಜಾರು ಅನ್ಸೊತ್ತೆ, ಮತ್ತೆ ಕೆಲವೊಮ್ಮೆ ಹೊಸ ಹೊಸ ಜಾಗ ನೋಡೊ, ಅಲ್ಲಿನ ಸಂಸ್ಕೃತಿ, ಬದುಕಿನ ರೀತಿ ನೋಡೋ ಅವಕಾಶ ಸಿಗುತ್ತಲ್ಲ ಅನ್ನೋ ಸಂತೋಷಾನೂ ಇರುತ್ತೆ, ಜೊತೆಗೆ ಡಾಲರ್, ಪೌಂಡ್, ಯುರೋಗಳ ಆಕರ್ಷಣೆ ಬೇರೆ.

ಈ ಸಾರಿ ನಾನು ಬಂದಿದ್ದು ನ್ಯೂಜೆರ್ಸಿ ಹತ್ತಿರ ಒಂದು ಊರಿಗೆ. ಊರು ತೀರಾ ಹಳ್ಳಿನೂ ಅಲ್ಲ, ತೀರ ಪೇಟೆನೂ ಅಲ್ಲ ಆ ತರದ್ದು. ಬಂದ ಮೊದಲ ಎರಡು ವಾರ ಹೊಟೇಲ್‌ನಲ್ಲಿ ಉಳ್ಕೊಂಡು, ಮನೆ ಹುಡ್ಕೋಕೆ ಶುರು ಮಾಡಿದೆ. ನಮ್ಮಂತಹ ವರ್ಷ, ೬ ತಿಂಗಳಿಗೆ ಬರೋರು ಬಿಡಿ ಮನೆಗಳಿಗಿಂತ ಅಪಾರ್ಟ್‌ಮೆಂಟ್‌ಗಳನ್ನ ಇಷ್ಟ ಪಡೋದೆ ಹೆಚ್ಚು. ಸ್ನೋ ಬಿದ್ದಾಗ ಕಾರ್ ನಿಲ್ಸೋ ಜಾಗ ಕ್ಲೀನ್ ಮಾಡೋ ತಾಪತ್ರಯ ಆಗ್ಲಿ, ಹುಲ್ಲು ಬೆಳ್ದಾಗ ಅದನ್ನು ಸವರಿ, ಕತ್ತರ್ಸಿ ಸಮ ಮಾಡೋದಾಗ್ಲಿ, ಟಾಯ್ಲೆಟ್‌ನಲ್ಲಿ ನಲ್ಲಿ ಹಾಳಾದ್ರೆ ರಿಪೇರಿ ಮಾಡೋ ತಲೆ ನೋವಾಗ್ಲಿ ಇರೊಲ್ಲ. ಅಪಾರ್ಟ್‌ಮೆಂಟ್ ಮ್ಯಾನೇಜರ್ ಇದೆಲ್ಲಾ ನೋಡ್ಕೊಳ್ಳೊದ್ರಿಂದ ಬಾಡ್ಗೆ ತೊಗೊಂಡವ್ರು ಮನೆ ಒಳಗೆ ಕ್ಲೀನ್ ಆಗಿ ಇಟ್ಕೊಂಡ್ರೆ ಸಾಕು. ಮೊದ್ಲೇ ಹೇಳಿದ ಹಾಗೆ, ನಾನು ಪ್ರಾಜೆಕ್ಟ್ ಮಾಡಬೇಕಾದ ಕಂಪನಿ ಇದ್ದಿದ್ದು ಸಣ್ಣ ಊರಾಗಿದ್ರಿಂದ ಜಾಸ್ತಿ ಅಪಾರ್ಟ್‌ಮೆಂಟ್‌ಗಳು ಬಾಡಿಗೆಗೆ ಇರಲಿಲ್ಲ. ಜೊತೆಗೆ ಈ ಊರು ನ್ಯೂಯಾರ್ಕ್‌ಗೆ ಬೇರೆ ಹತ್ರ ಇದ್ದಿದ್ರಿಂದ ಅಲ್ಲಿಗೆ ಕೆಲಸ ಮಾಡೋಕೆ ಹೋಗೊವ್ರೂ, ಸ್ವಲ್ಪ ಕಡಿಮೆ ಬಾಡಿಗೆಗೆ ಸಿಗುತ್ವೆ ಅನ್ನೋ ಕಾರಣಕ್ಕೆ ಇಲ್ಲೇ ಸುತ್ತ ಮುತ್ತಲು ಬಾಡಿಗೆಗೆ ಮನೆಗಳನ್ನು ಹಿಡಿದಿದ್ರು. ನಂಗೆ ಪ್ರಾಜೆಕ್ಟ್ ಕೆಲಸ ಜಾಸ್ತಿ ಇರುವ ಸಂಭವ ಇದ್ದಿದ್ದರಿಂದ,

ಕೆಲಸ ಮಾಡುವ ಸ್ಥಳದ ಸಮೀಪವೇ ಯಾವುದಾದ್ರೂ ಮನೆ ಬಾಡಿಗೆಗೆ ಸಿಕ್ಕರೆ ಅನೂಕೂಲ ಅನ್ನೋ ಯೊಚನೆ.

ಸ್ಥಳೀಯ ದಿನ ಪತ್ರಿಕೆಗಳಲ್ಲಿ, ಮನೆ ಬಾಡಿಗೆ ವಿವರ ಕೋಡೋ ಅಂತರ್ಜಾಲ ತಾಣಗಳಲ್ಲಿ ನೋಡ್ಕೊಂಡು ಸುಮಾರು ೩-೪ ಅಪಾರ್ಟ್‌ಮೆಂಟ್‌ಗಳನ್ನು ಗುರುತು ಹಾಕಿಕೊಂಡೆ. ಶನಿವಾರ, ಭಾನುವಾರದ ರಜಾ ದಿನಗಳಲ್ಲಿ ಈ ಎಲ್ಲ ಮನೆಗಳನ್ನೂ ನೋಡಿ ಒಂದನ್ನು ಆಯ್ದುಕೊಳ್ಳೋ ಯೊಚನೆ ಮಾಡಿದೆ. ಹೋಗಿ ನೋಡಿದಾಗ, ಮೊದಲೆರಡು ಮನೆಗಳು, ತುಂಬಾ ಹಳೆಯದವೆನಿಸಿದವು. ಉಳಿದೆರಡರಲ್ಲಿ, ಒಂದರ ಬಾಡಿಗೆ ನನ್ನ ಬಡ್ಜೆಟ್‌ಗೆ ಹೊಂದಿಕೆಯಾಗಲಿಲ್ಲ. ಹಾಗಾಗಿ ಉಳಿದ ಒಂದು ಮನೆಯನ್ನೇ ೬ ತಿಂಗಳ ಬಾಡಿಗೆಯ ಒಪ್ಪಂದಕ್ಕೆ ಬಾಡಿಗೆಗೆ ತಗೊಂಡೆ. ನನಗೋ, ಮೊದಲನೆ ಮಹಡಿಯ ಮನೆ ಬಾಡಿಗೆಗೆ ಸಿಕ್ಕಿದ್ರೆ ಒಳ್ಳೆಯದು ಅನ್ನೋ ಅಭಿಪ್ರಾಯವಿತ್ತು. ಈ ಹಿಂದಿನ ಭೇಟಿಗಳಲ್ಲಿ, ನೆಲದಂತಿಸ್ತಿನ ಮನೆಗಳಲ್ಲಿದ್ದ ಅನುಭವದಿಂದ ನಾನು ಮೊದಲನೆ ಮಹಡಿಯ ಮನೆಯನ್ನೇ ಹುಡುಕುತ್ತಿದ್ದುದ್ದು. ಇಲ್ಲಿನ ಮರದಲ್ಲೇ ಕಟ್ಟಿದ್ದ ಮನೆಗಳಲ್ಲಿ, ಕೆಳಗಿನ ಮನೆಯಲ್ಲಿರುವವರಿಗೆ, ಮೇಲಿನ ಮನೆಯುವರು ನಡೆದಾಡಿದರೆ, ಕುರ್ಚಿ, ಮಂಚ, ಮೇಜುಗಳನ್ನು ಸರಿದಾಡಿಸಿದಾರೆ, ಸಣ್ಣದಾಗಿ ಭೂಕಂಪವಾದ ಅನುಭವವಾಗುತ್ತೆ. ಅದೂ ಮೇಲಿನ ಮನೆಗಳಲ್ಲಿ, ಚಿಕ್ಕ ಮಕ್ಕಳಿದ್ದರಂತೂ ಇನ್ನೂ ಅವಸ್ಥೆ. ಆದರೆ, ನನ್ನ ದುರಾದೃಷ್ಟವಶಾತ್, ನಾನು ನೋಡಿದ ಅಪಾರ್ಟ್‌ಮೆಂಟ್‌ಗಳಲ್ಲೆಲ್ಲೂ ಮೊದಲ ಮಹಡಿಯ ಮನೆ ಖಾಲಿಯಿರಲಿಲ್ಲ. ಜೊತೆಗೆ, ಒಂದು ವರ್ಷದ ಬಾಡಿಗೆ ಒಪ್ಪಂದ ಮಾಡಿಕೊಂಡರೆ ಮಾತ್ರ ಮೇಲಿನ ಮಹಡಿ ಬಾಡಿಗೆ ಸಿಗುವುದೆಂಬ ಷರತ್ತು ಬೇರೆ. ಹಾಗಾಗಿ ವಿಧಿಯಿಲ್ಲದೇ, ನೆಲದಂತಸ್ತಿನ ಮನೆಯನ್ನೇ ಬಾಡಿಗೆಗೆ ಹಿಡಿಯಬೇಕಾಯಿತು.

ನಾನು ಈ ಊರಿಗೆ ಬಂದಿದ್ದು ಕ್ರಿಸ್ಮಸ್ ರಜೆಯ ವೇಳೆಯಾದ್ದರಿಂದ, ಅಪಾರ್ಟ್‌ಮೆಂಟ್ ಮನೆಗಳು ಗಲಾಟೆಯಿಲ್ಲದೆ ತಣ್ಣಗಿದ್ದವು. ಹೊರಗೆ ಚಳಿ, ಜೊತೆಗೆ ಸಂಜೆ ೫ ಗಂಟೆಗೆಲ್ಲ ಕತ್ತಲಾಗುವ ಡಿಸೆಂಬರ್ ವೇಳೆ ಬೇರೆ. ಅಂತೂ ಆ ವಾರದಲ್ಲಿ ಮನೆಗೆ ಬೇಕಾಗುವ ಸಾಮಾನೆಲ್ಲ ಖರೀದೀಸಿ, ಎಲ್ಲವನ್ನೂ ಒಪ್ಪ ಓರಣ ಮಾಡುವಷ್ಟರಲ್ಲಿ ಕ್ರಿಸ್ಮಸ್ ರಜೆ ಕಳೆದು ಆಫ್ಹೀಸ್ ಕೆಲಸ ಆರಂಭವಾಯಿತು. ಕ್ರಮೇಣ, ಭಾರತ ಬಿಟ್ಟು ಬಂದ ಬೇಸರ ಮರೆಯಾಗಿ, ಹೊಸ ಜೀವನಕ್ಕೆ, ವೇಳಾಪಟ್ಟಿಗೆ, ಕೆಲಸಕ್ಕೆ ಹೊಂದಿಕೊಳ್ಳಲಾರಂಭಿಸಿದೆ.

ಅವತ್ತು ಸಂಜೆ ಆಫ್ಹೀಸ್‌ನಿಂದ ಮನೆಗೆ ಬಂದು, ಅಡುಗೆ ಮುಗಿಸಿ, ಎಂದಿನಂತೆ ನಮ್ಮೂರಿನ ಸುದ್ಧಿ ತಿಳ್ಯೋಕೆ ಅಂತರ್ಜಾಲದಲ್ಲಿ, ದಿನ ಪತ್ರಿಕೆಗಳನ್ನು ಓದುತ್ತಾ ಇದ್ದೆ. ಆಗ ಮೇಲುಗಡೆ, ಏನೊ 'ದಪ್' ಎಂದು ಬಿದ್ದ ಸದ್ದು ಕೇಳಿತು. ಸ್ವಲ್ಪ ಸಮಯದ ನಂತರ, ಸೈಕಲ್ ಓಡಿಸಿದ ಸದ್ದಾಯಿತು. ನನಗೆ ಥಟ್ಟನೆ, ನನ್ನ ಹಿಂದಿನ ಅಮೆರಿಕಾದ

ವಾಸದ ಅನುಭವ ನೆನಪಿಗೆ ಬಂತು. ನಾನು ಯಾವ ಕಾರಣಕ್ಕೆ ನೆಲದಂತಸ್ತು ಬೇಡವೆಂದುಕೊಂಡೆನೋ, ಆ ಕಾರಣ ನಿಜವಾಗಲಿದೆ ಎನ್ನಿಸಿತು. ಸ್ವಲ್ಪ ಹೊತ್ತಿನ ನಂತರ, ಮತ್ತೆ ಸೈಕಲ್ ಓಡಿಸಿದ ಸದ್ದು. ಬಹುಶಃ ಚಿಕ್ಕ ಮಕ್ಕಳಿರುವ ಮನೆಯಿರಬೇಕು, ಹಗಲು-ಸಂಜೆ ಈ ಗಲಾಟೆಯಿದ್ದರೂ ರಾತ್ರಿ ನಿದ್ದೆ ಮಾಡುವಾಗ ತೊಂದರೆಯಾಗುವುದಿಲ್ಲವೆಂಬ ಯೋಚನೆಯಿಂದ ಮನಸ್ಸಿಗೆ ಸಮಾಧಾನ ತಂದುಕೊಂಡೆ.

ರಾತ್ರಿ ಸಿ.ಎನ್.ಎನ್. ಸುದ್ದಿ, ಇನ್ಯಾವುದೋ ಚಾನೆಲ್‌ನಲ್ಲಿ ಚಲನಚಿತ್ರ, ಹಾಗೆ, ಹೀಗೆ ಎಂದುಕೊಂಡು ಮಲಗುವಾಗ ಹನ್ನೊಂದೂವರೆ. ಬೆಳಿಗ್ಗೆ ಎಂಟು ಗಂಟೆಗೆ ಆಫೀಸ್‌ಗೆ ಹೋಗಬೇಕಿದ್ದರಿಂದ ಬೇಗ ನಿದ್ದೆ ಬಂದರೆ ಅನುಕೂಲವಾಗುತ್ತೆಂದೆಣಿಸಿ ಮಲಗಿದೆ. ನಾಳೆಯಿಂದಾದರೂ ಸ್ವಲ್ಪ ಬೇಗ ಮಲಗುವ ಪ್ರಯತ್ನ ಮಾಡಬೇಕೆಂದು ಯೋಚಿಸಿದೆ. ಇನ್ನೇನು ನಿದ್ದೆ ಹತ್ತಲಿದೆಯೆಂದುಕೊಳ್ಳುವಷ್ಟರಲ್ಲಿ, ಮತ್ತೆ ಮೇಲಿನಿಂದ ಸೈಕಲ್ ಓಡಿಸಿದ ಶಬ್ದ. ಹಾಗೆಯೇ ಬಾತ್ರೂಮ್‌ನಲ್ಲಿ ನೀರು ಫ್ಲಶ್ ಮಾಡಿ, ಮತ್ತೆ ಸೈಕಲ್ ಓಡಿಸಿದ ಸದ್ದು. ನನಗೋ ಒಂದು ಕಡೆಯಿಂದ ನಿದ್ದೆ ಹಾಳಾಯಿತೆಂಬ ಕೋಪ, ಇನ್ನೊಂದು ಕಡೆಯಿಂದ ಏನೂ ಮಾಡಲಾಗದ ಅಸಹಾಯಕತೆಗಾಗಿ ಬೇಸರ. ನಿದ್ದೆಯ ವಿಷಯದಲ್ಲಿ ತುಂಬ ಸೂಕ್ಷ್ಮ ಪ್ರವೃತ್ತಿಯವನಾದ ನನಗೆ ಮತ್ತೆ ನಿದ್ದೆ ಹತ್ತುವಾಗ ಗಂಟೆ ಎರಡಾಗಿತ್ತು.

ಮರುದಿನ ಆಫೀಸ್‌ನಲ್ಲಿ, ನನ್ನ ಅಮೆರಿಕ ಸಹೋದ್ಯೋಗಿಯೊಡನೆ ಹೀಗೆ ಕುಶಲೋಪರಿ ಮಾತನಾಡುತ್ತಿದ್ದೆ. ನಿದ್ದೆಯಿಲ್ಲದೆ ಬಾಡಿದ್ದ ನನ್ನ ಮುಖ, ಕೆಂಪಾದ ಕಣ್ಣುಗಳನ್ನು ನೋಡಿದ ಅವನು, ಆರೋಗ್ಯ ಸರಿಯಿಲ್ಲವೆಂದು ಭಾವಿಸಿದ. ಆಗ ನಾನು ನನಗಾದ ಅನುಭವವನ್ನು ಹೇಳಿಕೊಂಡೆ. ಅದಕ್ಕವನು ಮೇಲಿನ ಮನೆಯವನ ಅಂಚೆ ಪೆಟ್ಟಿಗೆಯಲ್ಲಿ ನನಗಾಗುತ್ತಿರುವ ತೊಂದರೆಯನ್ನು ವಿವರಿಸಿ ಒಂದು ಪತ್ರವನ್ನು ಬರೆದಿಡುವಂತೆಯೂ, ಸಾಮಾನ್ಯವಾಗಿ ಆ ತರಹದ ಸೂಚನೆಗಳಿಗೆ ಇಲ್ಲಿನ ಜನ ಸ್ಪಂದಿಸುತ್ತಾರೆಂದು ತಿಳಿಸಿದ. ಸರಿ, ನಾನು ಒಂದು ಪತ್ರವನ್ನು ಆಫೀಸ್‌ನಲ್ಲೇ ಟೈಪ್ ಮಾಡಿ, ಮನೆಗೆ ಹಿಂತಿರುಗುವಾಗ, ನನ್ನ ಮನೆಯ ಅಂಚೆ ಪೆಟ್ಟಿಗೆಯ ಪಕ್ಕದಲ್ಲೇ ಇದ್ದ, ಆ ಮನೆಯ ಅಂಚೆ ಪೆಟ್ಟಿಗೆಗೆ ಹಾಕಿದೆ. ಆಗ ನನಗಾಶ್ಚರ್ಯವಾಗಿದ್ದು, ತುಂಬಿ ತುಳುಕುತ್ತಿದ್ದ ಆ ಅಂಚೆ ಪೆಟ್ಟಿಗೆ. ಬಹುಶಃ ಆ ಮನೆಯವರು, ವಾರದಿಂದ ಅಂಚೆ ಪೆಟ್ಟಿಗೆಯನ್ನೂ ಗಮನಿಸಿಲ್ಲ ಅಂದುಕೊಂಡೆ.

ಅವತ್ತೂ ಹಿಂದಿನ ದಿನದ ಘಟನೆಯೇ ಪುನರಾವರ್ತನೆಯಾಯಿತು. ಧಪ್ಪೆಂದು ಏನೋ ಬಿದ್ದ ಸದ್ದು, ಸೈಕಲ್ ಓಡಿಸುವ ಸದ್ದು, ಜೊತೆಗೆ ರಾತ್ರಿ ಗಂಟೆ ಹನ್ನೆರಡಾದರೂ ಜೋರಾಗಿ ಸದ್ದು ಮಾಡುತ್ತಿದ್ದ ಟಿ.ವಿ, ಇತ್ಯಾದಿ, ಇತ್ಯಾದಿ. ರಾತ್ರಿ ಮಲಗುವಾಗ, ಕಿವಿಗೆ ಭದ್ರವಾಗಿ ಹತ್ತಿ ತುಂಬಿಕೊಂಡು ಮಲಗಿದ್ದರಿಂದ ನಿದ್ದೆಗೆ ಹೆಚ್ಚು ತೊಂದರೆಯಾಗಲಿಲ್ಲ. ಮಾರನೆಯ ದಿನದಿಂದ, ಆಫೀಸ್‌ಗೆ ಹೋಗುವ ವೇಳೆ, ಹಿಂದಿರುಗುವ ವೇಳೆ ಹಾಗೆ ಆ ಮನೆಯ ಕಡೆ

ಗಮನಿಸಲು ತೊಡಗಿದೆ, ಯಾರದರೂ ಕಂಡರೆ ಹೋಗಿ ನನಗಾಗುತ್ತಿರುವ ತೊಂದರೆಯನ್ನು ಹೇಳಿಕೊಳ್ಳಲು. ಚಳಿಗಾಲ, ಜೊತೆಗೆ ೪:೩೦-೫:೦೦ ಗಂಟೆಗೆಲ್ಲ ಕತ್ತಲಾಗುತ್ತಿದ್ದರಿಂದ ಯಾರೂ ಕಾಣಿಸುತ್ತಲೇ ಇರಲಿಲ್ಲ. ಹಗಲಿಡೀ ಆಫೀಸ್‌ನಲ್ಲಿ ಇರುತ್ತಿದ್ದರಿಂದ ಆ ತೊಂದರೆ ಇರಲಿಲ್ಲವಾದರೂ, ಸಂಜೆಯಿಂದ ಮರುದಿನ ಆಫೀಸ್ ಹೋಗುವವರೆಗೆ, ಮೇಲಿನ ಸದ್ದಿನ ಉಪಟಳ ಅನುಭವಿಸಬೇಕಾದ ನನ್ನ ಪರಿಸ್ಥಿತಿ ಹಾಗೆಯೇ ಮುಂದುವರೆದ್ದಿತ್ತು. ಬಹುಶಃ ನನ್ನ ಪತ್ರವನ್ನು ಉಪೇಕ್ಷಿಸಿದ್ದಾರೆಂದುಕೊಂಡು ಆಫೀಸ್‌ನಲ್ಲಿ ನನ್ನ ಸಹೋದ್ಯೋಗಿಯೊಂದಿಗೆ ಮತ್ತೆ ಈ ವಿಷಯವನ್ನು ಪ್ರಸ್ತಾಪಿಸಿದೆ. ಅವನು ಮುಖತಃ ಹೋಗಿ ಮಾತನಾಡುವಂತೆಯೂ, ಆಗಲೂ ಆ ಮನೆಯವರು ನನ್ನ ತೊಂದರೆಗೆ ಗಮನಕೊಡದಿದ್ದರೆ, ಅಪಾರ್ಟ್‌ಮೆಂಟ್ ಮ್ಯಾನೇಜರ್‌ಗೆ ದೂರು ಕೊಡುವಂತೆ ಸೂಚಿಸಿದ.

ಸಾಮಾನ್ಯವಾಗಿ ವಾರಾಂತ್ಯದಲ್ಲಿ ಇಲ್ಲಿನ ಜನ ಹೊರಗಡೆ ಕಾಲ ಕಳೆಯುವುದು ಹೆಚ್ಚು. ಹಾಗಾಗಿ ನಾನು ಸೋಮವಾರ ಆಫೀಸ್‌ನಿಂದ ಹಿಂತಿರುಗಿದ ನಂತರ, ಮೇಲಿನ ಮನೆಗೆ ಹೋಗಿ ನನ್ನ ಗೋಳನ್ನು ಹೇಳಿಕೊಳ್ಳಲು ನಿರ್ಧರಿಸಿದೆ. ಸೊಮವಾರ ಯಾವುದೋ ತುರ್ತು ಮೀಟಿಂಗ್‌ನಿಂದಾಗಿ ಮನೆಗೆ ಹಿಂತಿರುಗುವಾಗ ೭ ಗಂಟೆಯಾಗಿತ್ತು. ಆದರೂ ಮೊದಲೇ ನಿರ್ಧರಿಸಿದಂತೆ, ಸೀದಾ ಮೇಲಿನ ಮನೆಗೆ ಹೋದೆ. ಬಾಗಿಲು ತಟ್ಟಿದಾಗ ಯಾರೂ ಪ್ರತಿಕ್ರಿಯಸಲಿಲ್ಲ. ಜೋರಾಗೊಮ್ಮೆ ಬಾಗಿಲು ತಟ್ಟಿ, ಎದುರಿಗಿದ್ದ ಬೆಲ್ ಒತ್ತಿದೆ. ಆಗ ಗಂಡಸಿನೊಂದು ಸ್ವರ ಕೇಳಿಬಂತು. 'ಕಮ್ ಇನ್.... ಒಳಗೆ ಬಾ, ಬಾಗಿಲು ತೆಗೆದೇ ಇದೆ'. ನಾನು ಬಾಗಿಲನ್ನು ಮೆತ್ತಗೆ ದೂಡಿದಾಗ ಒಳಗಡೆಯಿಂದ ಭದ್ರಪಡಿಸದೇ ಇದ್ದ ಬಾಗಿಲು ನಿಧಾನವಾಗಿ ತೆರೆದುಕೊಂಡಿತ್ತು. ಒಳಗೆ ಹಾಲ್‌ನ ಮೂಲೆಯೊಂದರಲ್ಲಿ ವಿದ್ಯುತ್ ದೀಪವೊಂದು ಮಂದವಾಗಿ ಉರಿಯುತ್ತಿತ್ತು. ಟಿ.ವಿ.ಯಲ್ಲಿ ಯಾವೂದೋ ಚಾನೆಲ್‌ನಲ್ಲಿ ಇರಾಕ್ ಯುದ್ದ ಬೇಕಿತ್ತೇ, ಬೇಡವೇ ಎಂಬ ಬಗ್ಗೆ ಜೋರಾಗಿ ಚರ್ಚೆ ನಡೆಯುತ್ತಿತ್ತು. ನನ್ನ ಕಣ್ಣು ಆ ಬೆಳಕಿಗೆ, ವಾತವರಣಕ್ಕೆ ಇನ್ನು ಹೊಂದಿಕೊಳ್ಳುತ್ತಿರುವಾಗ, ಅಡುಗೆ ಮನೆಯಿಂದ ಮತ್ತೆ ಧ್ವನಿ ಕೇಳಿಸಿತು. ತಾನು ಊಟ ಮಾಡುತಿರುವೆನೆಂದು, ಸ್ವಲ್ಪ ಕಾಯುವಂತೆ ಹೇಳಿತು.

ಆ ಸಮಯದಲ್ಲಿ, ನಾನು ಗಮನಿಸಿದ್ದು ಮೂಲೆಯಲ್ಲಿ ಬಿದ್ದಿದ್ದ ಎರಡು ಊರುಗೋಲುಗಳು. ಅಲ್ಲೇ, ಪಕ್ಕದಲ್ಲಿದ್ದ ಎರಡು ಕೃತಕ ಕಾಲುಗಳು. ನನ್ನ ಗೊಂದಲ, ಅನುಮಾನಗಳು ಮುಂದುವರೆಯುತ್ತಿದ್ದಾಗ, ಅಡುಗೆ ಮನೆಯಿಂದ ನನಗೆ ಚಿರಪರಿಚಿತವಾಗಿದ್ದ, ಸೈಕಲ್ ತಳ್ಳಿದ ಸದ್ದಾಯಿತು. ಗಾಲಿ ಕುರ್ಚಿಯಲ್ಲಿ ಕುಳಿತ್ತಿದ್ದ ಸುಮಾರು ೩೦ ವರ್ಷದ ಯುವಕ ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದ. ಆ ಕಣ್ಣುಗಳಲ್ಲಿ ಒಂದು ಬಗೆಯ ಹತಾಶೆ, ನೋವು, ಅಸಹನೀಯತೆ ತುಂಬಿತ್ತು. ಮುಖದ ಎಡಗಡೆಯ ಭಾಗ ಸುಟ್ಟಂತಾಗಿ ವಿಕಾರವಾಗಿತ್ತು. ನನಗೆ ಪಕ್ಕನೇ ಏನೂ ಮಾತನಾಡಲೂ, ಮಾಡಲು ತೋಚದಂತಾಗಿ,

ಹಿಂತಿರುಗಿ ಬಾಗಿಲತ್ತ ಹೊರಟೆ. ಆಗ ಅವನು ಕೂಗಿದ್ದು ಕೇಳಿಸಿತು. 'ಹೇ, ನನ್ನ ಹೆಸರು ಸ್ಮಿತ್, ಸ್ಮಿತ್ ಮ್ಯಾಕ್ಸ್‌ವೆಲ್. ಬಾ ಮಾತಾಡೋಣ'.

ನನಗೋ, ಮನಸ್ಸಿನಲ್ಲಿ ಉಂಟಾಗಿದ್ದ ಗೊಂದಲ, ಆ ನಸು ಕತ್ತಲಿನ ವಾತವಾರಣ, ನಿರೀಕ್ಷಿಸದೇ ಇದ್ದ ಅವನ ಅಂಗವೈಕಲ್ಯ, ಎಲ್ಲ ಒಂದು ಬಗೆಯ ಭಯವನ್ನುಂಟುಮಾಡಿತ್ತು. ನಾನು ಅವನ ಕೂಗಿಗೆ ಗಮನಕೊಡದೆ ಕೆಳಗಿಳಿಯಲು ಮೆಟ್ಟಿಲುಗಳ ಕಡೆ ಓಡಿದೆ. ಬಾಗಿಲ ಬಳಿ ತನ್ನ ಗಾಲಿ ಕುರ್ಚಿಯನ್ನು ತಳ್ಳಿಕೊಂಡು ಬಂದ ಅವನು ಹೇಳಿದ್ದು ಕೇಳಿಸಿತ್ತು: 'ಕಡೇ ಪಕ್ಷ ನನ್ನ ಅಂಚೆ ಡಬ್ಬದ ಪತ್ರಗಳನ್ನಾದರೂ ತಂದು ಕೊಟ್ಟು ಹೋಗುವಿಯ?' ನಾನು ಸೀದ ಕೆಳಗೆ ನಡೆದು ಅವನ ಅಂಚೆ ಪೆಟ್ಟಿಗೆಯ ಎಲ್ಲ ಪತ್ರಗಳನ್ನೂ ಹೊರ ತೆಗೆದೆ. ಸುಮಾರು ಎಂಟು ದಿನಗಳ ಹಿಂದೆ ನಾನು ತುಂಬಿದ್ದ ಪತ್ರವೂ ಅಲ್ಲಿಯೇ ತಣ್ಣಗೆ ಕುಳಿತ್ತಿತ್ತು. ಆ ಕ್ಷಣದಲ್ಲಿ ನನಗೆ ಮತ್ತೊಂದಿಷ್ಟು ಗೊಂದಲವಾಯಿತು. ಆ ಪತ್ರವನ್ನು ಅವನಿಗೆ ಕೊಡುವುದು ವಿವೇಚನಾರಹಿತ, ಅಮಾನವೀಯ ವರ್ತನೆಯೆಂದು ಒಮ್ಮೆಯೆನಿಸಿದರೆ, ಅವನಿಗೆ ಮಾತುಗಳಲ್ಲಿ ಹೇಳಲಾಗದ ನನಗಾಗುತ್ತಿರುವ ತೊಂದರೆಯನ್ನು ಬರಹದ ಮೂಲಕ ತಿಳಿಸಲು ಇದೇ ಒಳ್ಳೆಯ ಸಮಯವೆಂದು ಇನ್ನೊಮ್ಮೆಯೆನಿಸಿತು. ಎಲ್ಲ ಪತ್ರಗಳನ್ನೂ ಒಟ್ಟಾಗಿಸಿ, ಮೇಲ್ಗಡೆ ನನ್ನ ಪತ್ರವನ್ನೂ ಇರಿಸಿ, ಬಾಗಿಲವರಗೆ ಗಾಲಿ ಕುರ್ಚಿಯನ್ನು ತಳ್ಳಿಕೊಂಡು ಬಂದಿದ್ದ ಅವನ ಕೈ ಗೆ ಅವೆಲ್ಲವನ್ನೂ ತುರುಕಿ ಸೀದ ಕೆಳಗಡೆ ಬಂದೆ. ಅವನ ಮುಖದೆಡೆ ಕಣ್ಣು ಹಾಯಿಸದೇ, ಕಡೇ ಪಕ್ಷ ಒಂದು ಮುಗುಳ್ನಗೆಯನ್ನೂ ಕೊಡದೆ.

ಆ ಘಟನೆಯ ನಂತರದ ಎರಡು ದಿನಗಳಲ್ಲೂ ಮೇಲೆ ಆಗುತ್ತಿದ್ದ ಶಬ್ದಗಳಲ್ಲಿ ಅಂತಹ ಬದಲಾವಣೆಯೇನೂ ಕಾಣಲಿಲ್ಲ. ಹಾಗಾಗಿ ನಾನು ಅಪಾರ್ಟ್‌ಮೆಂಟ್ ಮ್ಯಾನೇಜರ್ ಬಳಿ ನನ್ನ ಸಂಕಟವನ್ನು ನಿವೇದಿಸಿಕೊಂಡೆ. ಸ್ಮಿತ್ ಆ ಮನೆಯಲ್ಲೇ ಹುಟ್ಟಿ ಬೆಳೆದಿದ್ದು, ಒಂದು ವರ್ಷದ ಹಿಂದೆ ಇರಾಕ್ ಯುದ್ದಕ್ಕೆ ಹೋಗಿದ್ದಾಗ ಬಾಂಬ್ ಸ್ಫೋಟದಲ್ಲಿ ತನ್ನೆರಡು ಕಾಲುಗಳನ್ನು ಕಳೆದುಕೊಂಡನೆಂದು ಮ್ಯಾನೇಜರ್ ಹೇಳಿದಾಗ ನನಗೆ ಸ್ಮಿತ್‌ನೊಡನೆ ನನ್ನ ವರ್ತನೆ ನೆನೆದು ಕಸಿವಿಸಿಯಾಯಿತು. ಅವನಿಗಾದ ಅಪಘಾತ ಕೇಳಿ ಅವನ ತಂದೆ ಹೃದಯಾಘಾತದಲ್ಲಿ ಸತ್ತಿದ್ದೂ, ಅವನ ಸ್ಟೆಪ್ ಮದರ್, ಬೇರೊಬ್ಬನನ್ನು ಮದುವೆಯಾಗಿದ್ದೂ, ಅವನ ತೀರ ಹತ್ತಿರದ ಗೆಳತಿ ಬೇರೊಬ್ಬನ ಜೊತೆ ಓಡಾಡುತ್ತಿರುವ ವಿವರಗಳು ತಿಳಿದು ಮನಸ್ಸು ಇನ್ನೂ ಮುದುಡಿತು. ಅವನ ಗೆಳೆಯನೊಬ್ಬ ವಾರಕ್ಕೊಮ್ಮೆ ಬಂದು ಸ್ಮಿತ್‌ನನ್ನು ಹೊರಗಡೆ ಕರೆದೊಯ್ಯುವನೆಂದು, ಅಪಾರ್ಟ್‌ಮೆಂಟ್‌ನ ಲಿಫ್ಟ್ ವ್ಯವಸ್ಥೆಗೆ ಸ್ಮಿತ್ ಇನ್ನೂ ಒಗ್ಗಿಕೊಂಡಿಲ್ಲವೆಂದೂ ಮ್ಯಾನೇಜರ್ ಹೇಳಿದ. ಇನ್ನೆರಡು ತಿಂಗಳಲ್ಲಿ ಬೇರೊಂದು ಮನೆ ಖಾಲಿಯಾಗಲಿದ್ದು, ಆ ಮನೆಯನ್ನು ನನಗೆ ಬಾಡಿಗೆ ಕೊಡುವ ವ್ಯವಸ್ಥೆ ಮಾಡುವೆನೆಂದು ಮ್ಯಾನೇಜರ್ ಹೇಳಿದಾಗ ನನಗೆ ಸ್ವಲ್ಪ ನಿರಾಳವೆನಿಸಿತು.

ಮತ್ತೆರಡು ದಿನ ಕಳೆದು ಶನಿವಾರ. ಆ ಶನಿವಾರದಂದು ನಾನು ನನ್ನ ಗೆಳೆಯನೊಬ್ಬನ ಮನೆಗೆ ಹೋಗಿ ಸಂಜೆ ಮನೆಗೆ ಹಿಂತಿರುಗಿದಾಗ ಮನೆಯ ಬಳಿ ಪೋಲಿಸ್ ಕಾರು, ಆಂಬುಲೆನ್ಸ್, ಜನಗಳ ಗುಂಪು ಕಂಡು ನನಗೆ ಗಾಬರಿಯಾಯಿತು. ನನ್ನ ಅಪಾರ್ಟ್‌ಮೆಂಟ್ ಬ್ಲಾಕ್‌ನಲ್ಲಿ ಇಷ್ಟೊಂದು ಜನರಿದ್ದಾರೆಂದು ತಿಳಿದದ್ದೇ ನನಗವತ್ತು. ಕಾರ್ ಪಾರ್ಕ್ ಮಾಡಿ, ಜನಗಳ ಗುಂಪಿನ ಸಮೀಪ ಹೋದಾಗ ಬಿಳಿ ಬಟ್ಟೆ ಮುಚ್ಚಿದ್ದ ದೇಹವೊಂದನ್ನು ಅಂಬುಲೆನ್ಸ್ ಒಳಗೆ ಮಲಗಿಸುತ್ತಿದ್ದರು. ಮುಚ್ಚಿದ ಬಟ್ಟೆಯೊಳಗೆ ಕಾಲುಗಳಿರಬೇಕಾದ ಜಾಗ ಖಾಲಿಯಿತ್ತು. ಪಕ್ಕದಲ್ಯಾರೋ ಮಾತನಾಡಿಕೊಳ್ಳುತ್ತಿದ್ದಿದ್ದು ಕೇಳಿಸಿತು. ಸುಮಾರು ೫ ಗಂಟೆಯ ವೇಳೆಗೆ ಗುಂಡಿನ ಶಬ್ದ ಕೇಳಿ ಜನ ಹೊರ ಬಂದಾಗ, ಸ್ಮಿತ್ ತನ್ನ ಮನೆಯ ಬಾಲ್ಕನಿಯಲ್ಲಿ ಗಾಲಿ ಚಕ್ರಕ್ಕೆ ಒರಗಿ ಕುಳಿತಿದ್ದನೆಂದು, ಎಡ ಕಿವಿಯ ಪಕ್ಕದಿಂದ ಧಾರಾಕಾರವಾಗಿ ರಕ್ತ ಸುರಿಯುತ್ತಿತ್ತೆಂದು. ಅವನು ಬರೆದಿಟ್ಟಿದ್ದ ಪತ್ರದಲ್ಲಿ ತನ್ನಿಂದ ಬೇರೆಯವರಿಗಾಗುತ್ತಿದ್ದ ತೊಂದರೆಗಳಿಗೆ ಕ್ಷಮೆ ಕೇಳಿದ್ದನೆಂದು ಹಾಗೂ ತಾನು ಯಾರಿಗೂ ಭಾರವಾಗಿರಲು ಇಚ್ಛಿಸದೇ ಈ ಕೆಲಸ ಮಾಡುತ್ತಿದೇನೆಂದು ಬರೆದಿಟ್ಟಿದ್ದನಂತೆ.

ಅವತ್ತು ರಾತ್ರಿ ಮಲಗಿದಾಗ ಮತ್ತೆ ನನಗೆ ನಿದ್ದೆ ಬರಲ್ಲಿಲ್ಲ. ಯಾವ ಕ್ಷಣದಲ್ಲಾದರೂ ಮತ್ತೆ ಸೈಕಲ್ ಶಬ್ದ ಕೇಳೀತು ಎಂದು ಮನಸ್ಸು ನಿರೀಕ್ಷಿಸುತ್ತಿತ್ತು. ಸ್ಮಿತ್‌ನ ಸಾವಿಗೆ ನಾನೂ ಒಂದು ಕಾರಣ ಎನ್ನುವ ಯೋಚನೆ ಪದೇ ಪದೇ ತಲೆಯಲ್ಲಿ ಬರುತ್ತಿತ್ತು. ಇಷ್ಟು ದಿವಸ ತೊಂದರೆ ಕೊಡುತ್ತಿದ್ದ ಶಬ್ದವಿಲ್ಲದೇ ಉಂಟಾದ ಮೌನ ಮನಸ್ಸಿನ್ನಲ್ಲಿ ಉಂಟು ಮಾಡುತ್ತಿದ್ದ ತಳಮಳದ ಶಬ್ದ ಅಸಹನೀಯವಾಗಿತ್ತು.

ಮರುದಿನ ಬಾಡಿಗೆಯ ಚೆಕ್ ಕೊಡಲು ಹೋದಾಗ ಅಪಾರ್ಟ್‌ಮೆಂಟ್ ಮ್ಯಾನೇಜರ್ ಸಿಕ್ಕಿದ. 'ಸೋ, ಈಗ ನೀನು ಮನೆ ಬದಲಾಯಿಸುವ ಪ್ರಮೇಯವಿಲ್ಲವಲ್ಲ' ಎಂದು ಮುಗುಳ್ನಕ್ಕ. ಆ ನಗೆಯಲ್ಲೇನೋ ವ್ಯಂಗ್ಯವಿದ್ದಂತೆ ನನಗನಿಸಿ ಏನೂ ಮಾತನಾಡದೆ ಹಿಂತಿರುಗಿದೆ.

•

# ಶಾಂತಿ ಮತ್ತು ಮುಖಗಳು

– ಪ್ರಕಾಶ್‌ರಾವ್ ಪಯ್ಯಾರು

ಹೆಸರು: ಶಾಂತಿ.
ವಿಳಾಸ: ಸಂಶೋಧನಾ ವಿದ್ಯಾರ್ಥಿನಿ, ಕೊಠಡಿ ಸಂಖ್ಯೆ–೩೮,
ವಿಶ್ವವಿದ್ಯಾಲಯ ಹೆಂಗಳೆಯರ ವಸತಿ ಗೃಹ, ಆನಂದನಗರ.

ದೂರವಾಣಿ ಸಂಖ್ಯೆ, ಡ್ರೈವಿಂಗ್ ಲೈಸೆನ್ಸು ನಂಬರ್, ರಕ್ತದ ಗ್ರೂಪ್ ಇನ್ನೂ ಏನೇನೊ ವಿವರಗಳನ್ನು ತುಂಬಬಹುದಾದ ಆ ಡೈರಿಯ ಮೊದಲ ಪುಟದಲ್ಲಿ ಕೆಲವು ವಿವರಗಳನ್ನು ತುಂಬಿದಳು. ಎರಡು ದಿನಗಳ ಹಿಂದೆ ವಿಭಾಗಕ್ಕೆ ಬಂದ ಬ್ಯಾಂಕಿನ ಮ್ಯಾನೇಜರ್ ಕಾಮತ್ ಕೊಟ್ಟ ಹೊಸ ವರ್ಷದ ಬ್ಯಾಂಕಿನ ಪ್ರಚಾರಕ್ಕಾಗಿ ಮುದ್ರಿಸಿದ ಡೈರಿ. ಹಲವು ದಿನಗಳಿಂದ ಬರೆಯಬೇಕೆಂದು ಯೋಚಿಸುತ್ತಿದ್ದ ದಿನಚರಿ ಬರೆಯಲು ಕೈಗೆತ್ತಿಕೊಂಡವಳು ಅರಿವಿಲ್ಲದೆ ಮೊದಲ ಪುಟವನ್ನು ತುಂಬಲು ತೊಡಗಿದ್ದಳು. ಅಭ್ಯಾಸದ ಮೇಜಿನ ಮೇಲೆ ವಿಮರ್ಶೆ ಬರೆಯಲೆಂದು ಕನಿಷ್ಠ ಮೂವತ್ತು ಸಲವಾದರೂ ಓದಿರುವ ಭೈರಪ್ಪನವರ 'ಮಂದ್ರ' ಕಾದಂಬರಿಯ ಪ್ರತಿ ಇನ್ನೂ ಪುಸ್ತಕಗಳ ಎಡೆಯಿಂದ ಇಣುಕಿ ನೋಡುತ್ತಿತ್ತು. ಮಧುಮಿತ, ಮನೋಹರಿದಾಸ್, ಭುಪಾಲಿ ಸುತ್ತ ಬಂದು ನಿಂತಂತೆ, ಕೆಲವೊಮ್ಮೆ ತಾನು ಅಧ್ಯಯನದ ಕುರ್ಚಿಯಲ್ಲಿ ಕುಳಿತಾಗ ಅವರು ಬಂದು ತನ್ನ ಮಲಗುವ ಮಂಚದ ಅಂಚಿನಲ್ಲಿ ಸಾಲಾಗಿ ಕುಳಿತಂತೆ ಅನುಭವ. ಮನೋಹರಿದಾಸ್ ಮುದಿ ಗಂಡನಿಂದ ಮತ್ತೆ ಬಸುರಿಯಾಗದಂತೆ ಹೆಣ್ತನಕ್ಕೆ ಶಾಶ್ವತ ಮುಕ್ತಿ(?) ದೊರಕಿಸಿಕೊಂಡದ್ದು, ಮಾವಿನ ಮರಗಳು ಚಿಗುರೊಡೆದು ಹೂ ಬಿಟ್ಟಾಗ ಗಂಡನನ್ನು ಬಿಟ್ಟು ಬಂದ ಮಧುಮಿತಳ ಮನ ಕಲಕಿದ್ದು ಮತ್ತೆ ಮತ್ತೆ ಮನದ ಮುಂದೆ ನಿಲ್ಲುತ್ತಿತ್ತು.

ಶಾಂತಿ ಹಳ್ಳಿಯ ಕಾಲೇಜೊಂದರಲ್ಲಿ ಪದವಿ ಪಡೆದ ಸೂಕ್ಷ್ಮ ಸ್ವಭಾವದ ಪ್ರತಿಭಾವಂತ ಹುಡುಗಿ. ಬಡತನದಲ್ಲಿ ಹುಟ್ಟಿ ಬೆಳೆದ ಅವಳು ಅಗ್ಗದ ಬಟ್ಟೆಬರೆತೊಡುತ್ತಿದ್ದರೂ ಅವಳ ಸೌಂದರ್ಯ ಹಳೆ ಚಿಂದಿಬಟ್ಟೆಯಲ್ಲಿ ಸುತ್ತಿಟ್ಟ ಅಪ್ಪಟ ಚಿನ್ನದಂತೆ ಮಿನುಗುವಂತದ್ದು.

ವಿದ್ಯಾರ್ಥಿ ವೇತನದಿಂದ ಎಂ.ಎ. ಓದುತ್ತಿದ್ದಾಗ ಆನಂದನಗರದ ಕನ್ನಡ ವಿಭಾಗ ಪ್ರಮುಖ ಡಾ.ಬಾಲಕೃಷ್ಣ ಬಾಳಿಗ ಶಾಂತಿ ಓದುತ್ತಿರುವ ವಿ.ವಿ.ಗೆ ಎಂ.ಫಿಲ್ ವಿದ್ಯಾರ್ಥಿಗಳಿಗಾಗಿ ವಿಶೇಷ ಉಪನ್ಯಾಸ ನೀಡಲು ಬಂದಿದ್ದ. ಬಾಳಿಗ ಅಷ್ಟೇನು ಪ್ರತಿಭಾವಂತ ವಿಮರ್ಶಕ, ಸಾಹಿತಿಯಲ್ಲದಿದ್ದರೂ ಕರ್ನಾಟಕದ ಹಲವು ವಿಶ್ವವಿದ್ಯಾಲಯಗಳಿಂದ ಕೆಲವು ವಿಭಾಗ ಪ್ರಮುಖರನ್ನು ಆನಂದನಗರಕ್ಕೆ ಕರೆದು ಕಾರ್ಯಕ್ರಮ ಆಯೋಜಿಸುತ್ತಿದ್ದುದರಿಂದ ಅವರು ಇವನನ್ನು ತಮ್ಮ ವಿ.ವಿ.ಗಳಿಗೆ ಕರೆದು ಕಾರ್ಯಕ್ರಮ ನಡೆಸುತ್ತಿದ್ದರು. ವ್ಯವಹಾರ ಚತುರನಾದ ಬಾಳಿಗ ತನ್ನ ಕೈ ಕೆಳಗಿರುವ ಸಂಶೋಧನಾ ವಿದ್ಯಾರ್ಥಿಗಳನ್ನು ಈ ಉಪನ್ಯಾಸ ತಯಾರಿಗೆ ಚೆನ್ನಾಗಿ ಬಳಸಿಕೊಳ್ಳುತ್ತಿದ್ದ. ಸಾಮನ್ಯವಾಗಿ ಎಲ್ಲ ಕಡೆ ನಡೆಯುವುದು ಹೀಗೆ; ಒಂದು ಅಂತಸ್ತಿಗೆ ಮುಟ್ಟಿದ ಮೇಲೆ ಅಷ್ಟು ಅಧ್ಯಯನ ನಡೆಸಲು ಯಾರಿಗೆ ಸಮಯ ಇರುತ್ತದೆ, ಯಾರಿಂದಲೋ ಬರೆಸಿ ಕೆಳಗೆ ತನ್ನ ಹೆಸರು ಹಾಕಿಸಿಕೊಂಡರಾಯಿತು ಎಂದು ಅವನ ನಂಬಿಕೆ. ಆತ ಸಾಹಿತ್ಯ ವಿಮರ್ಶೆಗಳಲ್ಲಿ ಹಿಂದಿರಲು ಕಾರಣವೆಂದರೆ ತನ್ನ ಪಿಹೆಚ್ ಡಿ. ಪದವಿಗಾಗಿ ಯಾವುದೋ ಒಂದು ಜಾನಪದ ಅಧ್ಯಯನವನ್ನು ನಡೆಸಿದ್ದ. ಪದವಿ ದೊರೆತ ನಂತರ ಸಾಹಿತ್ಯ ವಿಮರ್ಶೆ ಇತ್ಯಾದಿ ಓದುವುದನ್ನೇ ಬಿಟ್ಟುಬಿಟ್ಟಿದ್ದ. (ರಸಿಕತನ ಮೈಗೂಡಿಸಿಕೊಂಡಿದ್ದಾನೆ ಎಂಬ ಸುದ್ದಿ ಅವನಿಗೆ ಗೊತ್ತಿಲ್ಲದಂತೆ ಹಬ್ಬಿಕೊಂಡಿತ್ತು)

ಬಾಳಿಗ ಆ ನಗರದಲ್ಲಿ ಉಳಿದುಕೊಂಡ ದಿವಸ ರಾತ್ರಿ ಕಾರ್ನಾಡರ ಹಯವದನ ನಾಟಕ ಪ್ರದರ್ಶನವಿತ್ತು. ನಿರ್ದೇಶನ ಪ್ರೊ. ತ್ಯಾಗನಹಳ್ಳಿ ಅವರದ್ದು, ಬಾಳಿಗನ ಖಾಸ ದೋಸ್ತು. ಪ್ರೊ. ತ್ಯಾಗನಹಳ್ಳಿ ಒಂದು ನಾಟಕವನ್ನೂ ಪೂರ್ತಿ ನಿಂತು ಈತನಕ ನಿರ್ದೇಶಿಸಿದವನಲ್ಲ. ಪ್ರತಿಭಾವಂತ ಹುಡುಗರಿಗೆ ಮಾತ್ರ ನಾಟಕದ ಪಾತ್ರ ಹಂಚಿ ಯಾರಾದರೂ ಒಬ್ಬ ಪ್ರತಿಭಾವಂತನಿಗೆ ನಿರ್ದೇಶನದ ಜವಾಬ್ದಾರಿ ವಹಿಸಿಕೊಡುತ್ತಿದ್ದ. ನಾಟಕಕ್ಕೆ ತಪ್ಪದೆ ಬಂದು, ವೇದಿಕೆಯ ಮೇಲೆ ಯಾರಾದರೂ ಗಣ್ಯರಿಂದ ನಾಟಕದ ನಿರ್ದೇಶಕನೆಂದು ಹೂಗುಚ್ಛ ಪಡೆದುಕೊಂಡು, ಕಲಾವಿದರನ್ನು ಸಭೆಗೆ ಪರಿಚಯಿಸಿ, ನಿಜವಾದ ನಿರ್ದೇಶಕನನ್ನು ಪರಿಕರ ವಿನ್ಯಾಸಕ ಅಥವ ಇನ್ನೇನಾದರೂ ಜವಾಬ್ದಾರಿ ವಹಿಸಿಕೊಂಡವ ಎಂದು ಪರಿಚಯಿಸುತ್ತಿದ್ದ. ಸಭಿಕರು ಪ್ರೊ. ತ್ಯಾಗನಹಳ್ಳಿಯೇ ನಿರ್ದೇಶಕನೆಂದು ನಂಬಿಕೊಂಡು ಹೊಗಳುತ್ತಿದ್ದರು. ತ್ಯಾಗನಹಳ್ಳಿ ತಾನು ಮಾಡದೆ ಇದ್ದ ಕೆಲಸಕ್ಕಾಗಿ ನಾಟಕ ಅಕಾಡೆಮಿಯೂ ಸೇರಿದಂತೆ ಹಲವಾರು ಸಂಘ-ಸಂಸ್ಥೆಗಳ ಪ್ರಶಸ್ತಿ ಪುರಸ್ಕಾರ ಪಡೆದುಕೊಂಡಿದ್ದ. ಇವನ ವಾದವೂ ಡಾ. ಬಾಳಿಗನ ಹಾಗೆ. ಆತನಿಗೆ ಇಂದಿನ ನಾಟಕದ ಕೊನೆಗೆ ಹೂಗುಚ್ಛ ಕೊಟ್ಟು ಗೌರವಿಸುವ ಭಾರ ಆನಂದನಗರ ವಿ.ವಿ.ಯ ಡಾ.ಬಾಳಿಗನ ಮೇಲೆ ಬಂದಿದುದರಿಂದ ಆತ ಮುಂದಿನ ಸಾಲಿನಲ್ಲಿ ಕುಳಿತು ನಾಟಕ ನೋಡುತ್ತಿದ್ದ. ಪದ್ಮಿನಿಯ ಪಾತ್ರವಹಿಸಿದ ಶಾಂತಿಯ ಅಭಿನಯಕ್ಕೆ ದಿಙ್ಮೂಢನಾದ. ಎಂಥ ಆಕರ್ಷಕ ಮೈಕಟ್ಟು, ಪ್ರೇಕ್ಷಕರ ಅಂತರಾಳದಲ್ಲಿ ಹೊಕ್ಕು ಚಲಿಸಬಲ್ಲ ವಿದ್ಯುತ್

ಇವಳ ಚಲನೆ, ದೇವದತ್ತ, ಕಪಿಲರ ಪಾತ್ರಗಳನ್ನು ಅಗಣನೀಯಗೊಳಿಸಿದ ಅಪ್ರತಿಮ ನಟನಾ ಚಾತುರ್ಯ. ದೇಹಸುಖಕ್ಕಾಗಿ ಒರಟು ದಷ್ಟ ಪುಷ್ಟ ಕಪಿಲನನ್ನು, ಲೌಕಿಕ ಸುಖಕ್ಕಾಗಿ ತೆಳ್ಳಗೆ ಬೆಳ್ಳಗೆ ಇರುವ ಪಂಡಿತ ದೇವದತ್ತನನ್ನು ಬಯಸುವ ಹೆಣ್ಣಿನ ಎರಡು ಮುಖಗಳನ್ನು ತೋರಿಸುವ ಪಾತ್ರವನ್ನು ಹೇಗೆ ನಿಭಾಯಿಸಿದ್ದಾಳೆ. ಪಕ್ಕನೆ ಹೆಂಡತಿ ಡಾ.ರಮಣಿಯ ನೆನಪು ಬಂತು.

ಮರುದಿನ ಸಿಕ್ಕಿದ ಶಾಂತಿಯನ್ನು ಕಳೆದ ರಾತ್ರಿಯ ನಾಟಕದ ಅಭಿನಯಕ್ಕಾಗಿ ಅಭಿನಂದಿಸಿ 'ಎಂ.ಎ. ಮುಗಿದ ಮೇಲೆ ಮುಂದೇನು ಮಾಡಬೇಕೆಂದು ಇದ್ದೇಯ?'ಎಂದು ವಿಚಾರಿಸಿದ. ಉದ್ಯೋಗಕ್ಕೆ ಸೇರಿಕೊಳ್ಳಬೇಕೆಂದು ಹೇಳಿದ ಅವಳಿಗೆ 'ನೀನು ನಮ್ಮ ವಿ.ವಿ.ಯಿಂದ ಪಿಹೆಚ್ ಡಿ. ಮಾಡು. ಹಣದ ಬಗ್ಗೆ ಯೋಚಿಸಬೇಡ, ಸದ್ಯಕ್ಕೆ ನಮ್ಮ ನಗರದಲ್ಲಿರುವ ಕರ್ನಾಟಕ ಕೂಟದಿಂದ ಸ್ಕಾಲರ್‌ಶಿಪ್ ಕೊಡಿಸುತ್ತೇನೆ, ಅಷ್ಟರಲ್ಲಿ ಯು.ಜಿ.ಸಿ ಪರೀಕ್ಷೆಯನ್ನು ಮುಗಿಸಿದರೆ ಮತ್ತೇನೂ ಹಣದ ತಾಪತ್ರಯವಿಲ್ಲ' ಎಂದು ಹೇಳಿ ಹುರಿದುಂಬಿಸಿದ. ಶಾಂತಿಯ ತಾಯಿ ಬಾಳಿಗನ ಭಾವ - ಅಂದರೆ ಹೆಂಡತಿಯ ತಮ್ಮನ ತೋಟಕ್ಕೆ ಕೆಲಸಕ್ಕೆ ಹೋಗುತ್ತಾಳೆಂದು ಅವನಿಗೂ ಗೊತ್ತು. ಬಾಳಿಗ ಆನಂದನಗರಕ್ಕೆ ಹೋಗುವ ಮೊದಲು ಪಿಹೆಚ್ ಡಿ. ಮಾಡುವಾಗ ಹಳ್ಳಿಯ ಕಾಲೆಜ್‌ನಲ್ಲಿ ಪಿ.ಯು.ಸಿ.ಗೆ ಕಲಿಸುತ್ತಿದ್ದ; ಶಾಂತಿ ಅಲ್ಲಿಯೆ ಓದಿಕೊಳ್ಳುತಿದ್ದಳು.

ಶಾಂತಿ ಆನಂದನಗರಕ್ಕೆ ಬಂದಾಗ ಹೊಸ ಭಾಷೆ, ಹೊಸ ಜನರ ನಡುವೆ ಬೆರೆಯುವಾಗ ಸ್ವಲ್ಪ ಮುಜುಗರವಾಗಿತ್ತು. ವಿ.ವಿ. ಕ್ಯಾಂಪಸ್‌ನಲ್ಲೇ ಬೇರೆ ಬೇರೆ ಭಾಷೆಗಳಿಗೆ ಸಂಬಂಧಿಸಿದ ವಿಭಾಗಗಳು, ಪ್ರತಿ ಒಂದು ವಿಭಾಗಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಗ್ರಂಥಾಲಯಗಳು, ಅದಲ್ಲದೆ ಒಂದು ಮಹಾ ಗ್ರಂಥಾಲಯ, ಹತ್ತಿರದಲ್ಲೇ ಹೆಂಗಳೆಯರ ವಸತಿ ಗೃಹ. ವಿಶಾಲವಾದ ಹೂ ತೋಟದ ನಡುವೆ ವಿದ್ಯಾರ್ಥಿಗಳಿಗಾಗಿ ಇರುವ ದೊಡ್ಡ ಕ್ಯಾಂಟೀನು, ಮೂರು ಸುತ್ತು ಗಾಜಿನ ಗೋಡೆ. ವಸತಿ ಗೃಹದೊಳಗಿರುವ ಕ್ಯಾಂಟೀನು ಅಲ್ಲಿ ವಸತಿ ಇರುವವರಿಗೆ ಮಾತ್ರ. ಹೂ ತೋಟದ ಒಳಗೆ ಇರುವ ಕ್ಯಾಂಟೀನ್‌ನಲ್ಲಿ ಬಣ್ಣ ಬಣ್ಣದ ಉಡುಗೆ ತೊಡುಗೆ ತೊಟ್ಟು ಬರುವ ಯುವಕ ಯುವತಿಯರು. ಬಹಿರಂಗವಾಗಿ ತುಟಿಗೆ ತುಟಿ ಹಚ್ಚಿ ಚುಂಬಿಸುವ ಕೆಲವು ಬಳಗಗಳು. ಕೆಲವರು ದಿನನಿತ್ಯ ಹೊಕ್ಕಳಿಂದ ಗೇಣು ಕೆಳಗೆ ಜೀನ್ಸ್ ತೊಟ್ಟು ಒಳಗೆ ತೊಟ್ಟ ಪ್ಯಾಂಟೀಸಿನ ಬಣ್ಣ ಯಾವುದೆಂದು ಸೊಂಟದ ಸುತ್ತ ಕಾಣಿಸಿಕೊಳ್ಳುವವರು. ಅರ್ಧ ಎದೆ ತೋರಿಸುವ ಸಪೂರ ಪಟ್ಟಿಯ ತೆಳು ಟಾಪ್ ತೊಟ್ಟು ಬ್ರಾ ತೊಡದೆ ಬರುವ ಸ್ವಚ್ಛಂದ ಪ್ರವೃತ್ತಿಯರು. ಗೌರಮ್ಮನಂತೆ ಸೀರೆ ಉಟ್ಟು ದೊಡ್ಡದಾಗಿ ಹಣೆಗೆ ಕುಂಕುಮವಿಟ್ಟು, ತುಟಿಗೆ ದಪ್ಪ ಕೆಂಪುಬಣ್ಣ ಬಳಿದು, ಕತ್ತು ಬಿಗಿಹಿಡಿಯುವ ತಾಳಿ ಕಟ್ಟಿಕೊಂಡು ಸಿಗರೇಟು ಸೇದುತ್ತ ನಿನ್ನೆಯ ರಾತ್ರಿ ಪಾರ್ಟಿಯಲ್ಲಿ ಕುಡಿದು ಮತ್ತೇರಿದ

ಬಗ್ಗೆ ಹೇಳಿಕೊಳ್ಳುವ ಬುದ್ಧಿಜೀವಿ ಪ್ರಾಧ್ಯಾಪಿಕೆಯರು. ಹಳ್ಳಿಯಿಂದ ಬಂದ ಇವಳಿಗೆ ಗೋಕುಲಾಷ್ಟಮಿ, ಗಣೇಶನ ಹಬ್ಬಕ್ಕೆ ಸ್ತ್ರೀ ವೇಷ ಧರಿಸಿ ಬೀಡಿ ಸಿಗರೇಟು ಸೇದುವ ಪುರುಷರ ನೆನಪು ತರುತ್ತಿತ್ತು. ಮೊದಮೊದಲು ಪರಿಸರ ಒಗ್ಗದಿದ್ದರೂ ಕ್ರಮೇಣ ಒಗ್ಗಿಕೊಂಡಿತು. ಬಡತನದ ಬೇಗೆಯಲ್ಲಿ ಬೆಂದ ಕೂಲಿ ವಿಧವೆ ತಾಯಿಯ ಏಕೈಕ ಪುತ್ರಿಯಾದ ತಾನು ಪಿಹೆಚ್ ಡಿ. ಕಲಿಯಲು ನಗರಕ್ಕೆ ಬಂದುದೇ ಅವಳಿಗೆ ಖುಷಿಕೊಡುತಿತ್ತು. ತಾಯಿಗೆ ಆಗಾಗ ವಿಷದವಾಗಿ ಪತ್ರ ಬರೆಯುತ್ತಿದಳು. ಕೆಲವೊಮ್ಮೆ ಅವಳ ತಾಯಿ ಕೆಲಸಕ್ಕೆ ಹೋಗುತ್ತಿದ್ದ ಡಾ.ಬಾಳಿಗನ ಭಾವನ ಮನೆಗೆ ಸಾರ್ವಜನಿಕ ದೂರವಾಣಿಯಿಂದ ಕರೆ ನೀಡಿ 'ಸಂಜೆ ಅಮ್ಮ ಹೊರಟು ಹೋಗುವ ಮೊದಲು ಸ್ವಲ್ಪ ನಿಲ್ಲಲು ಹೇಳಿ ಆರು ಗಂಟೆಗೆ ನಾನು ಫೋನ್ ಮಾಡ್ತೇನೆ 'ಎಂದು ಸುದ್ದಿಕೊಟ್ಟು , ಸಂಜೆ ಫೋನ್ ಮಾಡಿ ಮಾತಾಡುತಿದ್ದಳು.

ಆನಂದನಗರಕ್ಕೆ ಬಂದಾಗ ಡಾ.ಬಾಳಿಗ ಅವಳ ವಸತಿಯ ವ್ಯವಸ್ಥೆ ಹಾಸ್ಟೆಲಿನಲ್ಲಿ ಮಾಡಿ ಹಣ ಪಾವತಿ ಮಾಡಿದ್ದ. ಅಡ್‌ಮಿಷನ್ ಫೀಸ್ ತನ್ನ ಕೈಯಿಂದ ತುಂಬಿದ್ದ. ಮೊದಲ ತಿಂಗಳ ಊಟದ ಬಿಲ್ಲು ಮೆಸ್ಸಿಗೆ ತಾನು ಬರುವಾಗ ಊರಿನಿಂದ ತಂದ ಹಣದಿಂದ ತುಂಬಿದ್ದಳು. ಈಗ ಎರಡು ತಿಂಗಳಿಂದ ಹಣ ತುಂಬಿರಲಿಲ್ಲ. ಕರ್ನಾಟಕ ಕೂಟದ ವಿದ್ಯಾರ್ಥಿವೇತನದ ಬಗ್ಗೆಯು ಈ ತನಕ ಏನೂ ಅಗಿಲ್ಲ. ಮೆಸ್‌ನ ಮ್ಯಾನೇಜರ್ ದಿನ ನಿತ್ಯ ತಿಂಗಳ ಬಿಲ್ಲಿನ ಬಗ್ಗೆ ವಿಚಾರಿಸುತ್ತಿದ್ದ.

ಅಂದಿನ ಪತ್ರಿಕೆಯ ಮೇಲೆ ಕಣ್ಣೋಡಿಸಿದಾಗ ಶಾಂತಿಗೆ ಸ್ವಲ್ಪ ನೆಮ್ಮದಿ ಸಿಕ್ಕಿತು. ಕರ್ನಾಟಕ ಕೂಟ ಸಂಜೆ ೬ ರಿಂದ ೮ರವರೆಗೆ ತೆರೆದು ಕೊಂಡಿರುವುದರಿಂದ ಕಛೇರಿಯಲ್ಲಿ ಸದಸ್ಯತನ ಪಡೆಯಲು ಬರುವವರಿಗೆ ಮಾಹಿತಿ ಕೊಡಲು ಹಾಗು ಕರ್ನಾಟಕದ ಬಗ್ಗೆ ಇತರ ಮಾಹಿತಿ ನೀಡಲು ಒಬ್ಬ ಸ್ವಾಗತಗಾರ್ತಿಯ ಅಗತ್ಯವಿದೆ ಎಂದು ನಗರದಿಂದ ಪ್ರಕಟಗೊಳ್ಳುವ ಕನ್ನಡ ದಿನಪತ್ರಿಕೆಯಲ್ಲಿ ಒಂದು ಜಾಹೀರಾತು ಇತ್ತು. ಈ ಪಾರ್ಟ್‌ಟೈಂ ನೌಕರಿಗೆ ಸೇರಲೇಬೇಕೆಂದು ಅವಳು ನಿರ್ಧರಿಸಿದಳು. ಈ ಬಗ್ಗೆ ಅನುಮತಿ ಕೇಳಲು ಡಾ. ಬಾಳಿಗನ ಕ್ಯಾಬಿನ್ನಿಗೆ ಶಾಂತಿ ಹೋದಳು. ಬಾಗಿಲು ಬಡಿದ ಶಬ್ದ ಕೇಳಿದ ತಕ್ಷಣ ಡಾ. ಬಾಳಿಗ ಯಾರೋ ಬಂದರೆಂದು ಕಾಲುಚಾಚಿ ತನ್ನ ಆಸನಕ್ಕೆ ಒರಗಿ ಜನವರಿಯ ಚಳಿಗಾಗಿ ಓಡಿಸದೆ ಇದ್ದ ಫ್ಯಾನಿನ ಮೇಲೆ ಕುಳಿತ ಜೇಡನ ಮೇಲಿಂದ ದೃಷ್ಟಿ ಕಿತ್ತು, ಕನ್ನಡಕ ಏರಿಸಿ ಮೇಜಿನ ಮೇಲೆ ಮಡಚಿಟ್ಟ ಯಾವುದೊ ಒಂದು ಫೈಲನ್ನು ಬಿಡಿಸಿ ತುಂಬ ಬಿಸಿ ಇರುವ ಹಾಗೆ ಅಭಿನಯಿಸಿ ಕುಳಿತ. ಒಳಗೆ ಬಂದ ಶಾಂತಿಯನ್ನು ಕಂಡು ಪ್ರಶ್ನಾರ್ಥಕವಾಗಿ ನೋಡುತ್ತ 'ಏನಿದ್ದರು ಇಂಟರ್ ಕಾಂನಲ್ಲಿ ಮಾತಾಡಬೇಕು, ಇಲ್ಲಿಗೆ ಡೈರೆಕ್ಟಾಗಿ ಬರಬಾರ್ದು, ಬರುವ ಅಗತ್ಯವಿದ್ದರೂ ಇಂಟರ್ ಕಾಂನಲ್ಲಿ ಒಂದು ಮಾತು ಕೇಳ್‌ಬೇಕು' ಎಂದು ಗದರಿಸಿ

'ಮತ್ತೆ.... ಹೇಳು' ಎನ್ನುವಂತೆ ಶಾಂತಿಯ ಮುಖ ನೋಡಿದ. ಅಂಜಿ ಅಂಜಿ ಬಂದ ಶಾಂತಿಗೆ ಏನೂ ಹೇಳದೆ ಜೋರಾಗಿ ಅತ್ತು ಬಿಡಬೇಕೆಂದು ಅನ್ನಿಸಿದರೂ 'ಸಾರ್, ಹಾಸ್ಟೆಲಿನ ಮೆಸ್‌ನ ಹಣ ಎರಡು ತಿಂಗಳಿಂದ ತುಂಬಿಲ್ಲ, ಮ್ಯಾನೇಜರ್ ದಿನನಿತ್ಯ ಹಣ ಕೇಳ್ತ ಇದ್ದಾನೆ. ಎರಡು ದಿನ ದಿಂದ ಮೆಸ್ಸಿಗೆ ಹೋಗದೇ ಬ್ರೆಡ್ ತಂದು ಪಕ್ಕದ ರೂಮಿನ ಊರ್ಮಿಯ ಹೀಟರ್‌ನಲ್ಲಿ ಚಹಾ ಮಾಡಿ ಕುಡಿದು ತಿನ್ನುತಿದ್ದೇನೆ ಊಟ ಮಾಡಿಲ್ಲ' ಎಂದು ಹೇಳಲು ಮುಂದಾದವಳು ಹೇಳಲಿಲ್ಲ.

'ಹಣ ಕೇಳಿದ್ರೆ ಕೊಡ್ತೆನೆ ಅಂತ ಅಂದ್ಬಿಡು' ಎಂದ. 'ಕರ್ನಾಟಕ ಕೂಟದ ಸ್ಕಾಲರ್ ಶಿಪ್ ಬಗ್ಗೆ ಏನಾಯಿತು ಸಾರ್?' ಕೇಳಿದಳು.

'ಇತ್ತೀಚಿಗೆ ಅವ್ರ ಮ್ಯಾನೇಜಿಂಗ್ ಕಮಿಟಿ ಮೀಟಿಂಗ್ ನಡೆದಿಲ್ಲವಂತೆ, ಬರುವ ತಿಂಗಳು ಎ.ಜಿ.ಎಂ.ಬೇರೆ ಇರೋದರಿಂದ ಅವರೆಲ್ಲ ಬಹಳ ಬಿಸಿ ಇದ್ದಾರೆ'.

'ಕರ್ನಾಟಕ ಕೂಟದಲ್ಲಿ ಸಂಜೆ ಕಚೇರಿ ಕೆಲಸಕ್ಕೆ ಜಾಗ ಒಂದು ಖಾಲಿ ಇದೆ ಎಂದು ಪತ್ರಿಕೆಯಲ್ಲಿ ಜಾಹೀರಾತು ಬಂದಿತ್ತು, ನಾನು ಸೇರಿಕೊಳ್ಳಲಿಯೋ?'

ಸ್ವಲ್ಪ ಆಲೋಚಿಸಿ 'ಸೇರ್‌ಕೊಳ್ಳೋದರಲ್ಲಿ ಅಭ್ಯಂತರವಿಲ್ಲ, ಆದರೆ ವಿಭಾಗದ ಶಿಸ್ತಿಗೆ ತೊಂದರೆ ಬರಬಾರ್ದು' ಎಂದು ಹೇಳಿ, ಮತ್ತೆ 'ಬರುವ ಭಾನುವಾರ ಡಾ.ರಮಣಿ ಊರಿಗೆ ಹೋಗ್ತಾಳೆ ಆಮೇಲೆ ನಾನು ಸ್ವಲ್ಪ ಫ್ರೀ ಆಗ್ತೇನೆ, ಹಾಗಾಗಿ ನಾನು ಇಲ್ಲಿ ಬಿಸಿ ಇದ್ದರೆ ನೀನು ಮನೆಗೂ ಸಂಜೆ ಬರಬಹುದು' ಎಂದ. ಆತ ಸಂಜೆ ಮನೆಗೆ ಬರಬಹುದು ಎಂದು ಹೇಳಿದುದನ್ನು ಆಕೆ ಅಷ್ಟು ಗಂಭಿರವಾಗಿ ತೆಗೆದು ಕೊಳ್ಳದೆ, ಪಾರ್ಟ್‌ಟೈಂ ಕೆಲಸಕ್ಕೆ ಸೇರಲು ಅನುಮತಿ ಕೊಟ್ಟದಕ್ಕೆ ಒಳಗೊಳಗೆ ಸಂತೋಷವಾಗಿ 'ಥ್ಯಾಂಕ್ ಯು ಸಾರ್' ಎಂದು ನಿರ್ಗಮಿಸಿದಳು. ಅವಳು 'ಥ್ಯಾಂಕ್ ಯು' ಎಂದು ಹೇಳಿದ್ದು ಸಂಜೆ ಮನೆಗೆ ಬರಬಹುದೆಂದು ನಾನು ಹೇಳಿದುದಕ್ಕೆಂದು ಇವನಿಗೂ ಖುಷಿ ಆಯಿತು.

ಡಾ.ರಮಣಿ ಬಾಳಿಗನ ಮಡದಿ. ಈ ನಗರಕ್ಕೆ ಬಂದ ಮೇಲೆ ಎಂ.ಎ. ಓದಿಸಿ ತಾನೇ ವಿದ್ಯಾರ್ಥಿಗಳಿಂದ ಪ್ರಬಂಧ ಬರೆಸಿ ಮಡದಿಗೆ ಪಿ.ಹೆಚ್.ಡಿ.ಯನ್ನು ಕೊಡಿಸಿದ್ದ. ನಾಟಕಗಳಲ್ಲಿ ಅಭಿನಯಿಸುವ ಹವ್ಯಾಸ ಇದ್ದ ಅವಳು ಸ್ವಲ್ಪ ಪ್ರತಿಭಾವಂತಳಾದುದರಿಂದ ಅವಳ ವರ್ತುಲದ ಜನ ಪ್ರಬಂಧ ಅವಳೇ ರಚಿಸಿ ಪಿಹೆಚ್.ಡಿ ಪಡೆದಳೆಂದು ನಂಬಿದ್ದರು. ಗಂಡ ವಿಭಾಗ ಪ್ರಮುಖನಾದುದರಿಂದ ಎಲ್ಲಾ ವಿಭಾಗಗಳ ಮುಖ್ಯಸ್ಥರ ಪರಿಚಯ ಇರುವುದರಿಂದ ಹಿಂದಿ ವಿಭಾಗ ಪ್ರಮುಖ ಪ್ರೊ. ತ್ರಿವೇದಿಯ ಮುಖಾಂತರ ನಾಟಕಗಾರ ನಿರ್ದೇಶಕ ರಾಂಕಿಶೋರ್ ಯಾದವನ ಪರಿಚಯವಾಗಿ ಆತನ ನಾಟಕಗಳಲ್ಲಿ ನಟಿಸುವ ಅವಕಾಶವನ್ನು ಪಡೆದುಕೊಂಡಳು. ಹೆಸರಿಗೆ ಡಾಕ್ಟರ್ ಎಂದು ಸೇರಿಕೊಂಡಿದುದರಿಂದ ಮಹಾನ್

ರಂಗಭೂಮಿ ಹಾಗು ಚಲಚಿತ್ರ ನಟ ನಟಿಯರು ಇವಳು ಅಭಿನಯಿಸಿದ ನಾಟಕ ನೋಡಲು ಬರುತ್ತಿದ್ದರು. ಈ ನಡುವೆ ಒಂದು ನಾಟಕವನ್ನು ಕನ್ನಡಕ್ಕೆ ಅನುವಾದಿಸುವ ಕೆಲಸವನ್ನು ಕೈಗೆತ್ತಿಕೊಂಡಿದ್ದಳು. ಮಡದಿ ಖ್ಯಾತ ನಟಿ ಆದರೆ ಪತಿ ಸಾಮಾನ್ಯರಂತೆ ಬಟ್ಟೆ ಬರೆ ತೊಡುವುದು ಸರಿಯಲ್ಲವೆಂದು ಆಕೆಯೇ ಈತನ ಬಿಳುಚು ಕಟ್ಟಿದ ಕೂದಲಿಗೆ ಕಪ್ಪು ಬಣ್ಣ ಹಚ್ಚಿ, ಕಣ್ಣಿಗೆ ಬಂಗಾರದ ಚೌಕಟ್ಟಿನ ಕನ್ನಡಕ ಕಟ್ಟಿಸಿ ಕೊಟ್ಟಿದ್ದಳು. ಹಳ್ಳಿಯ ಕಾಲೇಜಿನಲ್ಲಿ ಅರ್ಧ ತೋಳಿನ ಶರ್ಟು, ಪ್ಲಾಸ್ಟಿಕ್ ಪಟ್ಟಿಯ ಕೈಗಡಿಯಾರ, ಸವೆದುಹೋದ ಶೂ ತೊಟ್ಟು ಬಂಡಾಯ ಕವಿಯಂತೆ ತೋರುತಿದ್ದ ಈತ, ಈಗ ಸಿಲ್ಕ್ ಖಾದಿ ಜುಬ್ಬಾ,ಬಂಗಾರದ ಪಟ್ಟಿಯ ಕೈಗಡಿಯಾರ ತೊಡುವುದು, ಬಟ್ಟೆಗೆ ಪರಿಮಳದ್ರವ್ಯ ಸಿಂಪಡಿಸಿಕೊಳ್ಳುವುದು ಇತ್ಯಾದಿ ಸಾಮಾನ್ಯವಾಗಿತ್ತು. ಹಳ್ಳಿಯಲ್ಲಿರುವಾಗ ಸಾಧಾರಣ ಸೀರೆ ಉಡುತ್ತಿದ್ದ ರಮಣಿ ತನ್ನ ಉದ್ದ ಕೂದಲನ್ನು ಕುತ್ತಿಗೆ ಮಟ್ಟಕ್ಕೆ ಕತ್ತರಿಸಿಕೊಂಡಿದ್ದಳು. ಎತ್ತರವಾಗಿದ್ದು ಸ್ವಲ್ಪ ದಪ್ಪನೆ ತೊಡೆಯ ಇವಳು ಜೀನ್ಸ್ ಪ್ಯಾಂಟ್ ತೊಟ್ಟು ಅದರ ಮೇಲೆ ಜೀನ್ಸ್ ಶರ್ಟ್ ತೊಡುವುದು ಪ್ಯಾಷನ್ನಾಗಿಸಿಕೊಂಡಿದ್ದಳು. ಇನ್‌ಶರ್ಟ್ ಮಾಡಿದರೆ ನಿತಂಬಗಳು ವಿಶಾಲವಾಗಿ ಕಾಣುವುದರಿಂದ ಶರ್ಟನ್ನು ಹೊರಗೆ ಬಿಡುತ್ತಿದ್ದಳು. ಊರಿಗೆ ಬಂದರೆ ಕುಂಕುಮವಿಟ್ಟು ಕತ್ತರಿಸಿದ ಕೂದಲು ತಿಳಿಯದಂತೆ ಎತ್ತಿ ಕಟ್ಟಿ, ಹತ್ತಿ ಸೀರೆಗಳನ್ನೆ ಉಟ್ಟು ನಗರದಲ್ಲಿದ್ದರೂ ಹಳ್ಳಿಯ ರೀತಿ ನೀತಿ ಬಿಟ್ಟು ಕೊಡಲಿಲ್ಲವೆಂದು ತೋರುವಂತೆ ವರ್ತಿಸುತ್ತಿದ್ದವಳ ನಿಜ ಬಣ್ಣದ ಅರಿವು ಶಾಂತಿಗೆ ಆದದ್ದು ಈ ನಗರಕ್ಕೆ ಬಂದ ಮೇಲೇಯೆ.

ಒಂದು ವರ್ಷದ ಹಿಂದೆ 'ಚಾಂದ್ ಕಾ ತುಕಡ' ಎಂಬ ನಾಟಕದ ಪ್ರಥಮ ಪ್ರಯೋಗದ ನಂತರ ರಾತ್ರಿ ತಡವಾಗಿ ಕಂಠಪೂರ್ತಿ ಕುಡಿದು ಬಂದಾಗ ವಾಚ್‌ಮ್ಯಾನ್ ಬಾಗಿಲು ತೆಗೆಯುವಾಗ ವಿಳಂಬವಾದುದಕ್ಕೆ ಆತನ ಕೆನ್ನೆಗೆ ಬಾರಿಸಿದ್ದಳಂತೆ, ಆತ ಪೊಲೀಸ್ ಕಂಪ್ಲೇಂಟ್ ಕೊಡಲು ಮುಂದಾದಾಗ ಕ್ಯಾಂಪಸ್ ಸೂಪರಿಂಟೆಂಡೆಂಟ್ ಡಾ.ಬಾಳಿಗನ ಹತ್ತಿರ ಮಾತಾಡಿದ್ದು, ಆತ ಹೋಗಿ ಕ್ಷಮೆ ಯಾಚಿಸಿದ್ದು, ವಾಚ್‌ಮ್ಯಾನ್ ಕ್ಷಮಿಸಿದ್ದು ಇತ್ಯಾದಿ ವಿಷಯಗಳನ್ನು ವಿಭಾಗದ ವಿದ್ಯಾರ್ಥಿನಿಯೊಬ್ಬಳು ಹೇಳಿದ್ದಳು. 'ಅವಳ ನಿಯತ್ತು ಸರಿ ಇಲ್ಲ ಹಾಗಾಗಿ ಹಿಂದಿ ನಾಟಕಗಳಲ್ಲಿ ರೋಲ್ ಸಿಗುತ್ತದೆ 'ಎಂದು ಒಂದು ಮಾತು ಸೇರಿಸಿದ್ದಳು. ಊರಲ್ಲಿ ಒಳ್ಳೆಯ ಗೌರವಾನ್ವಿತ ಮನೆತನದ ಹೆಣ್ಣು ಇಲ್ಲಿ ಹೀಗೆ ಯೋಚಿಸುತಿದ್ದಳು ಶಾಂತಿ.

ಕರ್ನಾಟಕ ಕೂಟದ ಅಧ್ಯಕ್ಷನ ಟೆಲಿಫೋನ್ ನಂಬರನ್ನು ವಿಭಾಗದ ಸಂಶೋಧನಾ ವಿದ್ಯಾರ್ಥಿಯೊಬ್ಬ ಕೊಟ್ಟ, ಜೊತೆಗೆ ಅಧ್ಯಕ್ಷನ ಬಗ್ಗೆ ಕಿರು ಪರಿಚಯವನ್ನೂ ನೀಡಿದ. ರಾಜ್ಯಪ್ರಶಸ್ತಿ ದಕ್ಕಿಸಿಕೊಂಡ ವ್ಯಕ್ತಿ ಕರ್ನಾಟಕ ಕೂಟದ ಅಧ್ಯಕ್ಷ ಎಸ್.ಶ್ಯಾಮಪ್ಪ. ಈತ ಈ ನಗರಕ್ಕೆ ಊರಿನಿಂದ ಕನ್ನಡದಲ್ಲಿ ಹೆಸರು ಬರೆಯಲು ಬೇಕಾದಷ್ಟು ವಿದ್ಯೆ ಪಡೆದುಕೊಂಡು ಬಂದಿದ್ದ. ಬಂದ ಆರಂಭದಲ್ಲಿ ದುಡಿದದ್ದು ಕಳ್ಳಭಟ್ಟಿ ಶರಾಬಿನ ಅಡ್ಡೆಯಲ್ಲಿ.

ಮುಂದೆ ತನ್ನ ಸ್ವಂತ ಕಳ್ಳಭಟ್ಟಿ ಇತ್ಯಾದಿ. ಹೀಗೆ ಗಳಿಸಿ ಪಾಪ ಪರಿಹಾರವಾಗಲೆಂಬ ಉದ್ದೇಶದಿಂದ ಧಾರಾಳ ಸಂಘ –ಸಂಸ್ಥೆಗಳಿಗೆ ದಾನ ಮಾಡತೊಡಗಿದ. ಕರ್ನಾಟಕ ಕೂಟದ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಈತ ಐದು ಲಕ್ಷ ರೂಪಾಯಿ ಸಂಘಕ್ಕೆ ದೇಣಿಗೆ ಕೊಡಲು ಮುಂದಾದುದರಿಂದ ಈತನನ್ನು ಸುವರ್ಣ ಮಹೋತ್ಸವ ಸಮಿತಿಯ ಅಧ್ಯಕ್ಷನ್ನಾಗಿಸಿದರು. ಹಾಗೆ ಸಂಘಕ್ಕೆ ಬಂದು ಸೇರಿಕೊಂಡವ ಮುಂದೆ ಸಂಘದ ಅಧ್ಯಕ್ಷನಾಗಿಬಿಟ್ಟ. ಅಧ್ಯಕ್ಷನಾದ ಮೇಲೆ ಕರ್ನಾಟಕದ ಮಂತ್ರಿಗಳನ್ನು ಇಲ್ಲಿಗೆ ಆಮಂತ್ರಿಸಿ ಹೂಮಾಲೆ ಹಾಕಿ ಸನ್ಮಾನಿಸುವುದು, ಸಿನೇಮ ನಟ ನಟಿಯರನ್ನು ಕರೆಸಿ ಕಾರ್ಯಕ್ರಮ ಆಯೋಜಿಸುವ ಕೆಲಸ ಎರಡು ವರ್ಷ ಮಾಡಿದ. ಹಾಗೆ ತನ್ನ ಕುಟುಂಬ ಸಮೇತನಾಗಿ ಬಂದ ಒಬ್ಬ ಮಂತ್ರಿಯ ಮಗ ಒಂದೆರಡು ದಿನ ಜಾಸ್ತಿ ನಿಂತು ಈತ ಕೊಟ್ಟ ಕಬ್ಬಾ ಮಾಲನ್ನು ಕಚ್ಚಿ ರುಚಿ ನೋಡಿ ಖುಷಿಯಾದ. ಬೆಂಗಳೂರಿಗೆ ಹೋಗಿ ಇವನು ಕೊಡಿಸಿದ ಎಲ್ಲಸುಖಗಳ ಋಣ ತೀರಿಸಲು ಅಪ್ಪನಿಗೆ ಹೇಳಿ ಇವನಿಗೆ ರಾಜ್ಯಪ್ರಶಸ್ತಿಯನ್ನೂ ಕೊಡಿಸಿದ. ಈಗ ಎಸ್.ಶ್ಯಾಮಪ್ಪ ಕನ್ನಡಿಗರಲ್ಲಿ ಗೌರವಾನ್ವಿತ ವ್ಯಕ್ತಿ. ಆದರೂ ಹೆಂಡ ಮಾರುತ್ತಿದ್ದ, ಹೆಣ್ಣು ಮಾರುತ್ತಿದ್ದ ವ್ಯಕ್ತಿ ಬಗ್ಗೆ ಜಾಗ್ರತೆಯಾಗಿರುವುದು ಉಚಿತವೆಂದು ಕಿವಿಮಾತನ್ನು ಹೇಳಿದ.

ಶಾಂತಿ ಆ ನಂಬರಿಗೆ ಫೋನ್ ಮಾಡಿದಳು 'ಹೌದು, ಹೌದು, ಪಿಹೆಚ್ ಡಿ. ಮಾಡೋಕ್ಕೆ ಬಂದವ್ರುತಾನೆ' ಅಂದ. 'ನನ್ನ ಪರಿಚಯ ಇದೆಯಾ ನಿಮಗೆ?' ಆಕೆ ಕೇಳಿದಳು. 'ಪರಿಚಯನಾ? ನಿಮ್ಮನ್ನು ನೋಡಿದ್ದೇನೆ, ಕರ್ನಾಟಕ ಸಂಘಕ್ಕೆ ಸ್ಕಾಲರ್‌ಶಿಪ್‌ಗೆ ಆಪ್ಲಿಕೇಷನ್ ಕೊಡೋಕ್ಕೆ ಬಂದಿದ್ರಿ ತಾನೆ? ನಾನಾಗ ಗೇಟಿನ ಹತ್ತಿರ ನಿಂತಿದ್ದೆ. ಯಾರೊಡನೆಯೊ ಮಾತಾಡ್ತ. ನೀವು ಹಿಂತಿರುಗಿ ಹೋಗುವಾಗಲೂ ಅಲ್ಲೆ ಇದ್ದೆ. ಕ್ಲಾರ್ಕ್ ಬಂದು ಹೇಳಿದ --ನಿಮ್ಮ ಬಗ್ಗೆ'. ಶಾಂತಿ ಖಾಲಿ ಇರುವ ಕೆಲಸದ ಬಗ್ಗೆ ಮಾತಾಡಿದಳು. 'ಎಲ್ಲ ನನ್ನ ಮೇಲೆ ಬಿಟ್ಟುಬಿಡಿ, ಸಂಘಕ್ಕೆ ಬರೋಕ್ಕೆ ನಂಗೆ ಪುರುಸೊತ್ತಿಲ್ಲ, ನಿಮ್ಮ ಕ್ಯಾಂಪಸ್ ಹತ್ರ ೨೧೧ ನಂಬರ್ ಬಸ್ಸು ಬರ್ತದಲ್ವಾ ಅದು ನನ್ನ ಹೊಟೇಲ್ ಜೋಯ್ ಪ್ಯಾಲೇಸಿನ ಪಕ್ಕಕ್ಕೆ ಬರ್ತದೆ, ಅಲ್ಲೆ ನನ್ನ ಆಫೀಸ್ ಇದೆ, ನೀವು ಇಲ್ಲಿಗೆ ಬಂದು ಒಂದು ಅಪ್ಲಿಕೇಶನ್ ಕೊಟ್ರೆ ಆಮ್ಯಾಲೆ ಯಾರು ಬಂದ್ರು ನಿಮ್ಮ ಅಪಾಯಿಂಟ್‌ಮೆಂಟ್ ಆಗಿಹೋಯ್ತು ಅಂದ್‌ಬಿಡ್ತೇನೆ' ಎಂದ. 'ಹಾಂ' ಎಂದು ಫೋನ್ ಇಟ್ಟಳು. ಕರ್ನಾಟಕ ಕೂಟಕ್ಕೆ ಕೆಲಸಕ್ಕೆ ಸೇರೊದಕ್ಕೆ ಈತನ ಆಫೀಸಿಗೆ ಹೋಗಿ ಯಾಕೆ ಇಂಟರ್ ವ್ಯೂ ಕೊಡ್ಬೇಕು ಅಂತ ಯೋಚನೆ ಬಂತು. ಹಾಗೆಯೇ ವಸತಿಗೃಹದ ರೂಮಿಗೆ ಹೋದಳು. ಬೆಳಿಗ್ಗೆ ತಂದ ಬ್ರೆಡ್ಡಿನಲ್ಲಿ ಎರಡು ತುಂಡು ತಿಂದು, ನೀರು ಕುಡಿದು ಉಳಿದ ತುಂಡುಗಳನ್ನು ರಾತ್ರಿಗೆಂದು ಇಟ್ಟಳು. ಯಾರಿಂದಲಾದರೂ ಸಾಲ ತೆಗೆದುಕೊಂಡರೆ ಹೇಗೆ? ಎಲ್ಲರೂ ವಿದ್ಯಾರ್ಥಿಗಳು, ಮೆಸ್ಸ್‌ನವನ ಹತ್ತಿರ ಹೋಗಿ ಒಂದು ಹತ್ತು ದಿನದಲ್ಲಿ ಹಣ ಕೊಡುತ್ತೇನೆ ಊಟ ಚಾಲು ಇಡು ಎಂದು ಹೇಳಿಬಿಡಬೇಕೆಂದು ಅನಿಸಿತು, ಆದರೆ ಅಭಿಮಾನಬಿಡಲಿಲ್ಲ.

ಪಕ್ಕನೆ ವೆಂಕಟೇಶ ನೆನಪಿಗೆ ಬಂದ. ನಗರದಿಂದ ಹೊರಡುವ ಏಕೈಕ ಕನ್ನಡ ದಿನ ಪತ್ರಿಕೆಯ ಸಂಪಾದಕ. ಇಲ್ಲಿಗೆ ಬಂದ ಮೊದಲ ತಿಂಗಳಲ್ಲಿ ಕಳುಹಿಸಿದ ಕವನವನ್ನು ಪ್ರಕಟಿಸಿ ಟೆಲಿಫೋನ್ ಮಾಡಿ 'ಬಹಳ ಚೆಲುವಾಗಿ ಬರೀತೀರಿ, ನಮ್ಮ ಪತ್ರಿಕೆಗೆ ಬರೀತ ಇರಿ' ಎಂದು ಹೇಳಿದ್ದ. ಈತನಿಗೂ ಕರ್ನಾಟಕ ಕೂಟದ ಅಧ್ಯಕ್ಷನಿಗೂ ನಿಕಟ ಪರಿಚಯ. ಈತನ ಪತ್ರಿಕೆಯಲ್ಲಿ ಕರ್ನಾಟಕ ಕೂಟದ ಅಧ್ಯಕ್ಷನ ಫೋಟೊ ವಾರಕ್ಕೆ ಒಂದೆರಡು ಬಾರಿಯಾದರೂ ಬರಲೇಬೇಕು. ಈತ ಹೇಳಿದರೆ ಕೆಲಸ ಸಿಗುವುದು ಖಂಡಿತ ಎಂದು ಯೋಚನೆಗೆ ಬಂದಾಕ್ಷಣ ಒಂದು ರೂಪಾಯಿಯ ಎರಡು ಪಾವಲಿಗಳನ್ನು ಹಿಡಿದು ಕೆಳಗೆ ನೆಲಮಾಳಿಗೆಯಲ್ಲಿರುವ ಟೆಲಿಫೋನ್ ಬೂತ್ ಹತ್ತಿರ ಹೋದಳು. ಫೋನ್ ತಾಗಿಸಿದಾಗ ಆತನೇ ತೆಗೆದುಕೊಂಡ. ವಿಷಯ ತಿಳಿಸಿದಾಗ 'ಖಂಡಿತ ಕೆಲಸ ಆಗುತ್ತೆ ಹೆದ್ರುಕೊಬ್ಯಾಡಿ, ಆದ್ರೆ ನಿಮ್ಮ ನಮ್ಮ ಮುಖ ಪರಿಚಯ ಆಗಿಲ್ಲ ಇಲ್ಲಿ ಕಚೇರಿಗೆ ನೀವು ಬಂದ್ರೆ ಚೆನ್ನಾಗಿರೊಲ್ಲ ಸಂಜೆ ಎಲ್ಲಿಯಾದರೂ ಭೇಟಿ ಆಗೋಣ. ನಿಮ್ಮ ಬಾಯೊ–ಡಾಟ ಕೊಟ್ಟುಬಿಡಿ' ಎಂದ. 'ನಾನು ಮತ್ತೆ ಫೋನ್ ಮಾಡ್ತೇನೆ' ಎಂದು ಫೋನ್ ಇಟ್ಟುಬಿಟ್ಟಳು. ಒಂದು ಸಾವಿರದಷ್ಟು ಪ್ರತಿಗಳು ಮಾರಿಹೋಗುವ ಪತ್ರಿಕೆಯ ಸಂಪಾದಕ ಈತ ತನ್ನದೆ ಪತ್ರಿಕೆ ಕನ್ನಡದಲ್ಲಿ ಮಹಾನ್ ಹಾಗು ಅತ್ಯಧಿಕ ಪ್ರಸಾರವುಳ್ಳ ಪತ್ರಿಕೆ ಎಂದು ಹೇಳಿಕೊಂಡು, ನಗರದ ಕನ್ನಡ ಸಭೆ ಸಮಾರಂಭಗಳಲ್ಲಿ ಮುಖ್ಯ ಅತಿಥಿಯಾಗಿ ಕಾಣಿಸಿಕೊಳ್ಳುವುದು ಸರ್ವೇ ಸಾಮಾನ್ಯ. ಈತ ಹೊರಗೆಲ್ಲಿಯಾದರೂ ಭೇಟಿ ಆಗೋಣ ಎಂದುದರ ಅರ್ಥವಾಗಲಿಲ್ಲ. ಮತ್ತೆ ರೂಮಿಗೆ ಬಂದು ಯೋಚಿಸತೊಡಗಿದಳು.

ಈಗ ಅಗತ್ಯಕ್ಕೆ ಬೇಕಾದುದು ಸಾಲ-- ಒಂದೆರಡು ತಿಂಗಳಿಗೆ ಬೇಕಾದಷ್ಟು ಹಣದ ವ್ಯವಸ್ಥೆ ಆದರೆ ಡಾ. ಬಾಳಿಗನಿಗೂ ಡೊಗ್ಗು ಸಲಾಂ ಹೊಡೆಯದೆ ನನ್ನ ವಿದ್ಯಾಭ್ಯಾಸ ಮುಂದುವರಿಸಬಹುದು ಅಷ್ಟರಲ್ಲಿ ಯು.ಜಿ.ಸಿ ಪರೀಕ್ಷೆ ರಿಸಲ್ಟ್ ಬಂದಿರುತ್ತದೆಯೆಂದು ಯೋಚಿಸಿದಳು. ಸಾಲಕ್ಕೆ ಏನು ಮಾಡುವುದೆಂದು ಯೋಚಿಸುತ್ತಿರುವಾಗ ಮ್ಯಾನೇಜರ್ ಕಾಮತನ ನೆನಪು ಬಂತು. ಆತ ಕೊಟ್ಟ ಪುಸ್ತಕದ ಮೇಲೆ ದಿನಚರಿ ಬರೆಯುತ್ತಿದ್ದರೂ ಆತನ ನೆನಪು ಬಾರದೆ ಇದ್ದುದಕ್ಕೆ ತನ್ನನು ತಾನೆ ಹಂಗಿಸಿಕೊಂಡಳು. ಕಳೆದ ವಾರವಷ್ಟೆ ಡಾ.ಬಾಳಿಗನನ್ನು ಭೇಟಿಯಾಗಲು ಬಂದಿದ್ದ ಕಾಮತ, ಬಾಳಿಗ ಎಲ್ಲೊ ಹೊರಗೆ ಹೋದುದರಿಂದ ವಿಭಾಗದಲ್ಲೆ ಇರುವ ಚಿಕ್ಕ ಗ್ರಂಥಾಲಯಕ್ಕೆ ಬಂದು ತನ್ನನ್ನು ತಾನು ಹವ್ಯಾಸಿ ಕತೆಗಾರನೆಂದು ಪರಿಚಯಿಸಿದ. ಇತ್ತೀಚಿಗಿನ ಹತ್ತು ಹದಿನೈದು ವರ್ಷಗಳಲ್ಲಿ ಏನನ್ನೂ ಬರೆಯದೆ ಇರುವುದರ ಬಗ್ಗೆ ತನಗೆ ತಾನೆ ವಿಷಾದ ವ್ಯಕ್ತಪಡಿಸಿಕೊಂಡ. ಈತ ಬರೆಯದೆ ಇದ್ದುದರಿಂದ ವಾಚಕ ಪ್ರಪಂಚಕ್ಕೆ ಅಪಾರ ನಷ್ಟವಾಗಿದೆ ಎಂಬಂತೆ ಮುಖ ಕೊಂಕಿಸಿ ಹಣೆಯ ಮೇಲೆ ಮೂರು ಗೆರೆ ಮೂಡಿಸಿಕೊಂಡ ಮೇಲೆ ಕೆಳಗೆ ನೋಡಿದ. ಮತ್ತೆ ಶಾಂತಿಯ ಪರಿಚಯವನ್ನು ಕೇಳಿ ತಿಳಿದುಕೊಂಡು 'ತಮ್ಮ ಪರಿಚಯವಾಗಿ ತುಂಬಾ

ಸಂತೋಷವಾಯ್ತು ನಾನು ರಾಮನಗರದಲ್ಲಿ ಬ್ಯಾಂಕೊಂದರ ಮ್ಯಾನೇಜರ್. ಅಗತ್ಯಬಿದ್ದರೆ ಅವಶ್ಯ ಬನ್ನಿ' ಎಂದು ತನ್ನ ವಿಸಿಟಿಂಗ್‌ಕಾರ್ಡ್ ಕೊಟ್ಟು ಹೋಗಿದ್ದ. ಆತ ಹೋದಮೇಲೆ ವಿದ್ಯಾರ್ಥಿ ಒಬ್ಬ ಈತನ ಬಗ್ಗೆ ಹೇಳುತ್ತ 'ಬಹಳ ಜಾಣ ಮ್ಯಾನೇಜರ್ ಇಲ್ಲಿ ಯಾವ ಕನ್ನಡ ಕಾರ್ಯಕ್ರಮ ಇದ್ದರೂ ತಪ್ಪದೆ ಬಂದು ಅವರಿವರನ್ನು ಪರಿಚಯಿಸಿಕೊಳ್ಳುತ್ತಾರೆ. ಕೊನೆಗೆ ತನ್ನ ಬ್ಯಾಂಕಿನಲ್ಲಿ ಒಂದು ಖಾತೆ ತೆರೆಯಲು ಹೇಳುತ್ತಾರೆ. ಈತ ಬ್ಯಾಂಕ್ ಮ್ಯಾನೇಜರನ ಕೆಲಸವನ್ನು ಒಂದು ಉದ್ಯೋಗವೆಂದು ನಿರ್ವಹಿಸದೆ ಪಕ್ಕಾ ವ್ಯಾಪಾರಿಯಂತೆ ನಿಭಾಯಿಸುತಾನೆ' ಎಂದಿದ್ದ. ಕಾಮತನ ಟೆಲಿಫೋನ್ ನಂಬರ್ ಕಾರ್ಡಿನ ಮೇಲೆ ಇದ್ದರೂ ಆತನಿಗೆ ಫೋನ್ ಮಾಡುವುದಕ್ಕಿಂತ ನಾಳೆ ಬೆಳಿಗ್ಗೆ ಬೇಗನೆ ಹೋಗಿ ಆತನನ್ನು ಬ್ಯಾಂಕಿನಲ್ಲಿ ಭೇಟಿ ಆಗಿ ಲೋನ್ ಅಪ್ಲಿಕೇಷನ್ ಕೊಟ್ಟು ಬರುವುದು ಉಚಿತವೆಂದು ನಿರ್ಧರಿಸಿದಳು.

ಬೆಳಿಗ್ಗೆ ಎಂಟು ಗಂಟೆಗೆ ಬ್ಯಾಂಕಿಗೆ ಬಂದಿದ್ದರೂ ಆಗಲೆ ಬ್ಯಾಂಕ್ ತುಂಬ ಜನ ತುಂಬಿದ್ದರು. ಶಾಂತಿ ಜವಾನನನ್ನು ಕೇಳಿ ಹಿರಿಯ ಪ್ರಬಂಧಕ ಕೆ.ಡಿ.ಕಾಮತ ಎಂದು ಬರೆದ ಕ್ಯಾಬಿನಿನ ಮುಂದೆ ಸಾಲಾಗಿ ಇರಿಸಿರುವ ಆಸನದಲ್ಲಿ ಕುಳಿತಳು. ಕ್ಯಾಬಿನ್ ಒಳಗೆ ಕಾಮತ್ ಗ್ರಾಹಕರೊಂದಿಗೆ ವ್ಯವಹರಿಸುತ್ತ ಅತ್ತ ಇತ್ತ ಕಣ್ಣೋಡಿಸುವುದು ಕ್ಯಾಬಿನಿನ ಗಾಜಿನ ಮೂಲಕ ಕಾಣುತ್ತಿತ್ತು. ಒಳಗೆ ಇದ್ದ ಗ್ರಾಹಕರು ಹೊರಡಲನುವಾದಗ ಹೊರಗೆ ನನ್ನ ಪಕ್ಕದ ಕುರ್ಚಿಯಲ್ಲಿ ಕುಳಿತ ಕಪ್ಪು ಕೋಟುಧಾರಿ ಹಿರಿಯ ವ್ಯಕ್ತಿ ಕಾಮತನ ಕೋಣೆಗೆ ನುಗ್ಗಲು ಮುಂದಾದಾಗ ಜವಾನ ಬಂದು 'ಸಾರ್ ಒಂದು ನಿಮಿಷ ಕೂತಿರಿ, ಈ ಮೇಡಂನನ್ನು ಒಳಗೆ ಕಳುಹಿಸಲು ಸಾಹೇಬ್ರು ಹೇಳ್ತಾರೆ' ಎಂದು ಹೇಳಿ ನನ್ನನ್ನು ಕ್ಯಾಬಿನಿಗೆ ಕಳುಹಿಸಿದ. ಕಾಮತ ಈ ಜನಗಳ ನಡುವೆಯು ನನ್ನನ್ನು ಗುರುತಿಸಿದ್ದು, ಕೂಡಲೆ ಒಳಗೆ ಕಳುಹಿಸಲು ಹೇಳಿದ್ದು ತಿಳಿದು ಶಾಂತಿಗೆ ಸಂತೋಷವಾಯಿತು.

ಶಾಂತಿ ಒಳಗೆ ಹೊಕ್ಕುತ್ತಿದ್ದಂತೆ ಕಾಮತ ಎದ್ದು ನಿಂತು ಸ್ವಾಗತಿಸಿದ. 'ಬೆಳಿಗ್ಗೆ ಬಹಳ ಬಿಸಿ ಇರುತ್ತೇವೆ.... ಇತ್ಯಾದಿ ಹೇಳುತ್ತಾ ಟೀ ತರಿಸಲಾ?' ಎಂದು ಕೇಳಿದ. ಅವನ ನಯವಿನಯವನ್ನು ಮೆಚ್ಚಿ ತಾನು ಬಂದ ವಿಷಯವನ್ನು ವಿಸ್ತಾರವಲ್ಲದಿದ್ದರೂ ವಿವರವಾಗಿ ಹೇಳಿದಳು. ಕಾಮತ 'ಅಷ್ಟೇ ತಾನೇ ಒಂದು ಎಸ್‌ಬಿ ಖಾತೆ ತೆರೆಯಿರಿ ಮತ್ತೆ ನಾನೊಂದು ಅಪ್ಲಿಕೇಷನ್ ಕೊಟ್ಟಿರುತ್ತೇನೆ. ಅದರಲ್ಲಿ ವಿಭಾಗ ಮುಖ್ಯಸ್ತರ ಸಹಿ ಹಾಕಿ ತನ್ನಿ. ಒಂದೇ ದಿನದಲ್ಲಿ ಲೋನ್ ಪಾಸ್ ಮಾಡ್ತೇನೆ' ಎಂದ. ಶಾಂತಿಗೆ ಸಂತೋಷವಾಯಿತು, ಆದರೆ ವಿಭಾಗ ಪ್ರಮುಖನ ಸಹಿ ಅಂದರೆ ಬಾಳಿಗನ ಹತ್ತಿರ ಮತ್ತೆ ಹೋಗಬೇಕು. ಕಾಮತನ ಗಡಿಬಿಡಿಯ ನಡುವೆ ಶಾಂತಿ ಕೇಳಿದಳು 'ವಿಭಾಗ ಮುಖ್ಯಸ್ಥನ ಸಹಿ ಅಗತ್ಯವಿದೆಯೆ?' 'ಮೇಡಂ ನೀವು ಒಂದು ಕೆಲಸ ಮಾಡಿ ಸಂಜೆ ಫೋನ್ ಮಾಡಿ ನಮ್ಮ ಮನೆಗೆ ಬನ್ನಿ ಎಲ್ಲ ವಿವರಿಸಿ ಹೇಳುತ್ತೇನೆ, ನಿಮ್ಮ ಕೆಲಸನ್ನು ಮಾಡಿಕೊಡ್ತೇನೆ' ಎಂದ. ಮುಂದೇನು ತೋಚದೆ 'ಥ್ಯಾಂಕ್ ಯೂ' ಎಂದು ಹೇಳಿ ಹೊರಟಳು.

ಸುಮಾರು ಬೆಳಿಗ್ಗೆ ಹತ್ತು ಗಂಟೆಯ ಹೊತ್ತು ಒಬ್ಬಂಟಿಗಳಾಗಿ ಅಧ್ಯಯನದ ಕೊಠಡಿಯಲ್ಲಿ ಕುಳಿತಿದ್ದಾಗ ವಿಭಾಗಕ್ಕೆ ಸಂಬಂಧಪಟ್ಟ ಕ್ಲಾರ್ಕ್ ಸಂಗೀತಾ ಯಾವುದೋ ಪೇಪರಿಗೆ ಶಾಂತಳ ಸಹಿ ಬೇಕೆಂದು ಬಂದಳು. ಶಾಂತಿ ಅವಳು ನೋಡದಂತೆ ಕೈಯಲಿದ್ದ ಬ್ಯಾಂಕಿನ ಕಾಗದಗಳನ್ನು ಪಕ್ಕಕ್ಕೆ ತಳ್ಳುತ್ತಿದ್ದಂತೆ ಆಕೆ ನೋಡಿಯೇ ಬಿಟ್ಟಳು. 'ಕಾಮತನ ಬ್ಯಾಂಕಿಗೆ ಹೋಗಿದ್ದೀಯ? ಕನ್ನಡ ಲೇಖಕ ಅಂತ ಅಲ್ಲಿ ಇಲ್ಲಿ ಕನ್ನಡ ಚಟುವಟಿಕೆಯಲ್ಲಿ ಓಡಾಡ್ತ ಇರ್ತಾನೆ ಶುದ್ಧ ಹೆಣ್ಣು ಹುಚ್ಚ....ಆತನ ಕುಟುಂಬ ಬೆಂಗಳೂರಲ್ಲಿ ಇದೆ .... ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆ ಆಗುತ್ತದೆ ಎಂದು ಆತ ವರ್ಗ ಆಗಿ ಹೋಗುವ ಊರಿಗೆ ಕುಟುಂಬವನ್ನು ಕರೆದುಕೊಂಡು ಹೋಗುವುದಿಲ್ಲ' ಎಂದು ಹೇಳಿದಳು. ಮುಂದುವರಿದು ಆತನ ರಸಿಕತನದ ಬಗ್ಗೆ, ಅವಳು ವಾಸಿಸುತ್ತಿರುವ ಕಟ್ಟಡದ ನಿವಾಸಿ ದೈಹಿಕ ಊನದ ಹೆಂಗಸೊಬ್ಬಳು ಅವನ ಬ್ಯಾಂಕಿನಲ್ಲಿ ಕೆಲಸಕ್ಕಿರುವುದು, ಹಾಗೂ ಅವಳೊಂದಿಗೆ ಈತನ ಸಂಬಂಧದವಿರುವುದರ ಬಗ್ಗೆಯೂ ಹೇಳಿದಳು. ಕೈ ಗಡಿಯಾರ ನೋಡಿ ಬಾಳಿಗ ಬರುವ ಸಮಯವಾದುದರಿಂದ ಲಗುಬಗೆಯಿಂದ ಯಾವುದೊ ವಿ.ವಿ.ಗೆ ಸಂಬಂಧಿಸಿದ ಪೇಪರಿನಲ್ಲಿ ಸಹಿ ಮಾಡು ಎಂದು ಹೇಳಿ, ಸಹಿ ತೆಗೆದುಕೊಂಡು ಹೋದಳು. ಶಾಂತಿ ಏನೂ ಅರ್ಥವಾಗದೆ ವ್ಯಾಸಂಗ ಕೊಠಡಿಯಲ್ಲಿ ಓದಲೆಂದು ತೆರೆದಿರಿಸಿದ ಎಲ್ಲ ಪುಸ್ತಕಗಳನ್ನು ಒಂದೊಂದಾಗಿ ಮುಚ್ಚಿದಳು.

•

# ಕನಸಿನ ಕುದುರಿ

– ಸದಾಶಿವ ಫಡ್ನೀಸ್

ನಂದೂಗs ಒಂದು ಕನಸಿತ್ತು. ಕನಸಿನ್ಯಾಗ ಒಂದು ಕುದುರಿ. ಕುದುರ್ಯಂದ್ರ ಅಂಥಾ ಇಂಥಾ ಕುದುರಿ ಅಲ್ಲ. ಹೈ ಕ್ಲಾಸ್ ತಳಿ ಕುದುರಿ. ಅದರ ಬಣ್ಣಾ ಸಿನಿಮಾ ಸುರು ಆಗೂಕಿಂತಾ ಮೊದ್ಲು ಇರೊ ಕತ್ಲಿಹಂಗ ಕರಿ. ಮುಂದ ಆಗೂದೆಲ್ಲಾ ತನ್ನೊಳಗ ಅಡಗಿಸಿ ಇಡೊ ಕರಿ. ಆ ಬಣ್ಣದ ಆಳ ಏನು ಕೇಳತೀರಿ ? ಕಣ್ಣ ಸಣ್ಣ ಮಾಡಿ ನೋಡಿದಷ್ಟೂ ಇನ್ನೂ ಆಳ ಕಾಣೋವಂಥಾದ್ದು. ಹಂಗs ಮಿರಿ ಮಿರಿ ಮಿಂಚತಿತ್ತು ಮೈ. ಎಳ್ಳಮಾಸಿಗೆ ಎತ್ತಿನ ಮೈ ತೊಳದಾಗ ಮಿಂಚೂಹಾಂಗ. ಕುತ್ತಿಗಿಮ್ಯಾಲಿನ ಕೂದ್ಲಾ ಅಗದೀ ರೇಷ್ಮಿ ಎಳೀ ಕೂಡಿಸಿಧಾಂಗ ನುಣುಪಿದ್ವು. ದಪ್ಪ ಬಾಲ ದಪ್ಪ ಕಾಲು. ದಷ್ಟ ಪುಷ್ಟ ಮೈ. ಮ್ಯಾಲೆ ಕೂತು ಸವಾರಿ ಮಾಡಬೇಕಿನಿಸೂಹಾಂಗ. ಮಾಲಕ (ಯಜಮಾನ) ಇಲ್ಲದ ಲಗಾಮಿಲ್ಲದ ಕುದುರಿ. ಸಮೀಪ ಹೋದ್ರ ಸ್ವಲ್ಪ ಸಹಿತ ಲದ್ದಿ ವಾಸನೀ ಇಲ್ಲಾ. ಅಗದೀ ಸಾಫ಼್. ಕುತ್ಗೀ ಕೆಳಗ ಹಾಕಿ ಸುಮ್ಮನs ನಿಂತಿರತಿತ್ತು. ಆಗಾಗ ಬಾಲಾ ಅಳಗ್ಯಾಡಿಸತಿತ್ತು ಚೌರೀ ಬೀಸಿಧಾಂಗ. ಆದರs ಒಂದು ಸರ್ತೇನೂ ನಂದೂನ ಕಡೇ ನೊಡಿರ್ಲಿಲ್ಲ ಅದು.

ನಂದೂ ಮೊದಲs ಕನಸಿನ ಮನಷ್ಯಾ. ಅವನ ಪೂರ್ಣ ಹೆಸರು ನಂದೂ ಪೋರವಾಲ್. ಅವನ ಅಪ್ಪ ಊರಾಗ ಒಂದು ಫ಼್ಯಾಷನ್ ಅಂಗಡಿ ಇಟ್ಟಿದ್ದ. ಹರೇದ ಹುಡುಗ್ಯಾರಿಗೆ ಬೇಕಾಗೋ ಬಿಂದಿ, ಬಳೆ, ನಕಲೀ ಬಂಗಾರದ ಆಭರಣದಿಂದ ಹಿಡಿದು ಮದುವ್ಯಾದಾವರಿಗೆ ಬೇಕಾಗೊ ಶೃಂಗಾರ್ ಕುಂಕುಮದ ತನಕಾ ಎಲ್ಲಾ ಸಾಮಾನೂ ಮಾರತಿದ್ದ. ಅವನಿಗೆ ನಂದೂ ಮನಸ್ಸಿಗೆ ಬಂದಷ್ಟು ಕಲೀಲಿ ಆದ್ರ ಕಲಿಯೂದು ಮುಗುದಮ್ಯಾಲೆ ಅಂಗಡಿ ಗಲ್ಲಾದ ಮ್ಯಾಲೆ ಕೂಡಲಿ ಅಂತ ವಿಚಾರ ಇತ್ತು. ಅಂಗಡಿ ಫ಼ಾಯದೆಯಿಂದನೇ ಅಂವಾ ಎರಡು ಅಂತಸ್ತಿನ ಸಿಮೆಂಟಿನ ಮನೀ ಕಟ್ಟಿಸಿದ್ದ. ಈ ಧಂದಾನೇ ನಂದೂ ನಡೆಶಿಗೊಂಡು ಹೋಗಲಿ ಅಂತ ಅವನ ಮನಸ್ಸಿನ್ಯಾಗ ಪಕ್ಕಾ (ನಿಶ್ಚಿತ) ಇತ್ತು. ಹುಡುಗ ಕೈ ಬಿಟ್ಟ ಹೋಗಬಾರದು ಅಂತ ಸರೋಜಳ ಜೋಡಿ ಲಗೂನೇ ಲಗ್ನಾನೂ ಮಾಡಿಬಿಟ್ಟಿದ್ದ. ನಂದೂ

ಆಗಷ್ಟಽ ಇಂಜಿನಿಯರಿಂಗ್ ಮುಗಿಸಿದ್ದ. ಅವಂಗ ಗಲ್ಲಾದ ಮ್ಯಾಲೆ ಕೂಡ್ಲಿಕ್ಕೆ ಆಗ್ತಿರಲಿಲ್ಲ. ಕೂತ್ರೂ ಗಿರಾಕಿಗೊಳ ಕಡೆ ಲಕ್ಷ್ಯ ಇರತಿರಲಿಲ್ಲ. ಇದರಾಗಿಂದ ತಪ್ಪಿಸಿಗೊಂಡು ಹೊರಗ ಬರಬೇಕಂದರ ನಂದೂಗಽ ಕನಸು ಕಾಣೂದು ಅಗದೀ ಅವಶ್ಯಕ ಇತ್ತು.

ಸರೋಜನೂ ಒಂದು ರೀತೀಂದ ಕನಸಿನ ಹುಡುಗಿ. ಅಂಗಡಿ ಹಿಂದಽ ಮನಿ ಇದ್ದದರಿಂದ ಮನಿಗೆಲಸಾ ಮುಗುಸಿ ಆಕೀನೂ ಅಂಗಡ್ಯಾಗ ಕೂಡ್ತಿದ್ಲು. ನಂದೂಗ ಕನಸು ಕಾಣ್ಲಿಕ್ಕೆ ಅನುಕೂಲ ಆಗೋಹಂಗ ಆದಷ್ಟು ವ್ಯವಸ್ಥಾ ಆಕೀ ಮಾಡ್ತಿದ್ಲು. ಗಿರಾಕಿ ಇಲ್ಲದಾಗ ಕುದುರೀ ಕನಸಿನ ಬಗ್ಗೆ ಮಾತಾಗತಿತ್ತು ಇಬ್ಬರ ನಡುವ. ನಂದೂ ಅಂತೂ ಕುದುರಿ ಛಂದಕ್ಕ ಹುಚ್ಚ ಮಂಗ್ಯಾ ಆಗಿದ್ದಾ. ಅದರಮ್ಯಾಲ ಕೂತು ಸವಾರಿ ಮಾಡಬೇಕಂತ ವಿಚಾರ ಮಾಡ್ತಿದ್ದಾ. ಹಾಂಗಽ 'ಟಕ್ ಟಕ್' ಅಂತ ಓಡಿಸಿಗೋತ ಗಾಳೀಗೆ ಕೂದಲಾ ಹಾರಿಸಿಗೋತ ಊರು ಬಿಟ್ಟು ಹೋಗುವ ಹಾಂಗಿದ್ದರ ಎಷ್ಟು ಛಲೋ ಆಗತಿತ್ತು ಅಂತ ಅನಿಸಲಾರ್ದೆ ಇರತಿರಲಿಲ್ಲ ಇಬ್ಬರಿಗೂ. ಈ ಅಂಗಡಿ ಎಂಬೋ ಕ್ವಾಟಿ ಗ್ವಾಡಿ ದಾಟಿ ಹೊರಗ ಹೋಗಬೇಕು ಅಂದರ ಈ ಕುದುರಿಮ್ಯಾಲೆ ಹೊಗೋದೊಂದಽ ಮಾರ್ಗ ಅಂತ ಅನಿಸಿತ್ತು ಇಬ್ಬರಿಗೂ. ಆದರ ಕುದುರೀಗೇ ಇವರದೇನೂ ದರಕಾರ ಇದ್ದಂಗ ಇರಲಿಲ್ಲ.

ಇಬ್ಬರೂ ಕುದುರಿ ಕೃಪಾಕಟಾಕ್ಷ ತಮ್ಮ ಮ್ಯಾಲೇ ಬೀಳಲಿ ಅಂತ ಬಹಳಷ್ಟು ಪ್ರಯತ್ನ ಮಾಡತಿದ್ರು. ಊರ ನಡುವಿನ ರಾಮದೇವರ ಗುಡಿಇಂದ ಹಿಡದು ದ್ಯಾಮವ್ವ, ದುರುಗವ್ವ, ಮುಲ್ಲಾ, ಮಸೀತಿ, ದರ್ಗಾ ಅಂತ ಎಲ್ಲಾ ಕಡೇ ಬ್ಯಾನಿ ಬ್ಯಾಸರಿಕೀ ಇಲ್ಲದ ತಲೀ ಹಚ್ಚಿದ್ದರು. ದೇವರು ಒಬ್ಬಾಂವನೇ ಅಂಬೋ ತತ್ವಕ್ಕ ಅಕ್ಷರಶಃ ಮನಸ್ಸು ಕೊಟ್ಟಿದ್ದರು. 'ಈ ಕುದುರಿಮ್ಯಾಲೇ ಕೂತು ಹೋದ ಮಂದಿ ಹ್ಯಾಂಗ ಅನಂತ ಸುಖದಾಗ ಇದ್ದಾರ' ಎಂಬೋ ಕಥಿಯನ್ನ ಸತ್ಯನಾರಾಯಣ ಕಥಿಹಾಂಗ ಶ್ರದ್ಧಾದಿಂದ ಕೇಳಿ ತಮಗೂ ಇಂಥಾ ಲಕ್ ಇರಬಾರದ್ಯಾಕಂತ ಒಳಗಿಂದ ಒಳಗಽ ಆಶಾ (ಆಸೆ) ಇಟಗೊಂಡಿದ್ದರು. ಮನಷ್ಯಾನ ನಂಬಿಕೀಗೇ ದೇವರಽ ಬಗ್ಗತಾನಂದಮ್ಯಾಲ ಕುದುರಿ ಏನು ದೇವರಿಗಿಂತಾ ಮ್ಯಾಲೇನು? ಕನಸಿನ ಕುದುರಿ ತಲಿ ಎತ್ತಿ ನೋಡಿದ್ದಷ್ಟೇ ಅಲ್ಲದೇ ಕಣ್ಣಾಗ ಕಣ್ಣಿಟ್ಟು ಕರಿಲಿಕ್ಕೆ ಹತ್ತಿತು. ಮೂರು ಸಮುದ್ರದ ಆಚೀಕಡಿಗೆ ಇರೋ ಲೋಕದ ಕಡೆ ಮಾರಿ ಮಾಡಿ ನೆಗದಽ ಬಿಟ್ಟಿತು. ಬೆನ್ನಮ್ಯಾಲ ಹತ್ತಿಸಿಗೊಂಡು, ಮೈಯಾಗ ಸಮುದ್ರದ ಗಾಳಿ ಹೋಗಿಸಿ, ಎರಡು ಕಡೇ ನಿಂತು, ಕಣ್ಣು ಮುಚ್ಚಿ ಕಣ್ಣು ತಗಿಯೂದರಾಗೇ ಅಮೆರಿಕಾ ಎಂಬೋ ನನಸಿನ ಲೋಕಕ್ಕೆ ತಂದು ಬಿಟ್ಟಿತು. ಹಾಂಗಽ ಕಣ್ಣೀನ ಎವೀ ಮುಚ್ಚಿ ತಗಿಯೂದರಾಗ ಮಟಾ ಮಾಯಾಗಿಬಿಟ್ಟಿತು.

ನಂದೂಗ ಕನಸಽ ನನಸಾಗಿ, ಮನಸಿನ್ಯಾಗಿಂದು ಕಣ್ಣಮುಂದ ಸಾಕಾರ ಆಗಿ, ಮನಸು ಈ ಅಮೆರಿಕಾ ಅಂಬೋ ಲೋಕದಾಗ ಕಳದು ಹೋತು. ಎಲ್ಲಾನೂ ಎಷ್ಟು ಲಕಾ ಲಕಾ

ಅದs ಅಂತ ಸರೋಜ ಬಾಯಿ ಮ್ಯಾಲೆ ಬಟ್ಟು ಇಟಗೊಂಡಳು. ಹಸಿರ ಹುಲ್ಲಿನ ನಡುವ ಓಡೋ ರೋಡೆಂಬುವ ರೋಡ ಸಹಿತ ಗುಡಿಸಿದ ಮನಿ ಅಂಗಳಧಾಂಗ ಅಗದೀ ಸ್ವಚ್ಛ. ನೋಡಿದಷ್ಟೂ ಇನ್ನೂ ನೋಡಬೇಕು ಅನಿಸೂ ಹಾಂಗ. ಇಲ್ಲಿನ ಮಂದಿ ಅಗದೀ ಸುಖದಾಗ ಜೀವನಾ ಮಾಡ್ತಿದ್ದರು. ಕಾರಿನ ಖಿಡಿಕ್ಯಾಗಿಂದ (ಕಿಟಕಿಇಂದ) ಜಗತ್ತನ್ನ ನೋಡ್ತಿದ್ದರು. ಕಾರಿನ್ಯಾಗಿಂದs ಸೀದಾ ಮನಿವಳಗ ಹೋಗುವದು ಬರುವದು ಮಾಡ್ತಿದ್ದರು. ನಂದೂನೂ ಅದೇ ಮಾಡ್ಲಿಕ್ಕೆ ಹತ್ತಿದ. ದಿನಾ ಮುಂಜಾನೆ ಕಾರಿನ ಖಿಡಕಿಮುಂದ ಕೂತು ಕೆಲಸಕ್ಕ ಹೋಗತಿದ್ದ. ಕಂಪ್ಯೂಟರ್ ಖಿಡಕಿಮುಂದ ಕೆಲಸಾ ಮಾಡ್ತಿದ್ದಾ. ಮತ್ತ ತಿರುಗಿ ಮನೀಗೆ ಬರೂ ಮುಂದ ಕಾರಿನ ಖಿಡಕಿಯ ಚೌಕಟ್ಟು. ಹಿಂಗs ಜೀವನ ಅನ್ನೋದು ಶಿಸ್ತಾಗಿ ಒಂದು ಚೌಕಟ್ಟಿನೊಳಗನs ನಡಿಲಿಕ್ಕೆ ಸುರು ಆತು. ಎಲ್ಲಾದಕ್ಕೂ ಒಂದು ಲೆಖ್ಖ ಸುರು ಆತು. ಸೋಮವಾರದಿಂದ ಶುಕ್ರವಾರದ ತನಕಾ ಕೆಲಸದ ಲೆಖ್ಖಾ. ಅಲ್ಲಿಂದ ಮತ್ತ ಸೋಮವಾರದ ತನಕಾ ವಿರಾಮದ ಲೆಖ್ಖಾ.

ನಂದೂಗ ದಿನಾಲೂ ಮನೀಗೆ ಬಗೆ ಬಗೆ ಜಾಹೀರಾತು ಮಾಹಿತಿ ಪತ್ರಾ ಬರತಿದ್ದವು. ನಂದೂನ ಮನ್ಯಾಗ ಎನೇನು ಸಾಮಾನು ಇಲ್ಲ ಅಂಬೋದನ್ನ ಬಟ್ಟು ಮಾಡಿ ತೋರಿಸತಿದ್ವು. ಇಂಥಾ ವಸ್ತು ಇಂಥಾ ದಿನ ಕೊಂಡರ ಎಷ್ಟು ರೊಕ್ಕಾ ಉಳಿಸಬಹುದು ಅಂತ ಅಗದೀ ನಿಶ್ಚಿತ ತಿಳಿಸತಿದ್ವು. ಸರೋಜಳಿಗಂತೂ ಹೀಂಗ ರೊಕ್ಕಾ ಉಳಿಸುವ ಪದ್ಧತಿ ಭಾಳೇ ಹಿಡಿಸಿತ್ತು. ಶನಿವಾರ ಮತ್ತು ರವಿವಾರ ಆಕೀ ನಂದೂನ್ನ ಕಾರಿನ ಖಿಡಕಿಮುಂದ ಕೂಡಿಸಿಗೊಂಡು ರೊಕ್ಕಾ ಉಳಿಸೋ ವೋಹಿಮಿಗೆ (ದಂಡಯಾತ್ರೆಗೆ) ಹೋಗ್ತಿದ್ಲು. ಆದ್ರ ನಂದೂಗ ಮಾತ್ರ ಎನಾದ್ರು ಕೊಂಡು ರೊಕ್ಕಾ ಹ್ಯಾಂಗ ಉಳಿಸಲಿಕ್ಕೆ ಬರ್ತದ ಅನ್ನೋದು ಗೊತ್ತಾಗಲಿಲ್ಲಾ. ಒಂದು ವೇಳ್ಯಾ ಅದೇ ಖರೇ ಆದ್ರ ಮಳ್ಳ ಮಕಾಶಿ ಆಗುವದು ಬ್ಯಾಡಂತ ಊರಾಗಿನ ವಾನ್ಸ್, ಮರ್ವಿನ್ಸ್, ವಾಲ್ ಮಾರ್ಟ್, ಕೆ ಮಾರ್ಟ್, ಆ ಈ ಮಾರ್ಟ್ ಎಲ್ಲಾ ತಿರಗತಿದ್ದ. ಕಾರಿನ ತುಂಬ ಸಾಮನು ತುಂಬಿಸಿಗೋಂಡು ಚೀಲಾ ತುಂಬ ರೊಕ್ಕಾ ಉಳಿಸಿ ಸಂಜೀಕ ದಣಿದು ಮನೀಗೆ ಬರ್ತಿದ್ದರು. ಮತ್ತ ಮನ್ಯಾಗ ಎನಿಲ್ಲ ಅಂತ ತೋರಿಸೋ ಪತ್ರದ ಹಾದಿ ಕಾಯ್ತಿದ್ದರು. ಹೀಂಗs ಸ್ವಲ್ಪ ದಿನಾ ಕಳದು ಮನಿ ತುಂಬೇ ಸಾಮಾನs ತುಳುಕ್ಯಾಡಲಿಕ್ಕೆ ಹತ್ತಿ, ಜಾಗಾ ಇರ್ಲಾರ್ಧಾಂಗ ಆಗಿ, ರೊಕ್ಕಾ ಉಳಿಸುವ ಮಾತು ಮರಿಯಲಿಕ್ಕೆ ಸುರು ಆತು.

ಇಷ್ಟೆಲ್ಲಾ ಇದ್ದರೂ ಎನೋ ಇಲ್ಲಾ ಅಂತ ಅನಿಸತಿತ್ತು ಇಬ್ರಿಗೂ. ಮನಿತುಂಬೇ ಸಾಮಾನು ಆಗಿ, ಮನಸ್ಸು ಖಾಲಿ ಖೋಲಿ (ಕೋಣೆ) ಹಾಂಗ ಆಗಿ, ಮನಸ್ಸಿನ್ಯಾಗಿನ ಸಣ್ಣ ದನಿ ಸಹಿತ ಜೋರಾಗಿ ಕೇಳಿಸಲಿಕ್ಕೆ ಹತ್ತಿತು. ಈ ಮನಸ್ಸು ತುಂಬಿಸಲಿಕ್ಕೆ ಅಂತ ತಮ್ಮ ಹಂಗ ಇರೂ ಕಂಡಾ (ಕನ್ನಡ) ಮಂದಿನ್ನ ಹುಡುಕಲಿಕ್ಕೆ ಹತ್ತಿದ್ರು. ಉತ್ತರದ ಪಾಟೀಲ್,

ದೇಶಪಾಂಡೆ, ಹಿರೇಮಠ್‌ರಿಂದ ಹಿಡದು ದಕ್ಷಿಣದ ಗೋಪಾಲಕೃಷ್ಣ, ಸುರೇಶ್ ಕುಮಾರ್, ನರಹರಿಶಾಸ್ತ್ರಿವರೆಗೆ ಎಲ್ಲರ ಗುರ್ತು ಮಾಡಿಕೊಂಡರು. ಎಲ್ಲರ ಹಾಂಗ ಕನ್ನಡ ಸಂಘದ ಸದಸ್ಯರಾದ್ರು. 'ನಮ್ಮ ಕಂಡಾ (ಕನ್ನಡ) ಮಂದಿ ತೀರಾ ಅಭಿಮಾನ ಶೂನ್ಯ ಮಂದಿ ಸಾರ್. ಆ ದೃಷ್ಟಿ ಇಂದ ನಾವು ಬ್ಯಾರೇನs ಕಾರ್ಯಕ್ರಮ ಹಾಕ್ಯಂಡಿದೀವಿ, ತಾವು ಪ್ರೋತ್ಸಾಹಿಸಲೇಬೇಕು' ಅಂದಾಗ ಹೌಹೌದು ಅಂತ ಗೋಣು ಅಳುಗ್ಯಾಡಿಸಿದ್ರು. ಕನ್ನಡ ಭಾಷಾ ಬೆಳೆಸುವದಕ್ಕ ಅಂತ ಕನ್ನಡ ಸಂಘ ತರಿಸಿದ 'ನಾ ನಿನ್ನ ತೊರೆಯಲಾರೆ', 'ಆಪರೇಷನ್ ಬ್ಯಾಂಗಲೂರ್' ಇತ್ಯಾದಿ ಸಿನಿಮಾ ನೋಡಿ ಬ್ಯಾಸರ ಸಹಿಸಿದರು. ಕನ್ನಡ ಕಾರ್ಯಕ್ರಮಕ್ಕ ಅಗದೀ ಮನಸ್ಸಿಟ್ಟು ಲಗೂನೇ ಹೋಗಿ ಮುಂದಿನ ಸಾಲಿನ್ಯಾಗ ಕೂತು, ತಡಾ ಆಗಿ ಸುರು ಆದ ಕಾರ್ಯಕ್ರಮಕ್ಕಿಂತ ಆಜೂಬಾಜೂಕಿನ (ಅಕ್ಕಪಕ್ಕದಲ್ಲಿಯ) ಮಂದೀ ಮಾತೇ ಜೋರಾಗಿ ಕೇಳಿಸಿಕೊಂಡರು. ಇದರಿಂದ ಕನ್ನಡ ಖರೇನs ಬೆಳೀಲಿಕ್ಕೆ ಅನುಕೂಲ ಆಗ್ಲಿಖತ್ಯದ ಅಂತ ಖುಷ್ ಆದ್ರು. ಮುಂದಿನ ಕಾರ್ಯಕ್ರಮದಲ್ಲಿ ತಾವು ಭಾಗವಹಿಸಿ ಇನ್ನೊಮ್ಮೆ ಪ್ರೋತ್ಸಾಹಿಸಲೇಬೇಕು ಅಂದಾಗ ಗಂಟಲಾರಿ, ನಾಲಿಗಿ ಒಣಗಿ, ಕಂಡಾ ಅಭಿಮಾನ ಮರತs ಹೋತು.

ಗುರುತಿನ ಬಳಗ ಹೆಚ್ಚಾಧಾಂಗ ಮಂದಿ ಇವರನ್ನ ಬ್ಯಾರೆ ಬ್ಯಾರೆ ಹಬ್ಬಕ್ಕ ಮನೀಗೆ ಅಗದೀ ಒತ್ತಾಯಪೂರ್ವಕ ಕರಿಯಲಿಕ್ಕೆ ಹತ್ತಿತು. ಸಣ್ಣ ಹುಡುಗರ ಹುಟ್ಟು ಹಬ್ಬ ಅಂಬೋದು ಎಲ್ಲರಿಗೂ ಭಾಳೇ ಮಹತ್ವದ ಹಬ್ಬ. ಇದು ಯಾವಾಗಲೂ ಶನಿವಾರ ಅಥವಾ ರವಿವಾರನೇ ಬರತಿತ್ತು. ನಂದೂ ಮತ್ತ ಸರೋಜ ಇಂಥಾ ಹಬ್ಬಕ್ಕ ಅಗದೀ ದೇಸೀ ಅರವಿ ಹಾಕ್ಕೊಂಡು ಊಟಾ ಮಾಡೂ ಟಾಯಮೀಗೇ ಹೋಗಿ, ಸಣ್ಣ ಆಹೇರ ಕೊಟ್ಟು, ದೊಡ್ಡ ಮನಸೀಲೆ ಎಲ್ಲಾರ ಜೋಡಿ 'ಹ್ಯಾಪಿ ಬರ್ಥ್ ಡೇ ಟೊ ಯು' ಅಂತ ಸಾಮೂಹಿಕ ಹಾಡು ಹಾಡುತಿದ್ದರು. ಆಮ್ಯಾಲೇ ದೊಡ್ಡವರು 'ಇಂಡ್ಯಾ' ದ ಸಂಸ್ಕೃತಿ ಎಷ್ಟು ದೊಡ್ಡದು ಮತ್ತು ಶಾಶ್ವತ ಅದ ಅಂತ ಹರಟೀ ಹೊಡೀತಿದ್ದರು. ನಮ್ಮ ಹಳೇ ಸಂಸ್ಕಾರದ ಬಗ್ಗೆ ಮಾತಡಿಕೋತ ತಮ್ಮ ಮಕ್ಕಳು ತಾಟಿನೊಳಗ ಅರ್ಧಕ್ಕರ್ಧಾ ಬಿಟ್ಟ ಊಟಾ ಕಸದ ಬುಟ್ಟಿಯೊಳಗ ಒಗದು ಬರ್ತಿದ್ದರು. ನಮ್ಮ ಈ ಭಾಷಾ ಮತ್ತ ಸಂಸ್ಕೃತಿ ಹ್ಯಾಂಗ ಬೆಳೆಸಬೇಕು ಅಂತ ಮನಸ್ಸು ಕೊಟ್ಟು ವಿಚಾರ ಮಾಡ್ತಿದ್ದರು. ವಿಚಾರ ಕೃತಿಗೆ ಇಳಿಸುವ ಹೊತ್ತಿಗೆ ತಮ್ಮ ತಮ್ಮ ಮಕ್ಕಳ ಜೋಡಿ ಮನೀಗೆ ಹೊರಟುಬಿಡ್ತಿದ್ದರು.

ಯುಗಾದಿ, ಗಣೇಶ್ ಚತುರ್ಥಿ, ದಸರಾ, ದೀಪಾವಳಿ ಅಂಥಾ ಉಳಿದ ಎಲ್ಲಾ ಹಬ್ಬಾನೂ ಶನಿವಾರ ಅಥವಾ ರವಿವಾರನೇ ಬರ್ತಿದ್ದವು. ಮನೀಯೊಳಗ ತ್ರಾಸಾಗ್ತದ ಅಂತ ತಿಳಿದು ಎಲ್ಲರೂ ಮಂದಿರ್ ಅಥವಾ ಟೆಂಪಲ್ ಅನ್ನತಕ್ಕಂಥಾ ಜಾಗದೊಳಗ ಇವನ್ನೆಲ್ಲಾ ಮಾಡಲಿಕ್ಕೆ ಅನುಕೂಲ ಇತ್ತು. ನಂದೂ ಮತ್ತು ಸರೋಜ ಇಲ್ಲಿಗೆ ಕಂಡಾ ಕಾರ್ಯಕ್ರಮಕ್ಕ ಹೋದಷ್ಟೇ

ಉತ್ಸಾಹದಿಂದ ಹೋಗತಿದ್ದರು. ಈ ಸಂದರ್ಭದೊಳಗ ಆಯಾ ದೇವರ ಹಾಡು ಮತ್ತು ಆರತಿ ಎಲ್ಲರ ಜೋಡಿ ಹಾಡುತ್ತಿದ್ದರು. ವಿಶೇಷ ಅಂದರ ಯಾವದೆ ದೇವರ ಪೂಜಾ ಆದ್ರೂ ಕಡೀಕ 'ಓಂ ಜಯ ಜಗದೀಶ ಹರೇ' ಎಂಬೋ ಹಾಡು ಸಾಮೂಹಿಕವಾಗಿ ಹಾಡಲೇಬೇಕೆಂಬ ನಿಯಮ ಇದ್ದಾಂಗ ಇತ್ತು. ನಂದೂ ಇದು ಯಾಕ ಹೀಂಗದ ಅಂತ ಸ್ವಲ್ಪ ದಿನ ತಲಿ ಕೆಡಿಸಿಕೊಂಡು ತಾನೂ ದನಿ ಕೂಡಿಸಲಿಕ್ಕೆ ಸುರು ಮಾಡಿದ. ಕ್ರಿಸ್-ಮಸ್ ಅಂಬೊ ಹಬ್ಬ ಮಾತ್ರ ಮನಿಯೊಳಗೇ ಮಾಡ್ತಿದ್ದರು.

ನಂದೂ ಮತ್ತ ಸರೋಜ ಇಬ್ಬರೂ ಈಗೀಗ ಮತ್ತ ಕನಸು ಕಾಣೋದು ಆವಶ್ಯಕ ಅನ್ನಿಸಲಿಕ್ಕೆ ಹತ್ತಿತು. ನಂದೂ ಎಷ್ಟೆಂದ್ರೂ ಕನಸಿನ ಮನಷ್ಯಾ. ಅವಂಗ ಇನ್ನೊಂದು ಕನಸು ಬೀಳಲಿಕ್ಕೆ ಸುರು ಆಗಿತ್ತು. ಕನಸಿನ್ಯಾಗ ಮತ್ತ ಅದs ಕುದುರಿ. ಆದರ ಈಗ ಕುದುರಿಮ್ಯಾಲ ಯಾರೊ ಕೂತ ಹಾಂಗ ಇತ್ತು. ಹಾಂಗ ಗಪ್ ಚಿಪ್. ಮಾರಿ ನೋಡಿದರ ನಂದೂಗ ಅಪ್ಪನ ಮಾರೀನs ಕಾಣಿಸ್ತು. ಅವಂಗ ಕೇಳತಿತ್ತು ನನ್ನ ಕತ್ಲಿನs ನಿನ್ನ ಬೆಳಕು, ನಿನ್ನ ಕತ್ಲಿನs ನನ್ನ ಬೆಳಕು. ಹಿಂಗ್ಯಾಕ ? ನಂದೂ ಮತ್ತ ಕನಸಿನ ಕುದುರಿ ಹತ್ತಿದ. ಮತ್ತ ಸಮುದ್ರದ ಗಾಳಿ ಮೈಯಾಗ ಹೋಗಿಸಿ ಎರಡು ಕಡೆ ನಿಂತು ತಿರುಗಿ ಮನೀಗೆ ಬಂದ. ತಿರುಗಾಡಿ ಬಂದ.

# ನಿಲೋಫರ್

– ಇರ್ಶಾದ್ ಮೂಡಬಿದ್ರಿ

ಇಡೀ ಊರೇ ಮೌನ ತಾಳಿದೆ. ರಸ್ತೆಗಳು ನಿರ್ಜನವಾಗಿವೆ. ಅಂಗಡಿ ವಹಿವಾಟುಗಳು ಮುಚ್ಚಿವೆ. ಓರ್ವ ನರಪಿಳ್ಳೆಯೂ ಹೊರಗೆ ಕಾಲಿಡುತ್ತಿಲ್ಲ. ಅಗಾಗ ಪೊಲೀಸು ವ್ಯಾನುಗಳಷ್ಟೇ ಅತ್ತ ಇತ್ತ ಸೈರನ್ ಹೊಡೆಯುತ್ತಾ ಓಡುತ್ತಿವೆ. ನಿನ್ನೆ ಇದೇ ವೇಳೆಗೆ ಭುಗಿಲೆದ್ದ ಕೋಮು ಗಲಭೆಗೆ ಆರು ಮಂದಿ ಪ್ರಾಣ ಕಳೆದುಕೊಂಡಿದ್ದರು. ಹತ್ತಾರು ಅಂಗಡಿ ಮನೆಗಳು ಸುಟ್ಟು ಬೂದಿಯಾಗಿದ್ದವು. ಧರ್ಮದ ಹೆಸರಿನಲ್ಲಿ ಮೃಗಗಳಾದ ಮನುಷ್ಯರು ಮನುಷ್ಯರನ್ನು ಬೇಟೆಯಾಡಿದರು. ಎಂದಿನಂತೆ ಪೊಲೀಸರ ನಿರ್ಲಕ್ಷ್ಯಕ್ಕೆ ಗಲಭೆ ಹಿಡಿತಕ್ಕೆ ಬರದೇ ಹೋಯಿತು. ಕೊನೆಗೆ ಮಾಡಿದ ಗೋಲೀಬಾರಿಗೆ ಗಲಭೆ ನಿಯಂತ್ರಣಕ್ಕೆ ಬಂತು. ಆದರೆ ಅದರಲ್ಲಿ ಮೂರು ಮಂದಿ ಶವವಾಗಿದ್ದರು. ಓರ್ವ ಬಸ್ಸು ಚಾಲಕನ ಅಜಾಗ್ರತೆಯಿಂದ ಮಡಿದ ಮುಸ್ಲಿಂ ಯುವಕನ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಗಲಭೆ ಇಡೀ ಊರನ್ನೇ ತಲ್ಲಣ ಗೊಳಿಸಿತ್ತು.

ಒಂದು ನಿಜ ಸಂಗತಿ ಎಂದರೆ ಸತ್ತವರು ಆರು ಮಂದಿಯಲ್ಲ– ಹನ್ನೊಂದು ಮಂದಿ !

ಗಲಭೆ ನಡೆದು ಎರಡು ದಿನಗಳು ಕಳೆದಿವೆ. ಅಜಾದ್ ಮೊಹಲ್ಲಾದಲ್ಲಿ ಇನ್ನೂ ಸ್ಮಶಾನಮೌನ ಕವಿದಿದೆ. ಅಲ್ಲಿಂದ ಹುಟ್ಟಿಕೊಂಡ ಕಿಡಿ ಅಲ್ಲಿಯ ನಾಲ್ಕು ಮಂದಿಯನ್ನು ಬಲಿ ತೆಗೆದುಕೊಂಡಿದೆ. ಅದರಲ್ಲಿ ನಿಲೋಫರ್‌ನ ಅಬ್ಬಾನೂ ಓರ್ವ. ಈಗ ತಾನೇ ಅವನ ಶವದ ಅಂತ್ಯಕ್ರಿಯೆಯಾಗಿದೆ. ಆದರೆ ನೀಲೋಫರ್ ಅಳುತ್ತಿಲ್ಲ. ಗರಬಡಿದಂತೆ ಒಂದು ಮೂಲೆಯಲ್ಲಿ ಒರಗಿ ಕಲ್ಲಾಗಿದ್ದಾಳೆ. ಏನೂ ಮಾಡದ ತನ್ನ ನಿರಪರಾಧಿ ಅಬ್ಬಾನನ್ನು ಏಕೆ ಕೊಂದರು ಎಂದು ಯೋಚಿಸುತ್ತಾಳೆ. ಅಲ್ಲಾಹುವಿಗೆ ಆಕೆಯ ಸುಖ ಸಂತೋಷಗಳಲ್ಲಿ

ಅದೇಕೆ ಮತ್ಸರವೋ ತಿಳಿದಿಲ್ಲ. ಐದು ಮಂದಿ ಸಹೋದರಿಯರಲ್ಲಿ ಈಕೆಯೇ ಕೊನೆಯವಳು. ಬಾಲ್ಯದಿಂದಲೇ ಎಲ್ಲರೂ ಪುಸ್ತಕಗಳಿಗಿಂತ ಬೀಡಿ ಮೊರ ಕಂಡದ್ದೇ ಹೆಚ್ಚು.

ಯೌವನಕ್ಕೆ ಬಂದ ಐದು ಮಗಳಂದಿರನ್ನೂ ಬಿಟ್ಟು ಅಬ್ಬಾ ಈಗ ಹೊರಟು ಹೋಗಿದ್ದಾನೆ. ಅಮ್ಮ ಈಗಲೂ ಶಪಿಸುತ್ತಿದ್ದಾಳೆ. 'ಕೊಂದವರು ಯಾರೇ ಇರಲಿ, ಅವರ ಸಂತಾನ ಕುಟುಂಬ ಸರ್ವನಾಶವಾಗಲಿ.... ಹುಳಬಿದ್ದು ಸಾಯಲಿ'. ಆದರೆ ನಿಲೋಫರ್ ಇನ್ನೂ ಮೌನ ಮುರಿದಿಲ್ಲ. ಆಕೆಗೆ ತನ್ನ ಅಬ್ಬಾನಿಗಿಂತಲೂ ತನ್ನ ಪ್ರಿಯಕರ ಉಲ್ಲಾಸ ಕೊಲೆಯಾದ ಸುದ್ದಿಯೇ ಹೆಚ್ಚು ಆಘಾತ ತಂದಿದೆ. ಗೆಳತಿ ಝುಬೇದಾ ಈ ಸುದ್ದಿ ಕಿವಿಗೆ ಹಾಕಿದಾಗ ಅಬ್ಬಾನ ಶವ ಜಗಲಿ ಮೇಲಿತ್ತು. ಆಕೆಗೆ ಯಾರೋ ಭರ್ಜಿಯಿಂದ ತಿವಿದಂತೆ ಆಗಿತ್ತು.

ಉಲ್ಲಾಸ ಮಾಧವರಾಯರ ಮಗ. ಅವರು ಮೂಲತಃ ಇಲ್ಲಿಯವರಲ್ಲ. ತೀರ್ಥಹಳ್ಳಿ ಕಡೆಯಿಂದ ಆಗಮಿಸಿದ ಅವರು ಇಲ್ಲೇ ವ್ಯಾಪಾರ ಗಟ್ಟಿ ಮಾಡಿದವರು. ಕೋರ್ಟು ಪಕ್ಕದ ಕ್ಯಾಂಟೀನನ್ನು ಗುತ್ತಿಗೆ ಪಡೆದು ಅದರ ಶುಚಿ ರುಚಿಗೆ ಹೆಸರು ಮಾಡಿದರು. ಉಲ್ಲಾಸ ಅಪ್ಪನ ಕ್ಯಾಂಟೀನಿನಲ್ಲಿ ಹಗಲು ರಾತ್ರಿ ದುಡಿಯುತ್ತಿದ್ದ. ಹೈಸ್ಕೂಲು ಮುಗಿಸಿದ್ದ ಅವನು, ಅಪ್ಪನ ವ್ಯವಹಾರಕ್ಕೆ ಸಾಕಷ್ಟು ಸಹಾಯ ಮಾಡಿದ್ದ.

ಅವರ ಕ್ಯಾಂಟೀನ್ ಹಿಂಬದಿಯಲ್ಲಿ ಅಜಾದ್ ಮೊಹಲ್ಲಾ ಹಾದು ಹೋಗುತ್ತದೆ. ಪಕ್ಕದಲ್ಲಿ ದೊಡ್ಡದಾದ ಮಸೀದಿ ಇದೆ. ಇನ್ನೊಂದು ಹೊಸ ಮಸೀದಿಯ ಕೆಲಸ ಅರ್ಧಕ್ಕೆ ಬಂದಿದೆ. ಕಸಾಯಿಗಲ್ಲಿಯ ಇನ್ನೊಂದು ಬದಿಗೆ ಈದ್ಗಾ ಮೈದಾನವಿದೆ. ಮುಸ್ಲಿಮರ ಸುಮಾರು ನೂರು ಮನೆಗಳಿವೆ. ಅದೇ ಬಡತನ, ನಿರುದ್ಯೋಗ ತುಂಬಿಕೊಂಡಿದೆ. ಸುಲೇಮಾನ್ ಬ್ಯಾರಿ ಈಗಿನ ಜಮಾತಿನ ಪ್ರೆಸಿಡೆಂಟರು.

ಹೈಸ್ಕೂಲಿಗೆ, ಬೀಡಿ ಬ್ರಾಂಚಿಗೆ ಅಥವಾ ನಗರಕ್ಕೆ ಹೋಗಲು ಇದೇ ಕೋರ್ಟು ದಾಟಿಯೇ ಹೋಗಬೇಕು. ನಿಲೋಫರ್ ಇರುವವರಲ್ಲಿ ಚಿಕ್ಕವಳಾದ ಕಾರಣ ಬೀಡಿ ಬ್ರಾಂಚಿಗಾಗಲಿ ಅಂಗಡಿಗಾಗಲಿ ಇತರ ವ್ಯವಹಾರಕ್ಕಾಗಲೀ ಇವಳೇ ಹೋಗಬೇಕು. ಅಬ್ಬಾ ಉಸ್ಮಾನ್ ಬ್ಯಾರಿಯವರ ಮರದ ಮಿಲ್ಲಿಗೆ ಕೆಲಸಕ್ಕೆ ಒಮ್ಮೆ ಹೋದರೆ ಹಿಂದಿರುಗುವ ಹೊತ್ತು ಗೊತ್ತು ತಿಳಿದಿಲ್ಲ. ಅದೇನು ಆಕಸ್ಮಿಕವೋ ಯೌವನದ ಹುಚ್ಚೋ ನಿಲೋಫರ್ ಮತ್ತು ಉಲ್ಲಾಸ್ ಪರಿಚಿತರಾದರು. ಯಾರಿಗೂ ತಿಳಿಯದಂತೆ ಅವರ ಪ್ರೀತಿ ಬೆಳೆಯಿತು. ಎರಡು ವರ್ಷಗಳಲ್ಲಿ ಅದು ಗಾಢವಾಗಿ ಹೆಮ್ಮರವಾಗಿ ಬೆಳೆಯಿತು. 'ಮದುವೆಯಾದರೆ ನಿನ್ನನ್ನೇ. ಅದಕ್ಕೆ ನಿನ್ನ ಜಾತಿ ಅಡ್ಡಬರಲಿ, ಊರೇ ಅಡ್ಡ ನಿಲ್ಲಲಿ.... ನಾನು ಹೆದರುವವನಲ್ಲ' ಎಂದು ಭಾಷೆ ಕೊಟ್ಟ. ಆಕೆಯೂ ಅಷ್ಟೆ. 'ಅಕ್ಕಂದಿರ ನಿಖಾ ಮುಗಿಯಲಿ-- ನಾನು ನಿನ್ನನ್ನು ಬಿಟ್ಟು ಬೇರೆ ಯಾರಿಗೂ ದುಲ್ಹನ್ ಆಗಲಾರೆ. ನೀನು ಓಡಿ ಹೋಗುವಾ ಅಂದರೆ

ನಾನು ಅದಕ್ಕೂ ಸಿದ್ಧ. ಆದರೆ ನಿನ್ನನ್ನು ಬಿಟ್ಟು ಕ್ಷಣವೂ ಇರಲಾರೆ' ಅಂದಳು. ಪ್ರೀತಿ ನಿಜಕ್ಕೂ ಕುರುಡು. ಆದರೆ ಎಲ್ಲಿಯವರೆಗೆ? ಮಾಧವರಾಯರಿಗೆ ಮಗನ ಚಕ್ಕಂದ ತಿಳಿದುಹೋಯಿತು. ಆತನ ಜೊತೆ ಜಗಳವಾಯಿತು. ಮಗ ಹಿಡಿದ ಹಠ ಬಿಡಲಿಲ್ಲ. 'ನಾನು ಲಗ್ನವಾದರೆ ಆ ಮುಸ್ಲಿಮ್ ಹುಡುಗಿಯನ್ನು.... ಇಲ್ಲದಿದ್ದರೆ ಈ ಜನ್ಮಕ್ಕೆ ಮದುವೆಯೇ ಬೇಡ 'ಎಂದು ಕೋಲು ಮುರಿದಂತೆ ಹೇಳಿದ.

ಅಪ್ಪ ಮಗನ ಮನಃಸ್ತಾಪ ಅದುಹೇಗೋ ಬಯಲಾಗಿ ಹೋಯಿತು. ಅದು ಅಜಾದ್ ಮೊಹಲ್ಲಾದಲ್ಲೂ ಹಬ್ಬಿತು. ಯಾರೋ ಗಾಳಿಹಾಕಿದರು, ಅದಕ್ಕೆ ಬೆಂಕಿ ಹಿಡಿಯಿತು. ಮಗಳ ಕೃತ್ಯ ಕೇಳಿದ ನಿಲೋಫರ್ ಮನೆಯವರು ದಂಗಾದರು. ಅವಳಿಗೆ ಮನೆಹೊಸ್ತಿಲು ದಾಟದಂತೆ ಮಾಡಿದರು. ಒಂದು ದಿನ ಮಸೀದಿಯ ಮುಲ್ಲಾ ಮತ್ತು ಪ್ರೆಸಿಡೆಂಟರು ಮನೆಗೆ ಬಂದೇ ಬಿಟ್ಟರು. 'ಹಿಂದೂ ಹುಡುಗನನ್ನು ಅಳಿಯನನ್ನಾಗಿ ಮಾಡಿ ಮಗಳ ಜಾತಿ ಕೆಡಿಸುತ್ತೀಯಾ' ಎಂದು ಆರ್ಭಟ ಹಾಕಿದರು. ಬರೇ ಹತ್ತು ನಿಮಿಷಗಳಲ್ಲಿ ಶೇಕಬ್ಬ ಕೇಳಬಾರದ್ದೆಲ್ಲ ಕೇಳಿದ್ದರು. 'ನಾಳೆ ಹಿಂದೂ ಮುಸ್ಲಿಮ್ ಗಲಭೆಯಾದರೆ ಯಾರು ಹೊಣೆ? ನಿನ್ನ ಮಗಳ ದೆಸೆಯಿಂದ ಇಲ್ಲಿ ಹತ್ತಾರು ಮೈಯತ್‌ಗಳು ಉರುಳಬೇಕಾ? ಈ ಜೋಪಡಿಗಳು ಸುಟ್ಟು ಬೂದಿಯಾಗಬೇಕಾ? ಹೇಳು ಇದಕ್ಕೆಲ್ಲ ಯಾರು ಜವಾಬ್ದಾರಿ ?'

ಶೇಕಬ್ಬರ ಕಿವಿಗೆ ಕಾದ ಸೀಸ ಸುರಿದಂತೆ ಆಯಿತು. ಅವರು ಮೆಲ್ಲನೆ ಮೌನ ಮುರಿದರು. ಕಾಯಿಲೆ ಬಿದ್ದಿರುವ ಹೆಂಡತಿ, ಪ್ರಾಯಕ್ಕೆ ಬಂದ ಐದು ಮಂದಿ ಹೆಣ್ಣು ಮಕ್ಕಳು, ಮೈತುಂಬಾ ಸಾಲ, ಲಗ್ನ ಮಾಡಲಾಗದ ಸ್ಥಿತಿ.... 'ನೀವೇ ಒಂದು ದಾರಿ ತೋರಿಸಿ ನೀವು ಹೇಳಿದಂತೆ ಕೇಳುವೆ. ಇಲ್ಲದಿದ್ದರೆ ಒಂದಿಷ್ಟು ವಿಷ ಕೊಡಿ.' ಮೌನವಾದ ಮುಲ್ಲಾ ಹಾಗೂ ಪ್ರೆಸಿಡೆಂಟರು ಯೋಚನೆಗೆ ಬಿದ್ದರು, ಸ್ವಲ್ಪ ಸಮಯ ಹಾಗೆ ಕೂತರು. ಬೆದರಿದ ಮಕ್ಕಳು ಇವೆಲ್ಲವನ್ನು ಒಳಗಿನಿಂದ ಕೇಳಿಸಿಕೊಳ್ಳುತ್ತಿದ್ದರು. ಅದೇನೋ ನಿರ್ಧಾರಕ್ಕೆ ಬಂದ ಪ್ರೆಸಿಡೆಂಟರು ಶೇಕಬ್ಬನನ್ನು ಹೊರಗೆ ಕರೆದುಕೊಂಡು ಹೋದರು.

'ನೋಡು ನಿನ್ನ ನಿಲೋಫರ್ ಒಳ್ಳೇ ರೂಪವಂತೆ. ಎಂಟನೆಯ ತರಗತಿ ಪಾಸೂ ಮಾಡಿದ್ದಾಳೆ. ಈಗ ಯೌವನದ ಅರಳು ಮರುಳಿಗೆ ಹುಚ್ಚಿಯಾಗಿದ್ದಾಳೆ. ಅದೇನೇ ಇರಲಿ, ನಾಡದು ನಮ್ಮ ಮೊಹಲ್ಲಾಕ್ಕೆ ಸೌದಿಯ ಅರಬಿ ಓರ್ವರು ಬರುತ್ತಿದ್ದಾರೆ. ಅವರೇ ನಮ್ಮ ಹೊಸ ಮಸೀದಿ ಕಟ್ಟಿಸಿಕೊಡುತ್ತಿರುವವರು. ಅವರ ಅಮ್ಮಾನ ಕಾಯಿಲೆಗೆ ಮುಂಬೈಗೆ ಬಂದ ಅವರು ಇಲ್ಲಿಗೆ ಬಂದು ಹೋಗುತ್ತಾರೆ. ಮಸೀದಿಯ ನಿರ್ಮಾಣ ಕಾರ್ಯ ನೋಡಿ ಫುಲ್ ಪೇಮೆಂಟ್ ಮಾಡಿ ಹೋಗುತ್ತಾರೆ. ಹಾಗೆ ಹೈದರಾಬಾದಿಗೆ ಹೋಗಿ ನಿಖಾ ಮಾಡಿಕೊಂಡು ಹೋಗುವ ಆಲೋಚನೆಯಲ್ಲೂ ಇದ್ದಾರೆ. ಅವರ ಪತ್ನಿ ಕಳೆದ ವರ್ಷ ತೀರಿಕೊಂಡಿದ್ದಾಳಂತೆ. ಒಂದು ವೇಳೆ ಅವರೊಪ್ಪಿದರೆ ಅವರನ್ನು ನಾವು ನಿಲೋಫರ್‌ನನ್ನು

ತೋರಿಸಿದರೆ ಹೇಗೆ? ಇದೆಲ್ಲ ಗುಟ್ಟಾಗಿ ನಡೆಯುವ ವಿಷಯ. ಸಮಸ್ಯೆಯೂ ಪರಿಹಾರವಾಗುತ್ತದೆ, ಕೈಯಲ್ಲಿ ಸ್ವಲ್ಪ ಕಾಸೂ ಬರುತ್ತದೆ'. ಅವರು ಮುಂದುವರೆಸುತ್ತಿದ್ದಂತೆ ಅಲ್ಲೆ ತಡೆದರು ಶೇಕಬ್ಬ. 'ಮಗಳನ್ನು ಅರಬಿಗೆ ಮಾರಾಟ ಮಾಡು ಅನ್ನುತ್ತಿದ್ದೀರಾ ?'

'ಹಾಗಲ್ಲ. ನಿನ್ನ ಮಗಳ ಹಾಗೂ ಹಿಂದು ಹುಡುಗನ ಸಂಬಂಧದ ಬಗ್ಗೆ ಊರೆಲ್ಲ ಸುದ್ದಿಯಾಗಿದೆ. ಇದೆಲ್ಲ ತಿಳಿದು ಆಕೆಯನ್ನು ಯಾವ ಹುಡುಗ ಮದುವೆಯಾಗಲು ಬರುತ್ತಾನೆ? ಯಾವ ಅಪ್ಪ ಈ ಮದುವೆಯಾಗಲು ಬಿಡುತ್ತಾನೆ? ನಿಮ್ಮ ಕಷ್ಟ ತಿಳಿದರೆ ಅರಬಿ ಉಳಿದ ಮಕ್ಕಳಿಗೂ ಮದುವೆ ಮಾಡಿಯಾನು. ಇದು ನಿಮಗೆ ಲಾಭವಲ್ಲವೇ? ಇಂತಹ ಅವಕಾಶ ಮತ್ತೆ ಮತ್ತೆ ಬಾರದು. ನೀವು ಸರಿಯಾಗಿ ಯೋಚನೆ ಮಾಡಿ' ಎಂದು ಹೇಳಿ ಅವರು ಮಸೀದಿಯತ್ತ ನಡೆದರು.

ಆದರೆ ಮರುದಿನವೇ ಕೋಮು ಗಲಭೆ ಹುಟ್ಟಿಕೊಂಡಿತು. ಪ್ರೆಸಿಡೆಂಟರ ಮನೆಗೆ ಹೋಗಿದ್ದ ಶೇಕಬ್ಬನನ್ನು ಹಿಂತಿರುಗುವಾಗ ಯಾರೋ ಕಡಿದು ಹಾಕಿದ್ದರು. ಮಾಧವರಾಯರ ಕ್ಯಾಂಟೀನಿಗೆ ಹೊರಗಿಂದ ಬೀಗ ಜಡಿದು ಬೆಂಕಿಕೊಟ್ಟಿದ್ದರು. ಕರಟಿ ಹೋದ ಶವಗಳಲ್ಲಿ ಯಾರೋ ಉಲ್ಲಾಸನನ್ನು ಗುರುತಿಸಿಕೊಂಡರು.

ಹತ್ತು ವರ್ಷಗಳು ಕಳೆದು ಹೋಗಿವೆ. ಅಜಾದ್ ಮೊಹಲ್ಲಾ ಎಲ್ಲೆಲ್ಲೂ ಬದಲಾವಣೆಯಾಗಿದೆ. ಹುಲ್ಲಿನ ಅನೇಕ ಮಾಡುಗಳು ಕಾಣೆಯಾಗಿ ಹಂಚಿನ ಮನೆಗಳು ಬಂದಿವೆ. ಐದಾರು ತಾರಸಿ ಮನೆಗಳೂ ಎದ್ದು ನಿಂತಿವೆ. ಬಶೀರ್‌ಭಾಯಿ ದೊಡ್ಡ ಶಾದಿಮಹಲ್ ಕಟ್ಟಿಸಿದ್ದಾರೆ. ಸುಲೇಮಾನ್‌ಭಾಯಿ ದೊಡ್ಡ ತಾರಸಿ ಮನೆ ಕಟ್ಟಿದ ಬಳಿಕ ಜಮಾತಿನ ಪ್ರೆಸಿಡೆಂಟ್ ಹುದ್ದೆ ಬಿಟ್ಟುಕೊಟ್ಟಿದ್ದಾರೆ. ಮೀನಿನ ಸುಲೇಮಾನ್ ಈಗ ಸುಲೇಮಾನ್‌ಭಾಯಿ ಆಗಿ ಜಮಾತಿನ ಪ್ರೆಸಿಡೆಂಟರಾಗಿದ್ದಾರೆ. ಗುಜರಿ ವ್ಯಾಪಾರಿ ಹಂಜಾಕ ಈಗ ನಾಲ್ಕು ಬಸ್ಸುಗಳ ಒಡೆಯ. ಹಜ್ ಮುಗಿಸಿ ಹಾಜಿ ಹಂಜಾಕ ಎನಿಸಿದ್ದಾರೆ. ಕಸಾಯಿಗಲ್ಲಿ ಅಮೀರ್ ತೀರಿಕೊಂಡ ಬಳಿಕ ಕಡಿ– ಕೊಲ್ಲು ಸಂಸ್ಕೃತಿ ಕಡಿಮೆಯಾಗಿದೆ. ಹೆಚ್ಚಿನ ಬಿಸಿರಕ್ತದ ತರುಣರು ದೂರದ ದುಬೈ, ಕತಾರ್, ಸೌದಿಗಳಿಗೆ ತೆರಳಿದ್ದಾರೆ. ಯುವತಿಯರು ಮೈತುಂಬಾ ಬುರ್ಖಾ ಹೊದ್ದು ಧಾರ್ಮಿಕ ತರಗತಿಗಳಿಗೆ ಹೋಗಲಾರಂಭಿಸಿದ್ದಾರೆ. ಮಸೀದಿ ಪಕ್ಕದಲ್ಲಿ ಇಂಗ್ಲಿಷ್ ಮೀಡಿಯಂ ಶಾಲೆ ಆರಂಭವಾಗಿದೆ.

ಈಗ ನಿಲೋಫರ್ ಮನೆಯಲ್ಲಿ ಯಾರೂ ಇಲ್ಲ. ಮೊದಲು ಮದುವೆಯಾದದ್ದು ನಿಲೋಫರ್. ಆಕೆ ಅರಬಿಯನ್ನು ಮದುವೆಯಾಗಿ ಸೌದಿ ಸೇರಿದ್ದಾಳೆ. ಆಮೇಲೆ ಆಕೆಯ ಎಲ್ಲ ಅಕ್ಕನವರಿಗೂ ಮದುವೆಯಾಗಿದೆ.

ಗಲಭೆಯ ಮೊದಲ ದಿನ ಮಾಧವರಾಯರು ಹೆದರಿಹೋಗಿದ್ದರು. ಕೋಮುಗಲಭೆಗೆ ತನ್ನ ಮಗನೇನೂ ಕಾರಣವಲ್ಲ ಎಂದು ತಿಳಿದಿದ್ದರೂ ಊರೆಲ್ಲ ಅವನ ಮೇಲೆ ಹೊಂಚು ಹಾಕುತ್ತಿದ್ದಾರೆ ಎಂದು ತಿಳಿದಿತ್ತು. ಅವರಿಂದ ತಪ್ಪಿಸಿ ರಾತೋರಾತ್ರಿ ಮುಂಬೈಗೆ ಮಗನನ್ನು ಬಸ್ಸು ಹತ್ತಿಸಿ ಗಲಾಟೆ ಕಡಿಮೆಯಾಗದೆ ವ್ಯಾಪಾರ ಇಲ್ಲವಲ್ಲ ಎಂದುಕೊಂಡು ತಾವು ತೀರ್ಥಹಳ್ಳಿಗೆ ಹೊರಟು ಹೋಗಿದ್ದರು. ಅದೇ ದಿನ ರಾತ್ರಿ ಅವರ ಕ್ಯಾಂಟೀನಿಗೆ ಬೆಂಕಿ ಬಿದ್ದಿತ್ತು. ಹೊರಗೆ ರಸ್ತೆ ಬದಿಯಲ್ಲಿ ಮಲಗುತ್ತಿದ್ದ ಮೂವರು ಗಲಭೆಗೆ ಹೆದರಿ ಅಲ್ಲೇ ಒಳಗೆ ಮಲಗಿದ್ದರು. ಈ ಮೂವರನ್ನು ಕೋಮುವಾದಿಗಳು ಕ್ಯಾಂಟೀನು ಸಮೇತ ಸುಟ್ಟು ಹಾಕಿದ್ದರು.

'ನೋಡಿದಿಯಲ್ಲ ಅವಾಂತರವನ್ನ. ಆ ಹುಡುಗಿಯೂ ಬೇಡ ಆ ಊರೂ ಬೇಡ. ಅಲ್ಲಿಗೆ ಹೋಗುವುದಾದರೆ ನನ್ನ ಹೆಣ ದಾಟಿ ಹೋಗಬೇಕು' ಎಂದು ಮಗನಿಗೆ ಕಟ್ಟಪ್ಪಣೆ ವಿಧಿಸಿದ್ದರು ಮಾಧವರಾಯರು. ಆದರೂ ಸ್ವಲ್ಪ ಸಮಯದ ಮೇಲೆ ಉಲ್ಲಾಸ ಮನೆಮಂದಿಗೆ ತಿಳಿಯದಂತೆ ಅಜಾದ್ ಮೊಹಲ್ಲಾಕ್ಕೆ ಬಂದಿದ್ದ. ನಿಲೋಫರ್ ಮದುವೆಯಾಗಿ ಸೌದಿಗೆ ತೆರಳಿದ ಸುದ್ದಿ ಸಿಕ್ಕಿತ್ತು. ಭಾರವಾದ ಹೃದಯದೊಂದಿಗೆ ಮತ್ತೆ ಮುಂಬೈಗೆ ಮರಳಿದ್ದ.

*

ಸೌದಿ ಅರೇಬಿಯದ ಬಿಸಿಲಿನ ಬೇಗೆಗೆ ಅನುಕೂಲವಂತರು ತಂಪು ಹವೆಯ ದೇಶಗಳಿಗೆ ತೆರಳುತ್ತಾರೆ. ಮಕ್ಕಳಿಗೆ ಬೇಸಿಗೆ ರಜೆ ಕಳೆದು ಶಾಲೆ ಆರಂಭವಾಗುವಾಗ ಹಿಂದಿರುಗಿ ಬರುತ್ತಾರೆ. ರಜಿಯಾ ಈ ಬಾರಿ ಮಕ್ಕಳೊಂದಿಗೆ ಅಮೆರಿಕಾಕ್ಕೆ ತೆರಳಿದ್ದಳು. ಅಲ್ಲಿ ಆಕೆಯ ಗಂಡನ ಸಹೋದರ ವ್ಯಾಪಾರ ನಡೆಸುತ್ತಿದ್ದಾರೆ. ರಜೆ ಮುಗಿಸಿ ಅವರೆಲ್ಲ ಅಮೆರಿಕಾದಿಂದ ಹಿಂದಿರುಗಿ ಬಂದರು. ಆಕೆಯ ಗಂಡ ತನ್ನ ಆಫೀಸಿನ ಬಳಿ ಕಾರಿಳಿದು 'ಹೆಂಡತಿಯನ್ನೂ ಮಕ್ಕಳನ್ನೂ ಮನೆಗೆ ಬಿಟ್ಟು ಬಾ' ಎಂದು ಡ್ರೈವರ್‌ಗೆ ಹೇಳಿದ್ದರು.

ಅದುವರೆಗೂ ಆಕೆಯನ್ನೇ ಗಮನಿಸುತ್ತಿದ್ದ ಡ್ರೈವರ್ ಆಕೆಯಲ್ಲಿ ಪ್ರಶ್ನಿಸಿದ 'ನೀನು ನಿಲೋಫರ್ ತಾನೆ ?'

ಡ್ರೈವರನನ್ನೊಮ್ಮೆ ಕಣ್ಣೆತ್ತಿ ನೋಡಿದಳು ರಜಿಯಾ. ಆತ ಉಲ್ಲಾಸ !

'ನಿಲೋಫರ್, ನಿನ್ನನ್ನು ಹುಡುಕಿ ಊರಿಗೆ ಹೋದಾಗ ನೀನು ಮದುವೆಯಾಗಿ ಸೌದಿ ಸೇರಿದ ವಿಷಯ ತಿಳಿಯಿತು. ಮತ್ತೆ ಮುಂಬೈಗೆ ಹಿಂದಿರುಗಿ ಕಷ್ಟಪಟ್ಟು ದುಡಿದೆ. ಎಲ್ಲಾ ಹಣ ಏಜಂಟನ ಕೈಯಲ್ಲಿಟ್ಟು ವೀಸಾ ಪಡೆದು ಇಲ್ಲಿಗೆ ಬಂದೆ. ಇಲ್ಲಿ ಬಂದು ಎರಡು ವರ್ಷವಾಯಿತು. ನಿನ್ನನ್ನು ನೋಡದೆ ಹಿಂದೆ ಹೋಗುವುದಿಲ್ಲ ಎಂದು ಶಪಥ ಮಾಡಿದ್ದೆ.

ಅನಿರೀಕ್ಷಿತವಾಗಿ ಒಂದು ವಾರದ ಹಿಂದೆ ನಿಮ್ಮ ಕಂಪೆನಿಯಲ್ಲಿ ಡ್ರೈವರ್ ನೌಕರಿ ದೊರೆಯಿತು. ಈಗ ನೀನೂ ಸಿಕ್ಕಿದೆ' ಆತ ಮುಂದುವರಿಸುತ್ತಲೇ ಇದ್ದ.

ಒಂದೊಂದಾಗಿ ಮಕ್ಕಳೆಲ್ಲ ನಿದ್ದೆ ಹೋದವು.

'ನೀನು ಯಾಕೆ ಮಾತಾಡುವುದಿಲ್ಲ ನಿಲೋಫರ್?' ಆತ ಅಸಹನೆಯಿಂದ ಕೇಳಿದ.

'ನಿಲೋಫರ್ ತೀರಿಹೋಗಿದ್ದಾಳೆ. ಅಂದು ಉಲ್ಲಾಸ ಕರಟಿ ಹೋಗಿದ್ದಾನೆ ಅಂತ ತಿಳಿದಾಗ ನಿಲೋಫರ್ ಕೂಡ ಸತ್ತು ಹೋದಳು. ನಿಲೋಫರ್ ಮತ್ತು ಉಲ್ಲಾಸನ ಸಂಬಂಧ ತಿಳಿದಿತ್ತು ಬಂದಿದ್ದ ಅರಬಿಗೆ. ಜಮಾತಿನ ಪ್ರೆಸಿಡೆಂಟರಿಗೆ ಆಗದ ಅದ್ಯಾರೋ ಅವರಿಗೆಲ್ಲ ವಿಷಯ ಹೇಳಿದ್ದರು. ನನ್ನ ಗಂಡ ಮೊದಲಾಗಿ ಹೇಳಿದ್ದೇ ಹಾಗೆ. ಇವತ್ತಿನಿಂದ ನೀನು ನಿಲೋಫರ್ ಅಲ್ಲ. ಉಲ್ಲಾಸನೊಂದಿಗೆ ನಿಲೋಫರ್ ಕೂಡ ಸತ್ತು ಹೋದಳು ಅಂತ ತಿಳಿದುಕೋ. ಇವತ್ತಿನಿಂದ ನೀನು ರಜಿಯ. ತೀರಿಹೋದ ನನ್ನ ಹೆಂಡತಿ ರಜಿಯಾ ಹೀಗೆ ನನ್ನ ಗಂಡ, ಸತ್ತಿದ್ದ ನಿಲೋಫರ್‌ನ ದೇಹ ಎತ್ತಿಕೊಂಡು ಬಂದ. ಆತನಿಗೆ ರಜಿಯಾ ಮಡಿದ ಆ ದುಃಖ ಸಹಿಸಲಾಗಿರಲಿಲ್ಲ. ಮಾನಸಿಕವಾಗಿ ಸತ್ತಿದ್ದ ನಿಲೋಫರ್‌ನ ದೇಹದಲ್ಲಿ ಆತ ರಜಿಯಾಳನ್ನು ಕಂಡಿದ್ದ. ಹಂತ ಹಂತವಾಗಿ ನನ್ನನ್ನು ರಜಿಯಾಳನ್ನಾಗಿ ಮಾಡಿದ್ದ. ರಜಿಯಾಳ ಉಡುಗೆ, ಸೆಂಟು, ಲಿಪ್‌ಸ್ಟಿಕ್ಕು, ಕೇಶವಿನ್ಯಾಸ ವಸ್ತುಗಳು ಏನೆಲ್ಲಾ ರಜಿಯಾ ಉಪಯೋಗಿಸುತ್ತಿದ್ದಳೋ ಅದೆಲ್ಲಾ ನನಗೆ ತಂದಿತ್ತ. ನನ್ನ ದೇಹದ ಆಸೆಗೆ ಎತ್ತಿಕೊಂಡು ಬಂದಿದ್ದ ಎಂದು ತಿಳಿದಿದ್ದೆ. ಆದರೆ ಆತನಿಗೆ ಆತನ ರಜಿಯಾ ಬೇಕಿತ್ತು. ನನ್ನ ರಜಿಯಾ ಹಾಗೆ ಮಾಡುತ್ತಿದ್ದಳು, ಹೀಗೆ ಮಾಡುತ್ತಿದ್ದಳು ಎಂದು ಎಲ್ಲವನ್ನು ಕಲಿಸಿಕೊಟ್ಟು ನನ್ನನ್ನು ರಜಿಯಾಳನ್ನಾಗಿ ಮಾಡಿದ. ಭಾರತದಿಂದ ಮಾಂಸದ ಮುದ್ದೆಯೊಂದನ್ನು ತಂದು ರಜಿಯಾಳನ್ನಾಗಿ ಮಾಡಿದ್ದೇನೆ ಎಂದು ಗೆಳೆಯರಲ್ಲಿ ಹೇಳುತ್ತಿದ್ದ. ರಜಿಯಾಳ ಎಲ್ಲ ಸ್ಥಾನಮಾನ ನನಗೆ ಕೊಡಿಸಿದ್ದಾನೆ. ಈ ಹತ್ತು ವರ್ಷಗಳಲ್ಲಿ ನಾನು ರಜಿಯಾ ಆಗಿಹೋಗಿದ್ದೇನೆ. ಮೂರು ಮಕ್ಕಳನ್ನು ಹೆತ್ತಿದ್ದೇನೆ, ನೀನು ಸತ್ತುಹೋದೆ ಅಂತಾದ ಮೇಲೆ ನನಗೆ ಬದುಕಿನಲ್ಲಿ ದೊಡ್ಡ ಆಕಾಂಕ್ಷೆ ಇರಲಿಲ್ಲ. ನನ್ನ ಗಂಡನ ರಜಿಯಾ ಆಗಿ ಇದ್ದೇನೆ. ನೀನೂ ಅಷ್ಟೆ. ಸುಮ್ಮನೆ ಇತಿಹಾಸ ಕೆಣಕಿ ಜೀವನ ಹಾಳು ಮಾಡಿಕೊಳ್ಳಬೇಡ. ಉಲ್ಲಾಸ ಅಂದೇ ಸತ್ತಿದ್ದಾನೆ ಅಂತ ತಿಳಿದುಕೋ. ಅದೇ ದಿನ ನಿಲೋಫರ್ ಕೂಡ ಸತ್ತಿದ್ದಾಳೆ ಅಂತಲೂ ತಿಳಿದುಕೋ' ಆಕೆ ಕಾರು ಇಳಿದು ಮನೆಯೊಳಗೆ ಹೊರಟು ಹೋದಳು.

ಮರುದಿನ ಬೆಳಿಗ್ಗೆ ಡ್ರೈವರ್ ಕೊಠಡಿ ಖಾಲಿಯಾಗಿತ್ತು. ಈ ವಿಷಯ ಮನೆಯ ಕೆಲಸದಾಳು ರಜಿಯಾಳಿಗೆ ಮೊದಲು ಬಂದು ಹೇಳಿದಳು. ಉಲ್ಲಾಸ ಮುಂಜಾನೆ ತನ್ನ ಬ್ಯಾಗು ಹಿಡಿದು ಹೊರಟು ಹೊಗಿದ್ದ.

ಅವನ ಕೊಠಡಿಯಲ್ಲಿ ನಿಲೋಫರ್‌ನ ಸಣ್ಣ ಪತ್ರವೊಂದು ಸಿಕ್ಕಿತು.

'ಪ್ರೀತಿಯ ನಿಲೊಫರ್,

ನೀನು ನಿನ್ನೆ ಹೇಳಿದ ಸಂಗತಿಯಲ್ಲಿ ಸತ್ಯವಿದೆ. ನಾನು ನಿನ್ನ ಬದುಕಿನ ನಡುವೆ ಬರಲಾರೆ. ಅದಕ್ಕಾಗಿ ನಾನು ದೂರ ಹೋಗುತ್ತಿದ್ದೇನೆ. ಆದರೆ ಒಂದು ನೆನಪಿಡು. ನಾನು ನಿನ್ನನ್ನು ನಿನ್ನೆಯೂ ಪ್ರೀತಿಸುತ್ತಿದ್ದೆ, ಇವತ್ತಿಗೂ ಪ್ರೀತಿಸುತ್ತಿದ್ದೇನೆ. ಈ ಪ್ರೀತಿಯನ್ನು ನಾನು ಯಾರ ಜೊತೆಯೂ ಹಂಚಿಕೊಳ್ಳಲಾರೆ. ಅದಕ್ಕಾಗಿ ನಾನು ಇವತ್ತಿಗೂ ಮದುವೆಯಾಗದೇ ಉಳಿದುಕೊಂಡಿದ್ದೇನೆ. ನೀನು ಸುಖವಾಗಿರುವುದು ಬೇಕಿತ್ತು ನನಗೆ, ಅದನ್ನು ಕಣ್ಣಾರೆ ಕಂಡಿದ್ದೇನೆ. ನನಗಿನ್ನೇನೂ ಬೇಡ. ನಿನ್ನ ಪ್ರೀತಿಯ ನೆರಳಿನಲ್ಲಿ ನಾನು ಮುಂದಕ್ಕೂ ಬದುಕಿರುತ್ತೇನೆ'.

ಇತಿ ನಿನ್ನ,

ಉಲ್ಲಾಸ

ಪತ್ರ ಮುಗಿಸುತ್ತಿದ್ದಂತೆ ಅವಳಿಗೆ ತಿಳಿಯದೆ ಎರಡು ಹನಿ ಕಣ್ಣೀರು ಉರುಳಿ ಬಿತ್ತು.

•

# ಅಲ್ಲಿದೆ ನಮ್ಮ ಮನೆ

**– ನಳಿನಿ ಮೈಯ**

ಹಾಗೆ ನೋಡಿದರೆ ಶ್ರೀಸಾಮಾನ್ಯರ ಕನಸುಗಳನ್ನು ನನಸಾಗಿಸುವ ದೇಶ ಎಂದೇ ಹೆಸರುವಾಸಿಯಾದ ಅಮೆರಿಕಾಗೆ ಬಂದ ಮೇಲೆ ಪ್ರೇಮ್‌ಚೋಪ್ರಾನ ಜೀವನ ಏನೇನೂ ಸುಗಮವಾಗಿರಲಿಲ್ಲ. ಎರಡು ವರ್ಷಗಳಿಂದ ಈ ರೆಸ್ಟೊರೆಂಟಿನಲ್ಲಿ ಹಗಲು ರಾತ್ರಿ ಕೆಲಸ ಮಾಡಿದರೂ ಕೂಡಿಟ್ಟ ದುಡ್ಡು ಅಷ್ಟರಲ್ಲೇ ಇತ್ತು. ಎದುರಿಗೆ ಬೆಟ್ಟದ ಹಾಗೆ ರಾಶಿ ಬಿದ್ದ ಕೊಳೆ ಪಾತ್ರೆಗಳನ್ನು ನೋಡಿ ನಿಟ್ಟುಸಿರುಬಿಟ್ಟ ಪ್ರೇಮ್. ಒಂದು ಬ್ರೇಕ್ ತೆಗೆದುಕೊಂಡು ರೆಸ್ಟ್‌ರೂಮ್‌ಗೆ ಹೋದ. ಕನ್ನಡಿಯಲ್ಲಿ ನೋಡಿಕೊಂಡ ಮುಖದಲ್ಲಿ ಸೋಲು ಸ್ಪಷ್ಟವಾಗಿ ಮೂಡಿತ್ತು. ಅವನ ಸಿಖ್‌ವೇಷ, ಭೂಷಣವಾದ ಗಡ್ಡ, ಮೀಸೆ, ಟರ್ಬನ್ ಎಲ್ಲವನ್ನೂ ಆವರಿಸಿ ನಿಂತಿತ್ತು ಆ ಸೋಲಿನ ಛಾಯೆ. ಸ್ವಲ್ಪ ಅಡ್ಡಾಡುತ್ತಾ ಹಾಗೇ ಕುಳಿತಿದ್ದ ಕಸ್ಟಮರ್ಸ್ ಕಡೆಗೆ ಹೋಗಿ ಕಣ್ಣು ಹಾಯಿಸಿದ. ಅಲ್ಲೇ ಚಾ ಹೀರುತ್ತಾ ಕುಳಿತಿದ್ದ ಕುಲ್‌ದೀಪ್, ಪ್ರೇಮ್ ಕಡೆಗೆ ನೋಡಿ ಮುಗುಳ್ನಗುತ್ತಾ 'ಕೈಸೆ ಚಲ್ ರಹಾ ಹೈ, ಭಯಿ ?' ಎಂದ. 'ಠೀಕ್ ಹೈ' ಎಂದು ಮರು ನಕ್ಕ ಪ್ರೇಮ್. ಮನುಷ್ಯ ಸ್ವಭಾವದ ವೈಚಿತ್ರ್ಯಗಳಲ್ಲಿ ಅದೂ ಒಂದು. ಮನಸ್ಸು ಗೊಂದಲಮಯವಾಗಿದ್ದರೂ, ಬದುಕೇ ತಲೆ ಕೆಳಗಾಗಿದ್ದರೂ, ಯಾರಾದರೂ 'ಹೇಗಿದ್ದೀಯಾ?'ಎಂದು ಕೇಳಿದರೆ 'ಚೆನ್ನಾಗಿದ್ದೀನಿ'ಅಂತಲೇ ಹೇಳುವುದು!

ಎಷ್ಟೊಂದು ಕನಸು ಕಂಡಿದ್ದ ಅವನು! ಚಿಕ್ಕಂದಿನಿಂದಲೂ ತಾಯಿ ಆಗಾಗ ಟ್ರಂಕಿನಲ್ಲಿ ಜೋಪಾನವಾಗಿಟ್ಟಿದ್ದ ಒಂದು ಫೋಟೋ ತೆಗೆದು ತೋರಿಸುತ್ತಿದ್ದಳು. ಹಳೆಯ ಮಾಸಲು ಫೋಟೋ ಅದಾದರೂ ಅದರಲ್ಲಿ ಕಾಣುವ ಬಂಗಲೆ ಕಣ್ಸೆಳೆಯುವಂತಿತ್ತು. ಪ್ರೇಮ್ ಹತ್ತಿರ ಕುಳಿತು ಆ ಫೋಟೋ ಮೇಲೆ ಪ್ರೀತಿಯಿಂದ ಕೈ ನೇವರಿಸುತ್ತಾ ಅಮ್ಮ ಹೇಳುತ್ತಿದ್ದಳು. 'ಬೇಟಾ, ಇದು ಲಾಹೋರಿನಲ್ಲಿದ್ದ ನಮ್ಮ ಮನೆ. ಆ ವೈಭವ, ಶ್ರೀಮಂತಿಕೆ ಎಲ್ಲ ದೇಶ ಒಡೆದು ಹೋದ ದಿನವೇ ಹೊರಟುಹೋಯಿತು. ನಿರ್ಗತಿಕರಾಗಿ ನಾವು ದೆಹಲಿ ಸೇರಿದೆವು.

ದಾರಿಯಲ್ಲೇ ನೀರು ತರಲು ಸ್ವಲ್ಪ ದೂರ ಹೋಗಿದ್ದ ನಿನ್ನ ತಂದೆಯನ್ನು ಮುಸಲ್ಮಾನನೊಬ್ಬ ಕೊಂದುಹಾಕಿದ. ಪ್ರೇಮ್, ನೀನು ಅಪ್ಪನನ್ನೇ ಹೋಲುವ ಮಗುವಾಗಿದ್ದೆ. ನಿನ್ನಲ್ಲಿ ನಾನು ಅವರನ್ನು ಕಂಡೆ. ಸಮಾಧಾನ ಮಾಡಿಕೊಂಡೆ. ಪ್ರೇಮ್ ನಾನು ಸಾಯುವ ಮುನ್ನ ಮತ್ತೆ ಇಂಥದೇ ಬಂಗಲೆಯಲ್ಲಿ ವಾಸಿಸುವ ಹಾಗೆ ಮಾಡು'.

ತೀರಾ ಚಿಕ್ಕವನಿದ್ದಾಗ ಕೇಳಿದ ಈ ಮಾತುಗಳು ಅವನನ್ನು ಗೊಂದಲಕ್ಕೀಡು ಮಾಡಿದ್ದವು ! ಆ ವಯಸ್ಸಿನಲ್ಲಿ ಮನೆಯ ಬಗ್ಗೆ ಪ್ರೇಮ್ ತಲೆ ಕೆಡಿಸಿಕೊಳ್ಳದಿದ್ದರೂ ತನಗೆ ತಂದೆ ಇಲ್ಲವೆಂಬ ಅವ್ಯಕ್ತ ನೋವಿನ ಗೆರೆಗಳು ಹೃದಯದಲ್ಲಿ ಮೂಡಿದ್ದು ಆಗಲೇ! ಬೆಳೆದಂತೆಲ್ಲ ಆ ಗೆರೆಗಳೂ ಬೆಳೆದು ಬಲವಾದ ಹಗ್ಗಗಳಾಗಿ ಆಗಾಗ ಅವನ ಹೃದಯವನ್ನು ಜಗ್ಗಿ ನೋಯಿಸುತ್ತಿದ್ದವು ! ಏನೋ ಒಂದು ಅನಾಥ ಭಾವ ಅವನ ಹೃದಯವನ್ನೆಲ್ಲ ವ್ಯಾಪಿಸಿಬಿಡುತ್ತಿತ್ತು. ತನ್ನ ತಂದೆ ಹೇಗಿದ್ದಿರಬಹುದು? ಎಂದು ತಾನು ನೋಡಿದ ಹಳೆಯ ಮಾಸಲು ಫೋಟೋಗಳ ಆಧಾರದ ಮೇಲೆ ಚಿತ್ರ ಕಲ್ಪಿಸಿಕೊಳ್ಳುತ್ತಿದ್ದ. ಪ್ರದೀಪ್ ಚಾಚಾ ತಂದೆಯ ತಮ್ಮನಲ್ಲವೆ ? ಅವರ ಹಾಗೇ ಇದ್ದರೋ ಏನೋ ಎಂದುಕೊಳ್ಳುತ್ತಿದ್ದ. ಚಾಚಾ ಹತ್ತಿರ ಕುಳಿತು ತನ್ನ ತಂದೆಯ ಬಗ್ಗೆ ಬಹಳಷ್ಟು ವಿಚಾರಿಸುತ್ತಿದ್ದ. ಅವರೂ ಬೇಸರವಿಲ್ಲದೆ ತಮ್ಮ ನೆನಪಿನ ಬುತ್ತಿಯನ್ನೆಲ್ಲ ಬಿಚ್ಚಿ ಅಣ್ಣನ ಸವಿ ನೆನಪುಗಳನ್ನು ಉಣಬಡಿಸುತ್ತಿದ್ದರು. ಅವರಂತೂ ಪ್ರೇಮ್‌ನನ್ನು 'ಬೇಟಾ' ಎಂದೇ ಕರೆಯುತ್ತಿದ್ದರು. ಆದರೆ.... ತಾನು ಅವರನ್ನು ಕರೆಯುವುದು 'ಚಾಚಾ' ಎಂದಲ್ಲವೆ ! ಎಂದಾದರೂ ಅವರು ತನ್ನ ಬಾಪ್ ಆಗಲು ಸಾಧ್ಯವೆ !

ಇಸವಿ ೧೯೭೮. ಪ್ರೇಮ್‌ಗೆ ೩೨ ವರ್ಷವಾದರೂ ಸರಿಯಾದ ಕೆಲಸ ಸಿಕ್ಕಿರಲಿಲ್ಲ. ಸಿಖ್ ಉಗ್ರಗಾಮಿಗಳ ಚಟುವಟಿಕೆಗಳು ಜೋರಾಗಿ ನಡೆಯುತ್ತಿದ್ದ ಕಾಲ. ತಮಗೇ ಪ್ರತ್ಯೇಕವಾದ ಒಂದು ರಾಷ್ಟ್ರ ಬೇಕೆಂದು ಹಿಂಸೆಗೆ ಇಳಿದಿದ್ದ ಕಾಲ. ಸುತ್ತ ಮುತ್ತಲೂ ಎಲ್ಲರ ಮುಖದಲ್ಲೂ ಪ್ರೀತಿ ಸ್ನೇಹದ ಬದಲು ಸಂಶಯ, ಅಪನಂಬಿಕೆಯ ನೆರಳು ! 'ಅಬ್ಬ ! ನಾನೇಕೆ ಇಷ್ಟು ಅನ್‌ಲಕ್ಕಿ! ಜನ್ಮಭೂಮಿಯನ್ನು ತೊರೆದು ಬಂದೆ. ಅಪ್ಪನನ್ನು ಕಳೆದುಕೊಂಡೆ. ಕಡೆಗೆ ಈ ದೇಶವನ್ನೇ ಮನೆಯಾಗಿಸಿಕೊಳ್ಳೋಣವೆಂದರೆ ಇಲ್ಲಿಯೂ ಈ ಕಥೆ! ಮನೆಯವರು ಎನ್ನಿಸಿಕೊಂಡ ಈ ಜನ ನನ್ನನ್ನು ತಮ್ಮಲ್ಲಿ ಒಬ್ಬನನ್ನಾಗಿಸಿಕೊಳ್ಳದಿದ್ದರೆ ನಾನು ಮನೆಯವನಾಗುವುದು ಹೇಗೆ? ಇದು ನನ್ನ ಮನೆಯಾಗುವುದು ಹೇಗೆ ? ಇದಕ್ಕೆಲ್ಲ ಒಂದೇ ಪರಿಹಾರ. ತನ್ನ ಗಡ್ಡ, ಮೀಸೆ ಬೋಳಿಸಿ, ಟರ್ಬನ್ ತೆಗೆಯಬೇಕು !' ಪ್ರದೀಪ್ ಚಾಚಾನ ಮುಂದೆ ಇಟ್ಟ ತನ್ನ ಆಲೋಚನೆಗಳನ್ನು. ಅವರು ನಕ್ಕುಬಿಟ್ಟರು! 'ಬೇಟಾ, ನೀನು ಸುತ್ತಮುತ್ತಲಿನ ಪ್ರತಿಕೂಲ ಪರಿಸ್ಥಿತಿಯೇ ನಿನ್ನ ಸಮಸ್ಯೆ ಅಂತ ಅಂದುಕೊಂಡಿದ್ದೀ. ಆದರೆ ನಿನ್ನ ಸಮಸ್ಯೆ ಅದಲ್ಲ. ಇಂತಹ ಸಾವಿರ ಪರಿಸ್ಥಿತಿಗಳನ್ನು ಮೀರಿ ನಿಲ್ಲಬಹುದು

ನಿನ್ನ ಮನಸ್ಸಿನಲ್ಲಿ ಸ್ಥೈರ್ಯ ಒಂದಿದ್ದರೆ. ಈಗ ನಿನ್ನ ಮುಂದಿರುವ ದೊಡ್ಡ ಸಮಸ್ಯೆ ಅಂದರೆ ನಿನ್ನ ಹೇಡಿತನ!' ಎಂದರು.

ಅದೇ ಮೊದಲು, ಅದೇ ಕೊನೆ. ಆಮೇಲೆ ವೇಷ ಬದಲಿಸುವ ಯೋಚನೆಯನ್ನೇ ಮನಸ್ಸಿನಿಂದ ಕಿತ್ತು ಹಾಕಿದ ಪ್ರೇಮ್. 'ಆದರೂ ಚಾಚಾ, ಪ್ರಾಣಿಗಳೇ ವಾಸಿ. ಅವು ಕೊಂದರೆ ಆಹಾರಕ್ಕಾಗಿ ಮಾತ್ರ. ಮನುಷ್ಯರ ಹಾಗೆ ಜಾತಿ, ಜಾಗ, ದೇಶ ಅಂತ ಏನೇನೋ ಕಾರಣ ಒಡ್ಡಿ ನಿರಪರಾಧಿಗಳನ್ನು ಕೊಲ್ಲುವುದಿಲ್ಲ' ಎನ್ನುತ್ತಿದ್ದ. ಆಗಲೇ ಹೇಳಿದ್ದಲ್ಲವೆ ಪ್ರದೀಪ್ ಚಾಚಾ! 'ಬೇಟಾ, ಮನುಷ್ಯನ ಸ್ವಭಾವ ಮೂಲತಃ ಒಳ್ಳೆಯದು. ಆದರೆ ಒಮ್ಮೊಮ್ಮೆ ದ್ವೇಷದ ದಳ್ಳುರಿ ಹೊತ್ತಿಕೊಂಡು ಉರಿಯುತ್ತದೆ. ಆಗ ಮನುಷ್ಯ ಹಿಂಸೆ, ಪ್ರತೀಕಾರ ಮುಂತಾದ ತುಚ್ಛ ಭಾವನೆಗಳಿಗೆ ಮನಸ್ಸಿನಲ್ಲಿ ಜಾಗ ಕೊಡುತ್ತಾನೆ. ಗಾಂಧಿಯಂತಹ ಕೆಲವು ಮಹಾತ್ಮರು ಎಂತಹ ದೊಡ್ಡ ಆದರ್ಶದ ಬದುಕು ನಡೆಸುತ್ತಾರೆ ಅಂದರೆ ಆ ಮ್ಯಾಗ್ನೆಟ್‌ನ ಪ್ರಭಾವಕ್ಕೆ ಸಿಕ್ಕಿ ಕಬ್ಬಿಣದ ತುಂಡುಗಳಾದ ನಾವೂ ಸ್ವಲ್ಪ ಮಟ್ಟಿಗಾದರೂ ಮ್ಯಾಗ್ನೆಟ್ ಆಗಿಬಿಡುತ್ತೇವೆ !'

ಕೆಲವೊಮ್ಮೆ ತಾಯಿಯ ದೊಡ್ಡ ಮನೆಯ ಒಡತಿಯಾಗಬೇಕೆಂಬ ಬಯಕೆ ಇದ್ದಕ್ಕಿದ್ದ ಹಾಗೆ ಧುತ್ತೆಂದು ಎದುರು ನಿಲ್ಲುತ್ತಿತ್ತು. 'ಇದೆಂತಹ ವಿಚಿತ್ರ ಬೇಡಿಕೆ ! ಜೀವಮಾನದಲ್ಲಿ ಅನುಭವಿಸಿದ ಎಲ್ಲ ದಾರುಣ ನೋವುಗಳಿಗೆ ಮತ್ತೆ ದೊಡ್ಡ ಬಂಗಲೆಯಲ್ಲಿ ವಾಸಿಸುವುದೇ ಮದ್ದು ಎಂಬಂತೆ ಕೇಳಿಕೊಳ್ಳುತ್ತಿದ್ದಾಳೆ ! ಇದನ್ನು ಪೂರೈಸುವುದು ನನ್ನ ಕೈಯಲ್ಲಿ ಸಾಧ್ಯವೆ? ಮನುಷ್ಯನ ಸ್ವಭಾವವೇ ವಿಚಿತ್ರ. ಇತರ ಪ್ರಾಣಿಗಳಿಗೆ ಮನೆ ಎಂಬ ಗೂಡು ಪ್ರಕೃತಿಯ ವಿಕೋಪಗಳಿಂದ ರಕ್ಷಿಸುವ, ರಾತ್ರಿ ಮಲಗುವುದಕ್ಕೆ ಒಂದು ಸುರಕ್ಷಿತ ತಾಣವನ್ನು ನೀಡುವ ಜಾಗ, ಅಷ್ಟೆ. ಮನುಷ್ಯನಿಗೆ ಮನೆ ಎಂಬ ವಸ್ತುವಿಗೆ ಎಷ್ಟೊಂದು ಅರ್ಥವ್ಯಾಪ್ತಿ ಇದೆ! ಮನೆ ಎಂದರೆ ನೆನಪುಗಳ ಆಗರ, ಪ್ರತಿಷ್ಠೆ, ಅಂತಸ್ತುಗಳ ಸಂಕೇತ, ಒಬ್ಬ ವ್ಯಕ್ತಿಯ ಘನತೆ, ಗೌರವವನ್ನು ಅಳೆಯುವ ಸಾಧನ, ಜೀವಮಾನದ ಸಾಧನೆಗಳನ್ನು ಪ್ರತಿಬಿಂಬಿಸುವ ಸೌಧ, ತಮ್ಮ ತಮ್ಮ ಕಲೆ, ಅಭಿರುಚಿಯನ್ನು ಪ್ರದರ್ಶಿಸುವ ಮಾಧ್ಯಮ, ನಿನಗಿಂತ ನಾನು ಮೇಲೆ ಎಂದು ನಿಶ್ಶಬ್ದವಾಗಿ ಸಾರುವ ಭೌತಿಕ ವಸ್ತು.... ಇನ್ನೂ ಏನೇನೋ!'

ಅದೇ ಸಮಯಕ್ಕೆ ಅಕ್ಕ ಗೀತಾ ಫೋನ್ ಮಾಡಿದ್ದಳು. 'ಮುಂದೆ ಏನು ಮಾಡ್ತೀಯಾ?' ಎಂದು ವಿಚಾರಿಸಿದಳು. ಅವಳೋ ಶ್ರೀಮಂತ ರಾಷ್ಟ್ರ ಅಮೆರಿಕಾದಲ್ಲಿರುವವಳು. 'ಅವಳಿಗೇನು ಗೊತ್ತು ಈ ದರಿದ್ರ ಇಂಡಿಯಾದಲ್ಲಿ ಸರದಾರ್‌ಜೀ ಆಗಿ ಬಾಳುತ್ತಿರುವವರ ಕಷ್ಟ!' ಎಂದುಕೊಂಡ ಪ್ರೇಮ್. 'ಏನೋ ಗೊತ್ತಿಲ್ಲ' ಅಂತ ಉತ್ತರಿಸಿದ. ಆದರೆ ಅಮ್ಮ ಕೇಳಬೇಕಲ್ಲ. 'ಅವನಿಗೇನಾದರೂ ಒಂದು ದಾರಿ ಮಾಡಿಕೊಡು ಗೀತಾ. ಇಲ್ಲಿ ಅವನಿಗೆ ಹರಿಯುವ ಬೆವರಿನ ಉಪ್ಪು ಸಹ ಊಟಕ್ಕೆ ಹುಟ್ಟುತ್ತಿಲ್ಲ. ಓದಿಲ್ಲ, ಮಾಡಿಲ್ಲ. ವ್ಯಾಪಾರ

ಮಾಡೋಣವೆಂದರೆ ಕೈಯಲ್ಲಿ ಕಾಸಿಲ್ಲ. ಲಾಹೋರ್‌ನಲ್ಲಿ ನಮಗೆ ಎಂತಹ ಮನೆ ಇತ್ತು! ಇಲ್ಲಿ ನಮಗಿರುವುದು ಒಂದು ಜೋಪಡಿ ಮಾತ್ರ !' ಎಂದು ಗೋಳಿಟ್ಟಳು. ತಕ್ಷಣ ಬಂತು ವೀಸಾ ಸ್ಪಾನ್ಸರ್ ಫಾರಂ ಮತ್ತಿತರ ಪೇಪರುಗಳು. ನಿರಾಸೆಯ ಕೂಪದಲ್ಲಿದ್ದ ಪ್ರೇಮ್ ಕನಸು ಕಾಣುವ ಧೈರ್ಯ ಮಾಡಿದ್ದ. ನೋಡು ನೋಡುತ್ತಿದ್ದಂತೆ ಕೈಗೆ ಬಂದೇಬಿಟ್ಟಿತು ಅಮೆರಿಕಾದ ವೀಸಾ. ಆಗ ವೀಸಾ ಸಿಕ್ಕುವುದು ಅಷ್ಟೇನೂ ಕಷ್ಟವಾಗಿರಲಿಲ್ಲ. ಅಮೆರಿಕಾಗೆ ಹಾರುವ ಸಿದ್ಧತೆ ನಡೆಸುತ್ತಿರುವಾಗಲೇ ಹೆಣ್ಣು ಕೊಡಲು ನಾ ಮುಂದೆ ತಾ ಮುಂದೆ ಎಂದು ಜನ ಬಂದರು. ಇಷ್ಟು ದಿನವೂ ನಾನೊಬ್ಬ ಎಲಿಜಿಬಲ್ ಬ್ಯಾಚಲರ್ ಇಲ್ಲಿದ್ದೀನಿ ಅಂತ ಇವರಿಗೆ ಯಾಕೆ ಗೊತ್ತಿರಲಿಲ್ಲ ಎಂದು ಆಶ್ಚರ್ಯವಾಯಿತು ಅವನಿಗೆ. ತನಗೆ ಎಲಿಜಿಬಿಲಿಟಿ ಬಂದಿದ್ದೇ ಅಮೆರಿಕಾದ ವೀಸಾ ಕೈಗೆ ಬಂದ ಮೇಲೆ ಎಂದು ಅವನಿಗೆ ತಿಳಿಯದೆ!

ಅಮೆರಿಕಾದಲ್ಲಿ ಅಕ್ಕ ಗೀತಾ ಮತ್ತು ಭಾವ ದೇವೇಂದರ್ ಅವರ ನ್ಯೂಯಾರ್ಕ್ ಹೊಟೇಲಿನಲ್ಲಿ ಎಲ್ಲ ತರಹದ ಕೆಲಸ ಮಾಡಿಕೊಂಡು ಕಾಲ ಹಾಕುತ್ತಿದ್ದ. ಒಂದು ಕಡೆ ತಾನು ಯಾವ ದೇಶವನ್ನು ದರಿದ್ರ ಇಂಡಿಯಾ ಅಂತ ಕರೆಯುತ್ತಿದ್ದನೋ ಆ ತಾಯ್ನಾಡಿನಿಂದ ದೂರಾದ ದುಃಖ, ಇನ್ನೊಂದು ಕಡೆ ಹೊಸ ದೇಶಕ್ಕೆ ಹೊಂದಿಕೊಳ್ಳಲಾರದ ಕಷ್ಟ!

ಅದೊಂದು ಸಣ್ಣ ರೆಸ್ಟುರಾಂಟ್. ಅಲ್ಲಿದ್ದ ಗೋಡೆ, ಫರ್ನಿಚರ್ ಎಲ್ಲ ಮಾಸಲು ಬಣ್ಣದವು. ಅಲ್ಲಿಗೆ ಬರುವವರೆಲ್ಲ ಹೆಚ್ಚುಮಟ್ಟಿಗೆ ಭಾರತೀಯರೇ. ಅಪರೂಪಕ್ಕೆ ಅಲ್ಲೊಂದು ಇಲ್ಲೊಂದು ಬಿಳಿ ಮುಖಗಳು ಕಾಣುತ್ತಿದ್ದವು. ಪಾತ್ರೆ ತೊಳೆಯುವುದರಿಂದ ಹಿಡಿದು ಚಪಾತಿ ಲಟ್ಟಿಸುವವರೆಗೆ ಎಲ್ಲ ಕೆಲಸಕ್ಕೂ ಕೈ ಹಾಕಬೇಕಾಗುತ್ತಿತ್ತು. ಅಕ್ಕ, ಭಾವನೂ ಬೆಳಿಗ್ಗೆ ಐದು ಗಂಟೆಗೆ ಎದ್ದು ಕೆಲಸ ಶುರು ಮಾಡಿದರೆ ರಾತ್ರಿ ಹತ್ತು ಗಂಟೆಯವರೆಗೂ ಮುಗಿಯುತ್ತಿರಲಿಲ್ಲ. ಒಮ್ಮೊಮ್ಮೆ ಗಂಟೆಗಟ್ಟಲೆ ಯಾವ ಗಿರಾಕಿಗಳೂ ಸುಳಿಯುತ್ತಿರಲಿಲ್ಲ. ಹಾಗಂತ ತರತರಹದ ಊಟ, ತಿಂಡಿಯನ್ನು ಸಿದ್ಧಪಡಿಸಿ ಇಡುವುದನ್ನು ಬಿಟ್ಟುಬಿಡಬಾರದಲ್ಲ! ಅಷ್ಟು ಕೆಲಸ ಮಾಡಿದ್ದಕ್ಕೆ ಸಿಕ್ಕುವ ಕಾಸು ಅಷ್ಟರಲ್ಲೇ ಇತ್ತು. ಇಷ್ಟೇನಾ ಅಮೆರಿಕಾ! ಅಂತ ಭ್ರಮ ನಿರಸನವಾಗಿತ್ತು ಅವನಿಗೆ. ಬರುವ ನಾಲ್ಕು ಕಾಸಿನಲ್ಲಿ ಪ್ರೇಂಗೆ ಸಂಬಳ ಕೊಡುವುದೆಲ್ಲಿ? 'ನಿನಗೆ ಹೊತ್ತುಹೊತ್ತಿಗೆ ಊಟ ಕೊಟ್ಟು ತಲೆಯ ಮೇಲೆ ಸೂರು ಕೊಟ್ಟಿಲ್ಲವೆ? ಅದೇ ನಿನ್ನ ಸಂಬಳ' ಅಂತ ಸಿಡುಕುತ್ತಿದ್ದರು ಭಾವ. ಅಕ್ಕ ಮಾತ್ರ ಒಮ್ಮೊಮ್ಮೆ ಭಾವನಿಗೆ ತಿಳಿಯದ ಹಾಗೆ ಹತ್ತು ಇಪ್ಪತ್ತು ಡಾಲರುಗಳನ್ನು ಕೈ ಮೇಲೆ ಹಾಕುತ್ತಿದ್ದಳು.

ಅದೊಂದು ಕರಾಳ ದಿನ. ಹೊಟೇಲಿಗೆ ಬಂದ ಹೆಲ್ತ್ ಇನ್ಸ್‌ಪೆಕ್ಟರ್ ಜಿರಲೆ ಇದೆ, ಪಾತ್ರೆ ತೊಳೆಯುವ ವ್ಯವಸ್ಥೆ ಸರಿಯಾಗಿಲ್ಲ, ಜಾಗ ಕ್ಲೀನಾಗಿಲ್ಲ ಎಂದೆಲ್ಲ ಹೇಳಿ ಹೊಟೇಲಿನ ಬಾಗಿಲು ಮುಚ್ಚಿಸಿಬಿಟ್ಟ. ಅದನ್ನೆಲ್ಲ ತೃಪ್ತಿಕರವಾಗಿ ಸರಿಪಡಿಸಿದರೆ ಮಾತ್ರ ಮತ್ತೆ ಹೊಟೇಲ್ ತೆರೆಯಬಹುದು ಅಂತ ಹೇಳಿದ. ಬರುವ ನಾಕು ಕಾಸೂ ನಿಂತು ಹೋಯಿತು. ಅದೇ ದಿನ

ಅಕ್ಕ ತನಗೆ ಇಪ್ಪತ್ತು ಡಾಲರು ಕೊಟ್ಟಿದ್ದಳು ಎಂದು ಪತ್ತೆ ಹಚ್ಚಿದ ದೇವೇಂದರ್ ಸಿಕ್ಕಾಬಟ್ಟೆ ರೇಗಾಡಿದ. 'ಥತ್, ಇದೆಂತಹ ಜೀವನ!' ಎಂದು ಬೇಸರವಾಯಿತು ಪ್ರೇಮ್‌ಗೆ. 'ಅವಕಾಶಗಳ ಸ್ವರ್ಣಭೂಮಿ ಎನ್ನಿಸಿಕೊಂಡ ಈ ನಾಡಿನಲ್ಲಿ ನನಗೆ ಬೇರೆ ಏನಾದರೂ ಸಿಕ್ಕದೆ? 'ಎಂದು ಚಡಪಡಿಸಿತು ಜೀವ.

ಹೊಟೇಲಿನ ರಿಪೇರಿ ಕೆಲಸ ನಡೆಯುತ್ತಿತ್ತು. ಅಮೆರಿಕಾಗೆ ಬಂದ ಮೇಲೆ ಮೊದಲ ಬಾರಿಗೆ ಕೆಲಸವಿಲ್ಲದೆ ಬೇಸರವೆನ್ನಿಸುತ್ತಿತ್ತು. 'ಅಗಲೇ ಎರಡು ವರ್ಷ ಆಗಿಹೋಯಿತಲ್ಲ ನಾನಿಲ್ಲಿಗೆ ಬಂದು !' ಎಂದು ಆಶ್ಚರ್ಯವಾಯಿತು. ಅವನಿಗೆ ಗೊತ್ತಿದ್ದ ಒಬ್ಬನೇ ಸ್ನೇಹಿತ ಅಂದರೆ ಕುಲ್‌ದೀಪ್. ಅವನೊಬ್ಬ ಟ್ಯಾಕ್ಸಿ ಡ್ರೈವರ್. ಅಗಾಗ ಹೊಟೇಲಿಗೆ ಬರುತ್ತಿದ್ದ. ಸುಮಾರು ಪ್ರೇಮ್‌ಗೆ ಆದಷ್ಟೇ ವಯಸ್ಸು. ಕುಲ್‌ದೀಪ್‌ಗೆ ಫೋನ್ ಮಾಡಿದ ಪ್ರೇಮ್. ಹೆಂಡತಿ ಫೋನ್ ಎತ್ತಿಕೊಂಡಳು. 'ಅವರು ಡ್ಯೂಟಿ ಮೇಲೆ ಹೋಗಿದ್ದಾರೆ. ಆಮೇಲೆ ಫೋನ್ ಮಾಡಿ' ಎಂದಳು. ಆ ರಾತ್ರಿ ಕುಲ್‌ದೀಪ್ ಪ್ರೇಮ್‌ಗೆ ಫೋನ್ ಮಾಡಿದ. ಮರುದಿನ ಬೆಳಿಗ್ಗೆ ಡಂಕಿನ್ ಡೋನಟ್ ಶಾಪಿನಲ್ಲಿ ಭೇಟಿಯಾಗುವುದಾಗಿ ಇಬ್ಬರೂ ತೀರ್ಮಾನಿಸಿದರು.

ಡೋನಟ್ ಶಾಪಿನಲ್ಲಿ ಸ್ನೇಹಿತನ ಮುಂದೆ ತನ್ನ ಗೋಳನ್ನೆಲ್ಲ ತೋಡಿಕೊಂಡ ಪ್ರೇಮ್. 'ಇದೂ ಒಂದು ಜೀವನವೆ ? ಅಕ್ಕ, ಭಾವನ ಹೊಟೇಲಿನ ಸ್ಥಿತಿ ನೋಡಿದರೆ ಅದು ಎಂದೂ ಊರ್ಜಿತಕ್ಕೆ ಬರುವುದಿಲ್ಲ. ಅದನ್ನು ನಂಬಿಕೊಂಡ ನಾನು ಮದುವೆ ಮಾಡಿಕೊಂಡು ಒಬ್ಬ ಮನುಷ್ಯ ಅಂತ ಎಲ್ಲರ ಹಾಗೆ ಇರೋದು ಯಾವಾಗ? ಮನೆ ತಕೊಳ್ಳೋದು ಯಾವಾಗ ?' ಎಂದು ನಿಟ್ಟುಸಿರುಬಿಟ್ಟ. ಪ್ರೇಮ್‌ನ ಮನಸ್ಸಿನಂತೆ ಬಿಳಿಚಿಕೊಂಡು ನಿಂತಿತ್ತು ಸುತ್ತಮುತ್ತಲಿನ ವಾತಾವರಣ. ಯಾವ ಅಲಂಕಾರವೂ ಇಲ್ಲದ ಜಾಗ ಆ ಡೋನಟ್ ಶಾಪ್. ಬಿಳಿಯ ಗೋಡೆಗಳು, ಬಿಳಿಯ ರೌಂಡ್ ಟೇಬಲ್‌ಗಳು, ಸುತ್ತ ನಾಲ್ಕು ಕೆಂಪು ಕುರ್ಚಿಗಳು.... ಅಷ್ಟೇ ಫರ್ನಿಚರ್, ಅದೇ ಅಲಂಕಾರ !

ಹೊರಗೆ ಜೋರಾಗಿ ಹಿಮ ಬೀಳುತ್ತಿತ್ತು. ರಸ್ತೆಯಲ್ಲಿ ಒಂದು ಕಾರು ಸ್ಕಿಡ್ ಆಗಿ ಹಿಮದಲ್ಲಿ ಹುದುಗಿತ್ತು. ಅದರ ಚಕ್ರ ಆಕ್ಸಿಲರೇಟರ್ ಒತ್ತಿದಷ್ಟೂ ನಿಂತಲ್ಲೇ ತಿರುಗುತ್ತಿತ್ತು. 'ನೋಡು. ಆ ಕಾರಿನ ಹಾಗಾಗಿದೆ ನನ್ನ ಜೀವನ. ನಾನು ಎಷ್ಟು ಆಕ್ಸಿಲರೇಟರ್ ಒತ್ತಿದರೂ ಅದು ನಿಂತಲ್ಲಿಂದ ಮುಂದಕ್ಕೆ ಹೋಗ್ತಾ ಇಲ್ಲ' ಎಂದ ಪ್ರೇಮ್.

ಕುಲ್‌ದೀಪ್ ಸಿಂಗ್ ಪ್ರೇಮ್‌ನ ಕೈಗಳನ್ನು ಅದುಮಿದ. 'ನೋಡು ಪ್ರೇಮ್, ಈ ಕಾರು ಈಗೇನೋ ನಿಂತಲ್ಲೇ ನಿಂತಿದೆ. ಆದರೆ ಸದ್ಯದಲ್ಲೇ ಇದಕ್ಕೆ ಬಿಡುಗಡೆ ಸಿಕ್ಕುತ್ತದೆ. ಅದು ಮತ್ತೆ ಓಡುತ್ತದೆ. ಅದಕ್ಕೆ ಬೇಕಾಗಿರುವುದು ಒಂದು ಪುಶ್ ಅಷ್ಟೆ. ನೋಡು ಹಿಂದಿನಿಂದ ಜನ ಪುಶ್ ಮಾಡ್ತಾ ಇದ್ದಾರೆ' ಎಂದ. ಅಷ್ಟರಲ್ಲೇ ಆ ಕಾರಿಗೆ ಬಿಡುಗಡೆ

ಸಿಕ್ಕಿಯೇಬಿಟ್ಟಿತು. ತುಸು ಮುಂದೆ ಸರಿದ ಕಾರು ಮತ್ತೆ ಓಡುವ ಸ್ಥಿತಿಗೆ ಬಂತು. ಪ್ರೇಮ್‌ನ ಮುಖದಲ್ಲಿ ಮುಗುಳ್ನಗೆಯೊಂದು ಹಾಯ್ದುಹೋಯಿತು.

ಕುಲ್‌ದೀಪ್ ಹೇಳಿದ 'ಸದ್ಯಕ್ಕಂತೂ ನಿನ್ನ ಜೀವನ ನಿಂತಲ್ಲೇ ನಿಂತಿದೆ. ಯಾಕೆಂದರೆ ಅದಕ್ಕೂ ಈಗ ಒಂದು ಪುಶ್ ಬೇಕಾಗಿದೆ. ಆ ಪುಶ್ ನಾನೇ ಯಾಕಾಗಬಾರದು ?'

ಪ್ರೇಮ್‌ಗೆ ಏನೂ ಅರ್ಥವಾಗಲಿಲ್ಲ. ಮಿಕಿಮಿಕಿ ಕುಲ್‌ದೀಪ್‌ನ ಮುಖವನ್ನೇ ನೋಡಿದ. 'ನೀನು ಅಕ್ಕ, ಭಾವನ ಹೊಟೇಲಿನಲ್ಲಿ ಇರುವಷ್ಟು ದಿನ ನಿನ್ನ ಕಾರು ಮುಂದೆ ಓಡೋದಿಲ್ಲ. ಅದಕ್ಕೇ ನೀನು ಬೇರೆ ಕೆಲಸ ಹುಡುಕಬೇಕು. ಟ್ಯಾಕ್ಸಿ ಡ್ರೈವರ್ ಯಾಕಾಗಬಾರದು?' ಎಂದ. ಪ್ರೇಮ್‌ಗೆ ಕರಿ ಮೋಡದಾಚೆ ಒಂದು ಬೆಳ್ಳಿಯ ಗೆರೆ ಕಂಡಂತಾಯಿತು. 'ಆದರೆ ಒಂದು ಎಚ್ಚರಿಕೆ. ನಿನಗೆ ಒಮ್ಮೊಮ್ಮೆ ಈ ಕೆಲಸ ಮಾಡುವಾಗ ನಾನೊಬ್ಬ ಸೆಕೆಂಡ್‌ಕ್ಲಾಸ್ ಪ್ರಜೆ ಎನ್ನಿಸಿಬಿಡುತ್ತದೆ'. ಎಂದ ಕುಲ್‌ದೀಪ್. 'ಯಾಕೆ ?' ಎಂಬಂತೆ ಪ್ರೇಮ್ ಹುಬ್ಬೇರಿಸಿದಾಗ 'ಇದಕ್ಕೇ' ಎಂದು ತನ್ನ ಟರ್ಬನ್ ಒಂದು ಕೈಯಲ್ಲಿ ಮುಟ್ಟಿ ಇನ್ನೊಂದು ಕೈಯಲ್ಲಿ ಗಡ್ಡ ನೇವರಿಸಿಕೊಂಡ ! ಇಬ್ಬರೂ ನಕ್ಕರು. ಟ್ಯಾಕ್ಸಿ ಡ್ರೈವರ್ ಆಗುವುದಕ್ಕೆ ಬೇಕಾದ ಎಲ್ಲ ಸೌಲಭ್ಯಗಳನ್ನು ಕುಲ್‌ದೀಪ್ ಮಾಡಿಕೊಟ್ಟ. ಮುಂದಿನ ಒಂದು ತಿಂಗಳಿನಲ್ಲೇ ಪ್ರೇಮ್ ನ್ಯೂಯಾರ್ಕ್ ನಗರದ ರಸ್ತೆಗಳಲ್ಲಿ ಟ್ಯಾಕ್ಸಿ ಓಡಿಸುತ್ತಿದ್ದ.

ಅವನ ಟರ್ಬನ್, ಗಡ್ಡ, ಮೀಸೆಗಳಿಗೆ ಜನ ಹಲವು ಬಗೆಯ ಪ್ರತಿಕ್ರಿಯೆ ತೋರಿಸುತ್ತಿದ್ದರು. ಕೆಲವರಿಗೆ ಕುತೂಹಲ, ಕೆಲವರಿಗೆ ತಾತ್ಸಾರ, ಇನ್ನೂ ಕೆಲವರಿಗೆ ಒಂದು ಬಗೆಯ ಉಪೇಕ್ಷೆ.... ಏನಾದರೇನಂತೆ ! ಸಮಯಕ್ಕೆ ಸರಿಯಾಗಿ ಕೈಗೆ ಸಂಬಳ ಬಂದರೆ ಸಾಕು ಎಂಬ ಮನೋಭಾವದಿಂದ ಪ್ರತಿದಿನ ಕೆಲಸಕ್ಕೆ ಹಾಜರಾಗುತ್ತಿದ್ದ ಪ್ರೇಮ್. ಆಗಲೇ ಮೂವತ್ನಾಕು ವರ್ಷ ಅವನಿಗೆ ! ಆಗಾಗ 'ಮದುವೆ ಮಾಡಿಕೋ' ಎಂದು ಅಮ್ಮ ಕಾಗದ ಬರೆಯುತ್ತಿದ್ದಳು. ಇಸವಿ ೧೯೮೦. ತರಾತುರಿಯಲ್ಲಿ ಭಾರತಕ್ಕೆ ಭೇಟಿ ಕೊಟ್ಟಾಗ ರೂಪಾ ಎಂಬ ಹೆಣ್ಣಿನ ಜೊತೆ ಮದುವೆಯೂ ಆಗಿಹೋಯಿತು. ರೂಪಾಳ ಜೊತೆಯಲ್ಲೇ ಪ್ರೇಮ್‌ನ ತಾಯಿ ಮೋಹನ್‌ದೇವಿಯೂ ಅಮೆರಿಕಾಗೆ ಬಂದಳು. ರೂಪಾಗೆ ಇಂಗ್ಲಿಷ್ ಮಾತಾಡುವುದಕ್ಕೆ ಬರುತ್ತಿರಲಿಲ್ಲ. ಆದರೆ ಅಚ್ಚುಕಟ್ಟಾಗಿ ಮನೆ ನಿರ್ವಹಿಸಿಕೊಂಡು ಹೋಗುತ್ತಿದ್ದಳು. ಇದ್ದ ಸಣ್ಣ ಬಾಡಿಗೆಯ ಅಪಾರ್ಟ್‌ಮೆಂಟನ್ನು ನೀಟಾಗಿ ಇಟ್ಟುಕೊಂಡು ಗಂಡನಿಗೆ ಇಷ್ಟವಾದ ಅಡುಗೆಯನ್ನೇ ಮಾಡಿ ಹಾಕುತ್ತಿದ್ದಳು. ಜೀವನದಲ್ಲಿ ಸುಖ ಕಾಣುವುದಕ್ಕೆ ತನಗೂ ಅಧಿಕಾರವಿದೆ, ಸಾಧ್ಯವಿದೆ ಎಂದು ಆಗಲೇ ತಿಳಿದಿದ್ದು ಪ್ರೇಮ್‌ಗೆ.

ಮುಂದಿನ ವರ್ಷವೇ ಸುಷ್ಮಾ ಹುಟ್ಟಿದಳು. ಅದಾಗಿ ಎರಡು ವರ್ಷಕ್ಕೆ ಆಕಾಶ್ ಬಂದ. ತನ್ನ ಮಕ್ಕಳಲ್ಲಿ ತಂದೆಯಾಗಿ ಎಲ್ಲ ಬಗೆಯ ತೃಪ್ತಿ, ಸುಖವನ್ನು ಕಂಡುಕೊಂಡ ಅವನು. 'ನಾನಂತೂ ಬಡತನದಲ್ಲೇ ಜೀವನ ಕಳೆದೆ. ನನ್ನ ಮಕ್ಕಳಿಗೆ ಹಾಗಾಗಬಾರದು.

ಅವರನ್ನು ಚೆನ್ನಾಗಿ ಓದಿಸಿ ವಿದ್ಯಾವಂತರನ್ನಾಗಿ ಮಾಡಬೇಕು' ಅಂತ ಆಗಾಗ ರೂಪಾ ಕೈಲಿ ಹೇಳಿಕೊಳ್ಳುತ್ತಿದ್ದ.

ಉದ್ದಕ್ಕೂ ಮೋಹನ್‌ದೇವಿ ಮಾತ್ರ ಲಾಹೋರಿನಲ್ಲಿದ್ದ ತನ್ನ ಬಂಗಲೆಯನ್ನು ನೆನಪು ಮಾಡಿಕೊಳ್ಳುವುದನ್ನು ಬಿಟ್ಟಿರಲಿಲ್ಲ. 'ನೀನು ಯಾವಾಗ ಮನೆ ತಕೋತೀಯಾ?' ಅಂತ ಮಗನನ್ನು ಕೇಳುತ್ತಿದ್ದಳು. ಈ ಮಧ್ಯೆ ಕೆಲವು ಡಾಕ್ಟರುಗಳ ಭವ್ಯ ಬಂಗಲೆಗಳಿಗೆ ಹೋಗುವ ಅವಕಾಶ ಸಿಕ್ಕಿತ್ತು ಅವಳಿಗೆ.

ಅಮೆರಿಕಾಗೆ ವಲಸೆಗಾರರಾಗಿ ಹೋದ ಭಾರತೀಯರಲ್ಲಿ ಒಂದು ವಿಚಿತ್ರ ಸನ್ನಿವೇಶ ಉಂಟಾಗುತ್ತದೆ. ಭಾಷೆಯ, ಸಂಸ್ಕೃತಿಯ ಅನುಬಂಧದಲ್ಲಿ ಶ್ರೀಮಂತರು, ಬಡವರು ಒಬ್ಬರಿನ್ನೊಬ್ಬರ ಜೊತೆ ಸಲೀಸಾಗಿ ಬೆರೆಯುತ್ತಾರೆ. ಸಂಘ, ಸಂಸ್ಥೆಗಳ ವಿವಿಧ ಕಾರ್ಯಕ್ರಮಗಳಲ್ಲಿ ಹೆಗಲೆಣೆಯಾಗಿ ದುಡಿಯುತ್ತಾರೆ. ಬಹುಶಃ ಭಾರತದಲ್ಲೇ ಇದ್ದಿದ್ದರೆ ಹೀಗೆ ಸಾಮಾಜಿಕ, ಆರ್ಥಿಕ ಕಂದರಗಳನ್ನು ದಾಟಿ ಬಡವರು ಶ್ರೀಮಂತರ ಜೊತೆ ಸುಲಭವಾಗಿ ಬೆರೆಯಲು ಸಾಧ್ಯವಾಗುತ್ತಿರಲಿಲ್ಲ. ಬೆರೆತಿದ್ದರೂ ಅಲ್ಲಿ ಸರಿಸಮಾನತೆಯ ವಾತಾವರಣ ಇರುತ್ತಿರಲಿಲ್ಲ. ಅಲ್ಲದೆ ಪ್ರೇಮ್ ಒಬ್ಬ ಉತ್ತಮ ತಬಲಾವಾದಕನಾದ್ದರಿಂದ ಅವನಿಗೆ ಎಲ್ಲ ಬಗೆಯ ಜನರಿಂದಲೂ ಕರೆ ಬರುತ್ತಿತ್ತು. ಅಂತೂ ಇಂತೂ ದೊಡ್ಡ ಮನುಷ್ಯರ ದೊಡ್ಡ ಬಂಗಲೆಗಳಿಗೆ ಅತಿಥಿಯಾಗಿ ಹೋದ ಮೋಹನ್‌ದೇವಿಯ ಆಸೆ ಕೆರಳಿತು. ಮಗನ ಮೇಲೆ ಮನೆ ತೆಗೆದುಕೊಳ್ಳುವಂತೆ ಒತ್ತಡ ಹೇರುವುದನ್ನು ಜಾಸ್ತಿ ಮಾಡಿದಳು.

ಪ್ರೇಮ್‌ಗೆ ಆಸೆ ಇಲ್ಲವೆ ಮನೆಯ ಮಾಲೀಕನಾಗಬೇಕೆಂದು? ಆದರೇನು? ದಿನಕ್ಕೆ ೧೦-೧೨ ಗಂಟೆಗಳ ಕಾಲ ದುಡಿದರೂ ಖರ್ಚಿಗೆ ಸಾಕಾಗಿ ಉಳಿತಾಯ ಹೆಚ್ಚೇನೂ ಆಗುತ್ತಿರಲಿಲ್ಲ. ಸಾಲದ್ದಕ್ಕೆ ರೂಪಾ ಮನೆಯಲ್ಲಿ ಚಪಾತಿ ಮಾಡಿ ಅಂಗಡಿಗಳಿಗೆ ಮಾರುತ್ತಿದ್ದಳು. ಇವೆಲ್ಲ ಹೊಳೆಯಲ್ಲಿ ಹುಣಿಸೆ ಹಣ್ಣು ಕಿವಿಚಿದ ಹಾಗೆ ಆಗುತ್ತಿತ್ತಷ್ಟೆ. ಮನೆಗಳ ಬೆಲೆಯಂತೂ ದಿನದಿನಕ್ಕೆ ಏರುತ್ತಿತ್ತು.

ಇಂದಿರಾ ಗಾಂಧಿಯ ಕೊಲೆ ಆಯಿತೆಂಬ ಸುದ್ದಿ ಪ್ರಪಂಚದಾದ್ಯಂತ ಕಾಳ್ಗಿಚ್ಚಿನಂತೆ ಹಬ್ಬಿತು ! ಮುಂದಿನ ದಿನಗಳಲ್ಲಿ ನ್ಯೂಯಾರ್ಕ್‌ನಲ್ಲಿ ಪ್ರಕಟವಾಗುವ ಭಾರತೀಯ ಪತ್ರಿಕೆ ಇಂಡಿಯಾ ಅಬ್ರಾಡ್‌ನಲ್ಲಿ ಅದಕ್ಕೆ ಸಂಬಂಧಪಟ್ಟ ಚಿತ್ರಗಳು, ವರದಿಗಳು, ಸಿಖ್ಖರ ಮೇಲೆ ಮುಯ್ಯಿ ತೀರಿಸಿಕೊಳ್ಳುತ್ತಿರುವ ಹಿಂದೂ ಜನತೆ ನಡೆಸುತ್ತಿರುವ ದೌರ್ಜನ್ಯದ ಬಗ್ಗೆ ಲೇಖನಗಳು ಎಲ್ಲವೂ ಸವಿಸ್ತಾರವಾಗಿ ಪ್ರಕಟವಾದವು.

ಈಗಲೂ ಒಮ್ಮೊಮ್ಮೆ ಬೆಳಿಗ್ಗೆ ಡಂಕಿನ್ ಡೋನಟ್‌ಗೆ ಭೇಟಿ ಕೊಡುತ್ತಿದ್ದ ಪ್ರೇಮ್. ಅಲ್ಲಿ ಬ್ರೇಕ್ ಫಾಸ್ಟ್ ಮುಗಿಸಿ ಆಮೇಲೆ ಕೆಲಸಕ್ಕೆ ಹಾಜರಾಗುತ್ತಿದ್ದ. ಆಗಾಗ ಕುಲ್‌ದೀಪ್

ಅಲ್ಲಿ ಸಿಕ್ಕುತ್ತಿದ್ದ. ಹೀಗೇ ಒಮ್ಮೆ ಕುಲ್‌ದೀಪ್ ಸಿಕ್ಕಿ ಒಟ್ಟಿಗೆ ಕುಳಿತು ಕಾಫಿ ಹೀರುತ್ತಿದ್ದಾಗ ಮಾತು ಭಾರತದಲ್ಲಿ ಸಿಖ್ಖರ ಪರಿಸ್ಥಿತಿಯ ಬಗ್ಗೆ ತಿರುಗಿತು. 'ಸದ್ಯ, ನಾವು ಆ ದೇಶ ಬಿಟ್ಟು ಬಂದು ಇಲ್ಲಿ ನೆಲೆಸಿದ್ದಕ್ಕೆ ಈ ದಿನ ನೆಮ್ಮದಿಯಲ್ಲಿ ಉಸಿರಾಡಬಹುದು. ನೋಡು ಎಂತಹ ದೌರ್ಜನ್ಯ ನಡೆಸಿದ್ದಾರೆ ನಮ್ಮವರ ಮೇಲೆ !' ಎಂದ ಪ್ರೇಮ್.

ಕುಲ್‌ದೀಪ್ ಮುಖದಲ್ಲಿ ವಿಷಾದದ ಸುಳಿಯೊಂದು ಹಾಯ್ದು ಹೋಯಿತು. 'ನಿಜವಾಗಿಯೂ ನೀನಿಲ್ಲಿ ಸುಖವಾಗಿದ್ದೀಯಾ ಪ್ರೇಮ್? ನೆಮ್ಮದಿಯ ನಿಟ್ಟುಸಿರುಬಿಡುತ್ತಾ ಇದ್ದೀನಿ ಅನ್ನಿಸುತ್ತಾ? ಇದು ನಿನ್ನ ಮನೆ ಅಂತ ಅನ್ನಿಸುತ್ತಾ? ಈ ಜನ ನಮ್ಮನ್ನು ಒಪ್ಪಿಕೊಂಡಿದ್ದಾರೆ ಅನ್ನಿಸುತ್ತಾ?' ಅಂದ.

ಆ ಪ್ರಶ್ನೆ ಕೇಳಿ ತತ್ತರಿಸಿದ ಪ್ರೇಮ್. ಹೃದಯದಾಳದಲ್ಲಿ ಸುಪ್ತವಾಗಿ ಮಲಗಿದ್ದ ಅನಾಥಭಾವ ಮತ್ತೆ ಜಾಗೃತವಾಯಿತು. ಕುಲ್‌ದೀಪ್ ಮಾತು ಮುಂದುವರಿಸಿದ. 'ನೋಡು ಪ್ರೇಮ್, ಎಲ್ಲರೂ ಯಹೂದಿ ಜನಾಂಗ ಮನೆ ಎಂದು ಕರೆಸಿಕೊಳ್ಳುವ ದೇಶ ಇಲ್ಲದೆ ಸಾವಿರಾರು ವರ್ಷ ಅಲೆದರು ಅಂತ ಹೇಳ್ತಾರೆ. ಆದರೆ ಅವರಿಗೆ ಈಗ ಇಸ್ರೇಲ್ ಸಿಕ್ಕಿದೆ. ಅದು ಅವರ ಮನೆ. ಈಗ ಮನೆ ಇಲ್ಲದವರು ನಾವು. ಪಾಕಿಸ್ತಾನದಿಂದ ಒದ್ದು ಓಡಿಸಿದರು. ಭಾರತದ ಪರಿಸ್ಥಿತಿ ಹಾಗಾಗಿದೆ. ಇಲ್ಲಿ ನೋಡಿದರೆ ನಮಗೆ ಸಿಕ್ಕುತ್ತಿರುವುದು ತಿರಸ್ಕಾರ, ತಾತ್ಸಾರ. ಇದನ್ನು ಕರೆಯುವುದು ಮಾತ್ರ ಇಮಿಗ್ರೆಂಟ್ಸ್ ಲ್ಯಾಂಡ್ ಅಂತ' ಎಂದ.

'ಕೆಳ ದರ್ಜೆಯ ಎಲ್ಲ ವೃತ್ತಿಗಳಲ್ಲೂ ಪರಸ್ಪರ ಒಂದು ಬಗೆಯ ರಫ್ ಅಂಡ್ ಟಫ್ ಪಾಲಿಸಿ ಇರುತ್ತದೆ. ಬಹುಶಃ ಇದೇ ಅಮೆರಿಕದಲ್ಲಿ ಭಾರತದಿಂದ ಬಂದ ಒಬ್ಬ ಡಾಕ್ಟರ್ ಅಥವಾ ಇಂಜಿನಿಯರ್‌ಗೆ ಆದರ, ಗೌರವ ಸಿಕ್ಕಬಹುದು. ಆದರೆ ನಮಗೆ? ಈಗ ನಮಗೆ ಸಿಕ್ಕುವ ಟ್ರೀಟ್‌ಮೆಂಟ್ ಶೋಷಣೆಗೊಳಗಾದವರು ಎಂದು ಹೇಳುವ ಕರಿಯ ಜನಕ್ಕಿಂತಲೂ ಕಡೆಯಾಗಿದೆ !' ಕುಲ್‌ದೀಪ್ ಹೇಳಿದ್ದು ಯಾವುದೂ ಹೊಸದೇನಲ್ಲ. ತನ್ನ ಅನುಭವಕ್ಕೂ ಬಂದಿದ್ದೇ. ಆದರೆ ಇಷ್ಟು ದಿನ ತಾನು ಅದನ್ನು ಒಪ್ಪಿಕೊಂಡಿರಲಿಲ್ಲ. ಮತ್ತೆ ಯಾವುದೋ ಪಗ್ಗ ಕನಿಕರವಿಲ್ಲದೆ ತನ್ನ ಹೃದಯವನ್ನು ಜಗ್ಗಿ ಎಳೆಯುತ್ತಿದೆ ! ತಂದೆಯನ್ನು ಕಳೆದುಕೊಂಡದ್ದಕ್ಕಿಂತಲೂ ಹೆಚ್ಚಿನ ಅಗಾಧವಾದ ಒಂದು ಕತ್ತಲ ಕೊರಕಲು ಹೃದಯದ ಮಧ್ಯ ಭಾಗದಿಂದ ಕ್ರಮೇಣ ದೊಡ್ಡದಾಗುತ್ತಾ ತನ್ನ ಇಡೀ ಇರವನ್ನೇ ಆಕ್ರಮಿಸಿ ಹಿಂಡಿ ಹಿಪ್ಪೆ ಮಾಡುತ್ತಿದೆ ಎನ್ನಿಸಿತು.

ಇಸವಿ ೧೯೯೧. ಪ್ರೇಮ್ ಮದುವೆಯಾಗಿ ೧೦ ವರ್ಷಗಳ ಮೇಲಾಗಿತ್ತು. ಹಾಗೂ ಹೀಗೂ ಒಂದು ಸಣ್ಣ ಮನೆಯ ಡೌನ್‌ಪೇಮೆಂಟ್‌ಗೆ ಆಗುವಷ್ಟು ಹಣವನ್ನು ಒಟ್ಟುಗೂಡಿಸಿದ್ದ ಪ್ರೇಮ್. 'ನನಗೂ ಪ್ರಾಯ ನಲವತ್ತು ದಾಟಿದೆ. ಈಗ ಮನೆ ತಕೊಳ್ಳದಿದ್ದರೆ

ಇನ್ಯಾವಾಗ?' ಎಂಬ ಯೋಚನೆ ಒಮ್ಮೊಮ್ಮೆ ಇಣಿಕು ಹಾಕುತ್ತಿತ್ತು. ಸುಮಾರು ಕಡೆ ನೋಡಿದ ಮೇಲೆ ಅವನ ಬಜೆಟ್ಟಿಗೆ ಸರಿಹೋಗುವಂಥ ಸಣ್ಣ ಮನೆ ಸಿಕ್ಕೇಬಿಟ್ಟಿತು. ಅದನ್ನು ನೋಡಿದ ಮೋಹನ್‌ದೇವಿ 'ಇದು ನಮ್ಮ ಲಾಹೋರ್ ಮನೆಯಷ್ಟು ಚೆನ್ನಾಗಿಲ್ಲ' ಅಂದಾಗ ಮಾತ್ರ ಸಿಟ್ಟು ಬಂದುಬಿಟ್ಟಿತು ಅವನಿಗೆ. ಉತ್ತರ ಕೊಡದೆ ಹೊರಟುಹೋದ. ಮನೆಯ ಮಾಲೀಕರು ಪ್ರೇಮ್‌ನ ಆಫರ್ ಒಪ್ಪಿಕೊಂಡರು. ಇನ್ನೇನು ಮನೆ ಕೈಗೆ ಸಿಕ್ಕಬೇಕು ಅನ್ನುವಾಗ ಮೋಹನ್‌ದೇವಿಗೆ ಹೃದಯಾಘಾತವಾಯಿತು. ಅವಳಿಗೆ ಹೆಲ್ತ್ ಇನ್ಶ್ಯೂರೆನ್ಸ್ ಇರಲಿಲ್ಲ. ಸರಕಾರಿ ಆಸ್ಪತ್ರೆಗೆ ಸೇರಿಸಿದರೂ ಬೈಪಾಸ್ ಸರ್ಜರಿ, ಔಷಧಿ, ಡಾಕ್ಟರ್ ವಿಸಿಟ್ ಅಂತ ಕೈಲಿದ್ದ ದುಡ್ಡು ಕರಗಿತು. ಮೋಹನ್‌ದೇವಿ ಚೇತರಿಸಿಕೊಂಡಳು. ಮನೆಯ ಕನಸು ಕನಸಾಗೇ ಉಳಿಯಿತು.

ಮುಂದಿನ ಹತ್ತು ವರ್ಷಗಳಲ್ಲಿ ಆರ್ಥಿಕವಾಗಿ ಹಲವಾರು ಬಗೆಯ ಸಂಕಷ್ಟಗಳನ್ನು ಎದುರಿಸಬೇಕಾಯಿತು. ಅಕ್ಕ, ಭಾವನ ಹೊಟೇಲು ದಿವಾಳಿಯಾಗಿ ಹಲವು ವಾರಗಳ ಕಾಲ ಅವರೂ ಪ್ರೇಮ್ ಜೊತೆಯಲ್ಲೇ ತಂಗಿದರು. ಮತ್ತೆ ಅವರಿಗೆ ಬೇರೆ ವ್ಯಾಪಾರ ಶುರು ಮಾಡಲು ಪ್ರೇಮ್ ಸಹಾಯ ಮಾಡಬೇಕಾಯಿತು. ಇಸವಿ ೨೦೦೦ ಬಂದರೂ, ವರುಷ ಐವತ್ತು ದಾಟಿದರೂ ಪ್ರೇಮ್ ಇನ್ನೂ ಬಾಡಿಗೆ ಮನೆಯಲ್ಲೇ ಇದ್ದ. ತಾಯಿಯಂತೂ ಈಗ ಮುದುಕಿಯಾಗಿದ್ದಳು. ದಿನಕ್ಕೊಂದು ಬಾರಿಯಾದರೂ ಲಾಹೋರಿನ ಮನೆಯ ವಿಷಯ ಮಾತಾಡುತ್ತಿದ್ದಳು. ಜೊತೆಗೆ ಮರವೆಯೂ ಸೇರಿ ಈಗ ತಾನೇ ಆ ವಿಷಯ ಮಾತಾಡಿದ್ದು ನೆನಪು ಹೋಗಿ ಮತ್ತೆ ಮತ್ತೆ ಅದನ್ನೇ ಹೇಳುತ್ತಿದ್ದಳು. ಮನೆ ಮಂದಿಗೆಲ್ಲ ತಲೆ ಚಿಟ್ಟು ಹಿಡಿದುಹೋಗಿತ್ತು.

ಕಡೆಗೂ ೨೦೦೧ರಲ್ಲಿ ಪ್ರೇಮ್ ಒಂದು ಸಣ್ಣ ಅಪಾರ್ಟ್‌ಮೆಂಟ್ ಖರೀದಿಸಿದ. ಹೆಚ್ಚು ದೊಡ್ಡದಲ್ಲವಾದರೂ ಅದು ನಮ್ಮದು ಎಂಬ ಸಂತೃಪ್ತ ಭಾವ ಅವನಿಗಿತ್ತು. ನ್ಯೂಯಾರ್ಕಿನ ಸ್ಲಮ್ ಹತ್ತಿರವೇ ಇದ್ದ ಜಾಗ ಆದಾದ್ದರಿಂದ ಕಡಿಮೆ ಬೆಲೆಗೆ ಸಿಕ್ಕಿತ್ತು. ಅಲ್ಲೇ ಹತ್ತಿರದಲ್ಲಿ ಗ್ಯಾಂಗ್ ಚಟುವಟಿಕೆಗಳು ನಡೆಯುತ್ತವೆ ಅಂತ ಎಲ್ಲರಿಗೂ ಏನೋ ಹೆದರಿಕೆ !

ಬಂದೇ ಬಂತು ಆ ದಿನ! ಸೆಪ್ಟೆಂಬರ್ ೧೧, ೨೦೦೧. ಅಮೆರಿಕಾದ ಚರಿತ್ರೆಯನ್ನು ನೆತ್ತರಿನಲ್ಲಿ ಬರೆದ ದಿನ, ಕಣ್ಣೀರಿನಲ್ಲಿ ಬರೆದ ದಿನ. ಸಾವಿರಾರು ನಿರಪರಾಧಿಗಳನ್ನು ಬಲಿ ತೆಗೆದುಕೊಂಡ ದಿನ. ಆ ದಿನ ಪ್ರೇಮ್ ಹುಷಾರಿಲ್ಲವೆಂದು ಮನೆಯಲ್ಲೇ ಇದ್ದ. ಅವಳಿ ಕಟ್ಟಡಗಳು ಉರುಳಿದ, ಧ್ವಂಸವಾದ ಹೃದಯ ವಿದ್ರಾವಕ ಘಟನೆಯನ್ನು ಟಿವಿಯಲ್ಲಿ ನೋಡಿದ ಅವನಿಗೆ ಆಘಾತವಾಯಿತು. 'ಅಯ್ಯೋ ನಾನು ಆಗಾಗ ಅದೇ ಕಟ್ಟಡದಲ್ಲಿ ಕೆಲಸ ಮಾಡುತ್ತಿದ್ದ ರಾಬರ್ಟ್‌ನನ್ನು ಕರೆದುಕೊಂಡು ಹೋಗುತ್ತಿದ್ದೆ. ಅವನ ಗತಿ

ಏನಾಯಿತು? ಅಲ್ಲೇ ಡೇ ಕೇರ್ ಸೆಂಟರಿಗೆ ಹೋಗುತ್ತಿದ್ದ ಅವನ ಪುಟ್ಟ ಮಗಳ ಗತಿ ಏನಾಯಿತು!' ಎಂದು ಚಡಪಡಿಸಿತು ಅವನ ಜೀವ. ಮರು ದಿನವೇ ಕೆಲಸಕ್ಕೆ ಹೋಗುವ ಮುನ್ನ ಕ್ಯೂನಲ್ಲಿ ನಿಂತು ರಕ್ತದಾನ ಮಾಡಿದ. 'ಇಷ್ಟು ದಿನ ನನಗೆ ಅನ್ನ, ನೆರಳು ನೀಡಿದ ಈ ದೇಶಕ್ಕೆ ನಾನು ಸಲ್ಲಿಸುವ ಅಳಿಲಸೇವೆ ಇದು' ಎಂದುಕೊಂಡ.

ಕೆಲಸಕ್ಕೆ ಹಾಜರಾದ ಪ್ರೇಮ್‌ಗೆ ಆಶ್ಚರ್ಯ ಕಾದಿತ್ತು. ಇದುವರೆಗೂ ಸ್ನೇಹಿತರಾಗಿದ್ದ ಬಿಳಿಯರು, ಕರಿಯರು ಎಲ್ಲರೂ ಅವನನ್ನು ಸಂಶಯದಿಂದ ನೋಡುತ್ತಿದ್ದರು. ಕಣ್ಣಿನಲ್ಲಿ ಅಪನಂಬಿಕೆ, ನಡವಳಿಕೆಯಲ್ಲಿ ಏನೋ ಕೃತಕತೆ! 'ಟ್ಯಾಕ್ಸಿ' ಎಂದು ಕೈ ಬೀಸಿ ಕರೆದು ಕೂಗಿ ನಿಲ್ಲಿಸಿದ ಹಲವು ಜನರು ಅವನ ಟರ್ಬನ್, ಗಡ್ಡ, ಮೀಸೆಗಳನ್ನು ನೋಡಿದ ತಕ್ಷಣ 'ನೋ ಥ್ಯಾಂಕ್ಸ್' ಎಂದು ಹಿಂಜರಿಯುತ್ತಿದ್ದರು! ವಾಡಿಕೆಯಾಗಿ ಬಂದ ಕೆಲವು ಕಸ್ಟಮರ್ಸ್ ಹಾಗೆಲ್ಲ ಮಾಡದಿದ್ದರೂ ಮುಂಚಿನಷ್ಟು ಸಲೀಸಾಗಿ, ಬಿಡುಬೀಸಾಗಿ ಮಾತಾಡುತ್ತಿಲ್ಲ! ದಿನದಿನದ ಜೀವನ ಅಸಹನೀಯವಾಯಿತು !

ಚರಿತ್ರೆಯ ಪುನರಾವರ್ತನೆ! ತಾನು ೫೦ ವರ್ಷದವನಿದ್ದಾಗ ಭಾರತದಲ್ಲಿ ಅನುಭವಿಸಿದ ಎಲ್ಲ ಹೃದಯ ಹಿಂಡುವ ಅನುಭವಗಳ ಮೆರವಣಿಗೆ ಮತ್ತೊಮ್ಮೆ! ಯಾರದೋ ತಪ್ಪಿಗೆ ಯಾರಿಗೋ ಶಿಕ್ಷೆ! ಭಾರತ, ಅಮೆರಿಕಾ. ಎರಡು ವಿಭಿನ್ನ ರಾಷ್ಟ್ರಗಳು, ಎರಡು ವಿಭಿನ್ನ ಸಂಸ್ಕೃತಿಗಳು! ಎರಡೂ ತಮ್ಮ, ತಮ್ಮ ಮಾನವೀಯತೆಯ ಬಗ್ಗೆ ಹೆಮ್ಮೆಪಟ್ಟುಕೊಳ್ಳುವ ದೇಶಗಳು! ಆದರೆ ಮೂಲಭೂತವಾದ ಪಶುಪ್ರವೃತ್ತಿ ಮಾತ್ರ ವಿಶ್ವದ ಎಲ್ಲೆಡೆಯೂ ಒಂದೇನೇ! ತಮ್ಮ ಭದ್ರತೆ ಅಲ್ಲಾಡುತ್ತಿದೆ ಎನ್ನಿಸಿದಾಗ ಅರ್ಥಾರ್ಥ ಸಂಬಂಧವಿಲ್ಲದೆ ಯಾರ ಮೇಲೋ ದ್ವೇಷ !

ಸ್ಥಳೀಯ ಕಾಲೇಜಿನಲ್ಲಿ ಫ್ರೆಶ್‌ಮನ್ ಆಗಿ ಓದುತ್ತಿದ್ದ ಮಗ ಆಕಾಶ್ ಸಿಟ್ಟಿನಿಂದ ಕೂಗಾಡುತ್ತಿದ್ದ. ಸುಮ್ಮಸುಮ್ಮನೆ ಚಿಕ್ಕ ವಿಷಯಗಳಿಗೆ ಅಳುತ್ತಿದ್ದ. ಪ್ರೇಮ್ ಮಗನ ಹತ್ತಿರ ಕುಳಿತು ವಿಚಾರಿಸಿದಾಗ ಅವನ ಆಪ್ತ ಗೆಳೆಯರು ಕೂಡಾ ಅವನ ಜುಟ್ಟು, ಗಡ್ಡ, ಮೀಸೆ ನೋಡಿ ತಮಾಷೆ ಮಾಡುವುದು, ಒಸಾಮಾ ಅಂದು ಹಂಗಿಸುವುದು, ಪೀಡಿಸುವುದು ಮಾಡುತ್ತಿದ್ದರೆಂದು ತಿಳಿಯಿತು. ಆಗ ತಾನೇ ಮನೆಯಲ್ಲೇ ಬೇಬಿ ಸಿಟ್ ಮಾಡುವುದೆಂದು ನಿಶ್ಚಯವಾಗಿದ್ದು ಒಂದು ವಾರದಿಂದ ಮನೆಗೆ ಬರುತ್ತಿದ್ದ ಪುಟ್ಟ ಕೋರಿನ್‌ಳ ತಾಯಿ ಕರೆದು ಬೇಬಿಸಿಟಿಂಗ್ ಕ್ಯಾನ್ಸಲ್ ಮಾಡಿದ್ದಳು !

ಬಹಳಷ್ಟು ವಿಚಾರ ಮಾಡಿದ ಮೇಲೆ ಮಗನಿಗೆ ಗಡ್ಡ, ಮೀಸೆ ಬೋಳಿಸಿಕೊಳ್ಳಲು ಅನುಮತಿ ನೀಡಿದ ಪ್ರೇಮ್. ವಿಷಯ ತಿಳಿದ ಮೋಹನ್‌ದೇವಿ ರೇಗಾಡಿದಳು. 'ಏನೋ ನಾಕು ದಿನ ಕಷ್ಟವಾಯಿತೆಂದು ನಾವು ಬದುಕಿ ಬಾಳಿದ ಸಂಸ್ಕೃತಿಯನ್ನೂ ಕೈ ಬಿಟ್ಟು ಬಿಡುವುದೆ?' ಎಂದಳು. ಪ್ರೇಮ್‌ನ ಮನಸ್ಸಿನಲ್ಲಿ ದೊಡ್ಡ ಕೋಲಾಹಲವೇ ನಡೆದಿತ್ತು.

'ಸೌಕರ್ಯಕ್ಕಾಗಿ ನೀವೂ ಗಡ್ಡ, ಮೀಸೆ ತೆಗೆಸಿಕೊಳ್ಳಿ' ಎಂದು ರೂಪಾ ಹೇಳುತ್ತಿದ್ದಳು. ಮತ್ತೆ ಕಣ್ಣೀನಲ್ಲಿ ನೀರು ತುಂಬಿಕೊಂಡು 'ಅದು ಸೌಕರ್ಯ ಮಾತ್ರವಲ್ಲ. ಜೀವನ, ಮರಣಗಳ ಪ್ರಶ್ನೆ' ಎನ್ನುತ್ತಿದ್ದಳು. ಈಗಾಗಲೇ ಒಬ್ಬ ಸರದಾರ್‌ಜಿಯನ್ನು ಗ್ಯಾಸ್ ಸ್ಟೇಷನ್ನಿನಲ್ಲಿ ಯಾರೋ ಕೊಂದುಹಾಕಿದ ಸುದ್ದಿ ಬಂದಿತ್ತು. ಏನೇ ಆದರೂ ಮೋಹನ್‌ದೇವಿ ಮಾತ್ರ ಇದಕ್ಕೆ ಒಪ್ಪಿಗೆ ಕೊಟ್ಟಿರಲಿಲ್ಲ. 'ಇಂಥ ಕಷ್ಟಗಳೆಲ್ಲ ಬರುತ್ತವೆ, ಕೆಲ ಕಾಲ ಇದ್ದು ಹೋಗುತ್ತವೆ. ಅದಕ್ಕೆ ತಲೆ ಕೆಡಿಸಿಕೊಳ್ಳಬಾರದು' ಎನ್ನುತ್ತಿದ್ದಳು. ಎಲ್ಲಕ್ಕಿಂತ ಹೆಚ್ಚಾಗಿ ಪ್ರೇಮ್‌ಗೇ ಟರ್ಬನ್ ಬಿಚ್ಚುವ ಗಡ್ಡ ಬೋಳಿಸುವ ಯೋಚನೆಯೇ ಹಿಡಿಸುತ್ತಿರಲಿಲ್ಲ. ಚಿಕ್ಕಂದಿನಲ್ಲಿ ತನ್ನ ಚಿಕ್ಕಪ್ಪನೊಡನೆ ಗುರುದ್ವಾರದಲ್ಲಿ ಕುಳಿತು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ ನೆನಪು ಸುತ್ತಿ ಸುತ್ತಿ ಬಂದು ಮನಸ್ಸಿಗೆ ಮುತ್ತಿಗೆ ಹಾಕುತ್ತಿತ್ತು. ಅಲ್ಲಿ ಕುಳಿತು ತನಗೊಂದು ದಾರಿ ತೋರಿಸೆಂದು ದೈನ್ಯದಿಂದ ಬೇಡಿದ್ದು ನೆನಪಾಗುತ್ತಿತ್ತು. ಕಡೆಗೆ ತನ್ನ ಬದುಕು ಹಸನಾಗಿ ಮಡದಿಯೊಡನೆ ಹೋಗಿ ದೇವರಿಗೆ ನಮಸ್ಕಾರ ಮಾಡಿದ್ದು ನೆನಪಾಗುತ್ತಿತ್ತು. ಜೊತೆಗೇ ಪ್ರದೀಪ್ ಚಾಚಾ 'ಮನುಷ್ಯನ ಸ್ವಭಾವ ಮೂಲತಃ ಒಳ್ಳೆಯದು' ಎಂದಿದ್ದು ನೆನಪಾಗಿ ವಿಷಾಧದ ನಗೆಯೊಂದು ಮುಖದ ಮೇಲೆ ಸುಳಿಯಿತು.

ರಾತ್ರಿ ಎಲ್ಲ ನಿದ್ದೆ ಇಲ್ಲದೆ ಹೊರಳಾಡಿದ ಪ್ರೇಮ್. ದಾರಿಯಲ್ಲಿ ಸಿಕ್ಕಿದ ಪಡ್ಡೆ ಹುಡುಗರು ಅವನನ್ನು 'ಒಸಾಮಾ' ಎಂದು ಕರೆದು ಹಂಗಿಸುತ್ತಿದ್ದರು. 'ಇಷ್ಟು ವರ್ಷ ಈ ದೇಶದಲ್ಲಿ ಬಾಳಿ ಬದುಕಿ ಬೆವರು ಹರಿಸಿ ಎಲ್ಲರ ಜೊತೆ ನಕ್ಕು ನಲಿದು, ಮಾಡಿದ ನಾನು ಈಗ ಇದ್ದಕ್ಕಿದ್ದ ಹಾಗೆ ಒಸಾಮಾ ಆಗಿಬಿಟ್ಟೆನೆ?' ಎಂದು ತೊಳಲಾಡುತ್ತಿದ್ದ. ಜುಲೈ ನಾಲ್ಕರಂದು ಪೆರೇಡ್‌ಗಾಗಿ ಮಕ್ಕಳು ಪುಟ್ಟ ಪುಟ್ಟ ಅಮೆರಿಕಾದ ಧ್ವಜ ಹಿಡಿದು ಹೆಮ್ಮೆಯಿಂದ ನಡೆದು ಹೋಗಿದ್ದು ನೆನಪಾಯಿತು. ಆಗಲೇ ಹೊಳೆಯಿತು ಐಡಿಯಾ. ನಾಳೆಯೇ ಹೋಗಿ ಅಮೆರಿಕಾದ ಬಾವುಟ ತಂದು ಮನೆಯ ಮೇಲೆ ಹಾರಿಸಬೇಕು ಎಂದುಕೊಂಡ. ಅದರಲ್ಲಿ ರಾಷ್ಟ್ರಪ್ರೇಮಕ್ಕಿಂತ ಸ್ವಹಿತದ ಭಾವನೆಯೇ ಬಲವಾಗಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ!

ಏನೇ ಆದರೂ ತನ್ನ ವೇಷ ಬದಲಾಯಿಸುವುದಿಲ್ಲ ಎಂದು ನಿರ್ಧಾರ ಮಾಡಿದ ಪ್ರೇಮ್. ಮನಸ್ಸು ಒಂದು ಸ್ಥಿಮಿತಕ್ಕೆ ಬಂದಿತು. ತಾನು ಆ ಮನೆಯಲ್ಲಿ ಕಳೆಯುವ ಕೊನೆಯ ರಾತ್ರಿ ಅದು ಎಂದು ಪ್ರೇಮ್ ಕನಸಿನಲ್ಲೂ ಊಹಿಸಿರಲಿಲ್ಲವೇನೋ! ಮರುದಿನ ಕೆಲಸಕ್ಕೆ ಹೋದ ಪ್ರೇಮ್ ಮನೆಗೆ ಹಿಂದಿರುಗಲಿಲ್ಲ. ಎರಡು ದಿನಗಳ ನಂತರ ನ್ಯೂಯಾರ್ಕ್ ನಗರದ ಸಣ್ಣ ಗಲ್ಲಿಯೊಂದರಲ್ಲಿ ಅವನ ಶವ ಸಿಕ್ಕಿತು. ಅವನ ದುಃಖತಪ್ತ ಹೃದಯವನ್ನು ಒಂದೇ ಒಂದು ಗುಂಡು ಬೇಧಿಸಿತ್ತು! ಪರಕೀಯ ಪ್ರಜ್ಞೆಯಿಂದ ನೊಂದಿದ್ದ ಆ ಜೀವ ತನ್ನ ಮನೆಯನ್ನು ಅರಸುತ್ತಾ ಅದೆಲ್ಲಿ ಹೋಯಿತೋ !

ಸಾವಿನ ನೆರಳು ಹಾಸಿದ ಮನೆಯಲ್ಲಿ ಮೋಹನ್‌ದೇವಿ ದುಃಖಿಸುತ್ತಾ ಕುಳಿತಿದ್ದಳು. ಇನ್ಶೂರೆನ್ಸ್, ಡೆತ್ ಸರ್ಟಿಫಿಕೇಟ್ ಮುಂತಾದ ಹಲವಾರು ಬಗೆಯ ಫಾರ್ಮಾಲಿಟಿಸ್ ಮಾಡಿ ಪೂರೈಸಲು ರೂಪಾಳನ್ನು ಕರೆದುಕೊಂಡು ಹೋಗಿದ್ದ ದೇವೇಂದರ್. ಸ್ವಲ್ಪವಾದರೂ ದುಃಖ ಮರೆಸಲೆಂದು ರೂಪಾಳ ಸ್ನೇಹಿತೆಯರು ಮಕ್ಕಳನ್ನು ಹೊರಗೆ ಕರೆದುಕೊಂಡು ಹೋಗಿದ್ದರು. ಮನೆಯಲ್ಲಿ ತಾಯಿಗೆ ಸಾಂತ್ವನ ಹೇಳುತ್ತ ಕುಳಿತಿದ್ದ ಗೀತಾ ಹೇಳಿದಳು 'ಕಡೆಪಕ್ಷ ಪ್ರೇಮ್ ಒಳ್ಳೆಯ ಇನ್ಶೂರೆನ್ಸ್ ತಕೊಂಡಿದ್ದರಿಂದ ಮನೆಯಾದರೂ ಉಳಿಯುತ್ತದೆ'.

'ಅಯ್ಯೋ ಈ ಮನೆ ಕಟ್ಟಿಕೊಂಡು ಏನು ಮಾಡಲಿ ಗೀತಾ! ಇಷ್ಟು ದಿನ ನನ್ನ ಮಗ ಆರೋಗ್ಯವಾಗಿ ಕಳೆಕಳೆಯಾಗಿ ನನ್ನ ಸುತ್ತ ಮುತ್ತ ಓಡಾಡುತ್ತಿದ್ದ. 'ಅಮ್ಮ, ಅಮ್ಮ'ಅಂತ ಕರೆಯುತ್ತಿದ್ದ. ಆಗ ನಾನು ಎಷ್ಟು ಅದೃಷ್ಟಶಾಲಿ ಅಂತ ನನಗೆ ಗೊತ್ತೇ ಆಗಲಿಲ್ಲ. ಮನೆ ಮನೆ ಅಂತ ಹಲುಬುತ್ತಿದ್ದೆ. ಮಗನನ್ನು ಗೋಳು ಹುಯ್ದುಕೊಂಡೆ. ಈಗ ಈ ಮನೆ ಸಾವಿನ ಮನೆಯಾಗಿ ನಿಂತಿದೆ. ನನಗೆ ಬೇಕಾ ಈ ಮನೆ ? ಬೇಡವೇ ಬೇಡ. ನನಗೆ ಬೇಕಾಗಿರುವುದು ಪ್ರೇಮ್ ಮಾತ್ರ.' ಎಂದು ಕಣ್ಣೀರುಗರೆಯುತ್ತಿದ್ದಳು ಮೋಹನ್‌ದೇವಿ. ಅವಳ ರೋಧನಕ್ಕೆ ಮೂಕ ಸಾಕ್ಷಿಯಾಗಿ ಆ ಮನೆಯ ಗೋಡೆ ಗೋಡೆಯೂ ನಿಂತು ನೋಡುತ್ತಲೇ ಇತ್ತು. 'ನಿನಗೆ ಬೇಕಾಗಲಿ, ಬೇಡಾಗಲಿ, ಈ ಮನೆ ನಿನ್ನದು' ಎಂದು ಮೌನವಾಗಿ ಸಾರುತ್ತಿತ್ತು.

•

# ಆಯೇಷಾಳ ಅಮೆರಿಕನ್ ಕನಸು

– ವೈ. ಆರ್. ಮೋಹನ್

ಆಯೇಷ ನನ್ನ ಆಪ್ತ ಸ್ನೇಹಿತನಾಗಿದ್ದ ಅನ್ವರನ ಹೆಂಡತಿ. ಅನ್ವರನ ಪೂರ್ಣ ಹೆಸರು ಅನ್ವರ್ ಪಾಶ ಎಂದು. ಆಯೇಷಳನ್ನು ಅವನು ಮದುವೆಯಾಗಿದ್ದು ಈಚೆಗೆ. ಬಹಳ ವರ್ಷಗಳು ಅನ್ವರ್ ಒಂಟಿ ಜೀವನ ನಡೆಸಿದ್ದ. ನಾನು ಈ ಊರಿಗೆ ಬಂದು ಕೆಲಸಕ್ಕೆ ಸೇರಿದಾಗ ನನ್ನ ಹೆಂಡತಿ ಮಕ್ಕಳು ಇನ್ನೂ ಭಾರತದಲ್ಲಿದ್ದರು. ಕೆಲಸ ಸಿಕ್ಕಮೇಲೆ ಅವರನ್ನು ಕರೆಸಿಕೊಳ್ಳುವ ವ್ಯವಸ್ಥೆ ಮಾಡಿದ್ದೆ. ಅವರು ಬರುವವರೆಗೂ ನನ್ನದು ಒಂಟಿ ಜೀವನವಾಗಿತ್ತು. ಆ ಸಮಯದಲ್ಲಿ ನನಗೆ ಅನ್ವರನ ಪರಿಚಯವಾಗಿ ಸ್ನೇಹ ಬೆಳೆಯಿತು.

ಅನ್ವರನನ್ನು ನಾನು ಮೊಟ್ಟಮೊದಲು ನೋಡಿದ್ದು ನಮ್ಮ ಯೂನಿವರ್ಸಿಟಿ ಲೈಬ್ರರಿಯಲ್ಲಿ. ನಾನು ಲೈಬ್ರರಿಯ ವೃತ್ತಪತ್ರಿಕಾ ವಿಭಾಗಕ್ಕೆ ಹೋದಾಗಲೆಲ್ಲ ಭಾರತೀಯ ಪತ್ರಿಕೆಗಳನ್ನು ಮೇಜಿನ ಸುತ್ತ ಗುಡ್ಡೆಹಾಕಿಕೊಂಡು ಏಕಾಗ್ರತೆಯಿಂದ ಓದುತ್ತಾ ಕುಳಿತಿರುತ್ತಿದ್ದ ಒಬ್ಬ ಪಾಂಡಿತ್ಯಪೂರ್ಣ ವರ್ಚಸ್ಸಿನ ವ್ಯಕ್ತಿಯನ್ನು ನೋಡುತ್ತಿದ್ದೆ. ಹೊರನೋಟಕ್ಕೆ ಅವನು ಭಾರತೀಯನಂತೆ ತೋರುತ್ತಿರಲಿಲ್ಲ. ತೆಳುವಾದ ಫ್ರೇಂಗಳ ಕನ್ನಡಕದ ಮೂಲಕ ಕಾಣುವವರ ಅಂತರಾಳವನ್ನು ಶೋಧಿಸುವಂತೆ ಹುಡುಕುವ ಹೊಳಪಿನ ಕಣ್ಣುಗಳು, ಬಿಸಿಲ ಸ್ನಾನಮಾಡಿದ ಬಿಳಿಯರನ್ನು ಹೋಲುವ ತಾಮ್ರವರ್ಣದ ಮೈಬಣ್ಣ, ಸೂಕ್ಷ್ಮ ರೇಷ್ಮೆ ಎಳೆಗಳಂತಿರುವ ನಸುಕಂದು ಬಣ್ಣದ ಕೂದಲಿನ ನೀಟಾದ ಕ್ರಾಪು, ಎತ್ತರದ ನಿಲವು, ಸದಭಿರುಚಿಯ ಸರಳ ಪೋಷಾಕು. ಗಂಭೀರ ಪ್ರವೃತ್ತಿಯ ಈತ ಇತರ ಭಾರತೀಯರೊಡನೆ ಬೆರೆಯುತ್ತಿರಲಿಲ್ಲ. ಅದರಿಂದಾಗಿ ಅವನು ಯಾರೋ ಭಾರತದ ಬಗ್ಗೆ ಸಂಶೋಧನೆ ನಡೆಸುತ್ತಿರುವ ಲ್ಯಾಟಿನ್-ಅಮೆರಿಕನ್ ವಿದ್ಯಾರ್ಥಿ ಇರಬಹುದೆಂದು ಊಹಿಸಿದ್ದೆ.

ಒಂದು ಸಾಯಂಕಾಲ ನಾವು ಟೆನ್ನಿಸ್ ಆಡಲು ಯೂನಿವರ್ಸಿಟಿ ಕೋರ್ಟಿಗೆ ಹೋದಾಗ ಒಂದು ಕೋರ್ಟಿನಲ್ಲಿ ನಾನು ಲೈಬ್ರರಿಯಲ್ಲಿ ನಿತ್ಯವೂ ನೋಡುತ್ತಿದ್ದ ವ್ಯಕ್ತಿ ಆಕರ್ಷಣೀಯ

ಮೈಕಟ್ಟಿನ ಬಿಳಿಯ ಹುಡುಗಿಯೊಡನೆ ಟೆನ್ನಿಸ್ ಆಡುತ್ತಿದ್ದುದು ಕಾಣಿಸಿತು. ಪುನಃ ಆ ವ್ಯಕ್ತಿಯನ್ನು ನಾನು ಸಂಧಿಸಿದ್ದು ಯೂನಿವರ್ಸಿಟಿಯವರು ಏರ್ಪಡಿಸಿದ್ದ ಇಂಟರ್ ನ್ಯಾಷನಲ್ ದಿನಾಚರಣೆಯ ಸಂದರ್ಭದಲ್ಲಿ. ಅವನು ತನ್ನ ಬಿಳಿಯ ಗೆಳತಿಗೆ ಭಾರತೀಯ ವಸ್ತುಸಂಗ್ರಹ ತೋರಿಸುವ ಸಲುವಾಗಿ ಕರೆತಂದಿದ್ದ. ಭಾರತೀಯ ವಿಭಾಗದ ನಿರ್ವಹಣೆಯನ್ನು ನನಗೆ ವಹಿಸಿದ್ದರು. ಗಂಧವನ್ನು ಕೊರೆದು ಮಾಡಿದ ಸೊಗಸಾದ ಸರಸ್ವತಿ ವಿಗ್ರಹವನ್ನು ಕೊಳ್ಳುವ ಸಲುವಾಗಿ ಆತ ನನ್ನ ಬಳಿ ಬಂದು 'ಐ ಆಮ್ ಅನ್ವರ್. ಐ ಹ್ಯಾವ್ ಸೀನ್ ಯು ಇನ್ ಲೈಬ್ರರಿ. ಐ ವಾನ್ ಟು ಬೈ ದಿಸ್. ಹೌ ಮಚ್ ಈಸ್ ದಿ ಪ್ರೈಸ್?' ಎಂದು ಕೇಳಿದ. ನಾನು ಅದರ ಬೆಲೆ ಹೇಳಿ 'ಈಸ್ ದಿಸ್ ಎ ಗಿಫ್ಟ್ ಫಾರ್ ಯುವರ್ ಗರ್ಲ್ ಫ್ರೆಂಡ್?' ಎಂದು ಕೇಳಿದೆ. ಅವನು ಹೌದೆಂದು ಹೇಳಿ ತಾನು ಭಾರತದ ಕಾನ್ಪುರದವನೆಂದು ತಿಳಿಸಿದ. ನನ್ನ ಊರಾವುದೆಂದು ವಿಚಾರಿಸಿದ. ಹೀಗೆ ನಮ್ಮ ಪರಿಚಯವಾಗಿ ಆನಂತರ ಲೈಬ್ರರಿಯಲ್ಲಿ ಸಿಕ್ಕಾಗಲೆಲ್ಲ ಮಾತುಕತೆ ನಡೆಸುತ್ತಿದ್ದೆವು.

ಹೀಗೆ ಪ್ರಾರಂಭವಾದ ಪರಿಚಯ ಕ್ರಮೇಣ ಸ್ನೇಹವಾಗಿ ಪರಿವರ್ತನೆಗೊಂಡು ನಮ್ಮಿಬ್ಬರಲ್ಲಿ ಅನ್ಯೋನ್ಯತೆ ಬೆಳೆಯಿತು. ಕೆಲವು ಸಮಯ ಒಟ್ಟಿಗೆ ಲಂಚಿಗೆ ಹೋಗುತ್ತಿದ್ದೆವು. ನನ್ನ ಮಡದಿ ಮತ್ತು ಮಕ್ಕಳು ಸದ್ಯದಲ್ಲಿಯೆ ಬರುವ ಸುದ್ದಿಯನ್ನು ಅವನಿಗೆ ತಿಳಿಸಿದೆ. ಅವನು ಅದನ್ನು ಕೇಳಿ ಸಂತೋಷ ವ್ಯಕ್ತಪಡಿಸಿದನು. ಆ ಸಮಯದಲ್ಲಿ ನಾನು ಅಪಾರ್ಟ್‌ಮೆಂಟ್ ಹುಡುಕುತ್ತಿದ್ದೆ. ಇನ್ನೂ ಸಿಕ್ಕಿರಲಿಲ್ಲ. ಹೆಂಡತಿ ಮತ್ತು ಮಕ್ಕಳು ಬಂದಾಗ ಅಪಾರ್ಟ್‌ಮೆಂಟ್ ಸಿಗುವವರೆಗೂ ಯಾವುದಾದರು ಹೊಟೇಲಿನಲ್ಲಿರಲು ನಿರ್ಧರಿಸಿದ್ದೆ. ನನ್ನ ನಿರ್ಧಾರ ಅನ್ವರನಿಗೆ ಸರಿಬೀಳಲಿಲ್ಲ. ಅನ್ವರ್ ದೊಡ್ಡ ಮನೆಯೊಂದರಲ್ಲಿ ಒಬ್ಬನೆ ವಾಸವಾಗಿದ್ದ. ಅಪಾರ್ಟ್‌ಮೆಂಟ್ ಸಿಗುವವರೆಗು ತನ್ನ ಮನೆಯಲ್ಲಿರುವಂತೆ ನನಗೆ ಒತ್ತಾಯ ಮಾಡಿದನು. ಹೀಗೆ ಮಾಡುವುದರಲ್ಲಿ ತನ್ನ ಸ್ವಾರ್ಥವೂ ಸೇರಿದೆ ಎಂದು ಹೇಳಿ ನಕ್ಕನು. ಏನು ಸ್ವಾರ್ಥ ಎಂದು ಕೇಳಿದಾಗ ಸ್ವಲ್ಪ ಕಾಲದಮಟ್ಟಿಗಾದರೂ ಮನೆಯ ಊಟ-ತಿಂಡಿಗಳು ಸಿಗಬಹುದು ಎನ್ನುವ ಆಸೆ ಎಂದು ತಿಳಿಸಿ ಮನಃಪೂರ್ವಕವಾಗಿ ನಕ್ಕ. ನಾನು ಒಪ್ಪಿಕೊಳ್ಳುವರೆಗು ಬಿಡಲಿಲ್ಲ.

ಹೆಂಡತಿ-ಮಕ್ಕಳು ಬಂದಾಗ ಒಂದು ವಾರ ಅನ್ವರನ ಮನೆಯಲ್ಲಿದ್ದೆವು. ಅನ್ವರ್ ತನ್ನ ಮನೆಯನ್ನು ಒಪ್ಪ- ಓರಣವಾಗಿ ಇಟ್ಟಿದ್ದ. ಒಂದು ರೂಮನ್ನು ಸಂಪೂರ್ಣವಾಗಿ ಪುಸ್ತಕ ಭಂಡಾರವಾಗಿ ಪರಿವರ್ತಿಸಿದ್ದ. ನೂರಾರು ಪುಸ್ತಕಗಳನ್ನು ನೀಟಾಗಿ ಜೋಡಿಸಿದ್ದ. ಅನ್ವರ್ ಬೆಳಿಗ್ಗೆ ಮುಂಚೆ ಎದ್ದು ನಮಾಜು ಮಾಡಿ ಆನಂತರ ಮಿಕ್ಕ ಕೆಲಸಗಳಿಗೆ ಗಮನ ಕೊಡುತ್ತಿದ್ದ. ನನ್ನ ಹೆಂಡತಿ ಮಾಡುತಿದ್ದ ಬಗೆಬಗೆಯ ಭಕ್ಷ್ಯ-ಭೋಜ್ಯಗಳನ್ನು ಇಷ್ಟಪಟ್ಟು ತಿಂದು ತೃಪ್ತಿ ವ್ಯಕ್ತಪಡಿಸುತ್ತಿದ್ದ. ನನ್ನ ಮಕ್ಕಳೊಂದಿಗೆ ಮನಾಪಲಿ, ಸ್ಕ್ರಾಬಲ್ ಮುಂತಾದ ಆಟಗಳಲ್ಲಿ ಭಾಗವಹಿಸಿ ಅವರನ್ನು ಖುಷಿಪಡಿಸಿ ಅವರ ಅಚ್ಚುಮೆಚ್ಚಿನ ಅಂಕಲ್ ಆಗಿಬಿಟ್ಟ!

ಸ್ವಲ್ಪ ಸಮಯದ ನಂತರ ನನಗೆ ಅಪಾರ್ಟ್‌ಮೆಂಟ್ ದೊರೆಯಿತು. ಅನ್ವರನ ಮನೆಯಿಂದ ನಮ್ಮ ಸಾಮನು-ಸರಂಜಾಮುಗಳನ್ನು ಅಪಾರ್ಟ್‌ಮೆಂಟಿಗೆ ಸಾಗಿಸುವಾಗ ಅನ್ವರ್ ಬಹಳ ಸಹಾಯ ಮಾಡಿದ. ಆನಂತರ ಅವನು ಆಗಾಗ ನಮ್ಮಲ್ಲಿಗೆ ಬಂದು ನಮ್ಮ ಆತಿಥ್ಯವನ್ನು ಸ್ವೀಕರಿಸಿ ಹೋಗುವುದು ಪದ್ಧತಿಯಾಯಿತು. ಆ ವರ್ಷದ ದೀಪಾವಳಿ ಸಮಾರಂಭದಲ್ಲಿ ನನ್ನ ಮಕ್ಕಳು ಮತ್ತು ಅವರ ಸ್ನೇಹಿತರು ಸೇರಿಕೊಂಡು ಅನ್ವರ್ ಇಂಗ್ಲಿಷಿನಲ್ಲಿ ಬರೆದುಕೊಟ್ಟ ನಾಟಕ ಆಡಿ ಎಲ್ಲರಿಂದ ಪ್ರಸಂಶೆ ಮತ್ತು ಪಾರಿತೋಷಕವನ್ನು ಪಡೆದರು.

ಈಚೆಗೆ ಅನ್ವರನಲ್ಲಿ ಒಂದು ಬದಲಾವಣೆಯನ್ನು ಗಮನಿಸಿದೆ. ಅವನು ತನ್ನ ಅಮೆರಿಕನ್ ಗೆಳತಿಂಯೊಡನೆ ಒಡನಾಡುವುದನ್ನು ನಿಲ್ಲಿಸಿದ್ದ. ಅದು ಅವನ ವೈಯುಕ್ತಿಕ ವಿಷಯವಾದುದರಿಂದ ಕಾರಣ ಕೇಳುವ ಗೋಜಿಗೆ ನಾನು ಹೋಗಲಿಲ್ಲ. ಹೀಗೆಯೇ ಒಂದು ದಿನ ನಮ್ಮ ಮನೆಗೆ ಬಂದಾಗ ತಾನು ಮುಂದಿನ ವಾರ ಇಂಡಿಯಾಕ್ಕೆ ಹೋಗುವುದಾಗಿ ತಿಳಿಸಿದ. ಇಂಡಿಯಾದಿಂದ ಏನಾದರು ಬೇಕಿದ್ದರೆ ತಂದುಕೊಡುವುದಾಗಿಯೂ ನನ್ನ ಹೆಂಡತಿಯನ್ನು ಕೇಳಿದ. ಒಂದು ತಿಂಗಳು ರಜದ ಮೇಲೆ ಹೋಗುತ್ತಿರುವುದರಿಂದ ಸಮಯ ಬೇಕಾದಷ್ಟು ಇರುತ್ತದೆ ಆದ್ದರಿಂದ ನಿಮಗೆ ಇಷ್ಟವಾದ ವಸ್ತುಗಳನ್ನು ಹುಡುಕಿ ತರಲು ಕಷ್ಟವಾಗುವುದಿಲ್ಲವೆಂದು ನನ್ನ ಹೆಂಡತಿಗೆ ಮತ್ತೆ ಮತ್ತೆ ಹೇಳಿದ. 'ಸದ್ಯಕ್ಕೆ ನನಗೇನೂ ಬೇಡ ನೀವು ಸುಖವಾಗಿ ಹೋಗಿ ಬನ್ನಿ' ಎಂದು ನನ್ನ ಹೆಂಡತಿ ಹೇಳಿದಳು. ಅನ್ವರ್ ಇಂಡಿಯಾಕ್ಕೆ ಹೋಗುವ ದಿನ ಹೇಳಿಹೋಗಲು ನಮ್ಮ ಮನೆಗೆ ಬಂದಿದ್ದ. ನಾವಿಬ್ಬರು ಅವನಿಗೆ ಸುಖ ಪ್ರಯಾಣ ಕೋರಿ ಬಿಳ್ಕೊಟ್ಟೆವು.

ಅನ್ವರ್ ಇಂಡಿಯಕ್ಕೆ ಹೋದ ಎರಡು ವಾರಗಳ ಮೇಲೆ ಅವನಿಂದ ನಮಗೊಂದು ಕಾಗದ ಬಂತು. ಅದರಲ್ಲಿ ಅವನು ತನ್ನ ಮದುವೆ ಗೊತ್ತಾಗಿರುವುದಾಗಿ ತಿಳಿಸಿದ್ದ. ಮದುವೆ ಮಾಡಿಕೊಂಡು ಹೆಂಡತಿಯನ್ನು ಜೊತೆಯಲ್ಲಿ ಕರೆತರುವುದಾಗಿ ತಿಳಿಸಿ ತನ್ನ ಹೆಂಡತಿಗೆ ಅಡುಗೆ ಬರುವುದಿಲ್ಲವೆಂದೂ ಅವಳಿಗೆ ಅಡುಗೆ ಕಲಿಸಿಕೊಡಬೇಕೆಂದು ನನ್ನ ಹೆಂಡತಿಯನ್ನು ಕೇಳಿಕೊಂಡಿದ್ದ. ಅನ್ವರನ ಮದುವೆಯ ಸುದ್ದಿ ಕೇಳಿ ನಮಗೆ ಅಪಾರ ಆನಂದವಾಯಿತು. ನೂತನ ವಧು-ವರರಿಗೆ ಸುಸ್ವಾಗತ ಬಯಸಲು ನಮ್ಮ ಮನೆಯಲ್ಲೇ ಸಮಾರಂಭ ಏರ್ಪಡಿಸಿದ್ದೆವು.

ಅನ್ವರ್ ಭಾರತದಿಂದ ಮರಳಿ ಬಂದಾಗ ನವ ವಧೂ-ವರರನ್ನು ಸ್ವಾಗತಿಸಲು ನಾವು ಏರ್‌ಪೋರ್ಟಿಗೆ ಹೋಗಿದ್ದೆವು. ಅನ್ವರನ ಹೆಂಡತಿ ಆಯೇಷ ಅನುಪಮ ಸುಂದರಿ. ತೆಳ್ಳಗೆ ಎತ್ತರದ ನಿಲವು, ಬಂಗಾರದ ಮೈಬಣ್ಣ, ಚೆಲುವಾದ ಚೆಂಚಲ ಕಪ್ಪು ಕಣ್ಣುಗಳು, ಜಲಧಾರೆಯಂತೆ ಬೆನ್ನಮೇಲಿಳಿದ ಕೇಶರಾಶಿ, ಹಣೆಯನ್ನು ಮುತ್ತಿ ಮುದ್ದಿಸುವ ಮುಂಗುರುಳುಗಳು, ಏರು ಜವ್ವನವನ್ನು ಸಾರಿ ಹೇಳುವ ವಕ್ಷಸ್ಥಳ, ಸದಾ ಮುಗುಳ್ನಗೆಯಿಂದ

ಶೋಭಿಸುವ ಸ್ನೇಹಪರಳು. ಇಂಗ್ಲಿಷ್ ಅಷ್ಟು ಚೆನ್ನಾಗಿ ಬಾರದಿದ್ದರೂ ಸೌಜನ್ಯದ ನಡವಳಿಕೆಯಿಂದ ಆಯೇಷ ಎಲ್ಲರ ಮನಸ್ಸನ್ನು ಸೂರೆಗೊಂಡಳು.

ಬಂದ ಹೊಸದರಲ್ಲಿ ಅನ್ವರ್ ಆಫೀಸಿಗೆ ಹೋಗುವ ಮುನ್ನ ಆಯೇಷಳನ್ನು ಕರೆತಂದು ನನ್ನ ಹೆಂಡತಿಯ ಜೊತೆಬಿಟ್ಟು ಸಾಯಂಕಾಲ ಮನೆಗೆ ಕರೆದುಕೊಂಡು ಹೋಗುತ್ತಿದ್ದ. ಅದು ಆಯೇಷಳಿಗೆ ಅಡುಗೆ ಕಲಿಯಲು ಅನುಕೂಲವಾಯಿತು. ನನ್ನ ಹೆಂಡತಿಯೊಡನೆ ಆಯೇಷ ತನ್ನ ಮನದಾಸೆಗಳನ್ನು ಹೇಳಿಕೊಂಡು ಸುಖಿಸಿದಳು. ಅನ್ವರನಿಗೆ ಅರ್ಹಳಾದ ಪತ್ನಿಯಾಗಿ ಸುಖಸಂಸಾರ ನಡೆಸುವ ಸಾಮರ್ಥ್ಯವನ್ನು ನೀಡಲು ಅಲ್ಲಾಹುವನ್ನು ನಿತ್ಯವೂ ಪ್ರಾರ್ಥಿಸುವುದಾಗಿಯೂ ಹಾಗು ಅನ್ವರನ ಆಸೆ ಆಕಾಂಕ್ಷೆಗಳ ಪೂರೈಕೆಗೆ ಇಂಬುಕೊಟ್ಟು ಸರ್ವರೀತಿಯಲ್ಲಿ ಸಹಕರಿಸುವುದಾಗಿ ಮನಪೂರ್ವಕವಾಗಿ ಹೇಳಿಕೊಂಡಳು. ಇಂಥ ಒಳ್ಳೆಯ ಹೆಂಡತಿಯನ್ನು ಪಡೆದ ಅನ್ವರ್ ಅದೃಷ್ಟಶಾಲಿ ಎಂದು ನಾನು ಮತ್ತು ನನ್ನ ಹೆಂಡತಿ ಮಾತನಾಡಿಕೊಂಡೆವು.

ಹೀಗೆ ಎರಡು ವಾರಗಳು ಕಳೆದವು. ಮೂರನೆಯ ವಾರದ ಹೊತ್ತಿಗೆ ಅನ್ವರ್ ಮತ್ತು ಆಯೇಷರ ನಡುವೆ ಅನ್ಯೋನ್ಯತೆ ಅಷ್ಟಾಗಿ ಇಲ್ಲ ಎನ್ನುವ ಚಿಹ್ನೆಗಳು ಕಾಣಿಸಿಕೊಂಡವು. ನಮ್ಮ ಮನೆಯಲ್ಲಿ ಆಯೇಷಳನ್ನು ಬಿಟ್ಟು ಆಫೀಸಿಗೆ ಹೋದಮೇಲೆ ಒಂದೆರಡು ಬಾರಿಯಾದರೂ ಅವಳನ್ನು ಕರೆದು ಮಾತನಾಡಿಸುತ್ತಿದ್ದ. ಈಚೆಗೆ ಹಾಗೆ ಕರೆಯುವುದನ್ನು ನಿಲ್ಲಿಸಿದ್ದ. ನಾವು ಅದನ್ನು ಅಷ್ಟಾಗಿ ಗಮನಿಸಲಿಲ್ಲ. ಅವರಿಬ್ಬರ ನಡುವೆ ಏನೋ ವಿರಸ ಉಂಟಾಗಿದೆ ಎಂದು ಭಾವಿಸಿದೆವು. ಅದು ವೈಯಕ್ತಿಕ ವಿಷಯವಿರಬಹುದೆಂದು ಸುಮ್ಮನಾದೆವು.

ಒಂದು ದಿನ ಅನ್ವರ್ ಆಯೇಷಳನ್ನು ನಮ್ಮ ಮನೆಯಲ್ಲಿ ಬಿಟ್ಟು ಹೋದಮೇಲೆ ಅವಳು ದುಃಖ ತಾಳಲಾರದೆ ನನ್ನ ಹೆಂಡತಿಯ ಹೆಗಲಮೇಲೆ ತಲೆಯಿರಿಸಿ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಅವಳನ್ನು ಸಾಂತ್ವನಗೊಳಿಸುವದರಲ್ಲಿ ನಮಗೆ ಸಾಕುಬೇಕಾಯಿತು. ಅವಳ ದುಃಖದ ಕಾರಣ ಕೇಳಿ ನಮಗೆ ದಿಗ್ಭ್ರಮೆಯಾಯಿತು. ಅನ್ವರನಿಗೆ ಅವಳ ಜೊತೆ ಇರಲು ಇಷ್ಟವಿಲ್ಲವಂತೆ ಆದ್ದರಿಂದ ಅವಳಿಗೆ ಇಂಡಿಯಾಕ್ಕೆ ವಾಪಸ್ಸು ಹೋಗುವಂತೆ ಒತ್ತಾಯ ಮಾಡುತ್ತಿದ್ದಾನಂತೆ. ಅನ್ವರ್ ಏಕೆ ಹೀಗೆ ಮಾಡುತ್ತಿದ್ದಾನೆಂದು ನಮಗೆ ಅರ್ಥವಾಗಲಿಲ್ಲ. ನನಗೆ ಹೊಳೆದ ಒಂದು ಕಾರಣವೆಂದರೆ ಅನ್ವರನ ಅಮೆರಿಕನ್ ಗೆಳತಿ ಅವನಿಗೆ ಪುನಃ ಗಂಟುಬಿದ್ದಿರಬೇಕು ಎಂದು. ಬಂಗಾರದಂತ ಹುಡುಗಿಯನ್ನು ಮದುವೆಯಾಗಿ ಅಮೆರಿಕಕ್ಕೆ ಕರೆತಂದು ಅವಳು ಕಟ್ಟಿದ ಕನಸನ್ನು ಕುಟ್ಟಿ ಪುಡಿಮಾಡಿ ನಿಸ್ಸಹಾಯಕಳಾದ ಅವಳನ್ನು ನಿಷ್ಕರುಣೆಯಿಂದ ಇಂಡಿಯಾಕ್ಕೆ ಕಳುಹಿಸುವಷ್ಟು ನಿರ್ದಯಿಯಾದನೆ ಅನ್ವರ್ ಎಂದು ನಮಗೆ ನಂಬಲಾಗಲಿಲ್ಲ. ಇದು ಗಂಡ-ಹೆಂಡತಿಯರ ನಡುವಣ ವೈಯಕ್ತಿಕ

ವಿಷಯವಾದರೂ ಹೆಣ್ಣುಮಗಳೊಬ್ಬಳ ಜೀವಿತದ ಪ್ರಶ್ನೆಯಾದುದರಿಂದ ನಾವು ನಡುವೆ ಪ್ರವೇಶಿಸಿ ಸಂಧಾನ ಏರ್ಪಡಿಸುವ ಪ್ರಯತ್ನ ಮಾಡಿದೆವು.

ನಾನು ಅನ್ವರನನ್ನು ಅವನ ಆಫೀಸಿನಲ್ಲಿ ಕಂಡು ಈ ವಿರಸಕ್ಕೆ ಕಾರಣವೇನೆಂದು ಕೇಳಿದೆ. ನಾನು ಹೀಗೆ ಕೇಳಿದ್ದು ಅವನಿಗೆ ಇಷ್ಟವಾಗಲಿಲ್ಲ ಎಂದು ಅವನ ಮುಖಭಂಗಿಯಿಂದ ತಿಳಿಯಿತು. ಇದು ಗಂಡ–ಹೆಂಡತಿಯ ನಡುವಣ ಸಮಸ್ಯೆ ನೀನು ಮಧ್ಯೆ ಪ್ರವೇಶಿಸುವುದು ಸರಿಯಲ್ಲವೆಂದು ಸೂಚಿಸಿದ. ನಾನು ಸುಮ್ಮನಿರದೆ 'ನೀನಾಗಿಯೆ ಹೋಗಿ ಇಷ್ಟಪಟ್ಟು ಮದುವೆಯಾಗಿ ಅವಳನ್ನು ಅಮೆರಿಕಕ್ಕೆ ಕರೆತಂದು ಕೈಬಿಡುವುದು ನ್ಯಾಯವೆ?' ಎಂದು ಕೇಳಿದೆ. ಅದಕ್ಕೆ ಅವನು 'ನಮ್ಮಿಬ್ಬರ ನಡುವೆ ಪರಿಹರಿಸಲಾಗದ ಭಿನ್ನಾಭಿಪ್ರಾಯಗಳು ಇರುವುದರಿಂದ ನಾವಿಬ್ಬರು ಒಟ್ಟಿಗೆ ಇರುವುದು ಸಾಧ್ಯವಿಲ್ಲ. ಆದ್ದರಿಂದ ಈ ಸಮಸ್ಯೆಯನ್ನು ಈಗಲೇ ಪರಿಹರಿಸುವುದು ಎಲ್ಲ ರೀತಿಯಿಂದ ಒಳ್ಳೆಯದು'ಎಂದು ತಿಳಿಸಿದ. ಆಯೇಷಳ ಪರವಹಿಸಿ ವಕಾಲತ್ತು ನಡೆಸುವುದಾದರೆ ನಮ್ಮಿಬ್ಬರ ಸ್ನೇಹಕ್ಕೆ ಸಂಚಕಾರ ಬರುವುದು ಖಂಡಿತ ಎಂದು ಎಚ್ಚರಿಸಿದ! ಅನ್ವರ್ ಇಷ್ಟು ನಿಷ್ಠುರ ಪ್ರವೃತ್ತಿಯವನೆಂದು ನಾನು ತಿಳಿದಿರಲಿಲ್ಲ. ಮಾತು ಮುಂದುವರಿಸಲು ಮನಸ್ಸಾಗದೆ ಅವನಿಗೆ ವಿದಾಯ ಹೇಳಿ ವಾಪಸ್ಸು ಬಂದೆ.

ಏನೋ ವಿರಸ ಅವರ ಮನಸ್ಸು ಮುರಿದಿದೆ. ಕಾಲಾಂತರದಲ್ಲಿ ಎಲ್ಲ ಸರಿಹೋಗಬಹುದೆಂದು ನಾವು ಊಹಿಸಿದ್ದು ತಪ್ಪಾಯಿತು. ಪರಿಸ್ಥಿತಿ ಗಂಭೀರವಾಗುತ್ತಾ ಹೋಯಿತು. ಅನ್ವರ್ ಮತ್ತು ಆಯೇಷ ಮಾತು ನಿಲ್ಲಿಸಿ ಮೌನಿಗಳಾದರು. ಸಂಪರ್ಕ ಮುರಿದುಬಿದ್ದು ಅವರಿಬ್ಬರು ದೂರ ಸರಿಯುತ್ತ ಹೋದರು. ನಮ್ಮ ಮನೆಗೆ ಬಂದಾಗಲೆಲ್ಲ ಆಯೇಷ ಅತ್ತು ಕರೆದು ತನ್ನ ಹೃದಯ ಹಗುರ ಮಾಡಿಕೊಳ್ಳುತಿದ್ದಳು. ಅವಳ ಅಳು ನಮ್ಮ ಹೃದಯವನ್ನು ಹಿಂಡುತಿತ್ತು. ಸಮಸ್ಯೆಯ ಸಂಕೀರ್ಣ ಜಾಲದಲ್ಲಿ ನಾವು ಸಿಕ್ಕುಹಾಕಿಕೊಂಡಿದ್ದರ ಅರಿವು ನಮಗಿದ್ದರೂ ಪರಿಹಾರ ತಿಳಿಯದೆ ಪರಿತಪಿಸಿದೆವು.

ಪರಿಸ್ಥಿತಿ ಹೀಗಿರುವಾಗ ಒಂದು ದಿನ ನಮ್ಮ ಮನೆಗೆ ನನ್ನ ಸ್ನೇಹಿತರಾದ ಡಾ. ದೇಸಾಯಿಯವರು ತಮ್ಮ ಪತ್ನಿ ಸಮೇತರಾಗಿ ಬಂದರು. ಡಾ. ದೇಸಾಯಿ ನನಗಿಂತ ವಯಸ್ಸಿನಲ್ಲಿ ಹಿರಿಯರು. ಅವರಿಗೆ ಕಾಲೇಜು ಓದುವ ನಾಲ್ಕು ಹೆಣ್ಣುಮಕ್ಕಳು ಮತ್ತು ಒಬ್ಬ ಮಗ. ನಮ್ಮ ಮನೆಯಿಂದ ಮೂವತ್ತು ಮೈಲಿ ದೂರದ ಊರಲ್ಲಿ ಅವರು ಪ್ರೈವೇಟ್ ಪ್ರಾಕ್ಟೀಸ್ ಮಾಡುತ್ತಿದ್ದರು. ನನ್ನ ಮಕ್ಕಳು ಅವರ ಮಕ್ಕಳೊಡನೆ ಅನ್ಯೋನ್ಯ ಸ್ನೇಹ ಬೆಳೆಸಿಕೊಂಡಿದ್ದರು. ಅವರು ಆಯೇಷಳನ್ನು ಕಂಡು ಯಾರು? ಏನು? ಎಂದೆಲ್ಲ ವಿಚಾರಿಸಿದರು. ಅವರಿಗೆ ಆಯೇಷಳನ್ನು ಪರಿಚಯಿಸಿ ಅವಳ ಸಮಸ್ಯೆಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದೆ. ಆಯೇಷಳ ಅಸಾಹಯಕ ಪರಿಸ್ಥಿತಿ ಕೇಳಿ ಡಾ. ದೇಸಾಯಿಯರ ಕಣ್ಣಂಚಿನಲ್ಲಿ ಕಣ್ಣೀರು ತುಳುಕಿತು. ವಯಸ್ಸಿನಲ್ಲಿ ಹಿರಿಯರಾದ ಅವರ ಮಾತಿಗೆ ಅನ್ವರ್ ಬೆಲೆ ಕೊಟ್ಟಾನೆಂಬ ಭರವಸೆಯ ಮೇಲೆ ಅವನೊಡನೆ ಮಾತನಾಡಲು ಡಾ. ದೇಸಾಯಿಯರನ್ನು ಒಪ್ಪಿಸಿದೆ. ಆನಂತರ ಅವರು ಮರುದಿನ ಬರುವುದಾಗಿ ಹೇಳಿ ಹೊರಟುಹೋದರು.

ಮಾರನೆಯ ದಿನ ಲಂಚಿಗೆ ನಮ್ಮ ಮನೆಗೆ ಬರುವಂತೆ ಅನ್ವರನಿಗೆ ತಿಳಿಸಿದೆ. ಲಂಚ್ ವೇಳೆಗೆ ಡಾ. ದೇಸಾಯಿ ದಂಪತಿಗಳು ಬಂದರು. ಅಷ್ಟರಲ್ಲಿ ಅನ್ವರನೂ ಬಂದ. ಅವರಿಬ್ಬರಿಗು ಪರಸ್ಪರ ಪರಿಚಯ ಮಾಡಿಸಿದ ಮೇಲೆ ಮಾತುಕತೆ ಪ್ರಾರಂಭಿಸಿದರು. ಡಾ. ದೇಸಾಯಿ ಸಂಪ್ರದಾಯಸ್ಥರು ಮತ್ತು ದೈವಭಕ್ತರು. ಅವರು ಅನ್ವರನಿಗೆ 'ಗಂಡ-ಹೆಂಡಿರಲ್ಲಿ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳು ಇರುವುದು ಸಹಜ, ಅದನ್ನೆ ದೊಡ್ಡದು ಮಾಡಿಕೊಂಡು ಕಾದಾಡುವುದರಲ್ಲಿ ಅರ್ಥವಿಲ್ಲ. ಅವಳನ್ನು ನೀನಾಗಿಯೆ ಹೋಗಿ ಮದುವೆಮಾಡಿಕೊಂಡು ಬಂದು ಈಗ ವಿನಾಕಾರಣ ಇಂಡಿಯಕ್ಕೆ ಹೋಗು ಎನ್ನುವುದು ನ್ಯಾಯವಲ್ಲ. ವಾಪಸ್ಸು ಕಳುಹಿಸುವಂಥ ಅಪರಾಧ ಅವಳೇನು ಮಾಡಿಲ್ಲ. ನೀನು ವಿದ್ಯಾವಂತನಾಗಿ ವಿವೇಚಿಸಿ ನೋಡು ನಿನ್ನ ವರ್ತನೆ ದೈವ ಮೆಚ್ಚುವಂತದೆ? ಎಂದು ಯೋಚಿಸು'ಎಂದು ಬುದ್ಧಿವಾದ ಹೇಳಿದರು. ಬುದ್ಧಿವಾದ ಕೇಳುತ್ತ ಕುಳಿತ ಅನ್ವರನ ಮುಖ ಉದ್ವೇಗದಿಂದ ಕೆಂಪಾಗಿತ್ತು. ಅವನಿಗೆ ಸಿಟ್ಟು ಬಂದಿದೆ ಎಂದು ಅವನ ಮುಖಚರ್ಯೆಯಿಂದ ತಿಳಿಯಬಹುದಿತ್ತು. ಡಾ. ದೇಸಾಯಿ ಮಾತು ಮುಗಿಸಿದೊಡನೆ ಅನ್ವರ್ ಸಿಟ್ಟಿನಿಂದ 'ಐ ಡೋಂಟ್ ಹ್ಯಾವ್ ಟು ಲಿಸನ್ ಟು ಆಲ್ ದಿಸ್. ಇಟ್ ಈಸ್ ಬಿಟ್ವಿನ್ ಮಿ ಎಂಡ್ ಹರ್. ನನ್ ಆಫ್ ಯು ಹ್ಯಾವ್ ಎನಿ ರೈಟ್ ಟು ಕಂ ಬಿಟ್ವಿನ್ ದಿ ಟು ಆಫ್ ಅಸ್. ಐ ಹ್ಯಾವ್ ಡಿಸೈಡೆಡ್ ವಾಟ್ ಇಸ್ ರೈಟ್ ಫಾರ್ ಬೋತ್ ಆಫ್ ಅಸ್. ವಿ ಹ್ಯಾವ್ ಇರ್‍ರಿಕನ್ಸೈಲಬಲ್ ಡಿಫರೆನ್ಸಸ್ ಬಿಟ್ವಿನ್ ಅಸ್. ವಿ ಕೆನಾಟ್ ಲಿವ್ ಟುಗೆದರ್ ಎನಿಮೋರ್. ವಾಟೆವರ್ ಯು ಸೆ ಇಸ್ ನಾಟ್ ಗೋಯಿಂಗ್ ಟು ಚೇಂಜ್ ಮೈ ಡಿಸಿಷನ್. ಷಿ ಹ್ಯಾಸ್ ಟು ಗೊ ಬ್ಯಾಕ್ ಟು ಇಂಡಿಯಾ. ಐ ರೆಫ್ಯೂಸ್ ಟು ಪಾರ್ಟಿಸಿಪೇಟ್ ಇನ್ ದಿಸ್ ಡಿಸ್ಕಷನ್ ಎನಿಮೋರ್' ಎಂದು ಎದ್ದು ಹೊರಟ ಅನ್ವರನನ್ನು ಬಲತ್ಕಾರವಾಗಿ ಹಿಡಿದು ಕೂರಿಸಿಕೊಂಡು ಡಾ. ದೇಸಾಯಿ ನಾಲ್ಕು ದಿನ ನಿಧಾನವಾಗಿ ಯೋಚಿಸು. ಈಗ ಮನಸ್ಸು ಉದ್ವಿಗ್ನ ಸ್ಥಿತಿಯಲ್ಲಿರುವುದರಿಂದ ತಪ್ಪು ಮಾಡಿದ್ದು ತಿಳಿಯುವುದಿಲ್ಲ. ಆಯೇಷಳಿಗೂ ವಿಶ್ರಾಂತಿ ಬೇಕಾಗಿದೆ. ಅವಳು ಬೇಕಿದ್ದರೆ ನಾಲ್ಕು ದಿನ ನನ್ನ ಹೆಣ್ಣು ಮಕ್ಕಳ ಜೊತೆ ಇರಲಿ. ಮನಸ್ಸು ತಿಳಿಯಾದ ಮೇಲೆ ನೀನೇ ಬಂದು ಅವಳನ್ನು ಕರೆದುಕೊಂಡು ಹೋಗು ಎಂದು ಹೇಳಿದರು. ಅದಕ್ಕೆ ಅನ್ವರ್ ಒಪ್ಪಿಗೆ ಕೊಟ್ಟ. ನಾವು ಸಮಸ್ಯೆ ಇಷ್ಟಕ್ಕೆ ಮುಗಿಯಿತಲ್ಲ ಎಂದು ನೆಮ್ಮದಿಯ ನಿಟ್ಟುಸಿರುಬಿಟ್ಟೆವು. ಡಾ. ದೇಸಾಯಿ ಆಯೇಷಳನ್ನು ಅನ್ವರನ ಮನೆಗೆ ಕರೆದೊಯ್ದು ಒಂದು ವಾರಕ್ಕೆ ಬೇಕಾಗುವ ಅವಳ ಬಟ್ಟೆಬರೆ ತೆಗೆದುಕೊಂಡು ಅಲ್ಲಿಂದ ಅವಳನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಒಂದು ವಾರ ಆಯೇಷ ಡಾ. ದೇಸಾಯಿಯರ ಹೆಣ್ಣು ಮಕ್ಕಳೊಡನೆ ಲವಲವಿಕೆಯಿಂದ ಕಳೆದಳು. ಆ ಸಮಯದಲ್ಲಿ ಅನ್ವರ್ ಒಂದು ಬಾರಿಯಾದರೂ ಆಯೇಷಳನ್ನು ಕರೆದು ಮಾತನಾಡಿಸಲಿಲ್ಲ. ಅದನ್ನು ಹೇಳಿಕೊಂಡು ಅವಳು ಕಣ್ಣೀರು ಹಾಕಿದಾಗ ಶ್ರೀಮತಿ ದೇಸಾಯಿ 'ಸಿಟ್ಟಿನಲ್ಲಿ ಗಂಡಸರು ಹೀಗೆ

ವರ್ತಿಸುವುದು ಸಹಜ. ಸಿಟ್ಟು ಇಳಿದ ಮೇಲೆ ಸರಿಹೋಗುತ್ತಾನೆ' ಎಂದು ಅವಳನ್ನು ಸಮಾಧಾನಪಡಿಸುತ್ತಿದ್ದರು.

ಎರಡು ವಾರ ಕಳೆದರೂ ಅನ್ವರನಿಂದ ಯಾವ ಸುದ್ದಿ–ಸಮಾಚಾರವಿಲ್ಲದಿದ್ದು ನೋಡಿ ಡಾ. ದೇಸಾಯಿಯರಿಗೆ ಏನು ಮಾಡಬೇಕೆಂದು ತೋರಲಿಲ್ಲ. ಆಯೇಷಳನ್ನು ಕರೆದೊಯ್ದು ಅನ್ವರನ ಮನೆಯಲ್ಲಿ ಬಿಟ್ಟುಬರುವುದು ಒಳ್ಳೆಯದೆಂದು ನಿರ್ಧರಿಸಿ ಅವಳನ್ನು ಕರೆದುಕೊಂಡು ಅನ್ವರನ ಮನೆಗೆ ಹೋದರು. ಅಲ್ಲಿ ಅವರಿಗೆ ಆಶ್ಚರ್ಯ ಕಾದಿತ್ತು. ಅನ್ವರ್ ಆಯೇಷಳು ಪುನಃ ಮನೆಗೆ ಬಾರದಂತೆ ಬೀಗಗಳನ್ನು ಬದಲಾಯಿಸಿಬಿಟ್ಟಿದ್ದ! ಸಮಸ್ಯೆ ಸಂಕೀರ್ಣಗೊಂಡು ಡಾ. ದೇಸಾಯಿಯರನ್ನು ಎದುರಿಸಿತು. ಅವರು ಅನ್ವರನ ಆಫೀಸ್ ಹುಡುಕಿಕೊಂಡು ಹೋಗಿ ಅವನನ್ನು ಕಂಡು 'ಮನೆ ಬೀಗ ಬದಲಾಯಿಸಿದ್ದು ಏಕೆ?'ಎಂದು ಕೇಳಿದರು. ಅದಕ್ಕೆ ಅವನು 'ಬೇಡದಿರುವವರನ್ನು ಹೊರಗಿಡುವ ಸಲುವಾಗಿ' ಎಂದು ಉತ್ತರಿಸಿದ. ಡಾ. ದೇಸಾಯಿಯರಿಗೆ ಅವನ ಬೇಜವಾಬ್ದಾರಿ ಉತ್ತರ ಕೇಳಿ ಸಿಟ್ಟು ಬಂದರೂ ಶಾಂತರೀತಿಯಿಂದ 'ದಿಕ್ಕು–ದೆಸೆ ಇಲ್ಲದ ಅವಳು ಇರುವುದೆಲ್ಲಿ? ಅವಳನ್ನು ಬೀದಿಪಾಲು ಮಾಡುವ ಸಲುವಾಗಿ ಇಲ್ಲಿಗೆ ಕರೆದುಕೊಂಡು ಬಂದಿದ್ದೇನು? ಅವಳು ಇರುವುದಕ್ಕೆ ವ್ಯವಸ್ಥೆ ಮಾಡಿಕೊಡಬೇಕಾದುದು ನಿನ್ನ ಕರ್ತವ್ಯ' ಎಂದು ಹೇಳಿದರು. ಅದಕ್ಕೆ ಅನ್ವರ್ 'ನೀವು ಅವಳ ಪರವಾಗಿ ವಕಾಲತ್ತು ವಹಿಸಿದ್ದೀರಿ ಆದ್ದರಿಂದ ಆ ಜವಾಬ್ದಾರಿ ನಿಮ್ಮದು. ಅವಳು ಇಂಡಿಯಾಕ್ಕೆ ಹೋಗುವ ವ್ಯವಸ್ಥೆ ಮಾಡುವ ಜವಾಬ್ದಾರಿ ನನ್ನದು. ಈ ವಿಷಯ ಕುರಿತು ಹೆಚ್ಚಿಗೆ ಚರ್ಚಿಸಲು ನನಗೆ ಸಮಯವಿಲ್ಲ' ಎಂದು ಹೇಳಿದ್ದು ಕೇಳಿ ಡಾ. ದೇಸಾಯಿಯರಿಗೆ ಕೋಪ ಉಕ್ಕಿ ಬಂದು 'ಇದು ನಿಸ್ಸಹಾಯಕ ಹೆಣ್ಣು ಮಗಳೊಬ್ಬಳ ಭವಿಷ್ಯದ ಪ್ರಶ್ನೆ. ಅವಳೇನು ಅಂಗಡಿಯಿಂದ ಕೊಂಡುತಂದ ವಸ್ತುವಲ್ಲ. ಕೊಂಡುತಂದ ವಸ್ತುವನ್ನು ವಾಪಸ್ಸು ಮಾಡುವವರು ಕೂಡ ನಿನ್ನಷ್ಟು ನಿಷ್ಠುರರಾಗಿರುವುದಿಲ್ಲ. ಅವಳನ್ನು ಬರಿಗೈಯಿಂದ ಇಂಡಿಯಾಕ್ಕೆ ಕಳುಹಿಸಬೇಕೆಂದು ಮಾಡಿದ್ದೀಯೇನು? ನಿನಗೆ ಇಷ್ಟವಿಲ್ಲ ಎಂದಾದರೆ ನ್ಯಾಯಬದ್ಧವಾಗಿ ಅವಳಿಂದ ವಿಚ್ಛೇದನ ಪಡೆದು ಅವಳು ಅನುಭವಿಸಿದ ಮಾನಸಿಕ ಯಾತನೆಗೆ ತಕ್ಕ ಪರಿಹಾರ ನೀಡಿ ಮರ್ಯಾದೆಯಿಂದ ಅವಳನ್ನು ಕಳುಹಿಸಿಕೊಡು. ಇದಕ್ಕೆಲ್ಲ ಕೋರ್ಟಿನ ಮೆಟ್ಟಿಲು ಹತ್ತುವುದು ಬೇಡ ನಮ್ಮೊಳಗೆ ಪರಸ್ಪರವಾಗಿ ಇತ್ಯರ್ಥ ಮಾಡಿಕೊಳ್ಳಬಹುದು' ಎಂದು ಹೇಳಿದರು. ಅನ್ವರ್ 'ಪರಿಹಾರ ಕೊಡುವಂತಹ ಅಪರಾಧ ನಾನೇನೂ ಮಾಡಿಲ್ಲ. ಪರಿಹಾರ ಬೇಕಿದ್ದರೆ ಕೋರ್ಟಿಗೆ ಹೋಗಿ' ಎಂದ. ಅವನೊಟ್ಟಿಗೆ ಇನ್ನು ಮಾತಾಡಿ ಪ್ರಯೋಜನವಿಲ್ಲ ಎಂದುಕೊಂಡು ಡಾ. ದೇಸಾಯಿಯರು ಆಯೇಷಳನ್ನು ಕರೆದುಕೊಂಡು ಮನೆಗೆ ಹಿಂತಿರುಗಿದರು.

ಡಾ. ದೇಸಾಯಿಯವರಿಗೆ ಇದ್ದಕಿದ್ದಂತೆ ಅಪರಿಚಿತಳಾದ, ಅನ್ಯಮತದವಳಾದ ಈ ತರುಣಿಯ ಜವಾಬ್ದಾರಿ ತಮ್ಮ ಹೆಗಲ ಮೇಲೆ ಬಿದ್ದಿದ್ದು ಮನಸ್ಸಿಗೆ ಬಹಳ ಆತಂಕ

ಉಂಟಾಯಿತು. ನನ್ನಿಂದ ಆನ್ವರನ ಪರಿಚಯ ಅವರಿಗೆ ಆಗಿದ್ದರಿಂದ ಇದರಲ್ಲಿ ನನ್ನ ಹೊಣೆಗಾರಿಕೆಯೂ ಇತ್ತು. ಆದ್ದರಿಂದ ನಾವಿಬ್ಬರೂ ಕೂಡಿ ಏನು ಮಾಡಬೇಕೆನ್ನುವುದನ್ನು ಯೋಚಿಸಿದೆವು. ನನಗೆ ಹೊಳೆದಿದ್ದು ನಮ್ಮ ಊರಿನ ಇಸ್ಲಾಮ್ ಮತಸ್ಥರ ಸಂಘಕ್ಕೆ ಆಯೇಷಳ ವಿಷಯ ತಿಳಿಸಿ ಅವಳಿಗೆ ಸಹಾಯ ಮಾಡುವಂತೆ ಕೇಳುವುದು. ಹಾಗೆಯೇ ನಮ್ಮ ಊರಿನಲ್ಲಿ ಭಾರತ ಮತ್ತು ಪಾಕೀಸ್ಥಾನದ ಮುಸ್ಲಿಂ ಕುಟುಂಬಗಳು ಬೇಕಾದಷ್ಟಿವೆ. ತಮ್ಮ ಮತದವಳೇ ಆದ ಈ ಹತಭಾಗಿನಿಗೆ ಆಸರೆ ನೀಡಲು ಯಾರಾದರೂ ಮುಂದೆ ಬಂದಾರು ಎನ್ನುವ ಆಸೆಯಿಂದ ಆ ಸಂಸ್ಥೆಯ ಅಧ್ಯಕ್ಷರನ್ನು ಕರೆದು ವಿಚಾರಿಸಿದೆವು. ಆ ಸಂಸ್ಥೆಯ ಅಧ್ಯಕ್ಷರು ಚಾಣಾಕ್ಷತನದಿಂದ 'ಇದು ಕೋರ್ಟಿನಲ್ಲಿ ತೀರ್ಮಾನವಾಗಬೇಕಾದ ವಿಷಯ, ಅದು ಇತ್ಯರ್ಥವಾಗಲು ಬಹಳ ಕಾಲ ಬೇಕಾಗಬಹುದು, ಅಲ್ಲಿಯವರೆಗೆ ಅವಳಿಗೆ ಆಶ್ರಯ ನೀಡಿ ಕೋರ್ಟಿಗೆ ಹಣ ಸುರಿಯುವ ಸ್ಥಿತಿಯಲ್ಲಿ ನಾವು ಇಲ್ಲ. ಅವಳ ಗಂಡ ಹೇಳಿದಂತೆ ಆಕೆ ಇಂಡಿಯಾಕ್ಕೆ ಯಾಕೆ ವಾಪಸ್ಸು ಹೋಗಬಾರದು?' ಎಂದು ಸಲಹೆ ನೀಡಿದರು! ಭಾರತ ಮತ್ತು ಪಾಕಿಸ್ತಾನಿ ಮುಸ್ಲಿಮ್ ಕುಟುಂಬಗಳು 'ಇದು ಗಂಡ-ಹೆಂಡಿರ ನಡುವಣ ಖಾಸಗಿ ವಿಷಯ ಇದರಲ್ಲಿ ನಾವು ಮಧ್ಯೆ ಪ್ರವೇಶಿಸಲು ಇಷ್ಟಪಡುವುದಿಲ್ಲ' ಎಂದು ಹೇಳಿ ಕೈತೊಳೆದುಕೊಂಡರು. ಇದನ್ನೆಲ್ಲ ಅವಲೋಕಿಸುತ್ತಿದ್ದ ಶ್ರೀಮತಿ ದೇಸಾಯಿಯವರಿಗೆ ಇಸ್ಲಾಮ್ ಸಂಸ್ಥೆ ಮತ್ತು ಕುಟುಂಬಗಳ ಬಗ್ಗೆ ಜಿಗುಪ್ಸೆ ವ್ಯಕ್ತಪಡಿಸುತ್ತ ಅವರು 'ಅವರು ಆಶ್ರಯ ಕೊಡದಿದ್ದರೆ ಅಷ್ಟೇ ಹೋಯಿತು! ನನ್ನ ಹೆಣ್ಣುಮಕ್ಕಳ ಜೊತೆಗೆ ಆಯೇಷಳೂ ಒಬ್ಬಳು ಎಂದು ಜೋಪಾನ ಮಾಡುತ್ತೇನೆ. ಮುಂದೆ ಏನು ಮಾಡಬೇಕು ಎನ್ನುವುದನ್ನು ಯೋಚಿಸಿ ಯಾವುದು ಸೂಕ್ತವೋ ಹಾಗೆ ಮಾಡಿ' ಎಂದು ಹೇಳಿದರು.

ದಿಕ್ಕುದೆಸೆಯಿಲ್ಲದ ಆಯೇಷಳಿಗೆ ಡಾ. ದೇಸಾಯಿ ಮತ್ತು ಶ್ರೀಮತಿ ದೇಸಾಯಿಯರು ಆಶ್ರಯ ನೀಡಿ ತಮ್ಮ ಮಗಳಂತೆ ಕಾಪಾಡಿದರು. ಎತ್ತಣ ಆಯೇಷ? ಎತ್ತಣ ಡಾ.ದೇಸಾಯಿ? ಕೆಲವು ವಾರಗಳ ಹಿಂದೆ ಪರಸ್ಪರ ಅಪರಿಚಿತರಾದವರನ್ನು ಈಗ ಬಂಧುತ್ವದ ಬೆಸುಗೆ ಒಂದಾಗಿಸಿದೆ. ಹೀಗೆ ಕಾಣದ ಕೈ ತನ್ನನ್ನು ಕಾಪಾಡಬೇಕಾಗಿ ಬರುತ್ತದೆ ಎಂದು ಆಯೇಷ ಕನಸಿನಲ್ಲೂ ಕಂಡಿರಲಿಲ್ಲ.

ಡಾ. ದೇಸಾಯಿ ತಮಗೆ ಗೊತ್ತಿದ್ದ ಲಾಯರಿಗೆ ಇವಳ ಕೇಸನ್ನು ನಡೆಸಲು ನೇಮಿಸಿದರು. ಆಯೆಷಳನ್ನು ಇಂಗ್ಲಿಷ್ ಕಲಿಯಲು ಅವರ ಹೆಣ್ಣುಮಕ್ಕಳೊಂದಿಗೆ ಕಾಲೇಜಿಗೆ ಸೇರಿಸಿದ್ದರು. ನಿತ್ಯವೂ ಖುರಾನ್ ಪಠಿಸುವಂತೆ ಆಯೇಷಳಿಗೆ ನಿರ್ದೇಶಿಸಿ ಅವಳು ಖಿನ್ನತೆಯ ಕಂದರಕ್ಕೆ ಬೀಳದಂತೆ ಕಾಪಾಡಿದರು. ಅವಳ ಯೋಗಕ್ಷೇಮದ ಬಗ್ಗೆ ಭಾರತದಲ್ಲಿದ್ದ ತಾಯಿ ತಂದೆಯರಿಗೆ ಧೈರ್ಯದಿಂದಿರುವಂತೆ ಭರವಸೆಕೊಟ್ಟು, ಕೋರ್ಟಿನ ವಿದ್ಯಮಾನಗಳ ಬಗ್ಗೆ

ಆಗಾಗ ಕಾಗದ ಬರೆದು ತಿಳಿಸುತ್ತಿದ್ದರು. ಹೀಗೆ ಆ ಕೇಸು ಒಂದು ವರ್ಷದ ಮೇಲೆ ನಡೆದು ಕೊನೆಗೆ ಆಯೇಷಳಿಗೆ ಅನುಕೂಲವಾಗಿ ತೀರ್ಮಾನವಾಯಿತು. ಅನ್ವರ್ ಆಯೇಷಳಿಗೆ ಸಹಸ್ರಾರು ಡಾಲರ್ ಪರಿಹಾರ ಕೊಡಬೇಕಾಯಿತು. ಆಯೇಷಳು ಗೆದ್ದರೂ ಜೀವನದಲ್ಲಿ ಸೋಲನ್ನು ಅನುಭವಿಸಿದವಳಂತೆ ಅಸುಖಿಯಾಗಿದ್ದಳು.

ಕೇಸು ಮುಗಿದು ಕೆಲವು ವಾರಗಳಾದ ಮೇಲೆ ಆಯೇಷ ಇಂಡಿಯಾಕ್ಕೆ ಹೋಗಲು ನಿರ್ಧರಿಸಿದಳು. ಜೀವನವನ್ನು ಹೊಸದಾಗಿ ಪ್ರಾರಂಭ ಮಾಡಲು ಮನಸ್ಸುಮಾಡಿ ಹೊರಟಿದ್ದಳು. ಹೊರಡುವ ದಿನ ಅವಳು ದೇಸಾಯಿ ದಂಪತಿಗಳ ಕಾಲಿಗೆರಗಿ ಕಣ್ಣೀರಧಾರೆ ಹರಿಸಿದಳು. ದೇಸಾಯಿ ದಂಪತಿಗಳ ಕಣ್ಣೀರು ತುಂಬಿ ತುಳುಕಿತು. ಶ್ರೀಮತಿ ದೇಸಾಯಿ ಆಯೇಷಳನ್ನು ಬಿಗಿದಪ್ಪಿ 'ಯಾವ ಜನ್ಮದ ಋಣಾನುಬಂಧವೋ ನಮ್ಮನ್ನು ತಾತ್ಕಾಲಿಕವಾಗಿ ಒಂದುಗೂಡಿಸಿತು ಈಗ ಪುನಃ ಬೇರೆಯಾಗುತ್ತಿದ್ದೇವೆ. ನೀನು ಬಹಳ ನೊಂದಿದ್ದೀಯ. ನಿನ್ನ ಹೊಸ ಬಾಳಿನಲ್ಲಿ ನಿನಗೆ ನೆಮ್ಮದಿ ದೊರೆಯಲಿ ಎಂದು ದೇವರಲ್ಲಿ ಕೇಳಿಕೊಳ್ಳುತ್ತೇನೆ. ದೇವರು ನಿನಗೆ ಒಳ್ಳೆಯದು ಮಾಡಲಿ' ಎಂದು ಆಶೀರ್ವದಿಸಿದರು. ಆಯೇಷಳನ್ನು ಕಳುಹಿಸಲು ನಾವು ವಿಮಾನ ನಿಲ್ದಾಣಕ್ಕೆ ಹೋಗಿದ್ದೆವು. ಆ ದಿನ ಜಿಪುರು ಮಳೆ ಸುರಿಯುತ್ತಿತ್ತು. ಮೋಡ ಕವಿದ ಆಕಾಶ ಮಂಕಾಗಿತ್ತು. ಆಯೇಷ ತನ್ನ ಛಿದ್ರಗೊಂಡ ಅಮೆರಿಕನ್ ಕನಸಿನ ಚೂರುಗಳನ್ನು ಆಯ್ದುಕೊಳ್ಳುವ ಗೋಜಿಗೆ ಹೋಗದೆ ನಮಗೆಲ್ಲರಿಗು ವಿದಾಯ ಹೇಳಿ ವಿಮಾನ ಹತ್ತಿದಳು. ಭಾರತಾಭಿಮುಖವಾಗಿ ಹೊರಟ ವಿಮಾನ ಆಯೇಷಳ ಅಸ್ತಂಗತವಾದ ಅಮೆರಿಕನ್ ಕನಸಿನಂತೆ ಮೋಡಮುಸುಕಿದ ಆಕಾಶದಲ್ಲಿ ಮರೆಯಾಗಿ ಹೋಯಿತು !

●

# ನಿರ್ಧಾರ

– ಸಂಧ್ಯಾ ರವೀಂದ್ರನಾಥ್

'ನಾನು ಬಂದುಬಿಡ್ತೀನಿ, ಅತ್ತೆ. ಇನ್ನೊಂದು ಅರ್ಧ ಘಂಟೇಲಿ ಇಲ್ಲಿಂದ ಹೊರಟು ಬಿಡ್ತೀನಿ. ಏನೂ ಯೋಚನೆ ಮಾಡಬೇಡಿ. ನಾಳೆ ಪೂಜೆಗೆ ನಾನೇ ಬಂದು ಎಲ್ಲ ಅಣಿ ಮಾಡ್ತೀನಿ' ಸುಮನ ತನ್ನ ಸೆಲ್–ಫೋನ್ ಆರಿಸಿದಳು.

ಸುಮನ ಶ್ರೀಧರ್. ಬೆಂಗಳೂರಿನ ಹೆಸರಾಂತ ಗಾಯಕಿ. ಸುಗಮ ಸಂಗೀತ ನಿರ್ದೇಶಕಿ. ಅವಳ ಸಂಗೀತದ ಕೆಸೆಟ್‌ಗಳು ತುಂಬಾ ಜನಪ್ರಿಯವಾಗಿದ್ದವು. ಕೆಲವಂತೂ ಸಾವಿರಾರು ಮಾರಾಟವಾಗಿದ್ದವು. ಅವಳೇ ನಿರ್ದೇಶಿಸಿ ಹಾಡುವ, ಹಾಡಿಸುವ ಖ್ಯಾತಿ ಅವಳದ್ದು. ಇವತ್ತು ಅವಳು ನಿರ್ದೇಶಿಸಿ ಹಾಡುತ್ತಿರುವುದು ಬಾಸ್ಟನ್‌ನಲ್ಲಿ ಇರುವ ಅಜಿತ್ ಕುಲಕರ್ಣಿಯವರ ಗೀತೆಗಳು. ಅಜಿತ್ ವೃತ್ತಿಯಲ್ಲಿ ಕಂಪ್ಯೂಟರ್ ತಜ್ಞ, ಪ್ರವೃತ್ತಿಯಲ್ಲಿ ಕವಿ. ಟೆಕ್ನಾಲಜಿಯ ಗಂಭೀರವಾದ ವಿಷಯಗಳ ಬಗ್ಗೆ ಬರೆಯುವುದೇ ಅಲ್ಲದೆ, ಹಾಸ್ಯಗೀತೆಗಳನ್ನು, ಭಾವಗೀತೆಗಳನ್ನೂ ರಚಿಸುತ್ತಿದ್ದ. ಈಗ ಬಂದಿರುವ ಮೂರು ವಾರದಲ್ಲಿ ತನ್ನ ಕವನಗಳನ್ನು ಗೀತೆಗಳಾಗಿಸುವ ಯೋಜನೆಯನ್ನು ಮಾಡಿದ್ದ.

ಸುಮನಳದ್ದು ಸಂಪ್ರದಾಯಸ್ಥ ಸಂಸಾರ. ಮನೆಯಲ್ಲಿ ಅತ್ತೆ, ಮಾವ, ಗಂಡ, ಎರಡು ಮಕ್ಕಳು. ಮಕ್ಕಳಿಬ್ಬರೂ ಈಗ ಕಾಲೇಜಲ್ಲಿದ್ದರು. ಮಗ ಎಂಜಿನೀಯರಿಂಗ್, ಮಗಳು ಮೆಡಿಕಲ್ ಓದುತ್ತಿದ್ದರು. ಶ್ರೀಧರ್‌ಗೆ ಐ.ಟಿ.ಐ.ನಲ್ಲಿ ಕೆಲಸ. ಎಂಜಿನಿಯರ್ ಆದ ಅವನಿಗೆ, ಸಂಗೀತದ ಗಂಧವೇನೂ ಇರಲಿಲ್ಲ. ಮೊದಮೊದಲು ಹೆಂಡತಿಯ ಬಲವಂತಕ್ಕೆ ಅವಳ ರಚನೆಗಳನ್ನು ಕೇಳುತ್ತಿದ್ದ. ಈಗ ತಾನಾಯ್ತು, ತನ್ನ ಕೆಲಸವಾಯ್ತು. ಸಂಜೆ ಕ್ಲಬ್‌ಗೆ ಹೋಗಿ ಗೆಳೆಯರೊಡನೆ ಇಸ್ಪೀಟು, ಪಾರ್ಟಿ.

ಅತ್ತೆ, ಮಾವ ಸುಮನಳನ್ನು ತುಂಬಾ ಅವಲಂಬಿಸುತ್ತಿದ್ದರು. ಚಿಕ್ಕ ವಯಸ್ಸಿನಲ್ಲೇ ಮದುವೆಯಾಗಿ ಅವರ ಮನೆ ಸೇರಿದ್ದ ಸುಮನಳಿಗೆ, ಅವರು ತಂದೆ ತಾಯಿಯ ಸಮಾನ. ಅವರಿಗೆ ಬೇಕಾದಂತೆ ಪೂಜೆ, ಪುನಸ್ಕಾರ, ಊಟ, ತಿಂಡಿ ಎಲ್ಲವನ್ನೂ ಅಚ್ಚುಕಟ್ಟಾಗಿ

ಪ್ರೀತಿಯಿಂದ ನಿಭಾಯಿಸುತ್ತಿದ್ದಳು. ಮನೆಯ ಜವಾಬ್ದಾರಿಗಳೆಲ್ಲ ಕಳೆದ ನಂತರ ಸಂಗೀತಕ್ಕೆ ಸಮಯ. ಗೌರಿ ಹಬ್ಬದ ಹಿಂದಿನ ದಿನ ಸ್ಟುಡಿಯೋದಲ್ಲಿ ರೆಕಾರ್ಡಿಂಗ್‌ಗಾಗಿ ಬಂದಿದ್ದಳು ಸುಮನ. ಅಜಿತ್ ಬರೆದ ಕವನಗಳು ಅವಳ ಮನಸೆಳೆದಿದ್ದವು. ಹೆಸರಾಂತ ಕವಿಗಳ ಗಹನವಾದ ರಚನೆಗಳಿಗೆ ಹೋಲಿಸಿದರೆ ಇವು ಸರಳವಾಗಿ, ಸುಂದರವಾಗಿ ಕಂಡಿದ್ದವು. ಆದರೂ ಕನ್ನಡವನ್ನು ಕನ್ನಡನಾಡಿನಲ್ಲಿ ಇರುವವರೇ ಮರೆತಿರುವ ಈ ಕಾಲದಲ್ಲಿ, ದೂರದ ಬಾಸ್ಟನಲ್ಲಿ ಕುಳಿತು ಕನ್ನಡ ಪ್ರೇಮವನ್ನು ಪ್ರಕಟಿಸಿರುವ ಅಜಿತ್ ಕಂಡು ಮೆಚ್ಚುಗೆಯಾಗಿತ್ತು. ಅದನ್ನು ಅವಳು ವ್ಯಕ್ತಪಡಿಸಿದಾಗ ಅಜಿತ್ 'ಕನ್ನಡವನ್ನು ಮರೆಯುವುದು ಹೇಗೆ ಸಾಧ್ಯ ಹೇಳಿ. ಹೆತ್ತ ತಾಯಿಯನ್ನೇ ಮರೆತಂತೆ. ಅದೂ ಅಲ್ಲದೆ ದೂರವಾದಷ್ಟೂ ಪ್ರೀತಿ, ಸೆಳೆತ ಜಾಸ್ತಿಯಾಗುತ್ತೆ, ಅಲ್ಲವೆ?' ಎಂದು ನಕ್ಕಿದ್ದ.

ಅವನು ನಕ್ಕಾಗ ಎಷ್ಟು ಮೋಹಕವಾಗಿ ಕಾಣ್ತಾನೆ ಎನ್ನಿಸಿತು ಸುಮನಳಿಗೆ. ಮರುಕ್ಷಣವೇ ಛೆ, ಇದೇನು ಈ ರೀತಿ ಯೋಚಿಸಿದೆ. ಅದೂ ಮದುವೆಯಾಗಿರುವ ಈ ಪರಪುರುಷನ ಬಗ್ಗೆ ಎಂದು ತನ್ನನ್ನು ತಾನೇ ಡಿಸಿಪ್ಲಿನ್ ಮಾಡಿಕೊಂಡಿದ್ದಳು.

'ಈಗ ಈ ಕವನಗಳಿಗೆ ನೀವು ರಾಗ ಸಂಯೋಜನೆ ಮಾಡಿ ನಿಜವಾಗಿ ಅವನ್ನು ಆಕರ್ಷಣೀಯವಾಗಿ ಮಾಡಿದಿರಿ. ಧನ್ಯವಾದಗಳು, ಸುಮನಾ ಅವರೆ. ನಿಜವಾಗಿ ನಿಮ್ಮಷ್ಟು ಟ್ಯಾಲೆಂಟೆಡ್ ಆರ್ಟಿಸ್ಟ್ ನನಗೆ ಸಿಕ್ಕಿದ್ದು ನನ್ನ ಪುಣ್ಯ' ಅಜಿತ್ ಮುಂದುವರೆಸಿದ್ದ.

'ಓ.... ಪರವಾಗಿಲ್ಲ ಬಿಡಿ. ನೀವು ಅಷ್ಟು ಚೆನ್ನಾಗಿ ಮೀಟರ್‌ಗೆ ತಕ್ಕ ಹಾಗೆ ಬರೆದಿದ್ದೀರ. ರಾಗ, ತಾಳ ಹೊಂದಿಸೋದು ಸುಲಭವಾಗಿತ್ತು. ಇನ್ನು ನಾನು ಬರ್ತೀನಿ. ತುಂಬಾ ಹೊತ್ತಾಗಿ ಹೋಯಿತು. ಮನೇಲಿ ಕಾಯ್ತಾ ಇರ್ತಾರೆ'.

'ಸಾರಿ, ತುಂಬಾ ಹೊತ್ತಾಯಿತು. ನಿಮ್ಮನ್ನು ನಾನು ಡ್ರಾಪ್ ಮಾಡಲೆ ?'

'ಇಲ್ಲ, ಪರ್ವಾಗಿಲ್ಲ. ನನ್ನದೇ ಕಾರ್ ಇದೆ'.

'ಓ.... ಸರಿ ಹಾಗಾದರೆ' ಅವನ ಧ್ವನಿಯಲ್ಲಿನ ನಿರಾಸೆಯನ್ನು ಸುಮನ ಗಮನಿಸದೆ ಇರಲಿಲ್ಲ. 'ಮತ್ತೆ, ನಿಮ್ಮನ್ನು ನೋಡೋದು ಯಾವಾಗ?'

ಇನ್ನೊಂದು ವಾರದಲ್ಲಿ ಪ್ರಪಂಚದ ಮತ್ತೊಂದು ತುದಿಯಲ್ಲಿನ ಅಮೆರಿಕಾಗೆ ವಾಪಸ್ ಹೋಗುವ ಇವನೊಂದಿಗೆ ಮತ್ತೊಮ್ಮೆ ಭೇಟಿ ಸಾಧ್ಯವೇ? ಸಾಧ್ಯವಾಗಲಿ ಎಂದು ಅವಳ ಮನಸ್ಸು ಹಾತೊರೆಯುತ್ತಿತ್ತು. ಯಾಕೆ ಈ ಸೆಳೆತ ?

'ನೋಡೋಣ. ಸಾಧ್ಯವಾದರೆ ಮನೆಗೆ ಬನ್ನಿ ಹೊರಡೋಕೆ ಮುಂಚೆ' ಅವಳಿಗೇ ತಿಳಿಯದಂತೆ ಮಾತುಗಳು ಹೊರಬಿದ್ದಿದ್ದವು.

'ಖಂಡಿತಾ.... ನಿಮ್ಮ ಮನೆಗೇ ಅಂತಾನೆ ಟೈಂ ಮಾಡಿಕೊಂಡು ಬರ್ತೀನಿ' ಅಜಿತ್ ಸಂತಸದಿಂದ ಹೇಳಿದ.

ಕಾರ್ ಡ್ರೈವ್ ಮಾಡಿಕೊಂಡು ಬರ್ತಾ ಇರಬೇಕಾದರೆ ಸುಮನಳಿಗೆ ಏನೋ ಉಲ್ಲಾಸ. ಮನಸ್ಸೆಲ್ಲ ಹಗುರವಾಗಿ ಹೂ ಬಿರಿದಂತಾಗಿತ್ತು. ಮೆಲ್ಲಗೆ ತಾನೇ ರಾಗ ಹಾಕಿದ ಅವನ ಗೀತೆ 'ಬಣ್ಣದ ಬಣ್ಣದ ಬಾನಂಚಲಿ' ಗುನುಗತೊಡಗಿದಳು.

ಮನೆಗೆ ಬಂದೊಡನೆ ನಾಳೆ ಪೂಜೆಗೆ ಏನೂ ಸಿದ್ಧವಾಗಿಲ್ಲವೆಂದು ಅತ್ತೆ ಚಡಪಡಿಸುತ್ತಿದ್ದರು 'ವರ್ಷಾವಧಿ ಹಬ್ಬ. ಇದೇನು ಸುಮನ, ಇಷ್ಟು ತಡ ಮಾಡಿದೆ ?'

'ಏನೂ ಯೋಚನೆ ಮಾಡಬೇಡಿ, ಅತ್ತೆ. ನಾನು ಎಲ್ಲ ಸಿದ್ಧಮಾಡ್ತೀನಿ. ಹೂವು ಹಣ್ಣು ಎಲ್ಲ ತಂದಿದೀನಿ, ನೋಡಿ' ಸುಮನ ಚಕಚಕನೆ ಎಲ್ಲ ಸಿದ್ಧಪಡಿಸತೊಡಗಿದಳು. ಮನದ ಉಲ್ಲಾಸ ಅವಳ ಮುಖದಲ್ಲಿ ಸಂಭ್ರಮದ ನಗೆಯ ಹೊನಲನ್ನು ಉಕ್ಕಿಸಿತ್ತು. ಅತ್ತೆಯೂ ಅದನ್ನು ಗಮನಿಸಿದರು.

'ರೆಕಾರ್ಡಿಂಗ್ ಚೆನ್ನಾಗಿ ಆಯಿತೇ? ತುಂಬ ಸಂತೋಷದಲ್ಲಿದ್ದೀಯ'.

'ಹೂಂ ಅತ್ತೆ. ತುಂಬಾ ಚೆನ್ನಾಗಿ ಆಯಿತು. ಅದೇ ಹೇಳಿದ್ದೆನಲ್ಲ... ಅಜಿತ್ ಅಂತ ಅಮೆರಿಕಾದಿಂದ ಬಂದಿದ್ದಾರೆ, ಅವರ ಪ್ರಾಜೆಕ್ಟ್. ಅವರಿಗೂ ಹಾಡುಗಳು ತುಂಬಾ ಇಷ್ಟ ಆಯಿತು'.

'ಏನೋಮ್ಮ, ಎಲ್ಲ ಸಂತೋಷವಾಗಿದ್ದರೆ ಸಾಕು. ಅಷ್ಟು ಕಷ್ಟಪಡ್ತೀಯ, ಎಲ್ಲ ಖುಶಿಯಾಗಿದ್ದರೆ ಸಾಕು'.

ಸುಮನಳಿಗೆ ಖುಶಿಯ ಹಿಂದೆಯೇ ಒಂದು ತರಹ ಬೇಜಾರೂ ಆಗಿತ್ತು. ಪ್ರಾಜೆಕ್ಟ್ ಮುಗಿದು ಹೋಯಿತಲ್ಲ ಎಂದು. ಅಜಿತ್ ಮಾತು-ಕತೆ, ಸಹವಾಸ ಎಲ್ಲ ಎರಡು ವಾರದಿಂದ ತುಂಬ ಹಿಡಿಸಿತ್ತು . ಅವನಿಗೂ ಸಂತಸವಾಗಿತ್ತೆಂದು ಅವನೇ ಬೇಕಾದಷ್ಟು ಸಲ ಹೇಳಿದ್ದ. ಬಾಯಿ ತುಂಬ ಸುಮನಳನ್ನು ಹೊಗಳಿದ್ದ. ಪ್ರತಿ ಸಾರಿ ಅದನ್ನು ಕೇಳಿದಾಗಲೂ ಸುಮನಳ ಹೃದಯ ಸಂತಸದಿಂದ ಹಿಗ್ಗುತಿತ್ತು. ಇಷ್ಟು ಜನ ಕವಿ, ಸಂಗೀತಗಾರರೊಡನೆ ಅವಳು ವ್ಯವಹರಿಸಿದ್ದರೂ, ಇದಕ್ಕೆ ಏನೋ ವಿಶೇಷವಾದ ಆಕರ್ಷಣೆಯಿತ್ತು.

ಎರಡು ದಿನಗಳ ನಂತರ ಮನೆಯ ಬೆಲ್ಲಾಯಿತು. ಬಾಗಿಲು ತೆಗೆದು ನೋಡಿದರೆ ಅಜಿತ್ ನಿಂತಿದ್ದಾನೆ. ಸುಮನ ಆಶ್ಚರ್ಯದಿಂದ 'ನೀವು.... ಇಲ್ಲಿಗೆ.... ಈಗ....' ಎಂದು ಏನೋ ತೊದಲಿದಳು.

'ತಬಲ ನುಡಿಸುತ್ತಾರಲ್ಲ ಮುರಾರಿ, ಅವರು ನಿಮ್ಮ ಅಡ್ರೆಸ್ ಕೊಟ್ರು. ಮನೆ ಹುಡಿಕಿಕೊಂಡು ಬಂದೇಬಿಟ್ಟೆ. ಸಾರಿ, ನಿಮಗೆ ಫೋನ್ ಮಾಡಲಿಲ್ಲ. ನಿಮ್ಮನ್ನು ಸರ್ಪ್ರೈಸ್ ಮಾಡೋಣ ಅಂತಾನೆ ಬಂದೆ. ಪರವಾಗಿಲ್ಲವಾ?'

'ಓ.... ಯೆಸ್ .... ಬನ್ನಿ ಒಳಗೆ' ಸುಮನ ಒಳಗೆ ನಡೆದಳು.

'ನೋಡಿ, ಇನ್ನೊಂದು ಸರ್ಪ್ರೈಸ್' ಎನ್ನುತ್ತಾ ಒಂದು ಕೆಸೆಟ್ ಅವಳ ಕೈಗಿತ್ತ.

'ಹೃದಯ ಕಮಲ' ಓದಿದಳು ಸುಮನ.

'ಯೆಸ್, ಇದೇ ನಮ್ಮ ನಿಮ್ಮ ಶ್ರಮದ ಪ್ರತಿಫಲ. ವಿತ್ ಆಲ್ ಮೈ ಲವ್' ಎನ್ನುತ್ತಾ ನಕ್ಕ ಅಜಿತ್. ಮತ್ತೆ ಅದೇ ಮೋಹಕ ನಗು. ಸುಮನಳಿಗೆ ಅವನ ದಿಟ್ಟ ನೋಟ ಎದುರಿಸಲು ಸಾಧ್ಯವಾಗಲಿಲ್ಲ. ಕಾಲೆಲ್ಲ ಸೋತಂತೆ ಭಾಸವಾಯಿತು. ಯಾಕೆ ಈ ರೀತಿ ?

'ಥ್ಯಾಂಕ್ ಯು. ಹಾಡೆಲ್ಲ ಚೆನ್ನಾಗಿ ಬಂದಿದೆಯಾ?' ಸಾವರಿಸಿಕೊಂಡು ಕೇಳಿದಳು.

'ಸುಪರ್ಬ್, ತುಂಬಾ ಚೆನ್ನಾಗಿ ಬಂದಿದೆ. ಇಷ್ಟು ಕಡಿಮೆ ಸಮಯದಲ್ಲಿ ಅದೆಷ್ಟು ಚೆನ್ನಾಗಿ ಮಾಡಿಕೊಟ್ರಿ. ಥ್ಯಾಂಕ್ ಯು. . ಅಂದಹಾಗೆ, ನಿಮ್ಮಿಂದ ಇನ್ನೊಂದು ಫ಼ೇವರ್ ಬೇಕಾಗಿತ್ತು. ನಾನು ನಿನ್ನೆ ಒಂದು ಕವನ ಬರೆದೆ. ಅದಕ್ಕೂ ನೀವು ರಾಗ ಹಾಕಿ ಹಾಡಬೇಕು. ನಾಳೆ ಸ್ಟುಡಿಯೋ ಬುಕ್ ಮಾಡಿದೀನಿ. ದಯವಿಟ್ಟು ಇಲ್ಲ ಅನ್ನಬೇಡಿ'.

'ಒಂದೇ ದಿನದಲ್ಲಿ ರಾಗ ಸಂಯೋಜನೆಯಾಗಿ, ಹಾಡಿ, ರೆಕಾರ್ಡ್ ಎಲ್ಲ ಆಗಬೇಕೆ? ಅದು ಸ್ವಲ್ಪ ಕಷ್ಟ! ' ಅನುಮಾನಿಸಿದಳು ಸುಮನ.

'ನೀವು ಮಾಡೇ ಮಾಡ್ತೀರ ಅಂತ ನನಗೆ ಭರವಸೆ ಇದೆ. ಅದಕ್ಕೇ ಕೇಳಿದ್ದು. ನನಗೆ ಗೊತ್ತು ನೀವು ಮನಸ್ಸು ಮಾಡಿದರೆ, ಹತ್ತು ನಿಮಿಷದಲ್ಲಿ ಇದಕ್ಕೆ ರಾಗ ಹಾಕಬಲ್ಲಿರಿ ಅಂತ.... ನೋಡಿ' ಎನ್ನುತ್ತಾ ತನ್ನ ಪದ್ಯ ಬರೆದ ಕಾಗದ ಅವಳ ಕೈಗಿತ್ತ. 'ನಾನು ಇದನ್ನು ಒಂದೇ ದಿನದಲ್ಲಿ ಬರೆದುಬಿಟ್ಟೆ. ಮನಸ್ಸಿಗೆ ಉಲ್ಲಾಸ ಇರಬೇಕಾದ್ರೆ ಕ್ರಿಯೇಟಿವಿಟಿ ಜಾಸ್ತಿ ಇರುತ್ತೆ. ನೀವೂ ಆ ಮೂಡ್‌ನಲ್ಲಿ ಇದ್ದೀರ ಈಗ, ನನಗೆ ಗೊತ್ತು. ಓದಿ ನೋಡಿ, ಖಂಡಿತ ನೀವು ಬೇಗ ಇದಕ್ಕೆ ರಾಗ ಹಾಕಿಬಿಡ್ತೀರ!'

ಸುಮನ ಮನಸ್ಸಿನಲ್ಲೇ ಆ ಪದ್ಯ ಓದತೊಡಗಿದಳು. ಓದುತ್ತಾ ಓದುತ್ತಾ ಅವಳ ಕೆನ್ನೆ ಕೆಂಪಾಗತೊಡಗಿತ್ತು. ಕಿವಿ ಬಿಸಿಯಾಯಿತು. ತನ್ನನ್ನೇ ಉದ್ದೇಶಿಸಿ ಬರೆದಿರುವುದೇ?

'ನೆನಪಿರಲಿ... ಒಲವು ನೆನಪಿರಲಿ...
ಎದೆಯ ಪುಟದಲಿ ಬರೆದ ಕವನ ನೆನಪಿರಲಿ
ಪ್ರೇಮದ ಭಾಷೆಯ ಮೌನದ ಮಾತು ನೆನಪಿರಲಿ

ಚುಕ್ಕಿ ಚಂದ್ರಮ ನಭದಲಿ
ಹೊಳೆಯುತ ಇರುವನಕ...
ನೇಸರ ಪ್ರತಿದಿನ ಬಾಂದಳ
ಬೆಳಗುತ ಬರುವನಕ..
ನಿನ್ನಯ ಉಸಿರಲಿ ನನ್ನ ಹೆಸರು ಬೆರೆತಿರಲಿ
ಒಲುಮೆ ಹರಿದಿರಲಿ...

ಕನಸಲಿ ಮನಸಲಿ
ಅನುದಿನ ನೀನೇ ತುಂಬಿರಲು..
ದೇಹಗಳೆರಡು ಜೀವವು
ಒಂದೇ ಆಗಿರಲು..
ಸ್ವರಲಯ ಕೂಡಿ ರಾಗದ ಮೋಡಿ ಹಾಡಿರಲಿ
ಪ್ರೀತಿ ಚಿಮ್ಮಿರಲಿ...'

ಓದುತ್ತಿದ್ದ ಸುಮನ ಕತ್ತೆತ್ತಿದಾಗ ಅಜಿತ್ ಅವಳನ್ನೇ ಮೆಚ್ಚುಗೆಯಿಂದ ದಿಟ್ಟಿಸಿ ನೋಡುತ್ತಿದ್ದ. ಸುಮನ ಮತ್ತೆ ತಲೆ ತಗ್ಗಿಸಿದಳು.

'ಯಾರು ಬಂದಿದಾರೆ, ಸುಮನ?' ಅತ್ತೆ ಬಾಗಿಲ ಬಳಿ ನಿಂತು ಕೇಳಿದರು.

ಸುಮನ ಎಚ್ಚತ್ತು 'ಅದೇ ಅತ್ತೆ, ಇವರೇ ಅಜಿತ್.... ಅಜಿತ್, ಇವರು ನಮ್ಮ ಅತ್ತೆ'.

'ನಮಸ್ಕಾರ, ಕಾಫ಼ಿ ಕುಡಿತೀರ?' ಅತ್ತೆ ಉಪಚರಿಸಿದರು.

'ಇಲ್ಲ, ಏನೂ ಬೇಡ. ಸುಮನ, ನಾಳೆ ೧೦ ಘಂಟೆಗೆ ರೆಡಿ ಆಗಿರ್ತೀರಾ?.... ಟ್ಯಾಕ್ಸಿ ತರ್ತೀನಿ' ಅಜಿತ್ ಹೊರಡಲು ಎದ್ದು ನಿಂತ. ಅವನು ಹೊರಟ ಮೇಲೆ, ಸುಮನಳಿಗೆ ಏನೋ ತಪ್ಪಿತಸ್ಥಳ ಭಾವನೆ.

'ರೆಕಾರ್ಡಿಂಗ್ ಮುಗಿಯಲಿಲ್ಲವೇ? ಮತ್ತೆ ನಾಳೆ ಯಾಕೆ ಹೋಗಬೇಕು?' ಅತ್ತೆ ಸುಮನಳನ್ನು ಇಹ ಪ್ರಪಂಚಕ್ಕೆ ಎಳೆದು ತಂದಿದ್ದರು.

'ಇನ್ನೂ ಒಂದು ಹಾಡು ಬರೆದಿದ್ದಾರೆ. ಅದರ ರೆಕಾರ್ಡಿಂಗ್ ಆಗಬೇಕು'

'ಇದೇನು, ಕೆಸೆಟ್ ರೆಡಿಯಾದಮೇಲೆ ಎಂಥ ರೆಕಾರ್ಡಿಂಗ್?'

'ಗೊತ್ತಿಲ್ಲ, ಅತ್ತೆ. ಇನ್ನೊಂದು ಪದ್ಯ ಕೊಟ್ಟಿದಾರೆ'

'ಈತನಿಗೆ ಮದುವೆಯಾಗಿಲ್ಲವೆ?'

'ಆಗಿದೆ. ಅಮೆರಿಕಾದವಳೆ.... ಬಿಳಿ ಹೆಂಡತಿ' ಅತ್ತೆ ಪದ್ಯವನ್ನು ಓದಿದರು.

'ಸುಮನ, ಗಂಡಸರ ರೀತಿ ನೀತಿ ಏನು ಅಂತ ನಾನು ನಿನಗೆ ಹೇಳುವ ಅಗತ್ಯವಿಲ್ಲ. ಇಷ್ಟು ವರುಷ ನೀನು ಒಂದು ಚೂರೂ ಕೊಂಕಿಲ್ಲದೆ ಎಷ್ಟು ಚೆನ್ನಾಗಿ ನಿಭಾಯಿಸಿದ್ದೀಯ. ಈಗಿನ ಕಾಲದಲ್ಲಿ ಹೊರಗೆ ಓಡಾಡುವ ನಿಮಗೆಲ್ಲ ಆಕರ್ಷಣೆಗಳು ಬಹಳ, ನಮ್ಮ ಕಾಲದ ಹಾಗಲ್ಲ. ಮನುಷ್ಯ ಅಂದ ಮೇಲೆ ಏನೋನೋ ಭಾವನೆಗಳು ಬಂದೇ ಬರುತ್ತೆ. ನಾವು ಅವುಗಳ ಕೈವಶವಾಗದೆ ಅವುಗಳನ್ನು ಹೇಗೆ ಹತೋಟಿಯಲ್ಲಿಟ್ಟು ನಿಭಾಯಿಸುತ್ತೇವೆ ಅನ್ನುವುದರ ಮೇಲೆ ಹೋಗುತ್ತೆ. ಹುಷಾರಾಗಿರು, ಅಷ್ಟೆ' ಅತ್ತೆಯ ಸೂಕ್ಷ್ಮ ಕಣ್ಣು, ಮನಸ್ಸು ಸುಮನಳಲ್ಲಾಗುತ್ತಿದ್ದ ಹೊಯ್ದಾಟವನ್ನು ಗಮನಿಸಿತ್ತು.

ಯಾಕೆ ಈ ಹೊಯ್ದಾಟ? ಜನರ ಮೆಚ್ಚುಗೆ, ಹೊಗಳಿಕೆ ಸುಮನಳಿಗೆ ಹೊಸದೇನೂ ಅಲ್ಲ. ಅವಳ ಸರಳ ನಡೆ–ನುಡಿ ಎಲ್ಲರಿಗೂ ಇಷ್ಟವಾಗುತ್ತಿತ್ತು. ಇನ್ನು ಅವಳ ಮಧುರ ಕಂಠದ ಹಾಡುಗಳಿಗೆ ಸೋಲದವರೇ ಇಲ್ಲ. ನೋಡಲು ಸಾಕಷ್ಟು ಸುಂದರವಾಗಿದ್ದ ಸುಮನ ಚಿಕ್ಕ ವಯಸ್ಸಿನಿಂದ ಎಲ್ಲರಿಗೂ ಅಚ್ಚುಮೆಚ್ಚು. ಇಂತಹ ಸುಮನಳಿಗೆ ಕೈತುಂಬ ಸಂಬಳ ತರುವ ಗಂಡ, ಬುದ್ಧಿವಂತ ಮಕ್ಕಳು. ಹೀಗಾಗಿ ನೆಮ್ಮದಿಯ ಜೀವನ. ಆರಕ್ಕೆ ಹೆಚ್ಚದ ಮೂರಕ್ಕೆ ತಗ್ಗದ ಸಮತೋಲದ ಸ್ವಭಾವ ಅವಳದ್ದು. ಅಜಿತ ಒಂದೆರಡು ಮೆಚ್ಚುಗೆಯ ಮಾತಾಡಿದರೆ ಯಾಕೆ ಸಂತಸದಿಂದ ಹಿಗ್ಗುತ್ತದೆ ಅವಳ ಹೃದಯ? ಎಲ್ಲರಿಗಿಂತಲೂ ಅವನು ಯಾಕೆ ಸ್ಪೆಶಲ್? ಹೇಗೆ ಸ್ಪೆಶಲ್?

ಈ ಪ್ರಶ್ನೆಗಳಿಗೆಲ್ಲ ಸುಲಭವಾದ ಉತ್ತರ ದೊರಕಲಿಲ್ಲ ಅವಳಿಗೆ. ಸುಮಾರು ಅವಳ ಗಂಡ ಶ್ರೀಧರನದೇ ಸ್ವಭಾವವಿದ್ದರೂ, ಅಜಿತನಲ್ಲಿ ಒಂದು ಹೆಚ್ಚುಗಾರಿಕೆ ಏನೆಂದರೆ ಕವಿತೆ ಬರೆಯುವುದು. ಶ್ರೀಧರ್ ರೊಮ್ಯಾಂಟಿಕ್ ಮನುಷ್ಯನೇನಲ್ಲ. ಎಂಜಿನಿಯರ್ ತರಬೇತಿ ಹೊಂದಿದ ಅವನ ಮನಸ್ಸಿಗೆ ರೊಮ್ಯಾಂಟಿಕ್ ಆಗಿರುವುದೇ ಗೊತ್ತಿಲ್ಲ. ಹೀಗಾಗಿ ಸುಮನಳ ಹಾಡು, ಸಂಗೀತ ಎಲ್ಲ ಅವನಿಗೆ ಅರ್ಥವಾಗುತ್ತಿರಲಿಲ್ಲ. ಹಾಗೆಂದು ಅವನು ಅವಳನ್ನು ಪ್ರೋತ್ಸಾಹಿಸದೇ ಇರುತ್ತಿರಲಿಲ್ಲ. ಅವಳಿಗೆ ಎಲ್ಲ ಬಗೆಯ ಸ್ವಾತಂತ್ರ್ಯ, ಬೆಂಬಲವೀಯುತ್ತಿದ್ದ. ಆದರೆ ಆಸಕ್ತಿಯಿಂದ ತಾನೂ ಭಾಗವಹಿಸುತ್ತಿರಲಿಲ್ಲ.

ಆ ಕೊರತೆಯನ್ನು ಅಜಿತ ನೀಗುವನೆಂದು ಅವನು ವಿಶೇಷವೇ? ನಿಜವಾಗಿ ನೋಡಿದರೆ ಇದು ಕೊರತೆಯೇ ಅಲ್ಲ. ಅದೂ ಇದ್ದಿದ್ದರೆ ಒಂದು ತರಹ ಬೋನಸ್ ದೊರಕಿದಂತೆ ಅಷ್ಟೆ. ಯಾಕೆ ಅವನು ವಿಶೇಷ ? ಉತ್ತರ ಹುಡುಕಿ, ಹುಡುಕಿ ಸುಮನ ಸುಸ್ತಾದಳು. ಇನ್ನು ಆ ಪದ್ಯ ? ಹುಡುಕದೇ, ಬಯಸದೇ ತಾನಾಗೇ ದೊರಕುತ್ತಿರುವ ಈ ಸ್ನೇಹ, ಸೌಹಾರ್ದತೆ, ಪ್ರೇಮ ಸುಮನಳಿಗೆ ಆಪ್ಯಾಯಮಾನವಾಗಿತ್ತು. ಯೋಚಿಸಿದಾಗಲೆಲ್ಲ ಅವಳ ಕೆನ್ನೆ ಕೆಂಪಾಗುತ್ತಿತ್ತು. ಇದು ಪ್ರೇಮವೆ? ತಂದೆ ತಾಯಿ ಹುಡುಕಿ ತಂದ ಹುಡುಗನನ್ನು ಮದುವೆ ಮಾಡಿಕೊಂಡಿದ್ದ ಅವಳಿಗೆ 'ಟು ಫಾಲ್ ಇನ್ ಲವ್' ಎನ್ನುವುದರ ಗಂಧವೂ, ಸುಳಿವೂ ಇರಲಿಲ್ಲ. ಹೀಗೆ, ಅಕಸ್ಮಾತ್ ಆಗಿ ತನಗೆ ಇಷ್ಟವಾದ ಪುರುಷ ಈ ರೀತಿ ತನ್ನಲ್ಲಿ ಆಸಕ್ತಿ ತೋರಿಸುತ್ತಿರುವುದು ಅವಳಿಗೆ ಎಷ್ಟು ಆಶ್ಚರ್ಯ ತಂದಿತ್ತೋ ಅಷ್ಟೇ ಹಿತಕರವೂ ಆಗಿತ್ತು. ಅಷ್ಟೇ ಅಳುಕೂ ಕೂಡ. ಅದು ಸ್ವರ್ಗದಲ್ಲೊಂದು ಕಾಲು, ನರಕದಲ್ಲೊಂದು ಕಾಲು ಇಟ್ಟು ನಿಂತಂತೆ ಭಾಸವಾಗಿತ್ತು. ಅವಳ ಮನಸ್ಸಿನ ಏಕಾಗ್ರತೆಯನ್ನು ಅಲುಗಾಡಿಸಿತ್ತು. ಮನಸ್ಸಿನ ತುಂಬ ಅಜಿತನ ನಗು ಮುಖವೇ ತುಂಬಿತ್ತು. ಬೇಡಬೇಡವೆಂದರೂ ಅವನ ಧ್ಯಾನವೇ ನಡೆದಿತ್ತು. ಇದರ ಸುಳಿವು ಅತ್ತೆಗಾಗಿರುವುದು ಸುಮನಳಿಗೆ ನಾಚಿಕೆಯನ್ನೂ ತಂದಿತ್ತು. ಛೆ, ಏನೆಂದುಕೊಂಡಾರು ಅತ್ತೆ. ತಾನು ಈ ವಯಸ್ಸಿನಲ್ಲಿ ಹೀಗೆ ಸ್ಕೂಲು ಹುಡುಗಿಯ ತರಹ.... ಸುಮನ ಬೇಗ ರಾಮನಾಮ ಜಪ ಮಾಡತೊಡಗಿದಳು! ಹಾಗೇ ನಿದ್ದೆ ಬಂದರೂ ಅವಳ ಮುಖದ ನಗು ಮಾಸದೆ ಹಾಗೇ ಉಳಿದಿತ್ತು.

ಬೆಳಗ್ಗೆ ಬೇಗ ಎದ್ದು ಅಜಿತನ ಪದ್ಯಕ್ಕೆ ರಾಗ ಹಾಕಿದಳು. ಅವಳಿಗೆ ಪ್ರಿಯವಾದ ರೇವತಿ ರಾಗ. ಒಂದೇ ಸಲಕ್ಕೆ ಸಾಹಿತ್ಯಕ್ಕೆ ಹೊಂದಿಕೊಂಡು ಹಾಡು ಸಿದ್ಧವಾದುದಕ್ಕೆ ಅವಳಿಗೇ ಆಶ್ಚರ್ಯವಾಯಿತು. ಅವನು ಹೇಳಿದಂತೆ ಇಬ್ಬರೂ ಒಂದೇ ವೇವ್‌ಲೆಂತ್‌ನಲ್ಲಿ ಇದ್ದೇವೆಯೇ? ಏನೀ ಸಂಬಂಧ ?

ಹತ್ತು ಘಂಟೆಗೆ ಸರಿಯಾಗಿ ಅಜಿತ್ ಬಂದಿಳಿದ. ಸುಮನ ಸಿದ್ಧಳಾಗಿ ನಿಂತಿದ್ದಳು. ತಿಳಿ ನೀಲಿ ಬಣ್ಣದ ಸೀರೆಯಲ್ಲಿ ಸುಂದರವಾಗಿ ಕಾಣುತ್ತಿದ್ದಳು. 'ಯು ಆರ್ ಲುಕಿಂಗ್ ವೆರಿನೈಸ್' ಎಂಬ ಅಜಿತನ ಮೆಚ್ಚುಗೆಯ ಮಾತು ಕೇಳಿ ಸುಮನ ಹದಿನೆಂಟರ ಯುವತಿಯಂತೆ ನಾಚಿ ಕೆಂಪಾದಳು. ಅಮೆರಿಕದಿಂದ ಬಂದಿರುವ ಈತನಿಗೆ ಮುಚ್ಚುಮರೆಯೇ ಇಲ್ಲವೆ? ತಲೆಗೆ ಬಂದಿದ್ದನ್ನು ಹೀಗೆ ನೇರವಾಗಿ ಹೇಳುವುದೇ ?

'ನಮ್ಮ ಹಾಡು ಸಿದ್ಧವೇ?' ಅವನು ನನ್ನ ಹಾಡು ಎನ್ನದೆ 'ನಮ್ಮ ಹಾಡು ಎಂದಿದ್ದನ್ನು ಸುಮನ ಗಮನಿಸಿದಳು.

'ಹೂಂ. ನೀವು ಟಾಕ್ಸಿ ಕಳಿಸಿಬಿಡಿ. ನಾನೇ ಸ್ಟೂಡಿಯೋಗೆ ಡ್ರೈವ್ ಮಾಡ್ತೀನಿ' ಎಂದಳು ಸುಮನ.

'ಸರಿ, ಬೇಗ ಹೋಗೋಣ. ಐ ಜಸ್ಟ್ ಕೆನಾಟ್ ವೇಯ್ಟ್ ಟು ಹಿಯರ್ ದಿ ಸಾಂಗ್! ಈ ಊರಲ್ಲೋ ಆರು ಮೈಲಿ ದೂರದಲ್ಲಿರುವ ಸ್ಟೂಡಿಯೋಗೆ ಹೋಗೋಕೆ ಅರ್ಧ ಘಂಟೆ ಬೇಕು. ರೂಲ್ಸ್ ಫ಼ಾಲೋ ಮಾಡೋಕೆ ಏನು ಈ ಜನಕ್ಕೆ. ಸುಮ್ಮನೆ ನುಗ್ಗುತ್ತಾರೆ. ಕ್ರಮಬದ್ಧವಾಗಿ ಡ್ರೈವ್ ಮಾಡಿದರೆ ಎಲ್ಲರಿಗೂ ಕ್ಷೇಮ. ಹೀಗೆ ಯದ್ವಾತದ್ವಾ ಹೋಗೋದರಿಂದ ಎಲ್ಲರಿಗೂ ಅಡಚಣೆ ಅಲ್ಲವೇ? ಈ chaotic ಟ್ರ್ಯಾಫ಼ಿಕ್ಕಲ್ಲಿ ನೀವು ಅದು ಹೇಗೆ ಡ್ರೈವ್ ಮಾಡ್ತೀರೋ ದೇವರೇ ಬಲ್ಲ.... ! ಸುಮನ, ನಿಜವಾಗಿ ಐ ಆಮ್ ಸೊ ಇಂಪ್ರೆಸ್ಸೆಡ್ ವಿತ್ ಯು. ಯು ಆರ್ ಸೊ ಟ್ಯಾಲೆಂಟೆಡ್, ಎಫ಼ಿಶಿಎಂಟ್. ನಿಮ್ಮ ಭೇಟಿಯಾಗಿದ್ದು, ನಿಮ್ಮ ಜೊತೆ ಈ ಪ್ರಾಜೆಕ್ಟ್ ಮಾಡಿದ್ದು ಎಲ್ಲ ತುಂಬ ಚೆನ್ನಾಗಿತ್ತು. ನಾನು ತುಂಬ, ತುಂಬ ಅದೃಷ್ಟವಂತ. ಥ್ಯಾಂಕ್ ಯು!' ಸುಮನ ನಾಚಿಕೆಯಿಂದ ತಲೆ ತಗ್ಗಿಸಿದಳು.

ಸ್ಟುಡಿಯೋದಲ್ಲಿ ವಾದ್ಯವೃಂದವನ್ನು ತಯಾರು ಮಾಡಿ ಸುಮನ ಅದರೊಡನೆ ಹಾಡಿದಳು. ಎಂದೂ ಸಿಗದಂತಹ ತೃಪ್ತಿ ಇಂದು ಸಿಕ್ಕಿತು. ಹಾಡು ಕೇಳಿ ಅಜಿತ್ ಕಣ್ಣುಗಳಲ್ಲಿ ನೀರು ತುಂಬಿ ಭಾವೋದ್ವೇಗದಿಂದ 'ಸುಮನ, ಐ ಡು ನಾಟ್ ನೊ ವಾಟ್ ಟು ಸೆ. ಯು ಹಾವ್ ರಿಯಲ್ಲಿ ಮೇಡ್ ಮಿ ವೆರಿ ಹ್ಯಾಪಿ. ಐ ನೆವೆರ್ ಥಾಟ್ ಮೈ ಪೊಎಮ್ ಕುಡ್ ಬಿ ಸೊ ಹಾರ್ಟ್-ವಾರ್ಮಿಂಗ್. ಥ್ಯಾಂಕ್ ಯು' ಎಂದು ಅವಳ ಕೈ ಕುಲುಕಿದ. ಸುಮನಳ ಕಣ್ಣಲ್ಲೂ ಆನಂದಭಾಷ್ಪ ತುಂಬಿ ಬಂದಿತ್ತು. ಮಾತು ಹೊರಡಲಿಲ್ಲ.

ಅಂದು ಇಬ್ಬರೂ ಜತೆಯಲ್ಲಿ ಊಟ ಮಾಡಿದರು. ನಂತರ ಒಂದು ಪಾರ್ಕಿನ ಒಂದು ಮೂಲೆಯಲ್ಲಿ ಮರದ ಕೆಳಗೆ ಕುಳಿತು ಮಾತನಾಡತೊಡಗಿದರು.

'ಸುಮನ, ನಿಮ್ಮನ್ನು ನೋಡಿದ ಮೇಲೆ ನಾನು ಜೀವನದಲ್ಲಿ ಏನು ಮಿಸ್ ಮಾಡಿದ್ದೆ ಅಂತ ತಿಳಿಯಿತು. ನಾನು ಎಷ್ಟು ಸಂತೋಷದಿಂದ ಈ ಕೆಲವು ದಿನಗಳನ್ನು ಕಳೆದಿದ್ದೀನಿ ಅಂತ ಹೇಳೋಕೆ ಸಾಧ್ಯವಿಲ್ಲ. ಇನ್ನು ನಿಮ್ಮನ್ನು ಬಿಟ್ಟು ಇರೋದು ನನ್ನಿಂದ ಸಾಧ್ಯವಿಲ್ಲ'

ಸುಮನ ಆಶ್ಚರ್ಯದಿಂದ ಅವನ ಮುಖ ನೋಡಿದಳು. 'ಇದೇನಿದು? ನೀವು ಇನ್ನು ಮೂರು ದಿನದಲ್ಲಿ ಬಾಸ್ಟನ್‌ಗೆ ಮರಳಬೇಕು. ಜ್ಞಾಪಕ ಇದೆ ತಾನೆ ?'

'ಇದೆ. ಆದರೆ ನಾನು ಅದನ್ನು ಎದುರು ನೋಡುತ್ತಾ ಇಲ್ಲ. ಸುಮನ, ನಿನ್ನ ಜತೆ ಇದ್ದರೆ ನಾನು ಬೇರೆ ಮನುಷ್ಯ ಎನಿಸುತ್ತೆ. ಪ್ರಪಂಚ ಎಲ್ಲ ಮರೆತುಹೋಗಿರುತ್ತೆ. ನೀನೇ ಮನಸ್ಸಲ್ಲಿ ತುಂಬಿದೀಯ. ಯಾಕೆ ಹೀಗೆ ಅಂತ ಯೋಚಿಸಿ ಹಣ್ಣಾಗಿದ್ದೇನೆ. ನಿನ್ನೊಡನಿದ್ದಾಗ

ನಾನು ಸಂಪೂರ್ಣ ಎನಿಸುತ್ತೆ. ಐ ಹಾವ್ ಆಲ್ವೇಸ್ ಬಿಲೀವ್ಡ್ ದಟ್ ಹ್ಯಾಪಿನೆಸ್ ಈಸ್ ಕೈಂಡ್ ಆಫ್ ಎ ಜಿಗ್‌ಸಾ ಪಜ಼ಲ್. ಯು ಆರ್ ದಿ ಲಾಸ್ಟ್ ಪೀಸ್ ಕಂಪ್ಲೀಟಿಂಗ್ ದಟ್ ಪಜ಼ಲ್ ಬಾ ಇನ್ನುಳಿದ ಎರಡು ದಿನವನ್ನು ನಾವಿಬ್ಬರೇ ಬೇರೆ ಎಲ್ಲಾದ್ರು ಹೋಗಿ ಜತೆಯಾಗಿ ಕಳೆಯೋಣ'

ಸುಮನಳಿಗೆ ಗಾಬರಿಯಾಯಿತು. ಅದನ್ನು ಮರೆಮಾಚಲು ನಗುತ್ತಾ ಕೇಳಿದಳು 'ನನಗೆ ಮದುವೆಯಾಗಿ ಸಂಸಾರ ಇದೆ ಅನ್ನೋದನ್ನ ಮರೆತು ಬಿಟ್ರಾ ?'

'ಹೇಗೆ ಮರೆಯೋದು ಸಾಧ್ಯ? ನನಗೂ ಆಗಿಲ್ಲವೇ? ಆದರೆ .... ಐ ಲವ್ ಯು ಸುಮನ. ಐ ಲವ್ ಯು ವಿತ್ ಆಲ್ ಮೈ ಹಾರ್ಟ್' ಅಜಿತ್ ಹೇಳಿದ್ದು ಕೇಳಿ, ಸುಮನಳ ಕಾಲು ಕುಸಿದಂತಾಯಿತು. ಅವಳಿಗೇ ತಿಳಿಯದಂತೆ ಕಂಗಳಿಂದ ನೀರು ಹರಿಯತೊಡಗಿತು.

'ಅಜಿತ್, ಅದು ಹೇಗೆ ಸಾಧ್ಯ?' ಅಜಿತ್ ಅವಳ ಕಣ್ಣೀರು ಒರೆಸುತ್ತ ಹೇಳಿದ 'ಎಸ್. ಐ ಲವ್ ಯು ವಿತ್ ಆಲ್ ಮೈ ಹಾರ್ಟ್. ಯು ಆರ್ ಎ ಗಾಡ್ ಗಿವನ್ ಗಿಫ್ಟ್ ಫ಼ಾರ್ ಮಿ. ನಮ್ಮ ನಡುವಿನ ಈ ಬಾಂಡ್, ಈ ವಿವರಿಸಲಾಗದಂತಹ ಸಂಬಂಧವನ್ನು ನೀನು ಗುರುತಿಸುವುದಿಲ್ಲವೇ?'

ಸುಮನ ಏನೂ ಹೇಳಲು ತೋಚದೆ ಕುಳಿತಿದ್ದಳು. ಅವಳೂ ಇದೇ ಪ್ರಶ್ನೆಗೆ ಉತ್ತರ ಹುಡುಕಿ, ಹುಡುಕಿ ಸಾಕಾಗಿದ್ದಳು.

'ಹಾಗಾದರೆ ನಿನ್ನ ಕಣ್ಣಲ್ಲಿ ನೀರೇಕೆ ಹೇಳು?' ಅಜಿತ್ ಬಾಗಿ ಅವಳ ಕಣ್ಣೀರು ಒರೆಸಿದ.

'ನಾನು ಏನು ಹೇಳಲಿ, ನಿಮಗೆ ಬೇಕಾಗಿರುವುದನ್ನು ಕೊಡುವುದಕ್ಕೆ ಆಗುವುದಿಲ್ಲ ನನಗೆ. ಇದು ಸರಿಯಲ್ಲ'

'ನಿನ್ನ ಹೃದಯದಲ್ಲಿ ನನಗೊಂದು ಪುಟ್ಟ ಜಾಗವಿಲ್ಲವೆ ?'

'ಇಲ್ಲ, ಅದರ ತುಂಬ ಶ್ರೀಧರ್ ಇದ್ದಾರೆ'

'ಇದ್ದರೇನು, ಇಬ್ಬರಿಗೂ ಜಾಗವಿರುವಷ್ಟು ದೊಡ್ಡ ಹೃದಯ ನಿನ್ನದು. ಆದರೆ ನನಗೆ ಗೊತ್ತು.... ಅದು ಸರಿಯಲ್ಲ ಅಂತ ನಿನ್ನ ಭಾವನೆ.... ಸರಿ ತಪ್ಪು ಎಲ್ಲ ಸಮಾಜಾನೇ ನಿರ್ಧರಿಸುವುದಲ್ಲವೇ? ನೋಡು ಸುಮನ, ಇಬ್ಬರು ಪ್ರೇಮಿಗಳ ವಿಷಯಕ್ಕೆ ಬಂದಾಗ ಸಮಾಜ ತುಂಬ ಕ್ರೂರಿ. ಇಬ್ಬರು ತಂದೆ ತಾಯಿಗಳನ್ನು ಪ್ರೀತಿಸಬಹುದು, ಬೇಕಾದಷ್ಟು ಮಕ್ಕಳನ್ನು ಪ್ರೀತಿಸಬಹುದು, ತುಂಬ ಜನ ಸ್ನೇಹಿತರನ್ನು ಪ್ರೀತಿಸಬಹುದು, ಆದರೆ ಇಬ್ಬರು ಪ್ರೇಮಿಗಳನ್ನು ಪ್ರೀತಿಸುವುದು ಸಾಧ್ಯವಿಲ್ಲವೇ ?.... ಸಾಧ್ಯವಿದೆ. ಆದರೆ ಸಮಾಜದ ನಿಯಮಗಳ ಪ್ರಕಾರ ಮಾತ್ರ ಸಾಧ್ಯವಿಲ್ಲ. ಹೃದಯದಿಂದ ಪ್ರೀತಿಸುವುದಕ್ಕೆ ಸಾಧ್ಯವಿದೆ'.

'ಏನೋ ನೀವು ಹೇಳ್ತಾ ಇರೋದು ಸರಿಯಾಗಿ ಅರ್ಥವಾಗ್ತಾ ಇಲ್ಲ. ಈ ಸಮಾಜದಲ್ಲಿ ನಾವು ಬಾಳ್ತಾ ಇರಬೇಕಾದರೆ, ಅದರ ನಿಯಮಗಳನ್ನು ನಾವು ಪಾಲಿಸಬೇಕಲ್ಲವೆ? ಹೃದಯದ ಮಾತಿನಂತೆ ನಡೆದರೆ ಸಮಾಜಾನೆ ಎದುರುಹಾಕಿಕೊಂಡ ಹಾಗೆ ಆಗುತ್ತೆ. ಎಲ್ಲರ ಒಳ್ಳೇದಕ್ಕಾಗೆ ಈ ನಿಯಮಗಳೂ ರೂಪುಗೊಂಡಿರುವುದು'.

'ಆದರೆ ಸಮಾಜಕ್ಕೆ ಹೆದರಿ ನಡೆದರೆ ನಾವು ನಿರಂತರ ದುಃಖದಲ್ಲಿರಬೇಕಾಗುತ್ತೆ. ಈ ಪ್ರೀತಿ ಅನ್ನೋದು ಹರಿಯುವ ನದಿಯಂತೆ. ಯಾವ ನಿಯಮಾನು ಅದು ಪಾಲಿಸೋಲ್ಲ'.

'ಅಜಿತ್, ನೀವು ಅಮೆರಿಕಾದೋರು. ನೀವು ಯೋಚಿಸುವ ರೀತಿಯೇ ಬೇರೆ. ನಮ್ಮ ಭಾರತೀಯ ಸಂಸ್ಕೃತಿ, ಸಮಾಜ ಈ ರೀತಿಯ ಸಂಬಂಧವನ್ನು ಇರಗೊಳಿಸುವುದಿಲ್ಲ. ನೀವು ಈ ಭಾವನೆಗಳನ್ನೆಲ್ಲ ಈಗಲೆ ಚಿವುಟಿ ಹಾಕಿಬಿಡಿ'.

'ಸುಮನ, ದೂರ ತಳ್ಳಬೇಡ ಇದನ್ನು. ಪ್ಲೀಸ್, ನನ್ನ ಜೊತೆ ಈಗೆರಡು ದಿನ ಕಾಲ ಕಳಿ. ಒಬ್ಬರನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳೋಣ. ಆಮೇಲೆ ಮುಂದಿನ ನಿರ್ಧಾರ ಮಾಡುವಿಯಂತೆ'.

'ಅಜಿತ್, ಬೇಡ ಈ ನಿರ್ಧಾರ ಮಾಡೋದು ನನಗೆ ಮೊದಲೇ ಸುಲಭದ ಕೆಲಸವೇನು ಅಲ್ಲ. ಇನ್ನೂ ಕಷ್ಟ ಮಾಡಬೇಡಿ. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸುಲಭದ ಕೆಲಸವಲ್ಲ. ನಾನು ನಿಮ್ಮ ಜೊತೆ ಎಲ್ಲೂ ಬರೋಲ್ಲ'.

'ನೀನಿಲ್ಲದೆ ನನ್ನ ಜೀವನ ಬರಡು ಎನಿಸುತ್ತದೆ'.

'ಬೇಡ.... ಇದೆಲ್ಲ ಒಂದು ಸುಂದರ ಕನಸು ಅಂತ ತಿಳಿದುಕೊಂಡು ಬಿಡಿ. ನಾನೂ ಹಾಗೇ ತಿಳಿದುಕೊಳ್ತೀನಿ. ಮನಸ್ಸಿಗೆ ಬೇಜಾರಾದಾಗ ಇದನ್ನು ಜ್ಞಾಪಿಸಿಕೊಳ್ತೀನಿ.... '

'ಕಾಗದ ಬರೆಯಬಹುದೆ ನಾನು ಬಾಸ್ಟನ್‌ಗೆ ಹೋದ ಮೇಲೆ? ನೀನಿಲ್ಲದೆ ಹೇಗೆ ಇರಲಿ....'

'ಶ್.... ಶ್....' ಎಂದು ತಲೆ ಅಲ್ಲಾಡಿಸಿದಳು ಸುಮನ. ಅಜಿತ ಅವಳ ಮುಖವನ್ನು ತನ್ನ ಎರಡು ಕೈಗಳಲ್ಲಿ ಹಿಡಿದು ಅವಳ ತುಟಿಗಳ ಮೇಲೆ ತನ್ನ ತುಟಿಗಳನ್ನೊತ್ತಿದ. ಸುಮನ ಅವನ ಆಲಿಂಗನದಲ್ಲಿ ಕರಗಿಹೋದಳು. ಸಮಾಜದ ಕಟ್ಟಳೆಗಳನ್ನು ಮರೆತು ಆ ಕ್ಷಣವನ್ನು ಆನಂದಿಸಿದಳು.

ಅವಳ ಸೆಲ್ ಫೋನ್ ಧ್ವನಿ ಮಾಡಿತು. ಕರೆದಿದ್ದವರು ಅವಳ ಅತ್ತೆ 'ಸುಮನ, ಎಲ್ಲಿದ್ದೀಯ? ಯಾಕೋ ಇಷ್ಟು ಹೊತ್ತಾದರೂ ಬರಲಿಲ್ಲ ಅಂತ ಫೋನ್ ಮಾಡಿದೆ.

ನಿನ್ನ ವಿಷಯ ಯಾಕೋ ಯೋಚನೆ ಆಯಿತು. ಎಲ್ಲ ಸರಿಯಾಗಿ ಇದೆ ತಾನೆ? ಊಟ ಆಯಿತೆ?'

'ಹೂಂ ಆಯಿತು ಅತ್ತೆ. ಇಲ್ಲೇ ಆಯಿತು. ಬಂದುಬಿಡ್ತೀನಿ ಇನ್ನೇನು. ನೀವು ಊಟ ಮಾಡಿದ್ರಾ? ಸರಿ ಹಾಗಾದರೆ. ಇನ್ನೇನು ಇಲ್ಲಿಂದ ಹೊರಡ್ತೀನಿ, ಅತ್ತೆ. ನೀವು ಈಗ ಕಾಲ್ ಮಾಡಿದ್ದು ಒಳ್ಳೇದೆ ಆಯಿತು. ಪಾಪ, ನೀವು ನನ್ನ ಬಗ್ಗೆ ಎಷ್ಟೊಂದು ಕೇರ್ ತೊಗೋತೀರಿ'. ಸುಮನ ಫೋನ್ ಆರಿಸಿದಳು.

'ನೀವು ಇನ್ನು ಹೊರಡಬೇಕೆ? ಸುಮನ, ಪ್ಲೀಸ್, ನನ್ನ ಜೊತೆ ಬನ್ನಿ ನಾಳೆ. ಮೈಸೂರಿಗೆ ಒಟ್ಟಿಗೆ ಹೋಗಿ ಬರೋಣ' ಅಜಿತ್ ಗೋಗರೆದ.

'ನಿಮ್ಮ ಜೊತೆ ಇರೋಕೆ ನನಗೂ ತುಂಬ ಇಷ್ಟ. ಆಗಲೆ ಹೇಳಿದೆನಲ್ಲ.... ಇದು ಸರಿಯಾದ ದಾರಿಯಲ್ಲ. ಅಜಿತ್. ಈ ನಿಯಮಗಳನ್ನು ಮೀರಿ ಹೋಗುವ ಆಸೆ ನನಗಿಲ್ಲ. ಯಾಕೆ ಅಂದರೆ ಇದು ಬೆಂಕಿಯೊಡನೆ ಆಟ ಎಂದು ನನಗೆ ಗೊತ್ತು. ನಮಗೆ ಸಹಾಯವಾಗೋಕೆ ಅಂತಾನೆ ಈ ನಿಯಮಗಳು....'

'ಈ ರೂಲ್ಸ್ ಎಲ್ಲ ಮನುಷ್ಯರೇ ಮಾಡಿದ್ದು. ಇವನ್ನು ಮೀರೋದು ಕೆಲವು ಸಲ ಆವಶ್ಯಕವಾಗಿಬಿಡುತ್ತೆ'.

'ಆದರೆ ಇದರಿಂದ ನಾವು ಪ್ರೀತಿಸುವ ಬೇರೆಯವರಿಗೆ ಎಷ್ಟು ಕಷ್ಟವಾಗುತ್ತೆ ಅಂತ ಯೋಚಿಸಿದ್ದೀರ? ಸಮಾಜದಲ್ಲಿ ಬರಿ ನಾವಿಬ್ಬರೇ ಅಲ್ಲವಲ್ಲ? ನನ್ನ ಗಂಡ, ಮಕ್ಕಳ ವಿಷಯ ಯೋಚಿಸಿದ್ದೀರ? ನಿಮ್ಮ ಹೆಂಡತಿಯ ಭಾವನೆಗಳು? ಆ ಕಷ್ಟ, ತಾಪತ್ರಯಗಳನ್ನು ನಿವಾರಿಸೋಕೆ ಅಂತಾನೇ ಈ ನಿಯಮಗಳು ಇರೋದು. ರೂಲ್ಸ್ ಇರೋದು ಒಳ್ಳೇದಕ್ಕೆ. ಅದಿಲ್ಲದೇ ಹೋದರೆ Life becomes very chaotic' ಸ್ವಲ್ಪ ನಿಲ್ಲಿಸಿ ಆಮೇಲೆ 'ಬೆಂಗಳೂರಿನ ಟ್ರ್ಯಾಫ಼ಿಕ್ ತರಹ'ಎಂದು ನಕ್ಕಳು ಸುಮನ.

'ಸರಿ, ನಾನು ಇನ್ನು ಹೊರಡಬೇಕು. ಅತ್ತೆ ಕಾಯ್ತಾ ಇರ್ತಾರೆ' ಎಂದು ಹೇಳಿ ಎದ್ದು ನಿಂತಳು. 'ಅಜಿತ್, ಐ ವಿಲ್ ಆಲ್ವೇಸ್ ಬಿ ಯುವರ್ ಫ಼್ರೆಂಡ್. ನನ್ನ ಹೃದಯದ ಪುಟದ ಮೇಲಿನ ನಿಮ್ಮ ಪ್ರೀತಿಯ ಕವನವನ್ನು ಎಂದೆಂದಿಗೂ ಹಾಡುತ್ತಿರುತ್ತೇನೆ.... ಅದನ್ನು ಸದಾ ಕಾಪಾಡುತ್ತೀನಿ....' ಎಂದು ಹೇಳಿ ಕಾರಿನ ಕಡೆ ಹೊರಟಳು ಸುಮನ.

ಅಜಿತನ ಪ್ರೀತಿಭರಿತ ಕಣ್ಣುಗಳು ತನ್ನನ್ನೇ ಹಿಂಬಾಲಿಸಿ ಬರುತ್ತಿರುವುದು ಅವಳಿಗೆ ತಿಳಿದಿತ್ತು. ಹಿಂದೆ ತಿರುಗಿ ಅವನನ್ನು ನೋಡಬೇಕೆಂಬ ಬಯಕೆಯನ್ನು ಹತ್ತಿಕ್ಕಿ ಮುನ್ನಡೆದಳು ಸುಮನ.

•

# ಮೀಡಿಯಾ...ಮೀಡಿಯಾ

– ವಿಮಲಾ ರಾಜಗೋಪಾಲ್

ಈಗ ಹದಿನೇಳು ವರ್ಷಗಳಿಂದ ನಾನು ಕೆಲಸ ಮಾಡುತ್ತಿರುವ ಎಲ್ವಿನ್ ಸಂಸ್ಥೆಯಲ್ಲಿ ತನ್ನ ಏಳನೆಯ ವಯಸ್ಸಿನಿಂದಲೂ ವಾಸಿಸುತ್ತಿದ್ದ ಯೆಹೂದಿ ಹುಡುಗ ಬ್ರೂಸ್ ವೆಕ್ಸ್ಲರ್ ನನ್ನನ್ನು ತುಂಬಾ ಹಚ್ಚಿಕೊಂಡುಬಿಟ್ಟಿದ್ದ. ಸ್ವಲ್ಪ ತಲೆಹರಟೆ ಎನಿಸುವಂಥ, guy with an attitude ಎನ್ನುತ್ತಾರಲ್ಲ ಅಂಥ ಹುಡುಗ. ಸ್ವಲ್ಪ ಮೆಳ್ಳಗಣ್ಣು. ತಲೆಯ ತುಂಬ ಕಪ್ಪು ಗುಂಗುರು ಕೂದಲು. ಒಟ್ಟಿನಲ್ಲಿ ಲಕ್ಷಣವಾಗಿದ್ದ ಎನ್ನಬಹುದು.

'ನಿನ್ನ ಹೆಸರೇನು?' ಎಂದ, ನೋಡಿದ ದಿವಸವೇ.

'ನಾನು ವಿಮಲ' ಎಂದೆ.

'Last name ಏನು ?'

'ರಾಜಗೋಪಾಲ್'

'ಅದನ್ನು ಹೇಗೆ spell ಮಾಡ್ತಿ? ಅದರರ್ಥ ಏನು?'

ನಾನು ನನ್ನ ಹೆಸರಿನ ಸ್ಪೆಲಿಂಗ್ ಹೇಳಿದೆ.

'ಅದನ್ನು ಹೇಗೆ ಉಚ್ಚರಿಸುತ್ತಾರೆ?' ಎಂದು ಮತ್ತೂ ತಲೆಹರಟೆ ಮಾಡಿದ. ಹೇಳಿದಾಗ 'ಹೊ ಹೊ ಹೋ' ಎಂದು ನಕ್ಕ. ನನಗೇಕೋ ಸಿಟ್ಟು ಬಂತು. ಇವನ ತಲೆಹರಟೆಗಿಷ್ಟು ಅಂದುಕೊಂಡು, ಅವನನ್ನು ಕೊಡವಿ ನಾನು ಕೆಲಸ ಮಾಡಬೇಕಿದ್ದ Cottage 1 ಕಡೆಗೆ ಧಾವಿಸಿದೆ. ಈ ಹುಡುಗನ ದೆಸೆಯಿಂದಾಗಿ ಇಕ್ಕೆ ಅಲ್ಲಿರಬೇಕಾಗಿದ್ದವಳು ಹತ್ತು ನಿಮಿಷ ತಡವಾಗಿದ್ದೆ.

ಯಾವಾಗ ನನ್ನನ್ನು ನೋಡಿದರೂ ಅವನದು ಅದೇ ರಗಳೆ. 'ನಿಮ್ಮ ಮನೆಯವರು ಎಲ್ಲಿದ್ದಾರೆ ? ಭೂಮಂಡಲದಾಚೆಯಾ?' ಎಂದು ಕೆಣಕಿ ಅವನು ನಕ್ಕರೆ ನನಗೆ ಕೋಪ ಬರುತ್ತಿತ್ತು. 'ಇಲ್ಲ, ಪ್ಲಾನೆಟ್ ಮಾರ್ಸ್‌ನಲ್ಲಿ' ಎನ್ನುತ್ತಿದ್ದೆ. ಆಗ ಅವನು, 'ಸಾರಿ ಮಿಸ್' ಎಂದು ಕ್ಷಮೆ ಕೇಳುತ್ತಿದ್ದ.

ಅವನು ಎಲ್ವಿನ್ ಸುಪರ್ದಿನ ಆವರಣದಲ್ಲಿ ತಾನಿದ್ದ Sun Center ಅನ್ನೂ ಬಿಟ್ಟು ಸಾಮೂಹಿಕ ವಸತಿಯೊಂದರಲ್ಲಿ (ಅಂದರೆ Community Living Arrangementನಲ್ಲಿ) ವಾಸಿಸಲು ಹೊರಟುಹೋದ.

ದೊಡ್ಡ ಕಾಲೇಜಿನ ನಿವೇಶನದಂತೆ ಹರಡಿ ನೂರಾರು ಎಕರೆ ಜಮೀನುಳ್ಳ, ಕ್ವೇಕರ್ ಜನ ೧೫೦ ವರ್ಷಗಳ ಹಿಂದೆ ನಿರ್ಮಿಸಿದ ಈ ಪುಣ್ಯಭೂಮಿ ಎಲ್ವಿನ್‌ನಿಂದ ಆ ಹುಡುಗ ಹೊರಟುಹೋದ ಮೇಲೆ ನನಗೆ ಅವನ ಜ್ಞಾಪಕ ಆಗಾಗ ಬರುತ್ತಿತ್ತು. ಎಲ್ಲಿದ್ದಾನೋ, ಹೇಗಿದ್ದಾನೋ ಅಂದುಕೊಳ್ಳುತ್ತಿದ್ದೆ.

ಮಂಗಳವಾರಗಳಲ್ಲಿ ನಾನು ಫಿಲಡೆಲ್ಫಿಯಾದಲ್ಲಿ ಕನ್ನಡ ಪಾಠ ಹೇಳಲು ಹೋಗುವುದು ನನ್ನ ನಿಯಮಿತ ಕಾರ್ಯಕ್ರಮ. ಒಂದು ಮಂಗಳವಾರ ಬೆಳಗ್ಗೆ ಆರಕ್ಕೇ ಎದ್ದು ಏಳೂಇಪ್ಪತ್ತರ ಗಾಡಿ ಹಿಡಿಯಲೆಂದು ಮೀಡಿಯ ರೈಲ್ವೇ ಸ್ಟೇಷನ್ನಿಗೆ ಹೋದೆ. ಕಾರನ್ನು ಅದರ ತಾಣದಲ್ಲಿ ನಿಲ್ಲಿಸಿ ಮೆಟ್ಟಲಿಳಿದು ನಾನು ಹತ್ತಬೇಕಾದ ಗಾಡಿಯ ಪ್ಲಾಟ್‌ಫಾರಮ್ ತಲಪುವ ವೇಳೆಗೆ ಹತ್ತು ನಿಮಿಷ ಸಮಯ ಉಳಿದಿತ್ತು. ನಾನು ಫಿಲಡೆಲ್ಫಿಯಾಗೆ ಹೋಗಬೇಕಾದ ದಿಕ್ಕಿಗೆ ವಿರುದ್ಧ ದಿಕ್ಕಿನಲ್ಲಿ ಹೋದರೆ ನಾಲ್ಕೇ ನಿಮಿಷದಲ್ಲಿ ಸಿಕ್ಕುವ ಮುಂದಿನ ನಿಲ್ದಾಣವೇ ಎಲ್ವಿನ್ ಸ್ಟೇಷನ್.

ಕೊರೆಯುವ ಛಳಿ ಇನ್ನೂ ಶುರುವಾಗಿರಲಿಲ್ಲ. ನವೆಂಬರ್ ಕಡೇ ವಾರದಲ್ಲಿ ಬರಲಿರುವ Thanksgiving ಹಬ್ಬದ ಕುರುಹಾಗಿ ಎಲ್ಲೆಲ್ಲೂ ಶಾವಂತಿಗೆ ಹೂಗಳು. ಗೆಣಸು, ಕ್ರಾನ್ಬರಿ, ಕೆಂಪು ಕುಂಬಳಕಾಯಿ ಇದೆಲ್ಲದರ ತಿನಿಸುಗಳ ಕನಸು ಕಾಣುತ್ತ ಸ್ಟೇಷನ್ನಿನಲ್ಲಿ ಟ್ರೈನಿಗಾಗಿ ಕಾಯುತ್ತಿದ್ದ ಛತ್ರಿಧಾರಿ ಸ್ತ್ರೀಪುರುಷರು ಒಬ್ಬರಿಗೊಬ್ಬರು ಬೆನ್ನು ತಿರುಗಿಸಿ ದಿನದ ವೃತ್ತಪತ್ರಿಕೆ ಓದುತ್ತ ನಿಂತಿದ್ದರು. ಸ್ಟೇಷನ್ನಿನಲ್ಲಿ ಪುಕ್ಕಟ್ಟೆ ಸಿಕ್ಕುತ್ತಿದ್ದ ಮೆಟ್ರೋ ಪತ್ರಿಕೆ ಕೆಲವರ ಕೈಲಿದ್ದರೆ, ಆವತ್ತಿನ ಮುಖ್ಯ ತಲೆಬರಹ Gaza Stripದಾದ್ದರಿಂದ ಅನೇಕರ ಕೈಯಲ್ಲಿ Philadelphia Inquirer ಕಾಣುತ್ತಿತ್ತು.

ಯೆಹೂದಿ ಜನಕ್ಕೆ ಬಂದ ಕಷ್ಟಕ್ಕೆ ಮರುಗುತ್ತಾ ಪ್ಯಾಲಸ್ಟೈನೀಯರ ಹಕ್ಕು ಸೊಕ್ಕು ಇವೆಲ್ಲ ವಿಚಾರ ಮಾತಾಡಿಕೊಳ್ಳುತ್ತಾ ಏಮಿ ಮೆಕ್ಯಾಫರ್ಟಿ, ರೋಸ್ ರೀಗನ್, ಲೀಸಾ ಪೆನ್ಯಾಕ್, ಜೇಮಿ ಇವರೆಲ್ಲ ಅಲ್ಲೇ ನನ್ನ ಬಳಿಯೇ ನಿಂತಿದ್ದರು. ಏಮಿ ಕಾಂತಿಹೀನ ಕಣ್ಣಿನ, Goldilocks ಥರದ ಗುಂಗುರು ಕೂದಲಿನ ಮ್ಲಾನವದನದ ಸುಂದರಿ. ರೋಸ್ ಅರಳಿದ ಕಣ್ಣುಗಳ ದುಂಡು ಕೆನ್ನೆಯ ಕಪ್ಪು ಬಣ್ಣದ ದಟ್ಟ ಕೂದಲಿನ ಚೆಲುವೆ. ರೋಸ್ ಶತಮಾನಗಳ ಹಿಂದಿನ ಐರ್ಲೆಂಡಿನ ಆಲೂಗಡ್ಡೆ ಕ್ಷಾಮದ ವಿಚಾರ ಮಾತಾಡುತ್ತಿದ್ದಳು.

ಅಷ್ಟರಲ್ಲಿ ರೈಲು ಹಳಿಗಳಿಂದಾಚೆ ಎದುರು ಪ್ಲಾಟ್‌ಫಾರ್ಮಿನಲ್ಲಿ ಆರ್ತನಾದ ಕೇಳಿತು. ಎಲ್ಲರೂ ಚಕಿತರಾಗಿ ಅತ್ತ ನೋಡಿದರು. ಬ್ರೂಸ್ ಆ ಕಡೆ ನಿಂತು ಎಲ್ಲರನ್ನೂ ಅಂಗಲಾಚುತ್ತಿದ್ದ: 'ಎಷ್ಟು ಘಂಟೆ ಈಗ? ಎಲ್ವಿನ್‌ನಲ್ಲಿ ನನ್ನ ಕೆಲಸಕ್ಕೆ ಹೊತ್ತಾಗಿಬಿಡುತ್ತೆ. ಯಾರಾದರೂ ದಯವಿಟ್ಟು ಹೇಳಿ ಎಷ್ಟು ಘಂಟೆ ಅಂತ. ಎಂಟು ಘಂಟೆಗೆ ಸರಿಯಾಗಿ ನಾನಲ್ಲಿ ಇರಬೇಕು. ಸ್ಟೇಷನ್ನಿನಲ್ಲಿ ಏಳೂವರೆ ಘಂಟೆಗೆ ನಾನಿಳಿದರೆ ಈ ಹಿಮದಲ್ಲಿ ಓಡಿದರೂ ನನ್ನ workshop ತಲಪಲು ೨೦ ನಿಮಿಷವಾದರೂ ಬೇಕು. ಟ್ರೈನ್ ಸಿಕ್ಕದಿದ್ದರೆ ನನ್ನ ಕೆಲಸ ಕಳೆದುಕೊಂಡು ಬಿಡುತ್ತೇನೆ. ನಿಮ್ಮ ದಮ್ಮಯ್ಯ.... ಯಾರಾದರೂ ನನಗೆ ಈಗ ಎಷ್ಟು ಘಂಟೆ ಹೇಳಿ. ಫಿಲಡೆಲ್ಫಿಯಾ ಕಡೆಯಿಂದ ಏಳು ಇಪ್ಪತ್ತೈದಕ್ಕೆ ಇಲ್ಲಿ ಬರುವ ಟ್ರೈನ್ ಸಿಕ್ಕಿತೊ ನಾನು ಬದುಕಿದೆ, ಇಲ್ಲದಿದ್ದರೆ ನಾ ಸತ್ತಂತೆಯೇ'.

ಗಾಜ಼ಾ ಸ್ಟ್ರಿಪ್ಪಿನಲ್ಲಿ ಯೆಹೂದಿ ಜನಕ್ಕೆ ಆಗುತ್ತಿರುವ ಅಪಚಾರಕ್ಕೆ ಮರುಗುತ್ತಾ ಸಾವಿರಾರು ಪೇಪರುಗಳ ಹಿಂದೆ ಮುಖ ಮರೆಸಿಕೊಂಡು, ಬೀಸೋಕಲ್ಲು ಸುತ್ತಿಸಿದಾಗ ಅದರ ಸುತ್ತ ಮೆಲ್ಲಮೆಲ್ಲಗೆ ಉದುರುದುರಾಗಿ ಚೆಲ್ಲಿಕೊಳ್ಳುವ ಅಕ್ಕಿಹಿಟ್ಟಿನಂತೆ ನವುರಾಗಿ ಬೀಳುತ್ತಿದ್ದ ಹಿಮಪಾತದಿಂದ ತಪ್ಪಿಸಿಕೊಳ್ಳಲು ತಲೆ ಮೇಲೆ ಕರಿ ಛತ್ರಿಗಳನ್ನು ಹಿಡಿದಿದ್ದ ಜನಸ್ತೋಮ ಈ ಯೆಹೂದಿ ಹುಡುಗನ ಆರ್ತನಾದಕ್ಕೆ ಕಿವುಡಾಗಿತ್ತು.

ದೂರದಲ್ಲಿ ಗಾಡಿ ಸಿಳ್ಳು ಹಾಕಿತು. ಆದರೆ ಎತ್ತಣಿಂದ ಗಾಡಿ ಬರುತ್ತಿದೆ ಎಂದು ತಿಳಿಯದೆ ಪ್ಲಾಟ್‌ಫಾರ್ಮಿನ ಮೇಲೆ ನಿಂತ ಜನಸ್ತೋಮ ಕಳವಳಿಸಿತು. ಅವಸರವಸರವಾಗಿ ಛತ್ರಿ ಮುದುರಿ ಒದ್ದೆಯಾಗುತ್ತಿದ್ದ ಪೇಪರುಗಳನ್ನು ತಮ್ಮ all weather coat ಕಂಕುಳಲ್ಲಿ ಇರುಕಿಗೊಳ್ಳಲು ಸಾಹಸ ಪಡುತ್ತಾ, ಅದು ಫಲಿಸದೆ ಅಲ್ಲೇ ಸ್ವಲ್ಪ ದೂರದಲ್ಲಿದ್ದ re-cycle binಗೆ ಎಸೆಯಲೂ ಮನಸ್ಸು ಬಾರದೆ ಮರದ ಬೆಂಚಿನ ಮೇಲೆ ಮುಂದೆ ಬರುವವರಿಗೆಂದು ಆ ಪೇಪರುಗಳನ್ನು ಬಿಟ್ಟು ರೋಸ್, ಏಮಿ ಮತ್ತಿತರ ಜನಸ್ತೋಮ ಗಾಡಿ ಹತ್ತಲು ಸಿದ್ಧರಾಗುತ್ತಿದ್ದಂತೆ ಧ್ವನಿವರ್ಧಕ ಯಂತ್ರ ಗಂಭೀರ ದನಿಯಲ್ಲಿ ಬಿತ್ತರಿಸಿತು: 'ಫಿಲಡೆಲ್ಫಿಯಾ ಕಡೆ ಹೋಗುವ ಗಾಡಿ ಇನ್ನು ಐದು ನಿಮಿಷದಲ್ಲಿ ಬರಲಿದೆ, ಗಾಡಿ ಹತ್ತುವಾಗ ಹುಷಾರಾಗಿರಿ'. ಜೊತೆಯಲ್ಲೇ ಮತ್ತೊಂದು ಸಂದೇಶ ಎರಡು ಮೂರು ಬಾರಿ ಪ್ರಸಾರವಾಯಿತು 'ಎಲ್ವಿನ್ ಕಡೆ ಹೋಗುವ R3 Express ಹತ್ತು ನಿಮಿಷ ತಡವಾಗಿದೆ. ಪ್ರಯಾಣಿಕರಿಗೆ ಇದರಿಂದ ಆಗುತ್ತಿರುವ ಅನಾನುಕೂಲಕ್ಕೆ ವಿಷಾದಿಸುತ್ತೇವೆ.

ಆ ಯೆಹೂದಿ ಹುಡುಗ ಇನ್ನೂ ಗಲಿಬಿಲಿಗೊಂಡು 'ನಾನಿರುವ ಪ್ಲಾಟ್‌ಫಾರ್ಮ್‌ಗೆ ಬರುವ ಟ್ರೈನ್ ಯಾವುದು? ಈಗ ಎಷ್ಟು ಘಂಟೆ ? 'ಎಂದು ಮತ್ತೆ ಮತ್ತೆ ಆರ್ತನಾದ ಮಾಡಿದ.

ಯಾರೂ ಅವನ ಕಡೆ ಕಣ್ಣು ಹಾಯಿಸಲಿಲ್ಲ. ರೆಪ್ಪೆ ಸಹ ಮಿಟುಕಿಸಲಿಲ್ಲ. ಬರೀ ಪ್ರಶ್ನಾರ್ಥಕ ದೃಷ್ಟಿಗಳಿಂದ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತ ನಕ್ಕರು.

ನಾನಾಗ ಅವನಿಗೆ ಕೂಗಿ ಹೇಳಿದೆ. ಆ ಒಂದು ಕ್ಷಣದಲ್ಲಿ ನನ್ನನ್ನು ಈ ಕಡೆ ಪ್ಲಾಟ್‌ಫಾರ್ಮಿನಲ್ಲಿ ನೋಡಿ ಬ್ರೂಸ್ ಧೈರ್ಯಗೊಂಡ. 'Hey, Miss, ಈಗ ಎಷ್ಟು ಘಂಟೆ?' ಎಂದು ಗಟ್ಟಿಯಾಗಿ ಅರಚಿದ.

'ಏಳೂ ಕಾಲು'.

'ನಾನು ಕೆಲಸಕ್ಕೆ ತಡವಾಗಿ ಹೋಗುತ್ತಿದ್ದೀನಾ?'

'ಇಲ್ಲ, ನಿನ್ನ ಗಾಡಿ ಹತ್ತು ನಿಮಿಷ ತಡವಾಗಿದೆ. ಚಿಂತಿಸಬೇಡ' ಎಂದು ಇಡೀ ಜನಸ್ತೋಮ ನಮ್ಮ ಕಡೆಯೇ ನೋಡುತ್ತಿದ್ದಂತೆ ನಾ ಅವನಿಗೆ ಗಟ್ಟಿಯಾಗಿ ಕೂಗಿ ಹೇಳಿದೆ.

'Thank you Miss, God bless you!' ಎಂದ.

ಅಷ್ಟರಲ್ಲಿ ನನ್ನ ಗಾಡಿ ನಮ್ಮಿಬ್ಬರ ನಡುವೆ ಬಂತು. ಟ್ರೈನಿನ ಕಂಡಕ್ಟರ್ 'ಮೀಡಿಯಾ....ಮೀಡಿಯಾ'ಎಂದು ಗಟ್ಟಿಯಾಗಿ ಕೂಗಿ ಎಲ್ಲರನ್ನೂ ಎಚ್ಚರಿಸಿದ. ನಾವೆಲ್ಲರೂ ಹತ್ತಿದ ಎರಡು ನಿಮಿಷಗಳಲ್ಲಿ ಗಾಡಿ ಚಲಿಸುತ್ತಿದ್ದಂತೆ, ಎದುರು ಪ್ಲಾಟ್‌ಫಾರ್ಮಿನಲ್ಲಿ ಅವನ ಗುಂಗುರು ಕೂದಲಿನ ತಲೆ ಮಸುಕುಮಸುಕಾಗಿ ಕಾಣಿಸಿ ಮಾಯವಾಯಿತು.

ಮಾನಸಿಕ, ದೈಹಿಕ ದೌರ್ಬಲ್ಯಗಳಿಂದ ನರಳುತ್ತ ಸಮಾಜದಲ್ಲಿ ಸ್ವತಂತ್ರರಾಗಿ ಬದುಕಲು ಅಶಕ್ತರಾದ ದುರ್ದೈವಿ ಅನಾಥರು ಮತ್ತು ಇತರರನ್ನು ಪೋಷಿಸಲು, ಸಾಧ್ಯವಾದಮಟ್ಟಿಗೆ ಸ್ವಾವಲಂಬಿಗಳಾಗಲು ಅನುವುಮಾಡಿಕೊಡಲು ಮೀಸಲಾದ ಸಂಸ್ಥೆ ಎಲ್ವಿನ್.

ಎಳೆತನದಿಂದಲೂ ಅಲ್ಲಿ ಬೆಳೆದಿದ್ದ ಬ್ರೂಸ್ ಸ್ವಂತ ತಾಯಿತಂದೆಯನ್ನಾಗಲೀ, ಹತ್ತಿರದ ಬಂಧುಬಳಗವನ್ನಾಗಲೀ ಬಲ್ಲವನೇ ಅಲ್ಲ. ಈಗಲೀಗ ಸ್ವಲ್ಪ ಸ್ವತ್ರಂತ್ರವಾಗಿ ಹೊರಗಡೆ ಜೀವಿಸುತ್ತಿದ್ದ. ಒಂದು ದಿನ ನಾನು ಎಲ್ವಿನ್ ಹತ್ತಿರದ ಶಾಪಿಂಗ್ ಮಾಲ್‌ನಲ್ಲಿ ಹೋಗುತ್ತಿದ್ದಾಗ ಮತ್ತೆ ಒಂದು ಘಟ್ಟಿಯಾದ ಸ್ವರ ಕೇಳಿಸಿತು: 'Hey, Miss, get over here.' ದನಿ ಬಂದತ್ತ ನೋಡಿದರೆ ಬ್ರೂಸ್ ಒಂದು ಐಸ್‌ಕ್ರೀಂ ಅಂಗಡಿಯಲ್ಲಿ ಕೆಲಸಗಾರರ ಯೂನಿಫಾರ್ಮ್ ಧರಿಸಿ ಹೆಮ್ಮೆಯಿಂದ ಬೀಗುತ್ತಾ ನಿಂತಿದ್ದ. 'ಇದು ನಿನಗೆ' ಎಂದು ಒಂದು ಐಸ್‌ಕ್ರೀಂ ಕೋನನ್ನು ನೀಡಿದ. 'ನಾನು ಐಸ್‌ಕ್ರೀಂ ತಿನ್ನುವುದಿಲ್ಲ,Thank you anyway' ಎಂದಾಗ 'It's my treat, have it please ' ಎಂದು ಒತ್ತಾಯ ಮಾಡಿದ. ಅಲ್ಲೇ ಕುಳಿತು ಅವನು ಕೊಟ್ಟ ಐಸ್‌ಕ್ರೀಮ್ ತಿಂದೆ. ಅಂಥ ದಿವ್ಯವಾದ ಐಸ್‌ಕ್ರೀಮನ್ನು ನಾನೆಂದೂ ತಿಂದಿರಲಿಲ್ಲ

•

# ಮನೆ ಜಗಲಿಯ ಕೋರ್ಟು

**– ಗೋಪೀನಾಥ ರಾವ್**

ಮಧ್ಯಾಹ್ನ ಹನ್ನೆರಡರ ಸಮಯ. ಬಿಸಿಲು ನೆತ್ತಿಗೇರಿತ್ತು. ಎಪ್ರಿಲ್ ತಿಂಗಳ ವಿಪರೀತ ಸೆಖೆ ತಾಳಲಾರದೆ ಶೇಷಪ್ಪಯ್ಯ ಜಗಲಿಯಲ್ಲಿ ಬಂದು ಕುಳಿತಿದ್ದರು. ಬದಿಗೆ ಇರುವ ಕೆರೆ ಮತ್ತು ಅದರಾಚೆ ಇರುವ ತೆಂಗಿನ ಮರಗಳ ದೆಸೆಯಿಂದ ಅಲ್ಲಿ ಮೆಲ್ಲನೆ ಬೀಸುತ್ತಿದ್ದ ಗಾಳಿ ಸ್ವಲ್ಪ ತಂಪಾಗಿ ಹಿತವೆನಿಸುತ್ತಿತ್ತು. ನೇರ ಎದುರಿಗೆ ನೋಡಿದರೆ ಗದ್ದೆಗಳ ಮೇಲಿಂದ ಸುಮಾರು ಒಂದು ಕಿ ಮೀ ದೂರದ ರಾಷ್ಟ್ರೀಯ ಹೆದ್ದಾರಿವರೆಗೂ ಕಾಣಬಹುದಾಗಿತ್ತು. ಅನತಿ ದೂರದಲ್ಲಿ ಯಾರೋ ಬರುವುತ್ತಿರುವುದನ್ನು ನೋಡಿ ಶೇಷಪ್ಪಯ್ಯನವರಿಗೆ ಆಶ್ಚರ್ಯವಾಯಿತು. ಯಾರಿರಬಹುದು? ಅವರ ಆಶ್ಚರ್ಯಕ್ಕೆ ಕಾರಣವಿತ್ತು. ಅದೇ ಹೆದ್ದಾರಿಯಲ್ಲಿ ಇನ್ನೂ ಮುಂದಕ್ಕೆ ಹೋದಾಗ ಸಿಗುವ ಪೋಸ್ಟ್ ಆಫೀಸಿನ ಬದಿಯಿಂದ ನಾಲ್ಕು ವರ್ಷಗಳ ಹಿಂದೆ ಹೊಸತೊಂದು ರಸ್ತೆ ಮಾಡಿದ್ದರು. ಆ ರಸ್ತೆಯಲ್ಲಿ ಬಂದರೆ ಶೇಷಪ್ಪಯ್ಯನವರ ಮನೆಯ ಹಿಂದಿನಿಂದ ಹಾದು ಗೇರು ಬೀಜದ ಕಾರ್ಖಾನೆಯವರೆಗೂ ಹೋಗಬಹುದಾಗಿತ್ತು. ಸಾಲದ್ದಕ್ಕೆ ಪೋಸ್ಟ್ ಆಫೀಸಿನ ಬಳಿ ಆಟೋರಿಕ್ಷಾ ಕೂಡ ಬಾಡಿಗೆಗೆ ಸಿಗುತ್ತಿದ್ದುವು. ಇದೆಲ್ಲಾ ಸೌಕರ್ಯ ಬಿಟ್ಟು ಹೆದ್ದಾರಿಯಿಂದ ಇಳಿದು ನಡೆದುಕೊಂಡೇ ಬರುತ್ತಿರುವುದು ಯಾರಿರಬಹುದು?

ಎದ್ದು ಹೋಗಿ ಕನ್ನಡಕ ತಂದು ಸರಿಯಾಗಿ ನೋಡಿದರು ಶೇಷಪ್ಪಯ್ಯ. ಇನ್ನೂ ಕುತೂಹಲವೆನ್ನಿಸಿತು. ಪ್ಯಾಂಟ್, ಶರ್ಟ್ ಮತ್ತು ಶೂಸ್ ಧರಿಸಿದ್ದ ವ್ಯಕ್ತಿ ಗದ್ದೆಯ ದಂಡೆಗಳ ಮೇಲೆ ನಡೆದು ಅಭ್ಯಾಸವಿಲ್ಲದೆ ಸರ್ಕಸ್ಸಿನವರಂತೆ ಹೆಜ್ಜೆಯಿಡುತ್ತ ನಡೆದು ಬರುತ್ತಿದ್ದ. ಆಗಂತುಕ ಹತ್ತಿರ ಹತ್ತಿರ ಬರುತ್ತಿದ್ದಂತೆ ಶೇಷಪ್ಪಯ್ಯನ ಕುತೂಹಲ ಕೂಡ ಹೆಚ್ಚುತ್ತಿತ್ತು. ಅಲ್ಲಿ ಇಲ್ಲಿ ನೋಡುತ್ತಾ ವಿಳಾಸ ಕೇಳಲು ಯಾರಾದರೂ ಸಿಗುವರೇನೋ ಎಂದು ಹುಡುಕುತ್ತಿದ್ದವನ ಕಣ್ಣಿಗೆ ಕುಳಿತಿದ್ದ ಶೇಷಪ್ಪಯ್ಯ ಕಾಣಿಸಿರಬೇಕು.... ಸೀದಾ ಅವರು ಕುಳಿತಲ್ಲಿಗೆ ಬಂದನಾತ.

ಬಿಸಿಲಲ್ಲಿ ನಡೆದು ಬಂದು ಆಯಾಸಗೊಂಡಿದ್ದ ಆಗಂತುಕನನ್ನೇ ನೋಡುತ್ತಿದ್ದರು ಶೇಷಪ್ಪಯ್ಯ. ಇಪ್ಪತ್ತೈದು ಮೂವತ್ತರ ಪ್ರಾಯದ ಸುಂದರ ಹುಡುಗ. ಹತ್ತಿರ ಬಂದವನೇ 'ನಮಸ್ಕಾರ.... ಇಲ್ಲಿ ಶೇಷಪ್ಪಯ್ಯನವರ ಮನೆ ಯಾವುದು?' ಎಂದ.

ಶೇಷಪ್ಪಯ್ಯನಿಗಾದರೋ ಪರಮಾಶ್ಚರ್ಯ. 'ಯಾಕೆ ಏನಾಗಬೇಕಿತ್ತು' ಎಂದರು ಆತನಲ್ಲಿ.

'ಶೇಷಪ್ಪಯ್ಯನವರ ಮನೆ ಎಲ್ಲಿ?' ಬಹುಶಃ ಇವರಿಗೆ ಕಿವಿ ಕೇಳಿಸುವುದಿಲ್ಲ ಎಂದುಕೊಂಡಂತೆ ಕೈಯಲ್ಲಿ ಸನ್ನೆಯನ್ನೂ ಮಾಡುತ್ತ ಪುನಃ ಸ್ವಲ್ಪ ಗಟ್ಟಿಯಾಗಿ ಕೇಳಿದ ಆತ.

'ಇದೇ ಮನೆ. ನಾನೇ ಶೇಷಪ್ಪಯ್ಯ. . ನೀವು ಯಾರು ? ಎಲ್ಲಿಂದ ಬಂದದ್ದು ?' ಎದ್ದು ನಿಂತು ಕೇಳಿದರು ಶೇಷಪ್ಪಯ್ಯ.

'ಥ್ಯಾಂಕ್ ಗಾಡ್'ಎನ್ನುತ್ತ ಆತ ಅಲ್ಲೇ ಜಗಲಿ ಮೇಲೆ ಕುಳಿತ. 'ನಿಮ್ಮನ್ನೇ ಹುಡುಕಿಕೊಂಡು ಬಂದದ್ದು ನಾನು. ಸ್ವಲ್ಪ ನೀರು ಕೊಡಿ' ಅಂದ. ಮಾತುಕತೆ ಕೇಳಿ ಹೊರಗೆ ಬಂದಿದ್ದ ಭಾಗೀರಥಿಯಮ್ಮ ಪುನಃ ಒಳಗೆ ಹೋಗಿ ಬೆಲ್ಲ ಮತ್ತು ತಂಬಿಗೆ ನೀರು ತಂದಿಟ್ಟರು.

'ನನ್ನ ಹೆಸರು ಸುರೇಶ ಅಂತ. ನಿಮಗೆ ನನ್ನ ಪರಿಚಯ ಇಲ್ಲ. ನಾನು ನಿಮ್ಮ ತಮ್ಮ ಶಂಕರನ ಮಗ'ನೀರು ಕುಡಿದು ಸುಧಾರಿಸಿಕೊಳ್ಳುತ್ತ ಆತ ನುಡಿದ.

'ಶಂಕರನ ಮಗ?' ಶೇಷಪ್ಪಯ್ಯನ ಬಾಯಿಂದ ಉದ್ಗಾರ ಹೊರಗೆ ಬಿತ್ತು. ಭಾಗೀರಥಿಯಮ್ಮ ಕೂಡ ಕೌತುಕದಿಂದ ಸೆರಗು ಬಾಯಲ್ಲಿಟ್ಟುಕೊಂಡರು.

'ನಿಮಗೆ ಆಶ್ಚರ್ಯವಾಯಿತಲ್ಲವಾ? ನಂಬಲಿಕ್ಕೆ ಆಗುತ್ತಿಲ್ಲ. ಅಲ್ಲವಾ? ಮುಂದೆ ಸಂತೋಷವಾಗಬಹುದು, ಕೋಪ ಬರಬಹುದು.... ಯಾಕೆ ಬಂದೆ ಇಲ್ಲಿ ಎಂದು ನನ್ನನ್ನು ಗದರಿಸಲೂ ಬಹುದು.... ಆದರೆ ಬರದೆ ಬೇರೆ ವಿಧಿಯಿರಲಿಲ್ಲ ನನಗೆ. ಹಾಗೆ ಬಂದದ್ದು ನಾನು' ಎನ್ನುತ್ತಾ ಪುನಃ ಒಂದು ಗುಟುಕು ನೀರು ಕುಡಿದ.

ಶೇಷಪ್ಪಯ್ಯ ತನ್ನ ಕಿವಿಗಳನ್ನೇ ನಂಬದಮಟ್ಟಕ್ಕೆ ಮುಟ್ಟಿದ್ದರು. ತನ್ನ ತಮ್ಮ ಶಂಕರ ಸುಮಾರು ಮೂವತ್ತು ವರ್ಷಗಳ ಹಿಂದೆ ಮನೆ ಬಿಟ್ಟು ಓಡಿ ಹೋದಾತ. ಅಂದಿನಿಂದ ಇಂದಿನವರೆಗೆ ಎಲ್ಲಿದ್ದಾನೆ, ಹೇಗಿದ್ದಾನೆ ಎಂಬ ಸುದ್ದಿಯೂ ಇಲ್ಲದ ಆ ಶಂಕರನ ಮಗನಂತೆ ಈತ! ಈಗ ಬರದೆ ಬೇರೆ ವಿಧಿಯಿರಲಿಲ್ಲ ಎನ್ನುತ್ತಿದ್ದಾನೆ ಬೇರೆ! ಹೌದೋ ಅಲ್ಲವೋ! ಸತ್ಯ ಸಂಗತಿ ತಿಳಿಯುವುದಾದರೂ ಹೇಗೆ ?

ಫಕ್ಕನೆ ಒಂದು ಆಲೋಚನೆ ಬಂತು. 'ಕೈಕಾಲು ತೊಳೆದು ಬಾ.... ಮಧ್ಯಾಹ್ನದ ಹೊತ್ತಿಗೆ ಬಂದಿದ್ದೀಯಾ.... ಊಟ ಮಾಡೋಣ.... ಆಮೇಲೆ ಕುಳಿತು ಮಾತನಾಡೋಣವಂತೆ' ಎಂದರು. ಭಾಗೀರಥಿಯಮ್ಮ ಮನಸ್ಸಿನ ಒಳಗೇ ಇವರ ತಮ್ಮನ ಮಗನೇ ಇರಬಹುದು, ಆದರೆ ತಾಯಿ ಯಾವ ಜಾತಿಯವಳೋ ಏನೋ! ಆದರೂ ಇವರು 'ಒಳಗೆ ಬಾ' ಎಂದಾಯಿತಲ್ಲ.... ಎಂದು ಗೊಣಗುತ್ತಾ ಒಳಗೇ ಎಲೆ ಹಾಕಿದರು.

'ಹಿಂದಿನದ್ದೆಲ್ಲ ಮರೆತುಬಿಡಿ ಅಂತ ಕಾಲು ಹಿಡಿದು ಕೇಳಿಕೋ ಅಂದಿದ್ದಾಳೆ ನಮ್ಮಮ್ಮ' ಎನ್ನುತ್ತಾ ಶೇಷಪ್ಪಯ್ಯನವರ ಕಾಲು ಹಿಡಿದ ಸುರೇಶ.

ಶೇಷಪ್ಪಯ್ಯನಿಗೆ ಪೇಚಿಗೆ ಸಿಕ್ಕಿಕೊಂಡಿತು.

'ಕೈಕಾಲು ತೊಳೆದು ಬಾ' ಎಂದಷ್ಟೇ ಹೇಳಿ ಒಳಗೆ ನಡೆದರು.

'ದೊಡ್ಡಪ್ಪ ಎನ್ನಬಹುದಲ್ಲ ನಾನು?' ಕೇಳಿದ ಸುರೇಶ.

'ಸಂಬಂಧವೇ ಇಲ್ಲದ ಅದೆಷ್ಟೋ ಮಕ್ಕಳು ನನ್ನನ್ನು ಅಜ್ಜ ಅನ್ನುತ್ತಾರೆ.... ದೊಡ್ಡಪ್ಪ ಅನ್ನುತ್ತಾರೆ, ಚಿಕ್ಕಪ್ಪ ಅನ್ನುತ್ತಾರೆ.... ನನ್ನ ತಮ್ಮನ ಮಗ ಅಂತೀಯಾ.... ನಿನಗೆ ಹೇಗೆ ಬೇಕೋ ಹಾಗೆ ಕರೆಯಬಹುದು ನೀನು' ಎನ್ನುತ್ತ ಎಲೆ ಎದುರು ಕುಳಿತರು. ಮಾತೇ ಇಲ್ಲದೆ ಊಟ ಆರಂಭವಾಗಿತ್ತು.

ಮೌನ ಅಸಹನೀಯವೆನಿಸಿದಾಗ 'ನೀನೀಗ ಎಲ್ಲಿಂದ ಬಂದದ್ದು?' ಒಂದು ತುತ್ತು ಬಾಯಿಗಿಡುತ್ತಾ ಕೇಳಿದರು ಶೇಷಪ್ಪಯ್ಯ.

'ವಿಶಾಖಪಟ್ಟಣದಿಂದ'ಎಂದಷ್ಟೇ ಹೇಳಿ ಆತ ಊಟ ಮುಂದುವರೆಸಿದ. ಇನ್ನೇನು ಕೇಳುವುದು ಎಂದು ಆಲೋಚಿಸುತ್ತಿದ್ದರು ಶೇಷಪ್ಪಯ್ಯ. ಆತ ಊಟ ಮಾಡುತ್ತಲೇ ಇದ್ದ. ಪ್ರಶ್ನೆಯೊಂದು ಎರಡೆರಡು ಬಾರಿ ಬಾಯಿಯವರೆಗೆ ಬಂದು ಹಿಂದೆ ಹೋಗಿತ್ತು. ಮೂರನೆಯ ಬಾರಿ ಬಂದಾಗ ಶೇಷಪ್ಪಯ್ಯನಿಗೆ ತಡೆಯಲಾಗಲಿಲ್ಲ.

'ಶಂಕರ ಹೇಗಿದ್ದಾನೆ ?' ಕೇಳಿದರು ಶೇಷಪ್ಪಯ್ಯ.

'ಅಪ್ಪ ತೀರಿ ನಾಲ್ಕು ವರ್ಷದ ಮೇಲಾಯಿತು' ಸುರೇಶ ಹೇಳಿದಾಗ ಶೇಷಪ್ಪಯ್ಯ ಗಕ್ಕನೆ ಊಟ ನಿಲ್ಲಿಸಿ ಬಟ್ಟಲಿನಲ್ಲೇ ಕೈ ತೊಳೆಯುತ್ತಾ 'ನಾಲ್ಕು ವರ್ಷದ ಹಿಂದೆಯಾಗಲಿ... ನಿನ್ನೆಯಾಗಲಿ.... ನನಗೆ ಸುದ್ದಿ ಸಿಕ್ಕಿದ್ದು ಈಗ.... ನಾನೊಂದು ಸ್ನಾನ ಮಾಡಿ ಬರುತ್ತೇನೆ ನೀನು ಊಟ ಮುಂದುವರೆಸು'ಎನ್ನುತ್ತ ಎದ್ದರು.

'ನಾವೆಲ್ಲ ಬೇಕಾದ ಕ್ರಿಯೆ ಮಾಡಿ ಮುಗಿಸಿದ್ದೇವೆ.... ನೀವು ಊಟ ಮಾಡಿ ದೊಡ್ಡಪ್ಪ' ಎಂದ ಸುರೇಶ.

'ಆದ್ರೂ.... ನನಗೆ ಸುದ್ದಿ ಸಿಕ್ಕಿದ್ದು ಇವತ್ತು ತಾನೆ.... ಈಗ ಬರುತ್ತೇನೆ.... ರತೀ.... ಅವನಿಗೆ ಗೊಜ್ಜೋ ಪಲ್ಯವೋ ಏನು ಬೇಕು ಕೇಳು' ಎನ್ನುತ್ತಾ ಹೊರಟರು.

ವೈಶಾಖವಾದ್ದರಿಂದ ಮನೆಯ ಎದುರಿನ ಕೆರೆಯಲ್ಲಿ ನೀರು ಕಡಿಮೆಯಿತ್ತು. ಸಾವಿನ ಸುದ್ದಿಗೆ ಮುಳುಗಬೇಕು ಅನ್ನುತ್ತಾರೆ ಎಂದುಕೊಂಡು ಮನೆಯ ಹಿಂದಿನ ಬಾವಿಕಟ್ಟೆಯ ಬಳಿ ಕಟ್ಟಿದ್ದ ದೊಡ್ಡ ಟಾಂಕಿಯ ಕಡೆಗೆ ತೆರಳಿದರು. ಮನಸ್ಸು ಬಾಲ್ಯದ ದಿನಗಳಿಗೆ ಹೊರಳಿತ್ತು.

*

ಶೇಷಪ್ಪಯ್ಯನಿಗೆ ಮೂರು ಮಂದಿ ತಮ್ಮಂದಿರು. ಮೊದಲ ತಮ್ಮ ಶಂಕರ, ಆಮೇಲೆ ಮಹಾಬಲ ಮತ್ತು ಕೊನೆಯವ ಅಶೋಕ. ಮೆಟ್ರಿಕ್ ಪಾಸಾಗಿ ತಾನು ಅಪ್ಪನೊಂದಿಗೆ ಕೃಷಿ ಸಾಗುವಳಿ ಮಾಡಲು ನಿಂತಿದ್ದರು ಶೇಷಪ್ಪಯ್ಯ. ಶಂಕರ ಕಾಲೇಜು ಓದಲು ಪಟ್ಟಣಕ್ಕೆ ಹೋಗುತ್ತಿದ್ದ. ಅದ್ಯಾರೋ ಹುಡುಗಿಯರ ಜೊತೆ ತಿರುಗುತ್ತಾನೆ, ಕ್ಲಾಸಿಗೆ ಬರುವುದಿಲ್ಲ ಅಂತ ಆತನ ಕ್ಲಾಸಿನ ಹುಡುಗರು ಶೇಷಪ್ಪಯ್ಯನಿಗೆ ಸುಳಿವು ನೀಡಿದ್ದರು. ಒಂದು ದಿನ ಪಟ್ಟಣದಲ್ಲಿ ಸಿನೇಮಾ ಮಂದಿರದ ಬಳಿ ಮಾಲು ಸಹಿತ ಸಿಕ್ಕಿಬಿದ್ದಿದ್ದ. 'ಕಲಿಯಲು ಬರುವುದೋ ನೀನು.... ಹುಡುಗಿಯರೊಂದಿಗೆ ತಿರುಗುವುದಕ್ಕೋ?.... ಇನ್ನೊಮ್ಮೆ ಹೀಗೆಲ್ಲಾ ಮಾಡಿದರೆ ತಂದೆಗೆ ಹೇಳಿ ನಿನ್ನ ಕಾಲೇಜು ನಿಲ್ಲಿಸಿ ಬಿಡುತ್ತೇನೆ' ಎಂದು ತಮ್ಮನನ್ನು ಗದರಿಸಿದ್ದರು ಶೇಷಪ್ಪಯ್ಯ. ಶಂಕರ ಸುಧಾರಿಸಲಿಲ್ಲ. ಮತ್ತೊಮ್ಮೆ ಹೀಗೆಯೇ ಸಿಕ್ಕಿ ಬಿದ್ದಾಗ ಕಿವಿ ಹಿಂಡಿ 'ಮನೆಗೆ ಬಾ ಕಲಿಸುತ್ತೇನೆ' ಎಂದು ಸಿಟ್ಟಿನಿಂದ ಹೇಳಿ ಬಂದಿದ್ದರು. ಅವತ್ತು ಆತ ಮನೆಗೆ ಬರಲಿಲ್ಲ.... ಮಾತ್ರವಲ್ಲ; ಮತ್ಯಾವತ್ತೂ ಬರಲೇ ಇಲ್ಲ.

ಇದೀಗ ಮೂವತ್ತು ವರ್ಷಗಳ ಬಳಿಕ ಹುಡುಗನೊಬ್ಬ ಬಂದು ನಾನು ನಿಮ್ಮ ತಮ್ಮನ ಮಗ ಎನ್ನುತ್ತಿದ್ದಾನೆ! ಈತನ ಅಪ್ಪ ನಾಲ್ಕು ವರ್ಷದ ಕೆಳಗೆ ತೀರಿಕೊಂಡನಂತೆ. ಆಗಲೂ ಬಂದಿರಲಿಲ್ಲ. ಇದೀಗ ಯಾಕೆ ಬಂದಿರಬಹುದು ಎಂಬುದು ಯಕ್ಷಪ್ರಶ್ನೆಯಾಗಿ ಶೇಷಪ್ಪಯ್ಯನನ್ನು ಕಾಡುತ್ತಿತ್ತು. ಎಲ್ಲಾದರೂ ಅಶೋಕನ ಕೈವಾಡವಿರಬಹುದೇ?

ಅಶೋಕ ಲಾಯರ್ ಬೇರೆ. ಅವನದೇ ಕಿತಾಪತಿ ಇರಬಹುದು. 'ಏನೇನು ಪ್ರಯತ್ನ ಮಾಡಿದರೂ ಈ ಶೇಷಪ್ಪಯ್ಯ ಶಂಕರನ ಪಾಲೆಂದು ತೆಗೆದಿರಿಸಿದ್ದ ಆಸ್ತಿಯನ್ನು ಪುನಃ ಪಾಲು ಮಾಡುವುದಕ್ಕೆ ಒಪ್ಪುವುದಿಲ್ಲ, ಹೀಗೆ ಒಬ್ಬನನ್ನು ಕಳುಹಿಸಿ ಶೇಷಪ್ಪಯ್ಯನ ಮನಸ್ಸಿನಲ್ಲೇನಿದೆ ಎಂದು ತಿಳಿಯುವ'ಎಂದು ಆ ಹುಚ್ಚ ಪ್ರಯತ್ನ ಮಾಡಿರಬಹುದೇ?

ಇದ್ದರೂ ಇರಬಹುದು ಅಂದುಕೊಂಡರು ಶೇಷಪ್ಪಯ್ಯ. ಅವನು ಶಂಕರನ ಮಗ ಹೌದು ಎಂದು ಖಚಿತ ಮಾಡಿಕೊಂಡೇ ಅವನಿಗೆ ಸಲ್ಲಬೇಕಾದ ಆಸ್ತಿ ಕೊಡುವುದು.

ಅವರು ಎಷ್ಟು ಮಕ್ಕಳೋ! ಎಲ್ಲ ವಿವರ ಪಡೆದುಕೊಳ್ಳಬೇಕು. ಹಾಗೆ ಬೇಕಿದ್ದರೆ ಒಂದು ಬಾರಿ ವಿಶಾಖಪಟ್ಟಣಕ್ಕೆ ಹೋಗಿ ಎಲ್ಲ ಸಂದೇಹ ಪರಿಹಾರ ಮಾಡಿಬರಬೇಕು. ಒಂದು ಚೂರು ಸಂದೇಹ ಬಂದರೂ ಆಸ್ತಿಯ ಪಾಲು ಕೊಡಬಾರದು. ರಕ್ತ ಪರೀಕ್ಷೆ ಮಾಡಿಸಿ ನೀನೂ ನಮ್ಮ ಪರಿವಾರದವನೇ ಎಂದು ಪ್ರೂವ್‌ಮಾಡು ಅನ್ನುವುದು. ಅದರಲ್ಲೇನು ಮುಲಾಜು?'ತನ್ನ ಬಟ್ಟೆ ಬಿಚ್ಚಿ ಬಾವಿ ಕಟ್ಟೆಯಲ್ಲಿಟ್ಟು ನೀರಿಗಿಳಿದರು.

ಶೇಷಪ್ಪಯ್ಯನವರ ಯೋಚನಾಲಹರಿ ಹೀಗೆಯೇ ಮುಂದುವರಿದಿತ್ತು. ಒಂದು ಬಾರಿ ನೀರಿನ ಟ್ಯಾಂಕಿನಲ್ಲಿ ಮುಳುಗಿ ಎದ್ದರು. ಶಂಕರನಿಗಾಗಿ ಮುಳುಗುತ್ತಿದ್ದೇನೆ ಎಂದು ಕಣ್ಣುಗಳು ತುಂಬಿ ಬಂದುವು. 'ನಿನ್ನ ಒಳಿತಿಗಾಗಿ ಏನೋ ಎರಡುಮಾತು ನಾನು ಹೇಳಿದೆ ಎಂದು ಮನೆಬಿಟ್ಟು ಹೋಗಬೇಕಿತ್ತೇನೋ.... ನಿನ್ನನ್ನು ಅದೆಷ್ಟು ಹುಡುಕಿದೆ! ಯಾರಿಗೂ ಹೇಳಲಿಲ್ಲ ನಾನು.... ಯಾಕೆ ಗೊತ್ತೆ? ನೀನು ಸಿಕ್ಕಿದಾಗ ಹೇಳಬೇಕು ಅಂದುಕೊಂಡಿದ್ದೆ. ಸಿಗಲೇ ಇಲ್ಲ. ಇಷ್ಟು ಸಾಲದ್ದಕ್ಕೆ ನನಗಿಂತಲೂ ಮೊದಲು ಈ ಲೋಕ ಬಿಟ್ಟುಹೋಗುವ ಅವಸರ ಮಾಡಿ ಒಂದಲ್ಲ ಒಂದು ದಿನ ನಿನ್ನನ್ನು ನೋಡಿಯೇ ತೀರುತ್ತೇನೆ ಎಂದು ನಾನು ಹೊಂದಿದ್ದ ಕೊನೆಯ ಆಸೆಯನ್ನೂ ಹಿಸುಕಿಬಿಟ್ಟೆಯಲ್ಲೋ!' ಎಂದು ಉಮ್ಮಳಿಸಿ ಅತ್ತರು ಶೇಷಪ್ಪಯ್ಯ. 'ಇನ್ಯಾರಿಗೆ ಅಂತ ನಿನ್ನ ಆಸ್ತಿ? ಎಲ್ಲಿ ಜೋಪಾನ ಮಾಡಲಿ ? ಬಂದಿದ್ದಾನಲ್ಲ.... ನಿನ್ನ ಮಗ.... ಆಗಿರಲಿ, ಅಲ್ಲದಿರಲಿ.... ನನಗೇನು?.... ಕೊಟ್ಟುಬಿಡುತ್ತೇನೆ. ನಿನ್ನ ಆಸ್ತಿ ಒಳಗೆ ಹಾಕಿದೆ ಅಂತ ನನಗೆ ಹೆಸರು ಬೇಡ' ಪುನಃ ಮುಳುಗಿ ಎದ್ದರು ಶೇಷಪ್ಪಯ್ಯ. 'ನನ್ನ ಮಕ್ಕಳಿಗೆ -- ನಿನ್ನದು ಬಿಡು, ನನ್ನ ಆಸ್ತಿಯೂ ಬೇಡ.... ಬೇರೆ ಜಾತಿಯ ಹುಡುಗನನ್ನು ರಿಜಿಸ್ಟರ್ ಮದುವೆಯಾಗುವ ಹಠ ಹಿಡಿದಿದ್ದಳು ನನ್ನ ಮಗಳು. ನಾನು ಗದರಿಸಿದ್ದಕ್ಕೆ 'ಚಿಕ್ಕಪ್ಪನ ಹಾಗೆ ಮನೆ ಬಿಟ್ಟು ಹೋಗುತ್ತೇನೆ' ಅಂದಿದ್ದಳು ಗೊತ್ತಾ? ನಿನ್ನಿಂದ ಶುರುವಾದ ಮನೆ ಬಿಟ್ಟು ಹೋಗುವ ಮಾತು ಈಗಲೂ ಮುಂದುವರೆದಿದೆ ಕಣೋ.... ನಿಮ್ಮನ್ನೆಲ್ಲ ಕಟ್ಟಿಕೊಂಡು ಸಾಕಾಯಿತು ನನಗೆ' ಎಂದು ಮೆಲ್ಲನೆ ಒಂದೊಂದೇ ಕಾಲು ಹೊರಗಿಟ್ಟು ಟ್ಯಾಂಕಿನಿಂದ ಹೊರಬಂದರು. 'ಒಂದು ಬಾರಿ ಹಿಂದೆ ಬಂದು ಅಣ್ಣನದ್ದು ತಪ್ಪಿಲ್ಲ ನಾನೇ ದುಡುಕಿದ್ದು ಅಂದಿದ್ದರೆ ನಿನ್ನ ಮರ್ಯಾದೆ ಹೋಗುತ್ತಿತ್ತೇನೋ?' ಎನ್ನುತ್ತಾ ಗಳಗಳನೆ ಅತ್ತರು ಶೇಷಪ್ಪಯ್ಯ.

ಸ್ನಾನದ ನೀರನ್ನೂ ಕಣ್ಣೀರನ್ನೂ ಒಟ್ಟಿಗೇ ಬಟ್ಟೆಯಿಂದ ಒರಸಿಕೊಂಡು ಮನೆಗೆ ಹೊರಟರು ಶೇಷಪ್ಪಯ್ಯ. ಒಂದಷ್ಟು ಕಣ್ಣೀರು ಇಳಿದು ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಗಿತ್ತು. ಊಟ ಮುಗಿಸಿ ಸುರೇಶ ಭಾಗೀರಥಿಯೊಂದಿಗೆ ಜಗಲಿಯಲ್ಲಿ ಕುಳಿತು ಹರಟೆ ಹೊಡೆಯುವುತ್ತಿರುವುದನ್ನು ದೂರದಲ್ಲಿಯೇ ನೋಡಿದ ಶೇಷಪ್ಪಯ್ಯ 'ಈತ ಶಂಕರನ ಮಗ ಹೌದು' ಎಂದುಕೊಂಡರು. ಶಂಕರ ಕ್ಷಣಮಾತ್ರದಲ್ಲಿ ಯಾರಲ್ಲೂ ಮಾತನಾಡಿ ಸ್ನೇಹ ಸಂಪಾದಿಸಿಬಿಡುತ್ತಿದ್ದ. ಇವನೂ ಹಾಗೆಯೇ!

ಜಗಲಿಯಲ್ಲಿ ಬಂದು ಕುಳಿತು ಮಾತುಕತೆ ಮುಂದುವರೆಸಿದರು ಶೇಷಪ್ಪಯ್ಯ.

'ಇಲ್ಲಿ ಮನೆ ಎಂದು ಹೇಗೆ ಗೊತ್ತಾಯಿತು ನಿನಗೆ?'

'ಅಪ್ಪ ಒಂದು ಸಾರಿ ಕರೆದುಕೊಂಡು ಬಂದಿದ್ದರು.... ಬಸ್ಸು ಇಳಿದು ನಾವು ಬರುವಾಗ ದಾರಿಯಲ್ಲಿ ದನವೊಂದು ಸತ್ತುಬಿದ್ದಿತ್ತು. ಅಪಶಕುನ ಅನ್ನುತ್ತಾ ಹಾಗೆಯೇ ಹಿಂದೆ ಕರೆದುಕೊಂಡು ಹೋದರು. ನಾನೂ ಅಲ್ಲೇ ಬಂದು ಬಸ್ಸು ಇಳಿದದ್ದು'.

'ನಮಗಿಲ್ಲಿ ಯಾರಿಗೂ ಶಂಕರ ಎಲ್ಲಿ ಹೋದ, ಹೇಗೆ ಬದುಕಿದ ಅನ್ನುವ ವಿವರ ಇಲ್ಲ.... ಆತ ವಿಶಾಖ ಪಟ್ಟಣದಲ್ಲಿ ಏನು ಮಾಡುತ್ತಿದ್ದ?'

'ನಾನು ಸಣ್ಣದಿರುವಾಗ, ನಮ್ಮದು ಹೊಟೇಲ್ ಇತ್ತು. ಅಪ್ಪ ಸಾಯುವುದಕ್ಕೆ ಎರಡು ವರ್ಷ ಮುನ್ನ ಅದನ್ನು ಬಿಟ್ಟು ಬೇಕರಿ ಮಾಡಿದರು. ಇದೀಗ ನಮ್ಮ ಬೇಕರಿ ಅರ್ಧ ವಿಶಾಖಪಟ್ಟಣಕ್ಕೆ ಬ್ರೆಡ್ಡು ವಿತರಿಸುತ್ತಿದೆ. ಅರುವತ್ತು ಮಂದಿ ಕೆಲಸಕ್ಕಿದ್ದಾರೆ'

'ಹಾಗಾದ್ರೆ ಹಣದ ತಾಪತ್ರಯದಲ್ಲಿ ಬಂದವನಲ್ಲ.... ' ಒಳಗೊಳಗೇ ಲೆಕ್ಕ ಹಾಕಿ ನಿರ್ಣಯಕ್ಕೆ ಬಂದರು ಶೇಷಪ್ಪಯ್ಯ.

'ಅಂದ ಹಾಗೆ.... ಬರದೆ ಬೇರೆ ವಿಧಿಯಿರಲಿಲ್ಲ ಅಂದವ ಇನ್ನೂ ಬಂದದ್ಯಾಕೆ ಅಂತ ಹೇಳಲೇ ಇಲ್ಲ ನೀನು'

ಸುರೇಶ ಎದ್ದು ಕಾಲು ಹಿಡಿಯಲು ಬಂದ. 'ನೀವು ಆಗುವುದಿಲ್ಲ ಅನ್ನಬಾರದು'

ಸಿಟ್ಟು ಬಂತು ಶೇಷಪ್ಪಯ್ಯನಿಗೆ. 'ಮೊದಲು ವಿಷಯ ಏನು ಅಂತ ಹೇಳು. ಹೇಳದೇ ಕೇಳದೇ ಮನೆ ಬಿಟ್ಟು ಹೋದ ನಿನ್ನಪ್ಪ. ಆತ ಹಿಂತಿರುಗಿ ನೋಡಲಿಲ್ಲ. ಅವನು ಸತ್ತು ನಾಲ್ಕು ವರ್ಷ ಆಯಿತು. ನೀನೂ ಈ ಕಡೆ ಬರುವ ಕಷ್ಟ ಯಾಕೆ ಬೇಕು ಅಂತ ಸುಮ್ಮನಿದ್ದೆ. ಇದೀಗ ಅಂತಹ ಯಾವ ಕೆಟ್ಟಕಾಲ ಬಂತು ನಿಮಗೆ? ನಾನು ಮಾಡಿಕೊಡಬೇಕು ಅನ್ನುವ ಕೆಲಸ ಯಾವುದು? ಯಾವುದೇ ಇರಲಿ–ಯಾಕೆ ಮಾಡಿಕೊಡಬೇಕು?.... ಕೆಲಸ ಏನೆಂದು ಹೇಳು.... ಆಲೋಚನೆ ಮಾಡಿ ಹೇಳುತ್ತೇನೆ'ಆವೇಶದಲ್ಲಿ ನುಡಿದರು ಶೇಷಪ್ಪಯ್ಯ.

'ಒಬ್ಬಳು ತಂಗಿ ಇದ್ದಾಳೆ ನನಗೆ. ನೀವು ನಿಂತು ಅವಳಿಗೆ ಮದುವೆ ಮಾಡಿಸಿಕೊಡಬೇಕು....' ಕೈ ಮುಗಿದು ಕೇಳಿದ ಸುರೇಶ.

ಶೇಷಪ್ಪಯ್ಯನವರಿಗೆ ಸಮಸ್ಯೆಯ ಸೂಚನೆ ಸಿಕ್ಕಿತು. ಬಹುಶಃ ಈತ ಮತ್ತು ಇವನಮ್ಮ ಸಂಬಂಧ ಹುಡುಕಿ ಹುಡುಕಿ ಸೋತು ಹೋಗಿರಬೇಕು.... ಜಾತಿ, ಗೋತ್ರ ಸರಿಯಿಲ್ಲದಿದ್ದ

ಹುಡುಗಿ ಯಾರಿಗೆ ಬೇಕು?.... ಒಳ್ಳೇ ಸ್ಥಿತಿವಂತರಂತೂ ಇದೆಲ್ಲಾ ನೋಡಿಯೇ ನೋಡುತ್ತಾರೆ ತಾನೆ ?...

'ಏನೋಪ್ಪ.... ನನ್ನ ಕೈಯಲ್ಲಿ ಇದೆಲ್ಲ ಆಗುತ್ತದೇಯೇನೋ? ಅಷ್ಟು ಸಾಮರ್ಥ್ಯ ಎಲ್ಲಿದೆ ನನ್ನಲ್ಲಿ....' ಬೇಕೆಂದೇ ಹಿಂದೇಟು ಹಾಕುವವರಂತೆ ನುಡಿದರು ಶೇಷಪ್ಪಯ್ಯ.

'ಖರ್ಚು ವೆಚ್ಚದ ಬಗೆಗೆ ಚಿಂತೆ ಮಾಡಬೇಡಿ.... ದೊಡ್ಡಪ್ಪ. ನಾನಿದ್ದೇನೆ.... ನೀವು ಮುಂದೆ ನಿಂತರೆ ಸಾಕು' ಪುನಃ ವಿನಂತಿಸಿದ ಆತ.

'ಸಂಬಂಧ ಹುಡುಕಬೇಕು, ಹುಡುಗ ಒಪ್ಪಬೇಕು, ಆತನ ಮನೆಯವರು ಒಪ್ಪಬೇಕು... ಸುಲಭವಲ್ಲ'

'ಒಳ್ಳೇ ಸಂಬಂಧ ಬಂದಿದೆ, ಹುಡುಗ ಹುಡುಗಿ ಒಪ್ಪಿದ್ದಾರೆ.... . ಆದರೆ ಹುಡುಗನ ಮನೆಯವರು ಒಂದು ಶರತ್ತು ಹಾಕಿದ್ದಾರೆ' ವಿವರಿಸಿದ ಆತ.

'ಏನಂತೆ ?' ಉತ್ಸಾಹ ತೋರದೇ ಕೇಳಿದರು ಶೇಷಪ್ಪಯ್ಯ.

'ಹುಡುಗನ ತಾಯಿ ಇಲ್ಲೇ ಹತ್ತಿದರದಲ್ಲಿಯ ಹೂಲಿಗಟ್ಟೆ ಎನ್ನುವ ಊರಿನವರಂತೆ. ಹೂಲಿಗಟ್ಟೆ ಗೊತ್ತಿದೆಯಾ?' ಕೇಳಿದ ಸುರೇಶ.

'ಹುಲಿಕಟ್ಟೆ ಇರಬೇಕು.... ಇಲ್ಲೇ ಹದಿನೈದು ಮೈಲಿ ದೂರ.... ಹೇಳು.... ಅದಕ್ಕೆ?' ಮುಂದುವರೆಸಿದರು ಶೇಷಪ್ಪಯ್ಯ.

ಮಾತುಕತೆಯ ಸಮಯದಲ್ಲಿ ಅಪ್ಪನ ವಿಷಯ ಬಂತು. ನಮ್ಮ ತಾಯಿಯ ಜಾತಿ ವಿಷಯ ಬಂತು. ಹುಡುಗನ ತಾಯಿ ನಿಮ್ಮ ಹೆಸರು ಕೇಳಿದ್ದಾರಂತೆ.... . ನಿಮ್ಮ ತಮ್ಮನ ಮಗಳು ಅಂತ ನೀವು ಧಾರೆ ಎರೆದು ಕೊಡುವುದಾದರೆ ಅವರಿಗೆ ಈ ಸಂಬಂಧ ಒಪ್ಪಿಗೆ ಅಂದಿದ್ದಾರೆ' ಪೂರ್ಣ ಚಿತ್ರಣವನ್ನಿತ್ತ ಸುರೇಶ.

ಶೇಷಪ್ಪಯ್ಯ ಒಂದು ನಿಮಿಷ ಭರ್ತಿ ಆತನ ಮುಖವನ್ನೇ ನೋಡಿದರು.

'ಹಾಗೆ ನೀನು ಬಂದದ್ದು.... ಆ ಪುಣ್ಯಾತ್ಮಗಿತ್ತಿ ಹಾಗೆ ಹೇಳಿದ್ದಲ್ಲದಿದ್ದರೆ ನಿನ್ನಪ್ಪ ಮಾಡಿದ್ದೇ ಸರಿ ಅಂತ ದೂರ ಕುಳಿತವರು ನೀವು.... ನಿನ್ನಪ್ಪ ಮರಳಿ ಬರುತ್ತಾನೆ ಅಂತ ನನ್ನಪ್ಪ ಸತ್ತಾಗ ಆಸ್ತಿ ನಾಲ್ಕು ಪಾಲಾಗಬೇಕು ಅಂತ ಹಠ ಹಿಡಿದಿದ್ದೆ ನಾನು. ನಿನ್ನಪ್ಪನ ಪಾಲು ಅಂತ ತೆಗೆದಿಟ್ಟು ಅವನಿಗಾಗಿ ಕಾದಿದ್ದೆ. ಆತ ಬರಲಿಲ್ಲ. ನಿನ್ನಮ್ಮ ಅವನಿಗೆ ಬುದ್ಧಿ ಹೇಳಲಿಲ್ಲ.... ನೀವು, ಮಕ್ಕಳು, ದೊಡ್ಡದಾದ ಮೇಲೂ ಅವನನ್ನು ಹಿರಿಯರ ಮನೆಗೆ

ಹೋಗೋಣ ಅಂತ ಹೊರಡಿಸಲಿಲ್ಲ.... ಯಾಕೆ ? ಅಗತ್ಯ ಇರಲಿಲ್ಲ ನಿಮಗೆ. ಈಗ ಅಗತ್ಯ ಬಂತು.... ಹಾದರದ ಮಗಳಲ್ಲ, ನನ್ನ ತಮ್ಮನ ಮಗಳು ಅಂತ ಹೇಳಬೇಕು ನಾನು.... ಒಳ್ಳೆಯ ವಂಶ ಅಂತ ಮೊಹರು ಒತ್ತಬೇಕು ನಾನು.... ಅವರು ಹಾಗೆ ಹೇಳಿದರು ಅಂತ ನನ್ನಲ್ಲಿ ಕೇಳಲು ಬಂದಿಯಲ್ಲಾ.... ನಾಚಿಕೆಯಾಗುವುದಿಲ್ಲವೇ ನಿನಗೆ?' ಶೇಷಪ್ಪಯ್ಯನ ಅದುಮಿಟ್ಟ ಮೂವತ್ತು ವರ್ಷದ ಅಸಹನೆ, ಕೋಪ ಮತ್ತು ಕಣ್ಣೀರು ಅಣೆಕಟ್ಟು ಒಡೆದು ಒಮ್ಮೆಲೆ ಧುಮ್ಮಿಕ್ಕಿ ಹರಿದವು.

ತಲೆತಗ್ಗಿಸಿ ಕುಳಿತಿದ್ದ ಸುರೇಶ.

'ನಿನ್ನದು ತಪ್ಪಿಲ್ಲ.... ನೀನು ಅವನ ಮಗ ನೋಡು.... ಅವನದ್ದೇ ನೆರಳಿನಲ್ಲಿ ಬೆಳೆದವ.... ಸ್ವಂತ ಬುದ್ಧಿ ಬಂದ ಮೇಲಾದರೂ ಒಂದಿನ ನೀನಾಗಿ ಬರಲಿಲ್ಲವಲ್ಲ ಎನ್ನುವುದಷ್ಟೇ ನಿನ್ನ ಮೇಲಿನ ಸಿಟ್ಟು ನನಗೆ. ಅವನು ಬರಬೇಕಿತ್ತು. ಕೋರ್ಟು ಹಾಕುತ್ತಿದ್ದೆ ಇಲ್ಲೇ. ನಾನೇ ಫಿರ್ಯಾದಿ. ನಾನೇ ನ್ಯಾಯಾಧೀಶ. ಕಟಕಟೆಯಲ್ಲಿ ನಿಲ್ಲಿಸಿ ಮನೆ ಬಿಟ್ಟು ಹೋದದ್ದು ತಪ್ಪಾಯಿತು ಅನ್ನುವ ತನಕ ಬಿಡಬಾರದು ಎಂದುಕೊಂಡಿದ್ದೆ' ಶೇಷಪ್ಪಯ್ಯ ಭಾವುಕರಾಗಿ ನುಡಿದರು.

'ಅಪ್ಪ ಬರುವುದೇ ಇಲ್ಲ ಎಂದು ತೀರ್ಮಾನ ಮಾಡಿರಲಿಲ್ಲ.... ಅಜ್ಜನನ್ನು ತೋರಿಸುತ್ತೇನೆ ಅಂದಿದ್ದರು. ಬಂದಿದ್ದೆವು ಕೂಡ. ಸತ್ತ ದನ ನೋಡಿ ಅವರಿಗೇನೋ ಅನ್ನಿಸಿರಬೇಕು.... ಆಮೇಲೆ ಇಲ್ಲಿಗೆ ಬರುವ ಮಾತೇ ಎತ್ತಿರಲಿಲ್ಲ....' ಮೆಲ್ಲನೆ ಸಮಜಾಯಿಷಿ ನೀಡಿದ ಮಗ.

'ಅದೆಲ್ಲ ಕುಂಟು ನೆಪ.... ಮರುದಿನ ಬರಬಹುದಿತ್ತಲ್ಲ? ನಾನಾಗಿದ್ದರೆ ಬರುತ್ತಿದ್ದೆ. ದನ ಅಲ್ಲ ಆನೆ ಸತ್ತು ಬಿದ್ದಿದ್ದರೂ ಬದಿಗೆ ಸರಿಸಿ ಬರುತ್ತಿದ್ದೆ.... ಹೋಗಲಿ ಬಿಡು....' ವಿಷಾದದಿಂದ ಹೇಳಿದರು ಶೇಷಪ್ಪಯ್ಯ.

'ನಿಮಗೆ ನನ್ನ ಮೇಲೆ ಕೋಪಿಸಿಕೋಳ್ಳುವ ಹಕ್ಕಿದೆ. ನಾವು ನಿಮ್ಮೊಂದಿಗೆ ಸರಿಯಾಗಿ ನಡೆದುಕೊಂಡಿಲ್ಲ.... . ಒಪ್ಪಿಕೊಳ್ಳುತ್ತೇನೆ.... . ಎಲ್ಲ ಮರೆತು ಬಿಡಿ. ದೊಡ್ಡಮ್ಮ ಮತ್ತು ನೀವು ಬಂದು ನಿಂತು ಅವರು ಹೇಳಿದ ಹಾಗೆ ತಂಗಿ ಮದುವೆ ನಡೆಸಿಕೊಡಬೇಕು' ಓಲೈಸುವ ಧಾಟಿಯಲ್ಲಿ ಸುರೇಶ ಪುನಃ ವಿನಂತಿ ಮಾಡಿದ.

'ಸಾಧ್ಯವಿಲ್ಲ. ನಿಮಗೆ ನಿಮ್ಮದೇ ರೀತಿ ಸರಿ ಕಂಡಿತ್ತು ಅಲ್ವಾ? ನನಗೆ ನನ್ನದೇ ನ್ಯಾಯ ಅನ್ನಿಸುತ್ತಾ ಇದೆ. ನೀನು ಹೇಳಿದ ಹಾಗೆ, ಅವರು ಹೇಳಿದ ಹಾಗೆ ಬಂದು ಮದುವೆಯಲ್ಲಿ ಪಾಲ್ಗೊಳ್ಳುವುದು ನನಗೆ ಇಷ್ಟವಿಲ್ಲ' ಕಡ್ಡಿ ಮುರಿದಂತೆ ಹೇಳಿದರು ಶೇಷಪ್ಪಯ್ಯ.

'ನೀವು ಇಲ್ಲ ಅನ್ನಬಾರದು.... ತಂಗಿ ಬಾಳುವೆ ಪ್ರಶ್ನೆ.... ಅವಳದ್ದೇನೂ ತಪ್ಪಿಲ್ಲವಲ್ಲ.... ಅಪ್ಪನಿಲ್ಲದ ಮಗಳು ಅಂತ ಆದ್ರೂ ಸರಿ... ನೀವು ಹೇಗೆ ಹೇಳುತ್ತೀರೋ ಹಾಗೆ.... ನಾನು ಎಲ್ಲ ವ್ಯವಸ್ಥೆ ಮಾಡಿಸುತ್ತೇನೆ. ದಯವಿಟ್ಟು ಇಲ್ಲ ಅನ್ನಬೇಡಿ' ದೈನ್ಯನಾಗಿ ಹೇಳಿದ ಸುರೇಶ.

'ಅಪ್ಪ ಇಲ್ಲದ ಮಗಳು ಅಲ್ವಾ? ನಾನು ಹೇಳಿದ ಹಾಗೆ ಕೇಳುತ್ತೀ ಅಲ್ವಾ? ಹಾಗಾದ್ರೆ ಕೇಳು.... ಶಂಕರ ಹೇಗೆ ಉಟ್ಟ ಬಟ್ಟೆಯಲ್ಲಿ ಹೋಗಿದ್ದನೋ ಹಾಗೆಯೇ ನೀನು, ನಿನ್ನಮ್ಮ, ನಿನ್ನ ತಂಗಿ ಉಟ್ಟ ಬಟ್ಟೆಯಲ್ಲಿ ತಿರುಗಿ ಇಲ್ಲಿಗೆ ಬರಬೇಕು. ಅವನೇ ಕುಟುಂಬ ಸಮೇತ ಮರಳಿ ಬಂದ ಎಂದುಕೊಳ್ಳುತ್ತೇನೆ. ಮನೆ ಬಿಟ್ಟು ಹೋದ ಮೇಲಿನ ಅವನ ಗಳಿಕೆಯ ಒಂದು ನಯಾಪೈಸೆ ಇಲ್ಲಿ ತರುವುದು ಬೇಡ. ಶಂಕರ ಸತ್ತ ಮೇಲೆ ಅವನ ಮಗಳಿಗೆ ಮದುವೆ ಮಾಡುವುದು ನನ್ನ ಕರ್ತವ್ಯ ಕಣೋ. ಒಡವೆ, ಸೀರೆ, ಉಡುಗೊರೆ, ಊಟದ ಖರ್ಚು, ಮದುವೆ ಖರ್ಚಿಗೆ ಎಲ್ಲ ಅವಳದ್ದೇ ಹಕ್ಕಿನ ಹಣ ಇಲ್ಲಿದೆ. ವರ್ಷಗಳಿಂದ ಬೇರೆ ತೆಗೆದಿಟ್ಟಿದ್ದೇನೆ. ಹುಡುಗನ ಕಡೆಯವರಿಗೆ ಇಲ್ಲಿ ಬರಲು ಹೇಳು. ಮದುವೆ ಇಲ್ಲಿ, ಹಿರಿಯರ ಮನೆಯಲ್ಲಿ. ನನ್ನ ಘನತೆಗೆ ತಕ್ಕಂತೆ ನನ್ನ ತಮ್ಮನ ಮಗಳ ಮದುವೆ ಮಾಡಿಕೊಡುತ್ತೇನೆ.... ಹಣ ಕಡಿಮೆ ಬಿದ್ರೆ ನಾನು ಖರ್ಚು ಮಾಡುತ್ತೇನೆ....' ಒಂದೇ ಏಟಿಗೆ ಹೇಳಿ ಮುಗಿಸಿದರು ಶೇಷಪ್ಪಯ್ಯ. 'ನಿಮಗೆ ಒಪ್ಪಿಗೆಯಾ ಹೇಳು.... ಅವರಿಗೆ ಒಪ್ಪಿಗೆಯಾ ಕೇಳು....'

'ಅವರು ಒಪ್ಪಿಕೊಂಡರೆ ನಮಗೂ ಸಂತೋಷವೇ.... . ಒಂದು ವೇಳೆ ಅವರು ಒಪ್ಪಿಕೊಳ್ಳದಿದ್ದರೆ ?' ಪ್ರಶ್ನಿಸಿದ ಸುರೇಶ.

'ಬೇರೆ ಸಂಬಂಧ – ನಾನು ಹುಡುಕಿ ಮದುವೆ ಮಾಡಿಸುತ್ತೇನೆ.... ನಿನಗ್ಯಾಕೆ ತಲೆಬಿಸಿ? ನಿಮಗೆ ಇಲ್ಲಿ ಬಂದು ಮದುವೆ ಮಾಡಿಕೊಡಲು ಒಪ್ಪಿಗೆಯಾ ಹೇಳು? ಇಲ್ಲದಿದ್ದರೆ ನಿಮ್ಮ ದಾರಿ ನಿಮಗೆ.... ನನ್ನ ದಾರಿ ನನಗೆ' ಗಟ್ಟಿ ಮನಸ್ಸು ಮಾಡಿದ್ದರು ಶೇಷಪ್ಪಯ್ಯ.

'ನೀವು ಹೇಳಿದ್ದರಲ್ಲಿ ನ್ಯಾಯ ಇದೆ. ಅವರನ್ನು ಒಪ್ಪಿಸುವ ಪ್ರಯತ್ನ ಮಾಡುತ್ತೇನೆ.... ಯಾವುದಕ್ಕೂ ಅವರಲ್ಲಿ ಕೇಳಿಬರುತ್ತೇನೆ.... .' ಎನ್ನುತ್ತಾ ಎದ್ದ ಸುರೇಶ.

'ದೊಡ್ಡಮ್ಮಾ ನಾನು ಹೊರಟೆ' ಎನ್ನುತ್ತಾ ಬಂದ ದಾರಿಯ ಕಡೆಗೇ ಹೊರಟಾಗ ತಡೆದರು ಶೇಷಪ್ಪಯ್ಯ.

'ಇತ್ತಲಾಗಿಂದ ರಸ್ತೆಯಲ್ಲಿ ಹೋಗು. ಅಲ್ಲೇ ತಿರುವಿನಲ್ಲಿ ಸಿಗುವ ಮನೆ ನಿನ್ನ ಚಿಕ್ಕಪ್ಪನದ್ದು. ಅವನಲ್ಲೂ ವಿಷಯ ತಿಳಿಸಿ ಹೋಗು. ನಿನ್ನಪ್ಪನ ಪಾಲನ್ನು ಪುನಃ ಪಾಲು ಮಾಡಿಕೊಡು ಅಂತ ಆಗಾಗ ರಾಗ ತೆಗೆಯುತ್ತಿದ್ದ. ಅಲ್ಲೇ ಪೋಸ್ಟ್ ಆಫೀಸಿನ ಬಳಿ ಇರುವ ಮನೆ ಇನ್ನೊಬ್ಬ ಚಿಕ್ಕಪ್ಪನದ್ದು. ಆತ ಲಾಯರ್ ಬೇರೆ. ಅವನಿಗೂ ಹೇಳಿಬಿಡು.

ಶಂಕರನ ಮಗ ಬಂದಿದ್ದಾನೆ, ಇನ್ನು ಪಾಲಿನ ಆಸೆ ಬಿಡಬೇಕು ಅಂತ ಅವನೂ ತಿಳಿದುಕೊಳ್ಳಲಿ' ಎನ್ನುತ್ತಾ ಅವನೊಡನೆ ನಾಲ್ಕು ಹೆಜ್ಜೆ ಹಾಕಿ ದಾರಿ ತೋರಿಸಿದರು.

'ಅಬ್ಬ ದೇವರೆ.... ಅಷ್ಟಕ್ಕಾದರೂ ಒಪ್ಪಿದನಲ್ಲ ಮುದುಕ' ಎಂದುಕೊಳ್ಳುತ್ತ ನಡೆದ ಸುರೇಶ.

ಸುರೇಶನ ಆಕೃತಿ ದೂರದಲ್ಲಿ ಮರೆಯಾಗುವವರೆಗೂ ಅಲ್ಲೇ ನಿಂತಿದ್ದರು ಶೇಷಪ್ಪಯ್ಯ. ಅಲ್ಲಿಗೆ ಬಂದ ಭಾಗೀರಥಿಯಮ್ಮನಲ್ಲಿ 'ಶಂಕರನೂ ಹಾಗೆಯೇ ಕೈಬೀಸಿ ನಡೆಯುತ್ತಿದ್ದ. ಪಿತ್ರಾರ್ಜಿತದಲ್ಲಿ ಪಾಲು ಕೇಳಲಿಕ್ಕೆ ಬಂದ ಅಂತ ತಪ್ಪಾಗಿ ಗ್ರಹಿಸಿದ್ದೆ ನಾನು' ಎಂದರು ಶೇಷಪ್ಪಯ್ಯ.

'ನಿಮ್ಮ ತಮ್ಮನ ಮಗ ಹೌದೋ ಅಲ್ಲವೋ ಅಂತ ಒಂದು ತೀರ್ಮಾನ ಮಾಡುವ ಮೊದಲೇ ತಂಗಿಯುನ್ನು ಕರೆದುಕೊಂಡು ಬಾ.... ಇಲ್ಲೇ ಮದುವೆ' ಅಂದುಬಿಟ್ರಲ್ಲ. ಈಗಿನ ಕಾಲದಲ್ಲಿ ಎಷ್ಟು ಜಾಗ್ರತೆಯಾಗಿದ್ದರೂ ಸಾಕಾಗುವುದಿಲ್ಲ ಅನ್ನುತ್ತಿದ್ದವರೇ....' ಆಕೆ ಮುಗಿಸುವ ಮೊದಲೇ ತಡೆದರು ಶೇಷಪ್ಪಯ್ಯ. 'ಮೂವತ್ತು ವರ್ಷ ಅವರ ಪಾಲಿನ ಆಸ್ತಿಯ ಹೊರೆ ಹೊತ್ತದ್ದಕ್ಕೆ ಕನ್ಯಾದಾನ ಮಾಡೋ ಭಾಗ್ಯ ಬಂದಿದೆ ಕಣೆ. ನಿನ್ನ ಮಗಳು ನಮ್ಮ ಕನ್ಯಾದಾನದ ಹಕ್ಕು ಕಿತ್ತುಕೊಂಡರೇನಂತೆ ? ದೇವರಿಗೆ ಅದು ಹಿಡಿಸಲಿಲ್ಲ.... ಅದಕ್ಕೇ ಇವನಿಗೆ ಹೀಗೆ ಬುದ್ಧಿ ಕೊಟ್ಟ ಅಂತ ಆಲೋಚಿಸಿದ್ದು ನಾನು. ಆದದ್ದಾಗಲಿ ಬಿಡು' ಅಂದರಾತ.

ಸುರೇಶ ಹೋದ ರಸ್ತೆಯನ್ನೇ ನೋಡುತ್ತಾ ನಿಂತ ಶೇಷಪ್ಪಯ್ಯನಿಗೆ 'ಹೊಸ ರಸ್ತೆ ಇವರಿಗೆಲ್ಲ ಮದುವೆಗೆ ಬಂದು ಹೋಗುವ ಸೌಕರ್ಯಕ್ಕಾಗಿಯೇ ಮಾಡಿದ್ದಾರೇನೋ' ಎನಿಸಿತು !

•

# ಪಾಪ

– ವಲ್ಲೀಶ ಶಾಸ್ತ್ರಿ

'ಆ ದಿವ್ಸ ನಂಗ್ ಇನ್ನೂ ಜ್ಞಾಪ್ತಿ ಅಯ್ತೆ. ಭತ್ತದ ಕಣದಾಗೆ ಭತ್ತ ತೂರೋಕೆ ಗಾಳಿ ಬೀಸ್ತಾನೆ ಇಲ್ವಲ್ಲಾ ಅಂತ ಪೊರ ಹಿಡಕೊಂಡ್ ಮರಳ್ ಗದ್ದೆಂಯಾಗಿನ ದೊಸ್ವಾರ್ಮಪ್ಪನೋರ್ ಕಣದಾಗೆ ಮಂಚ, ಕಾಳನ ಜೊತ್ಯಾಗೆ ಎಲ್ಲಾ ಬೀಡಿ ಸೇದ್ತಾ ಕುಂತಿದ್ರು. ಸೂರ್ಯ, ಅಯ್ನೋರ್ ಅಡಕೆ ತೋಟದ ಸಂದ್ಯಾಗೆ ಮುಳಗ್ತಾ ಇದ್ದ. ನಾನು ನನ್ ಮೊಮ್ಮಗ ಕಿಟ್ಟೀನ್ ಕರ್ಕೊಂಡ್ ಕಾಲ್ವೇ ಹಾಳ್ನಾಗೆ ಹೋಯ್ತಾ ಇದ್ದೆ. ಕಿಟ್ಟೀಗೆ ಮುಂದ್ನ ದೀವ್ಳ್ಗೇಗೆ ಐದ್ ವರ್ಸ್ ಆಯ್ತದೆ. ಮುಂದಿನ್ ವರ್ಸ್ವೇ ನಮ್ಮೂರ್ ಶಾಲೀಗ್ ಹೋಯ್ತಾನೆ. ಲಕ್ಕಯ್ಯ ಮೇಷ್ಟ್ರು ಸಿಕ್ನಾಗೆಲ್ಲಾ ಹೇಳ್ತಾರೆ 'ಕಿಟ್ಟಿ ಅಯ್ನೋರ್ ಹುಡುಗ್ರಂಗೆ ಓದಿ ಮುಂದ್ಕ ಬತ್ತಾನೆ' ಅಂತ. ಕಿಟ್ಟಿ ಕಾಲ್ವೆ ಹಾಳ್ನಾಗಿನ ಎತ್ತಿನ ಗಾಡಿ ದಾರ್ಯಾಗಿನ ಮಣ್ಣ ಕಾಲ್ನಲ್ಲೇ ಒದ್ಗೊಂಡ್ ದೂಳೆಬ್ಸ್ಕೊಂಡ್ ಓಡ್ತಿದ್ದ, ಸೇತ್ವೆ ಕಡೀಗೆ. ನಾನಂತೂ ಕೂಗಿ ಕೂಗಿ ಸಾಕಾಯ್ತು. ಎಷ್ಟ್ ಕೂಕ್ಕೊಂಡ್ರೂ ಕಾಲ್ವೆ ಸೇತ್ವೆ ಕಟ್ಟೆ ಮ್ಯಾಗೆ ಬಗ್ ನೋಡ್ತಾ ಅವ್ನೆ. ನನ್ಗೋ ಜೀವಾನೆ ಓದಂಗಾಯ್ತು. ಓಡೋಗಿ ಹಿಡ್ಕೊಂಡೆ ನಮ್ ಕಿಟ್ಟೀನ. ಕಾಲ್ವೆ ದಾಟಿ ಎಡಕ್ ತಿರ್ಗಿ ತೋಟದ್ಕಡೆ ನೋಡಿದ್ರೆ ಕಣದಾಗೆ ನನ್ ಮಗ ಮಂಚ ಕೂತ್ಕೊಂಡು ಎಲ್ಲರ್ ಜೊತೇಲಿ ಬೀಡಿ ಸೇದ್ತಿದ್ದ. ದೂರ್ದಾಗೆ ಅಪ್ಪನ್ ಕಂಡು ಕುಯ್ದ್ ಗದ್ದೆ ಹಾಯ್ಕೊಂಡ್ ಹೋಗಾಕ್ ಓಡ್ತಿದ್ದ ಕಿಟ್ಟಿ. ಅದೂ ಭತ್ತದ ಕೂಳ್ ಒದ್ಗೊಂಡ್ ಹೋಯ್ತಾ ಇದ್ದ. ಒದ್ದಾಗೆಲ್ಲ ಅದ್ರೊಳ್ಗಿನ ನೀರ್ ಪುಳ್ ಅಂತ ಹಾರ್ತಾ ಇತ್ತು. ನಾನ್ ಎಷ್ಟ್ ಹೇಳಿದ್ರೂ ಮಕ್ಕಳ್ಗೆ ಆ ತರ ನೀರ್ ಹಾರಸ್ಕೊಳ್ಳೋಕೆ ಬಾಳ ಇಷ್ಟ. ರಾತ್ರಿ ಮಂಜಿನ್ ನೀರು ಭತ್ತದ ಕೂಳ್ನ ಮಧ್ಯದಾಗೆ ತುಂಬ್ಕೊಂಡ್ ಇರ್ತದೆ. ಆ ನೀರ್ ಕಾಲಿಂದ ಮುಕ್ದ್ರೂ ಒಳ್ಳೇ ತುಂತರ್ ಮಳೆ ಬಂದಾಗ್ ಆಯ್ತದೆ. ಆದ್ರೆ ಈ ನೀರ್ನಿಂದ ಕಾಲೆಲ್ಲಾ ಒಡೀತದೆ. ಅದ್ಕೆ ನಮ್ಮೂರಿನ್ ಮಕ್ಳೆಲ್ಲಾ ಕಾಲ್ ಒಡಸ್ಕೊಂಡವ್ರೆ. ಹಂಗೇ ಕಾಲ್ನಲ್ಲಿ ಭತ್ತದ ಕೂಳ್ ಒದ್ಕೊಂಡ್ ಹೋಯ್ತನೇ ಇದ್ದ. ನಾನು ಕಾಲ್ವೆ ಏರಿ ಮ್ಯಾಗೆ ಹೋಯ್ತಾ ಇದ್ದೆ. ಒಂದ್ಕಡೆ

ಕಾಲ್ವೆ. ಒಂದ್ಕಡೆ ಗದ್ದೆ. ಗದ್ದೆ ಕುಯ್ಸಿಲ್ಲಾ ಕುಯ್ದು ಹಜಾಮಂಗೆ ತಲೆ ಕೊಟ್ಟಂಗಿತ್ತು. ಇದರ ಮಧ್ಯದಾಗೆ ಸ್ವಾಮಪ್ಪನೋರ್ ಕಡೀನ್ ಗದ್ದೆ ಮಾತ್ರ ಕುಯ್ದಿರ್ಲಿಲ್ಲ. ಎಲ್ರೂ ರಾಜಾಮಣಿ ಭತ್ತ ಹಾಕಿದ್ರೆ, ಸ್ವಾಮಪ್ಪನೋರ್ ಯಾವಾಗ್ಲೂ ಹಂಗೆ ಹೊಸ ಹೊಸ ತರ ಭತ್ತ ತಂದ್ ಹಾಕ್ತಾರೆ. ಅದ್ಕೆ ಅವ್ರ ಕಣಜ ವರ್ಸ್ವೆಲ್ಲಾ ತುಂಬಿರ್ತಿತ್ತು. ಹಂಗೆ ಊರ್ನಾಗೆ ಹೊಸ ಹೊಸ ಬೆಳೆ ಬೆಳ್ಸೋರು ಅಂದ್ರೆ ವಾಸಪ್ನೋರು. ಈ ವರ್ಸ್ವ ಅವ್ರು ಅವ್ರ ಕಡೀನ್ ಗದ್ಯಾಗೆ ಕಬ್ ಹಾಕ್ಸಿದ್ರು. ಮರಳ್ ಗದ್ದೆ ಕೆಳ್ಗೇ ಕಡೀನ್ ಗದ್ದೆ. ಕಬ್ಬೂ ಕುಯ್ದಿದ್ರು. ಕಬ್ಬಿನ ಆಲೆಮನೆ ಪಕ್ಕದ ಊರು ಒಡ್ಡರಳ್ಳಿ ಅಣ್ಣಯ್ಯನೋರ್ ಹೊಲದಲ್ಲಿ ಹಾಕಿದ್ರು. ಆಲೆಮನೆ ವಾಸಪ್ನೋರು ಮತ್ತು ಒಡ್ಡರಳ್ಳಿ ಅಣ್ಣಯ್ನೋರು ಒಟ್ಗೇ ಹಾಕ್ಸಿದ್ರು. ಯಾಕಂದ್ರೆ ಅಣ್ಣಯ್ನೋರು ಕೆರೆ ಕೆಳ್ಗಿನ ಹೊಲ್ಕೆಲ್ಲಾ ಕಬ್ ಹಾಕ್ಸಿದ್ರು. ಅಣ್ಣಯ್ನೋರ್ ಒಂದ್ ಲಾರಿ ಇಟ್ಕೊಂಡಿದ್ರು. ಸುತ್ತಮುತ್ಲ ಕಲ್ಲೊಡ್ಸೋಕೆ, ಮಣ್ ಹೊರೋಕೆ ಅದೇ ಲಾರಿ ಬತ್ತಿತ್ತು. ಅಣ್ಣಯ್ನೋರ್ ಮನೆ ಟ್ರಾಕ್ಟ್ರು ಲಾರಿ ಎಡ್ರೂನ ನಮ್ಮೂರ್ ಬೋರೇಗೌಡರ ಮಗ ತಮ್ಮಯ್ಯನೇ ಓಡಿಸ್ತಿದ್ದ. ನಾನೂ ಏರಿಮ್ಯಾಗೆ ನಡ್ಕೊಂಡ್ ಹೋಯ್ತಿದ್ದೆ. ನನ್ನ ಮನಸ್ಸೆಲ್ಲಾ ನನ್ನ ಕಿಟ್ಟಿ ಮೇಲೇ ಇತ್ತು. ಕಾಲ್ವೇ ಏರೀನೂ ಬಾಳ ಚಿಕ್ದಾಗೆ ಇತ್ತು. ನಾನ್ ಮುಂದ್ಕೆ ನಡ್ಕೊಂಡ್ ಹೋಯ್ತಾ ಇದ್ರು ನನ್ನ ಕಣ್ಣೆಲ್ಲಾ ನನ್ನ ಮೊಮ್ಮಗ ಕಿಟ್ಟಿ ಮೇಲೆ ಇತ್ತು. ಒಂದೇ ಸಾರಿಗೆ ಗಾಳಿ ತಳ್ದಂಗಾಯ್ತು. ತಿರ್ಗ್ ನೋಡೋ ಅಷ್ಟರಲ್ಲಿ ನಾನು ನೀರಿಲ್ಲದ್ ಕಾಲ್ವೇಲ್ ಬಿದ್ದಿದ್ದೆ. ಕಡೇ ಗಳ್ಗೇದು ಅಷ್ಟೇ ನನಗ್ ಜ್ಞಾಪ್ತಿ' ಇದು ಹತ್ತು ವರ್ಷದ ಪುಟಾಣಿ ಕೃಷ್ಣ ಹೇಳಿದ ಮಾತಿದು.

ಇದ್ದದ್ದು ಪರದೇಶ. ಅದು ಮುಸಲ್ಮಾನರ ದೇಶ. ಅದರಲ್ಲೂ ಸೌದಿ. ಸೌದಿ ಅಂದರೆ ಮುಸ್ಲಿಮರಿಗೆ ತೌರುಮನೆ ಇದ್ದ ಹಾಗೆ. ಅಂತ ಮುಸ್ಲಿಮರ ಮುಂದೆ ಹೋಗಿ ವೆಂಕಟೇಶ್‌ಪ್ರಸಾದ್ ಏನಾದರೂ ಪೂರ್ವಜನ್ಮದ ಬಗ್ಗೆ ಹೇಳಿಕೊಂಡರೆ ಕೇಳುತ್ತಾರೆಯೇ? ಒಳ್ಳೆ ಸಂಕಷ್ಟಕ್ಕೆ ಸಿಕ್ಕಿ ಹಾಕಿಕೊಂಡಿದ್ದ ವೆಂಕಟೇಶ. ಹೆಂಡತಿ ಮೀರಾ ಅಂತೂ ಒಂದು ತಿಂಗಳಾಯ್ತು ಮಗ ಕೃಷ್ಣನ್ನ ಮುಂದೇನೇ ಕೂತ್ಕೊಂಡು ಅವನನ್ನ ನೋಡ್ಕೊಳ್ಳೋದ್ರಲ್ಲೆ ಆಯ್ತು. ವಿಷಯಾನ ಗೊಬ್ಬಳೀಲಿರೋ ಅಪ್ಪ ಅಮ್ಮಂಗೂ ತಿಳಿಸೋ ಧೈರ್ಯ ಇರಲಿಲ್ಲ ವೆಂಕಟೇಶಂಗೆ. ದಾರೀನೇ ತೋಚದಾಗಿದೆ ಪಾಪ ಈ ದಂಪತಿಗಳಿಗೆ. ವೀಕ್ ಎಂಡ್ ಅಂದ್ರೆ ಸಾಕು ಮನೆ ಯಾವಾಗಲೂ ಸ್ನೇಹಿತರು ತುಂಬಿ ತುಳ್ಕಾಡ್ತಾ ಇರ್ತಿತ್ತು. ಅವರ್ಗೆಲ್ಲಾ ಆಶ್ಚರ್ಯ ಆಗೋ ರೀತೀಲಿ, ಯಾವಾಗ ಮಗ ಕೃಷ್ಣ ಪೂರ್ವಜನ್ಮದ ಬಗ್ಗೆ ಮಾತ್ನಾಡೋಕೆ ಶುರುಮಾಡಿದಾನೋ ಆವತ್ನಿಂದ ಸ್ನೇಹಿತರ್ಗೆ ಕಣ್ಮರೆ ಆಗಿದಾನೆ. ದಿನವೆಲ್ಲಾ ದಂಪತಿಗಳು ಮಗನ್ನ ನೋಡ್ಕೊಳ್ಳೋದ್ರಲ್ಲೇ ಆಯ್ತು. ಹೆಂಡತಿಗೆ ಸಮಧಾನ ಮಾಡೋಕೆ ವೆಂಕಟೇಶ ಇದ್ದ. ಗಂಡಗೆ ಧೈರ್ಯ ಹೇಳುಕ್ಕೆ ಮೀರ ಇದ್ಲು. ಹಿಂದಿನ ಜನ್ಮದ ಕಥೆ ಕೇಳಿದ್ರು, ಆದರೆ ಅವರ ಮನೇಲೆ ಇಂತಹ ಘಟನೆ ನೆಡೆಯುತ್ತೆ ಅಂತ ಎಂದಿಗೂ ಎಣಿಸಿರಲಿಲ್ಲ.

ಜ್ಯೋತಿಷಿಗಾರರ ಮೊರೆಯನ್ನು ಹೊಕ್ಕೋಣ ಎಂದರೆ ಸೌದಿ ಅರೇಬಿಯದಲ್ಲಿ ಯಾರು ಸಿಕ್ತಾರೆ. ಜೆಡ್ಡಾದಲ್ಲಿರುವ ಮಾನಸಿಕ ಆಸ್ಪತ್ರೆಗೂ ಅಲೆದಾಡಿ ಬಂದ ವೆಂಕಟೇಶ. ಡಾಕ್ಟರ್‌ಗೆ ವಿಷಯ ತಿಳಿಸುವುದಕ್ಕೆ ಕಷ್ಟವಾಗುತ್ತಿತ್ತು. ಆದರೂ ಸಿಕ್ಕ ಒಬ್ಬರೇ ಬೆಂಗಾಲಿ ಡಾಕ್ಟರ್ ಜೊತೆಯಲ್ಲಿ ವಿಷಯವನ್ನೆಲ್ಲಾ ವಿವರಿಸಿದ್ದ. ಸೌದಿ ಅರೇಬಿಯಾದಲ್ಲಿ ಡಾಕ್ಟರ್‌ಗಳು ಈಜಿಪ್ಟ್‌ನಿಂದ ಬಂದವರು, ಇಲ್ಲ ಅಂದರೆ ಏಷಿಯಾದವರೇ ಹೆಚ್ಚು. ಬಹುಭಾಗ ಎಲ್ಲ ಮುಸ್ಲಿಮ್ ಡಾಕ್ಟರ್‌ಗಳು. ಇಸ್ಲಾಮ್ ಧರ್ಮದ ಪ್ರಕಾರ ಎರಡನೆಯ ಜನ್ಮವೇ ಇಲ್ಲ. ಅಂತಹ ಡಾಕ್ಟರ್‌ಗಳ ಬಳಿ ಈ ವಿಷಯದ ಬಗ್ಗೆ ತಿಳಿಸುವುದೇ ಗೊತ್ತಾಗಲಿಲ್ಲ ವೆಂಕಟೇಶ್‌ಗೆ. ಬೆಂಗಾಲಿ ಮುಸ್ಲಿಮ್ ಡಾಕ್ಟರ್ ಕಲ್ಕತ್ತಾ ನಗರದವರು. ಅವರು 'ಇಂತಹ ಪ್ರಸಂಗಗಳು ಬಹಳಷ್ಟು ಇಂಡಿಯಾದಲ್ಲಿ ಕೇಳಿದ್ದೇನೆ. ಅದು ನರ ದೌರ್ಬಲ್ಯದಿಂದ ಆಗುತ್ತೆ. ನಿಮಗೆ ನನ್ನ ಸಲಹೆ ಏನೆಂದರೆ ಬಾಂಬೆಗೆ ಹೋಗಿ ಅಲ್ಲಿ ಟ್ರೀಟ್‌ಮೆಂಟ್ ಮಾಡ್ಸೋದು ಒಳ್ಳೆಯದು' ಎಂದು ಸಲಹೆ ಕೊಟ್ಟಿದ್ದರು.

ಎಷ್ಟೇ ಆದರೂ ಮನುಷ್ಯಜೀವ. ಎಷ್ಟು ದಿವಸಾ ಅಂತ ಗುಟ್ಟಾಗಿ ಇಟ್ಕೊಳ್ಳೋಕ್ಕೆ ಆಗುತ್ತೆ, ಕಂಡಿಲ್ಲದ ಊರಲ್ಲಿ ತುಂಬಾ ಜನ ಸ್ನೇಹಿತರಿದ್ದರೂ, ಕನ್ನಡದೋರು ಅಂತ ಇದ್ದೋರು ಇದ್ದಿದ್ದೇ ಸ್ವಲ್ಪ. ಅದರಲ್ಲೂ ತುಂಬಾ ಹತ್ತಿರದೋರು ಅಂದ್ರೆ ನಾಗರಾಜ್. ಅವರು ಸೌದಿ ಅರೇಬಿಯಾದ ಜೆಡ್ಡಾದಲ್ಲಿ ಒಬ್ಬರೇ ಇದ್ದರು. ಅವರ ಹೆಂಡತೀನ ಮಕ್ಕಳ ವಿದ್ಯಾಭ್ಯಾಸಕ್ಕೋಸ್ಕರ ಬೆಂಗಳೂರಿಗೆ ಕಳುಹಿಸಿದ್ದರು. ನಾಗರಾಜ್ ಫೋರ್ಸ್ಡ್ ಬ್ಯಾಚುಲರ್. ಇಸ್ಪೀಟಿನ ಏಳಾಟದ ನಿಪುಣ ನಾಗರಾಜ್‌ನನ್ನು ಕಾರ್ಡ್ಸ್ ಆಡುವ ನೆಪದಲ್ಲಿ ಮನೆಗೆ ಕರೆದು ಯಾರ ಎದುರಿಗೂ ಹೇಳಿಕೊಳ್ಳೋಕ್ಕೆ ಆಗದೇ ಇದ್ದಿದ್ದ ವಿಚಾರನ ಅವರ ಹತ್ತಿರ ಹೇಳ್ಕೊಂಡ ವೆಂಕಟೇಶ. ನಾಗರಾಜ್‌ಗೆ ಇಂತಹ ಘಟನೆಗಳನ್ನ ಕೇಳಿದ್ದರು. ಯಾಕೆ ಅಂದ್ರೆ ಅವರು ಇಂಡಿಯಾದಲ್ಲಿ ಕೆಲಸ ಮಾಡುತ್ತಿದ್ದ ಕಂಪನಿಯಲ್ಲಿ ವರ್ಕ್ಸ್ ಮ್ಯಾನೇಜರ್ ಆಗಿದ್ದರು. ಬಹಳಷ್ಟು ಕೆಲಸಗಾರರು ಅವರ ಕೈಕೆಳಗೆ ಕೆಲಸ ಮಾಡುತ್ತಿದ್ದರು. 'ಯಾವಾಗ ಯಾವಾಗ ಹೀಗೆ ಮಾತನಾಡ್ತಾನೆ?' ಅಂತ ನಾಗರಾಜ್ ಕೇಳಿದರು. 'ಹೀಗೆ ಅಂತ ಹೇಳೋಕ್ಕೆ ಆಗೋಲ್ಲ ಸಾರ್. ದಿನಕ್ಕೆ ಒಂದ್ಸಾರಿ ಆದ್ರೂ ಆ ಸ್ಥಿತೀಗೆ ಹೋಗ್ತಾನೆ. ಜಾಸ್ತಿ ಹೊತ್ತು ಆ ರೀತಿ ಇರೋಲ್ಲ. ಸ್ವಲ್ಪ ಹೊತ್ತಾದ ಮೇಲೆ, ಮತ್ತೆ ಮಾಮೂಲಿ ತರಾನೆ ಮಾತಾಡ್ತಾನೆ. ಆವಾಗ ಅವನಿಗೆ ಇದಕ್ಕೆ ಮುಂಚೆ ಏನು ಮಾತಾಡಿದೆ ? ಅಂದ್ರೆ ಗೊತ್ತೇ ಇಲ್ಲ ಅಂತಾನೆ. ಅವನು ಆ ಸ್ಥಿತಿಗೆ ಬಂದಾಗ ಅವನು ಮಾತಾಡೋ ಹಳ್ಳಿಭಾಷೆ ಕೇಳಿಸ್ಕೋಬೇಕು, ನೀವು ನಂಬೋಕಾಗೋಲ್ಲ'. ಅಂದ ವೆಂಕಟೇಶ.

ಈ ರೀತಿ ಸಂಭಾಷಣೆ ಮಾಡ್ತಿರೊವಾಗ್ಲೇ ಬೆಡ್‌ರೂಮಿನಿಂದ ಬಂದ ಶಬ್ದ ಕೇಳಿ ಮೀರಾ 'ರೀ.... ಕೃಷ್ಣ ಎದ್ದ'. ಅಂತ ಹೇಳಿ ರೂಮಿನೊಳಗೆ ಹೋಗಿ 'ಬನ್ನಿ ವೆಂಕಟೇಶ್,

ಕೃಷ್ಣ ಪೂರ್ವಜನ್ಮದ ಬಗ್ಗೆ ಮಾತಾಡ್ತಾ ಇದಾನೆ' ಎಂದು ಮೀರ ರೂಮಿನಿಂದ ಅರಿಚಿಕೊಂಡಳು. ವೆಂಕಟೇಶ್ ಮತ್ತು ನಾಗರಾಜ್ ಇಬ್ಬರೂ ಓಡಿದರು. ಕೃಷ್ಣ ಹಿಂದಿನಜನ್ಮದ ಸ್ಥಿತಿಗೆ ಹೋಗಿದ್ದ. 'ನಾನ್ಯಾಕ್ ಇಲ್ಲಿವ್ನಿ. ನಮ್ಮ ಕಿಟ್ಟಿ ಎಲ್ಲವ್ನೆ? ನೀವೆಲ್ಲಾ ಯಾರ್ಬುದ್ಧಿ? ಇದು ಯಾವೂರು? ಯಾರ್ಮನಿ?' ನಾಗರಾಜ್‌ಗೆ ಆಶ್ಚರ್ಯ. ಅದು ಹ್ಯಾಗೆ ಹಳ್ಳಿ ಭಾಷೆ ಮಾತ್ನಾಡ್ತಾನೆ ಅಂತ. ಅವನನ್ನು ಮಾತನಾಡಿಸಲು ಹೆದರಿಕೆ ಆಯಿತು. ಆದರೂ ಸ್ವಲ್ಪ ಧೈರ್ಯ ಮಾಡಿ ಹುಡುಗನನ್ನ ಪ್ರಶ್ನೆ ಮಾಡೋಕೆ ಶುರು ಮಾಡಿದರು ನಾಗರಾಜ್ 'ಅದ್ಸರಿ. ನಿಂದ್ಯಾವೂರು? ನಿನ್ನ ಹೆಸರೇನು?' 'ನನ್ನೂರ್ ಮತ್ತಿಗೋಡು. ನನ್ನ ಎಸರು ಪಾಪ ಅಂತ ಬುದ್ಧಿ. ನಂಗೆ ಎಲ್ಡು ಮಕ್ಳು. ಮಂಚ, ರಾಜ ಅಂತ. ಮಂಚಂಗೆ ಒಬ್ಬ ಮಗ ಕಿಟ್ಟೀ ಅಂತ ಅವ್ನೆ.' 'ನಿಮ್ಮೂರ್ ಯಾವೂರ್ ಹತ್ತಿರ ಇದೆ' 'ನಮ್ಮೂರ್ನಾಗೆ ಕಾವೇರಿ ನದಿ ಹರೀತೈತೆ ಬುದ್ಧಿ. ಪಕ್ಕದ ಊರು ರಾಮ್ನಾತ್‌ಪುರಾಂತ. ಅಲ್ಲಿ ಕಾರ್ತಿಕ್‌ಮಾಸದಾಗೆ ನಡೆಯೋ ಜಾತ್ರೆ ಪಾತ್ರ ಜೋರಿರ್ತಿತ್ತು ನೋಡಿ. ವಾಸಪ್ನೋರು ವರ್ಸ ವರ್ಸವೂ ಎತ್ ಕಟ್ತೋರು. ನಾನೇ ಜಾತ್ರೆ ಮಳ್ದಾಗೆ ಎತ್ತಗಳನ್ನ ನೋಡ್ಕೋತಿದ್ದೆ'.

ರಾಮನಾಥಪುರ ಊರಿನ ಹೆಸರನ್ನು ಎಲ್ಲೋ ಕೇಳಿದ ಹಾಗಿದೆ ವೆಂಕಟೇಶಂಗೆ. ತಕ್ಷಣಕ್ಕೆ ಜ್ಞಾಪಕಕ್ಕೆ ಬರ್ತಾ ಇಲ್ಲ. 'ರಾಮ್ನಾತ್ಪುರ ಎಲ್ಲಿದೆ?' ಅಂತ ನಾಗರಾಜ್ ತಮ್ಮ ಪ್ರಶ್ನೆಗಳನ್ನ ಮುಂದುವರಿಸಿದ್ದರು. 'ಅದೇ ಬುದ್ಧಿ ನಮ್ಮೂರ್ನ ಮೂಡ್ಲಕ್ಕೆ ಕಾಡ್ಗೋಗೋ ದಾರೀಲ್ ಸಿಕ್ತದೆ'. ಅಂತ ಹೇಳಿ ಮತ್ತೆ ಹಾಸಿಗೆ ಮೇಲೆ ಮಲಕ್ಕೊಂಡ ಕೃಷ್ಣ. ಮೀರಾ ಮತ್ತೆ ಹೊದ್ದಿಗೆ ಹೊದ್ಸಿ ಮಲಗಿಸಿದಳು. ನಾಗರಾಜ್‌ಗೆ ಆಶ್ಚರ್ಯ ತಂದಿದ್ರೂ ಗಂಭೀರವಾಗಿ ಎದ್ದು ಬಂದು ಹಾಲ್‌ನಲ್ಲಿ ಕುಳತ್ಕೊಂಡ್ರು. ವೆಂಕಟೇಶ ಮತ್ತು ಮೀರಾನೂ ಜೊತೇಲಿ ಬಂದ್ರು. ಎಲ್ಲರೂ ಮುಖದಲ್ಲೂ ಮೌನ. 'ವೆಂಕಟೇಶ್, ನಾನೊಂದು ಹೇಳ್ತೀನಿ ಕೇಳ್ತೀರಾ?' ಅಂತ ನಾಗರಾಜೇ ಮೌನ ಮುರಿದರು. 'ಈ ತರ ನಮ್ಮ ಹಳ್ಳೀಲಿ ಆಗೋದನ್ನ ಕೇಳಿದೀನಿ? ಆದ್ರೆ ನಿಮಗೆ ಗೊತ್ತಿಲ್ಲದೇ ಇರೋ ಊರು ಅಂದ್ರೆ ನಂಬೋಕೆ ಆಗ್ತಿಲ್ಲ' 'ರಾಮನಾಥಪುರ ಅಂತ ಎಲ್ಲೋ ಕೇಳಿದೀನಿ? ಆದ್ರೆ ಅದು ಹ್ಯಾಗೆ ಬಂತು, ಎಲ್ಲಿದೆ ಅಂತ ಗೊತ್ತಿಲ್ಲ. ಮೀರ ನಿಂಗೇನಾದ್ರೂ ಜ್ಞಾಪಕಕ್ಕೆ ಬರ್ತಾ ಇದ್ಯಾ?' 'ನನಗೂ ಎಲ್ಲೋ ಕೇಳಿದ ಹಾಗೆ ಇದೆ. ನನಗೆ ಇನ್ನೇನು ಜ್ಞಾಪಕಕ್ಕೆ ಬರ್ತಾ ಇಲ್ಲ'. ಎಂದಳು ಮೀರಾ. 'ನಿಮ್ಮ ಅಪ್ಪ ಅಮ್ಮನಿಗೆ ವಿಷಯ ತಿಳಿಸಿದೀರ?' ಎಂದು ಕೇಳಿದರು ನಾಗರಾಜ್. 'ಇಬ್ಬರ ಮನೇಲೂ ತಿಳಿಸಿಲ್ಲ. ಎಲ್ಲಿ ಗಾಬರಿ ಆಗ್ತಾರೋ ಅಂತ'. ವೆಂಕಟೇಶ ತಿಳಿಸಿದ. 'ನನ್ನ ಅಭಿಪ್ರಾಯದ ಪ್ರಕಾರ ನಿಮ್ಮ ಅಪ್ಪನಿಗೆ ತಿಳಿಸೋದು ವಾಸಿ. ಯಾಕೆ ಅಂದ್ರೆ, ನಿಮ್ಮ ಅಪ್ಪ, ಅಮ್ಮ ಗೊಬ್ಬಳೀಲಿ ಇದಾರಲ್ವಾ?' ಹೌದೆಂಬಂತೆ ತಲೆಯಾಡಿಸಿದ ವೆಂಕಟೇಶ. 'ಗೊಬ್ಬಳಿ ಸುಬ್ರಮಣ್ಯ ದೇವಸ್ಥಾನದ ಪೂಜಾರಿ ಲಕ್ಷ್ಮಿನಾರಾಯಣ ಶಾಸ್ತ್ರಿಗಳು ಒಳ್ಳೆ ಶಾಸ್ತ್ರ ನೋಡ್ತಾರೆ. ಅದೂ ಅಲ್ಲದೇ ಈ ಮಾಟ ಮಂತ್ರ ಮಾಡಿಸಿದವರಿಗೆ ಪರಿಹಾರ ಬೇರೆ ಹೇಳ್ತಿರ್ತಾರೆ. ಅವರಿಗೆ

ಒಂದು ಸಾರಿ ತೋರ್ಸೋದು ವಾಸಿ'. 'ನಾಗರಾಜ್ ಇದರ್ಲೆಲ್ಲಾ ನಂಬಿಕೆ ಇದೆಯಾ ನಿಮಗೆ? ನಿಜವಾಗಲೂ ಏನಾದ್ರೂ ಆಗಿದೆ ಅಂತೀರ?' ಈ ಮಾಟ ಮಂತ್ರದಲ್ಲಿ ಒಂದಿಷ್ಟೂ ನಂಬಿಕೆ ಇಲ್ಲದ ವೆಂಕಟೇಶ ಆಶ್ಚರ್ಯವಾಗಿ ಕೇಳಿದ್ದ ನಾಗರಾಜ್‌ರನ್ನು. 'ಅಲ್ಲ ವೆಂಕಟೇಶ್, ಈಗ ಡಾಕ್ಟರ್‌ಗೆಲ್ಲಾ ತೋರ್ಸಾಯ್ತು. ನೀವು ಬಾಂಬೆಗೆ ಹೋಗೋ ಮುಂಚೆ ಒಂದ್ಸಾರಿ ಊರ್ಗೆ ಹೋಗ್ಬಿಟ್ಟು ತೋರಿಸ್ಕೊಂಡು ಹೋದ್ರೆ ಏನು ನಷ್ಟ ಇಲ್ವಲ್ಲ'. ಅಂದ್ರು ನಾಗರಾಜ್. ವೆಂಕಟೇಶನಿಗೆ ಇದರಲ್ಲೆಲ್ಲಾ ನಂಬಿಕೆ ಇಲ್ಲದಿದ್ದರೂ, ತನ್ನ ಮಗ ಆಡುತ್ತಿರುವುದನ್ನು ನೋಡಿ ಇದರ್ಲೆಲ್ಲಾ ನಂಬಿಕೆ ಬರುವ ಹಾಗೆ ಆಗಿದೆ. ನಾಗರಾಜ್ ಹೇಳುವ ಮಾತಿನಲ್ಲಿ ಅರ್ಥವಿದೆ ಎನ್ನುವ ನಿರ್ಧಾರಕ್ಕೆ ಬಂದರೂ ಒಮ್ಮೆಗೆ ಒಪ್ಪಿಕೊಳ್ಳಲಿಲ್ಲ. 'ನಾಗರಾಜ್ ನಾನು ಇನ್ನೊಂದು ಯೋಚನೆ ಮಾಡ್ತಾ ಇದೀನಿ. ಆ ಊರು ಯಾವುದು ಅಂತ ತಿಳ್ಕೊಂಡು, ಅಲ್ಲಿಗೇ ಯಾಕೆ ಹೋಗಿ ಇದು ನಿಜಾನೋ ಇಲ್ವೋ ಅಂತ ತಿಳ್ಕೋಬಾರದು' ಅಂತ ತನ್ನ ತಲೆಯಲ್ಲಿರೋದನ್ನ ಹೇಳ್ಕೊಂಡ ವೆಂಕಟೇಶ. 'ಅದರಲ್ಲೂ ಏನು ತಪ್ಪಿಲ್ಲ. ಇವಾಗ ಇಂಡಿಯಾಗೆ ಯಾವಾಗ ಬುಕ್ ಮಾಡಿದೀರಾ? ನಾನು ಮುಂದಿನ ವಾರ ಹೋಗ್ತಾ ಇದೀನಿ. ನೀವು ಹೋದಾಗ ನಾನು ಅಲ್ಲಿದ್ರೆ. ನಾನು ಬೇಕಾದರೆ ನಿಮ್ಮ ಜೊತೆ ಬರ್ತೀನಿ. ಎಷ್ಟೇ ಆದರೂ ಜೊತೇಗೆ ಗುರುತು ಪರಿಚಯ ಇರೋರು ಇದ್ರೆ ಒಳ್ಳೇದೆ' 'ಅಯ್ಯೋ ನಾವೂ ಮುಂದಿನ ವಾರವೇ ಹೊರಟಿರೋದು. ನೀವು ಒಳ್ಳೆ ದೇವರು ಬಂದ ಹಾಗೆ ಬಂದ್ರಿ. ನಮಗೂ ಒಳ್ಳೇದು ಆಗುತ್ತೆ. ಸರಿ ಹಾಗಾದ್ರೆ ಆ ಊರಿನ ಬಗ್ಗೆ ಬೆಂಗಳೂರಿಗೆ ಫ್ಲೋನ್ ಮಾಡಿ ತಿಳ್ಕೊಳ್ಳೋಣ'. ಅಂತ ಮುಂದಿನ ಯೋಜನೆಯನ್ನು ತಯಾರು ಮಾಡಿದ್ದರು ನಾಗರಾಜ್ ಮತ್ತು ವೆಂಕಟೇಶ್.

ನಾಗರಾಜ್ ಕೂಲ್‌ಡ್ರಿಂಕ್ಸ್ ಫ್ಯಾಕ್ಟರಿ ಮ್ಯಾನೇಜರ್. ಅವರಂತೂ ಕೆಲಸಗಾರರನ್ನೆಲ್ಲಾ ಬೆಂಗಳೂರಿನಿಂದಾನೆ ಕರ್ಕೊಂಡು ಬಂದಿರೋದು. ಅಲ್ಲಿ ಯಾರಿಗಾದರು ಒಬ್ಬನಿಗೆ ಈ ಊರಿನ ಬಗ್ಗೆ ಗೊತ್ತಿರಲೇಬೇಕು ಅನ್ನೋ ಖಾತರಿ ನಾಗರಾಜ್‌ಗೆ. ಎಲ್ಲರಿಗೂ ವಿಷಯ ಹಬ್ಬಿಸಿದ್ದರು 'ಕರ್ನಾಟಕದಲ್ಲಿರೋ ರಾಮನಾಥಪುರ ಯಾರಿಗೆ ಗೊತ್ತು?' ಅಂತ. ಇಬ್ಬರು ಬಂದು ತಮಿಳುನಾಡಿನ ರಾಮನಾಥಪುರದ ಬಗ್ಗೆ ಹೇಳಿದ್ದರೂ, ಕಡೇಗೆ ಒಬ್ಬ ಬಂದು 'ಸಾರ್ ರಾಮನಾಥಪುರ ನಮ್ಮೂರಿನ ಪಕ್ಕದಾಗೆ ಅಯ್ತೆ. ನಮ್ಮೂರು ಕೋಣನೂರು' ಅಂದ. ನಾಗರಾಜ್‌ಗೆ ಖುಷಿಯಾಯ್ತು. ತಕ್ಷಣ ಅವನ ಹತ್ತಿರ ರಾಮನಾಥಪುರದ ಬಗ್ಗೆ, ಮತ್ತಿಗೋಡಿನ ಬಗ್ಗೆ ಎಲ್ಲಾ ತಿಳಿದುಕೊಂಡು ವೆಂಕಟೇಶ್‌ಗೆ ಫ್ಲೋನ್ ಮಾಡಿದ್ದರು 'ವೆಂಕಟೇಶ್ ಏನು ಯೋಚನೆ ಮಾಡ್ಬೇಡಿ. ಮುಂದಿನ ವಾರದ ಬುಕ್ಕಿಂಗ್ ಎಲ್ಲಾ ಹಾಗೆ ಇರಲಿ. ನಾನು ಜೊತೇಲಿ ಬರ್ತೀನಿ. ಹೋಗೋಣ'.

ಜೀವನದ ಬಹಳ ಕಷ್ಟ ಸುಖಗಳ ಅನುಭವದ ವ್ಯಕ್ತಿ ನಾಗರಾಜ್ ಮನಸ್ಸಿನ ತೊಳಲಾಟದಲ್ಲಿದ್ದ ದಂಪತಿಗಳಿಗೆ ಕೊಟ್ಟ ಸಲಹೆ ಹಿಡಿಸಿತ್ತು, ದುಃಖತಪ್ತ ದಂಪತಿಗಳಿಗೆ.

ಅವರ ಸಲಹೆಯಂತೆ ವೆಂಕಟೇಶ್ ಅಪ್ಪ, ಅಮ್ಮನಿಗೆ ವಿಷಯ ತಿಳಿಸೋದು, ಕೃಷ್ಣ ಹೇಳುತ್ತಿರೋ ಊರನ್ನು ಹುಡುಕಿಕೊಂಡು ಹೋಗುವುದು. ಕೃಷ್ಣ ಹೇಳುತ್ತಿರೋ ಮನುಷ್ಯ ಇದ್ದಾನೋ, ಇಲ್ಲವೋ ಅನ್ನೋದನ್ನು ತಿಳಿದುಕೊಳ್ಳಬೇಕು. ಈ ಸ್ಥಿತಿಯ ಮೂಲ ಗೊತ್ತಾದರೆ, ನಂತರ ಶಾಕ್ ಟ್ರೀಟ್‌ಮೆಂಟ್ ಮಾಡಿಸಬಹುದು ಎಂಬುದೇ ನಾಗರಾಜ್ ಸಲಹೆ. ಅದಕ್ಕೆ ನಾಗರಾಜ್ ಸಹ ಜೊತೆಯಲ್ಲಿ ಬರುತ್ತೇನೆ ಅಂದಿದ್ದು, ಪ್ರಸಾದ್ ದಂಪತಿಗಳಿಗೆ ಸ್ವಲ್ಪ ಧೈರ್ಯ ಬಂದಿತ್ತು.

ಬೆಳಗಿನ ಮಂಜು ಇನ್ನು ಕವಿದೇ ಇತ್ತು. ಪ್ರಯಾಣ ಮೂರು ಘಂಟೆಗಳಿಗೂ ಹೆಚ್ಚು. ಅದೂ ರಸ್ತೆ ಯಾವ ತರಹ ಇದೆ ಎನ್ನುವುದೇ ಅಷ್ಟಾಗಿ ಗೊತ್ತಿಲ್ಲ. ರಾಮನಾಥಪುರ ಹೋಬಳಿ ಅನ್ನೋ ವಿಚಾರ ಗೊತ್ತಾಗಿತ್ತು. ಹಾಗೆಂದ ಮೇಲೆ ರಸ್ತೆ ಕಾರುಗಳು ಓಡಾಟಕ್ಕೆ ಯೋಗ್ಯವಾಗಂತೂ ಇರುತ್ತದೆ ಅನ್ನೋ ಸಮಾಧಾನ. ಕಾರು ಮೈಸೂರು ರಸ್ತೆ ಮುಟ್ಟಿದಾಗ ಇನ್ನೂ ಬೆಳಗಿನ ಜಾವ ೫ ಘಂಟೆ. ಮತ್ತಿಗೋಡಿಗೆ ಹೋಗಿ, ಅಲ್ಲಿಂದ ಸಂಜೆಯೊಳಗೆ ಗೊಬ್ಬಳಿ ಸೇರುವ ಯೋಜನೆ. ಕಾರಿನಲ್ಲಿ ನಾಗರಾಜ್, ವೆಂಕಟೇಶ್, ಮೀರಾ ಹಾಗೂ ಕೃಷ್ಣ ಹೊರಟಿದ್ದರು. ಟ್ಯಾಕ್ಸಿ ಚಾಲಕನಿಗೆ ಹಾಸನ ಜಿಲ್ಲೆಯ ರಸ್ತೆಯ ಪರಿಚಯ ಇತ್ತು. ಮದ್ದೂರಿನ ಬಳಿ ನಿಲ್ಲಿಸಿ ಇಡ್ಲಿ ವಡೆ ತಿಂದುಕೊಂಡು, ಮೈಸೂರಿನಲ್ಲಿ ನಿಲ್ಲಿಸದೇ ಹೊರಟೇಬಿಟ್ರು. ಮತ್ತಿಗೋಡು ಕ್ರಾಸ್‌ಗೆ ಬಂದಾಗ ೧೦ ಘಂಟೆ ಆಗಿತ್ತು. ಕೃಷ್ಣನನ್ನು ಸೌದಿಯಿಂದ ಕರೆದುಕೊಂಡು ಬಂದಿದ್ದು ಅಷ್ಟು ಆಯಾಸವೆನಿಸದಿದ್ದರೂ, ಮತ್ತಿಗೋಡಿಗೆ ಹೋಗಿ ತಲುಪಿದ್ದೇ ಒಂದು ದೊಡ್ಡ ಪ್ರಯಾಸವಾಗಿತ್ತು. ಅಲ್ಲೇ ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತನೊಬ್ಬನನ್ನು ಕೇಳಿಕೊಂಡು ಮತ್ತಿಗೋಡಿನ ಊರಿನ ಕಡೆಗೆ ಹೊರಟಿತ್ತು ಕಾರು. ಮತ್ತಿಗೋಡು ಒಂದು ಚಿಕ್ಕ ಹಳ್ಳಿ ಇರಬಹುದು ಎನಿಸಿತು ವೆಂಕಟೇಶನಿಗೆ. ಕಾರು ಹಳ್ಳಿಗೆ ಮುಟ್ಟುತ್ತಿದ್ದಂತೆಯೇ ಮಕ್ಕಳು ಓ ಎನ್ನುತ್ತಾ ಕಾರಿಗೆ ಮುತ್ತಿಗೆ ಹಾಕಿದರು. 'ಏಯ್ ಎಲ್ಲಾ ದೂರ ಹೋಗ್ರೋ...' ಎನ್ನುತ್ತಾ ಮಕ್ಕಳನ್ನ ದೂರ ಮಾಡಿ ಊರಿನ ಒಬ್ಬ ರೈತ ಕಾರಿನ ಬಳಿಗೆ ಬಂದು 'ಯಾರು? ಟೊಬ್ಯಾಕೋ ಕಂಪನಿಯೋರಾ? ಅಡಿಕೆಯೋರಾ?' ಎಂದು ಕೇಳಿದ. ಮುಂದೆ ಕೂತಿದ್ದ ನಾಗರಾಜ್ 'ಇಲ್ಲಪ್ಪ. ಈ ಊರಿನ ಪಂಚಾಯ್ತಿ ಛೇರ್‌ಮನ್ ಯಾರು? ಅವರ ಮನೆ ಎಲ್ಲಿ?' 'ಓ ಸ್ವಾಮಪ್ಪನೋರ್ ಮನೇಗ್ ಬಂದಿವ್ರ? ಬನ್ನಿ ನಾ ಕಕೊರ್ಂಡ್ಹೋಯ್ತೀನಿ' ಅಂತ ರೈತ ಊರಿನ ಪಂಚಾಯಿತಿ ಛೇರ್‌ಮನ್‌ರ ಮನೆಗೆ ಕರೆದುಕೊಂಡು ಹೋದ. ಕಾರು ನಿಧಾನವಾಗಿ ಮುಂದೆ ಹೋದ ಹಾಗೆ ಮಕ್ಕಳೂ ಅದರ ಜೊತೆಯಲ್ಲಿ ಓಡುತ್ತಾ ಇದ್ದರು.

'ಸ್ವಾಮಪ್ಪನೋರೆ ಯಾರೋ ನಿಮ್ಮನ್ನೋಡಕೆ ಬಂದವ್ರೆ'. ಅಂತ ಛೇರ್‌ಮನ್‌ರ ಮನೆ ಮುಂದೆ ನಿಂತು ಕೂಗಿದ ರೈತ. 'ಯಾರೋ ಅದು.... ಬಂದೆ ತಡಿ' ಅಂತ

ಒಳಗಿನಿಂದ ಧ್ವನಿ. ಸ್ವಲ್ಪ ಸಮಯದ ನಂತರ 'ಯಾರೋ?' ಅಂತ ಹೇಳಿ ಹೊರಗೆ ಒಬ್ಬ ಧಡೂತಿಯಾದ ವ್ಯಕ್ತಿಯ ಆಗಮನ. ಬಿಳಿ ಪಂಚೆ ಉಟ್ಟಿ ಯಾವುದೇ ಶರ್ಟ್ ಹಾಕಿರದ ಮೈಮೇಲೆ ಒಂದು ಟವೆಲ್ ಹೊದ್ದುಕೊಂಡಿದ್ದ ಈ ವ್ಯಕ್ತಿಯ ಮೈಮೇಲೆ ಇದ್ದ ಅಡ್ಡ ದಾರ ಈ ವ್ಯಕ್ತಿ ಬ್ರಾಹ್ಮಣನೆಂದು ಎತ್ತಿ ಸಾರುತ್ತಿತ್ತು. ಆ ವ್ಯಕ್ತಿ ಕಾರಿನ ಬಳಿ ಬಂದು 'ಯಾರು ನೀವು? ಯಾರು ಬೇಕಾಗಿತ್ತು?' ಎಂದರು. 'ನಮಸ್ಕಾರ ನನ್ನ ಹೆಸರು ನಾಗರಾಜ್ ಅಂತ. ಇವರು ವೆಂಕಟೇಶ್, ಮೀರಾ ಮತ್ತು ಇವನು ಅವರ ಮಗ ಕೃಷ್ಣ. ನಾವು ಬೆಂಗಳೂರಿನಿಂದ ಬಂದಿದ್ದೇವೆ. ನಿಮ್ಮ ಊರಿನ ಪಂಚಾಯಿತಿ ಛೇರ್ಮನ್ ಅವರನ್ನು ನೋಡಬೇಕಿತ್ತು' ಎಂದರು ನಾಗರಾಜ್. 'ನಮಸ್ಕಾರ ನನ್ನ ಹೆಸರು ಕುಮಾರಸ್ವಾಮಿ. ನಾನೇ ಈ ಊರಿನ ಪಂಚಾಯಿತಿ ಛೇರ್ಮನ್. ಬನ್ನಿ ಒಳಗೆ. ಕೂತು ಮಾತನಾಡೋಣ'. ಎಂದು ಎಲ್ಲರನ್ನೂ ಒಳಗೆ ಕರೆದುಕೊಂಡು ಹೋದರು. ದೊಡ್ಡ ಮನೆಯ ಅಂಗಳ. ಬದಿಯೊಂದರಲ್ಲಿ ಒಂದು ಕೊಠಡಿ. ಅಲ್ಲಿ ಒಂದು ಮಂಚ. ಮಂಚದ ಕೆಳಗೆ ಸಿಪ್ಪೆ ಬಿಡಿಸದ ತೆಂಗಿನಕಾಯಿಗಳು. ಅಂಗಳಕ್ಕೆಲ್ಲಾ ಇದ್ದಿದ್ದು ಒಂದು ಕೈಮುರಿದ ಕುರ್ಚಿ. ಅದರ ಪಕ್ಕದಲ್ಲಿ ಒಂದು ಈಸಿ ಛೇರ್, ಬಂದ ಅತಿಥಿಗಳಿಗೆ ಚಾಪೆ. ಕುಮಾರಸ್ವಾಮಿಗಳ ಹೆಂಡತಿ ಮಗು ಇನ್ನೂ ಮಲಗಿದ್ದನ್ನು ನೋಡಿ, ಮೀರಳಿಗೆ ಮಗುವನ್ನು ಕೊಠಡಿಯ ಮಂಚದ ಮೇಲೆ ಮಲಗಿಸುವುದಕ್ಕೆ ಹೇಳಿದರು. ಉಪಚಾರಗಳೆಲ್ಲಾ ಮುಗಿದ ಮೇಲೆ ಕುಮಾರಸ್ವಾಮಿಗಳೇ 'ಈಗ ಹೇಳಿ ನನ್ನಿಂದ ಏನಾಗಬೇಕಿತ್ತು?' ಎಂದರು. ನಾಗರಾಜ್ ಮಾತನ್ನು ಶುರುಮಾಡಿದರು. ವೆಂಕಟೇಶನಿಗೂ, ನಾಗರಾಜ್ ಮಾತನಾಡುವುದೇ ಸರಿ ಎನಿಸಿತ್ತು. ನಾಗರಾಜ್‌ಗೆ ಹಳ್ಳಿಯವರ ಜೊತೆಯಲ್ಲಿ ಹೇಗೆ ಮಾತನಾಡಬೇಕೆಂದು ಗೊತ್ತಿತ್ತು.

'ಏನೂ ಇಲ್ಲ. ನಿಮ್ಮ ಊರಿನ ವಿಚಾರ ಸ್ವಲ್ಪ ಕೇಳಬೇಕಿತ್ತು. ಅದೂ ಸ್ವಲ್ಪ ಗುಟ್ಟಾದ ವಿಚಾರ....' ಅಂತ ನಾಗರಾಜ್ ಸುತ್ತ ಮುತ್ತ ನೋಡಿದರು. ಸುಳಿವು ತಿಳಿದ ಕುಮಾರಸ್ವಾಮಿಗಳು ತಮ್ಮ ಆಳುಗಳನ್ನು ಹೊರಗೆ ಕಳುಹಿಸಿ, ಯಾರಿಗೂ ಒಳಗೆ ಬಿಡಬೇಡವೆಂದು ಅಪ್ಪಣೆ ಮಾಡಿದರು.

'ನಾವು ಈಗ ಇರುವುದು ಸೌದಿ ಅರೇಬಿಯಾ. ವೆಂಕಟೇಶ್ ಮೂಲತಃ ಗೊಬ್ಬಳಿಯವರು. ಇವರಿಗೆ ಒಬ್ಬನೇ ಮಗ ಕೃಷ್ಣ. ಕಳೆದ ಒಂದು ತಿಂಗಳಿಂದ ಒಂದೊಂದು ಸಾರಿ ನಿದ್ರೆಯಿಂದ ಎದ್ದು, ತನ್ನ ಹಿಂದಿನ ಜನ್ಮದ ಬಗ್ಗೆ ಮಾತನಾಡ್ತಾನೆ. ನಿಮ್ಮ ಊರಿನ ಹೆಸರು ಹೇಳುತ್ತಾನೆ....' ಎಂದು ಕೃಷ್ಣನ ವಿಚಾರವನ್ನು ನಾಗರಾಜ್ ವಿವರಿಸಲು ಪ್ರಾರಂಬಿಸಿದರು. ಅಷ್ಟರ ವೇಳೆಗೆ ಕೊಠಡಿಯಲ್ಲಿ ಮಲಗಿದ್ದ ಕೃಷ್ಣ ಎದ್ದು 'ಸ್ವಾಮಪ್ಪನೋರೆ ಇದ್ಯಾಕೆ ನಾನು ನಿಮ್ಮನೆ ಒಳ್ಗೆ ಮಲ್ಗಿವ್ನಿ. ನನ್ಯಾರು ಒಳ್ಗ ಬಿಟ್ರೋರು? ಬುದ್ದಿ ನಾ ಓಯ್ತೀನಿ ?' ಅಂತ ಹೊರಗೆ ಹೊರಟ ಕೃಷ್ಣ. ಚಿಕ್ಕ ಹುಡುಗ ಹಳ್ಳಿಯ ಭಾಷೆ ಮಾತನಾಡುತ್ತ

ತಮ್ಮನ್ನು ಹೆಸರಿಟ್ಟು ಗುರುತಿಸುತ್ತಾ ಬಂದಾಗ ಕುಮಾರಸ್ವಾಮಿಗಳಿಗೆ ಆಶ್ಚರ್ಯವಾಗಿತ್ತು. ಕೃಷ್ಣ ಹೊರಗೆ ಹೋಗುವ ಮುಂಚೆಯೇ ನಾಗರಾಜ್ ಮತ್ತು ವೆಂಕಟೇಶ್ ಹಿಡಿದುಕೊಂಡರು. 'ಯಾರಿವ್ರೆಲ್ಲ. ಬುದ್ಧಿ ನನ್ನನ್ನ ಬಿಡ್ಸಿ. ಇದ್ಯಾಕೆ ಹಿಂಗ್ ಹಿಡ್ಕೊಂಡವ್ರೆ.' ಅಂತ ಕಿರಿಚಿಕೊಂಡ ಕೃಷ್ಣ. ಕುಮಾರಸ್ವಾಮಿಗಳಿಗೆ ನಂಬಲಿಕ್ಕೇ ಆಗುತ್ತಿಲ್ಲ. ಕೃಷ್ಣ ಮಾತನಾಡುವುದು ಇತ್ತೀಚೆಗಷ್ಟೆ ಸತ್ತಿದ್ದ ಹೊಲಗೇರಿ ಪಾಪ ಮಾತನಾಡಿದ ಹಾಗೇ ಇತ್ತು. ಕುಮಾರಸ್ವಾಮಿಗಳ ಮುಖದಲ್ಲಿ ಭಯದ ಛಾಯೆ ಎದ್ದು ಕಾಣುತ್ತಿತ್ತು. ಕುಮಾರಸ್ವಾಮಿಗಳು ಹೆದರಿಕೊಂಡಿದ್ದರು. ಹೊಲಗೇರಿ ಪಾಪ ತಮ್ಮ ಮನೆಯ ಒಳಗೆ ಬಂದುಬಿಟ್ಟ ಎಂತಲೋ ಅಥವಾ ಚಿಕ್ಕ ಹುಡುಗ ಪಾಪನ ರೀತಿ ಮಾತನಾಡುವುದನ್ನು ನೋಡಿಯೋ ಕುಮಾರಸ್ವಾಮಿಗಳು ತಲ್ಲಣಿಸಿ ಹೋಗಿದ್ದರು. ನಿಜವಾಗಲೂ ದೆವ್ವ ಹಿಡಿದಿರುವ ಹುಡುಗನೆಂದು ಮನೆಯವರೆಲ್ಲಾ ಹೆದರಿ ಭಯದಿಂದ ನೋಡುತ್ತಿದ್ದರು. ಕುಮಾರಸ್ವಾಮಿಗಳು ಧೈರ್ಯ ಮಾಡಿ ಕೃಷ್ಣನಿಗೆ ಪಾಪನ ಜೊತೆಯಲ್ಲಿ ಮಾತನಾಡುವ ತರಹಾನೆ 'ಪಾಪ ಕುಂತ್ಕೋ. ನಾನೇ ಹೇಳಿದ್ದು ನಿನ್ನನ್ನ ಕರ್ಕೊಂಡ್ ಬನ್ನಿ ಅಂತ. ನೀವು ಅವನ್ನ ಬಿಡಿ' ಎಂದರು. 'ನಮ್ಗೆ ಅಯ್ನೋರ್ ಮನೆ ಒಳೀಕ್ ಬಂದ್ರೆ ಪಾಪ ಬತ್ತೈತೆ.... ನಾ ಬತ್ತೀನಿ' ಅಂತ ಮನೆಯ ಹೊರಗೆ ಬಂದ. ಹೊರಗೆ ಕಾರಿನ ಸುತ್ತ ನೆರೆದಿದ್ದ ಮಕ್ಕಳು ಬಹಳ ಆಶ್ಚರ್ಯದಿಂದ ಕಾರನ್ನು ನೋಡುತ್ತಿದ್ದರು. ಛೇರ್ಮನ್‌ರ ಮನೆಯ ಆಳುಗಳು ಹೊರಗೆ ಕುತೂಹಲದಿಂದ ಒಳಗೇನು ನಡೆದಿರಬೇಕೆಂದು ಚರ್ಚಿಸುತ್ತಿದ್ದರು. ಹೊರಬಂದ ಕೃಷ್ಣ ಅಲ್ಲಿದ್ದ ಛೇರ್ಮನ್‌ರ ಮನೆಯ ಆಳುಗಳನ್ನು ಗುರುತಿಸಿ ಅವರನ್ನು ಮಾತನಾಡಿಸಲು ಪ್ರಾರಂಭಿಸಿದ. ಅಲ್ಲಿದ್ದವರಿಗೆಲ್ಲಾ ಭಯದಿಂದ ಮಾತನಾಡಬೇಕೋ ಬಿಡಬೇಕೋ ಗೊತ್ತಾಗಲೇ ಇಲ್ಲ. ಪಾಪನ ತರಾನೇ ಮಾತಾಡುತ್ತಾ ಇದ್ದ ಕೃಷ್ಣ ಎದ್ದು ಕಾಲುವೇ ಹಾಳಿಗೆ ಹೋದ. ಸೇತುವೆ ಹತ್ತಿರ ಬಂದ, ಮರಳ ಗದ್ದೆ ತೋರಿಸಿದ, ಅವನು ಕಾಲವೆಗೆ ಬಿದ್ದ ಜಾಗಾನೂ ತೋರಿಸಿದ. ಅಷ್ಟು ಹೊತ್ತಿಗೆ ಜನಸ್ತೋಮವೇ ಸೇರಿತ್ತು. ಎಲ್ಲರಿಗೂ ಬಹಳ ಆಶ್ಚರ್ಯ. ಚಿಕ್ಕ ಹುಡುಗ ಪಾಪನ ರೀತಿ ಆಡುವುದನ್ನು ನೋಡಿ. ಕೆಲವರು ಪುನರಾವತಾರ ಅಂದರು. ಕೆಲವರಂದರು ಹುಚ್ಚು. ಕೆಲವರಂದರು ಹುಡುಗನ ಮೈಮೇಲೆ ಪಾಪನ ದೆವ್ವ ಬಂದಿದೆ ಅಂತ. ಯಾರಿಗೂ ಹುಡುಗನನ್ನು ನಿಲ್ಲಿಸಿ ಮಾತನಾಡಿಸುವುದಕ್ಕೆ ಧೈರ್ಯವಿರಲಿಲ್ಲ. ಮಕ್ಕಳಿಗೆ ಮನರಂಜನೆಯಾಗಿತ್ತು. ಹರಿಜನರ ಕೇರಿಗೆ ಹೋಗಿ ತನ್ನ ಮನೆಗೆ ಬಂದ, ಮಂಚನನ್ನು ತನ್ನ ಮಗನನ್ನು ಮಾತನಾಡಿಸುವ ರೀತಿಯಲ್ಲೇ ಮಾತನಾಡಿಸಿದ್ದ. ಕಿಟ್ಟೀನಂತೂ ಪಕ್ಕದ ಊರಿನ ಶಾಲೆಯಿಂದ ಬರೋವರೆವಿಗೂ ಮಂಚನ ಮನೆಯಲ್ಲೇ ಇದ್ದು ಅವನು ಈಗ ಹೈಸ್ಕೂಲ್‌ನಲ್ಲಿ ಓದುತ್ತಿದ್ದಾನೆ ಅಂದಾಗಲಂತೂ ಲಕ್ಕಯ್ಯ ಮೇಷ್ಟ್ರು ಹೇಳ್ತಿದ್ದನ್ನು ಜ್ಞಾಪಿಸಿಕೊಂಡ. ಛೇರ್ಮನ್ ಮನೆಗೆ ಕರೆದುಕೊಂಡು ಬರುವ ಹೊತ್ತಿಗೆ ಸಾಕು ಸಾಕಾಗಿತ್ತು ನಾಗರಾಜ್ ಮತ್ತು ವೆಂಕಟೇಶ್‌ಗೆ. ಮೀರಾಗಂತೂ ಮೈಯಲ್ಲ ನಡುಕ, ಮಾತನಾಡಲು

ಏನೂ ತೋಚುತ್ತಿರಲಿಲ್ಲ. ಮೌನವಾಗೇ ಎಲ್ಲವನ್ನೂ ಎದುರಿಸಿದ್ದಳು. ವೆಂಕಟೇಶ್ ಮತ್ತು ನಾಗರಾಜ್‌ಗೆ ಕೃಷ್ಣನ ಹಿಂದೇ ಇರುತ್ತಿದ್ದರು. ಛೇರ್ಮನ್ ಮನೆಗೆ ಬಂದು ಪಾಪನ ಕಡೇ ಗಳಿಗೆಯ ಬಗ್ಗೆ ಛೇರ್ಮನ್ ವಿಚಾರಿಸಿದಾಗ ಕಣ್ಣ ಮುಂದೆ ಘಟನೆ ನಡೆದ ಹಾಗೆ ಹೇಳಿದ್ದು ಎಲ್ಲರನ್ನೂ ಆಶ್ಚರ್ಯ ಚಕಿತರನ್ನಾಗಿಸಿತ್ತು. ಘಟನೆಯ ಬಗ್ಗೆ ಹೆಚ್ಚು ಕೆದಕಲು ಇಷ್ಟಪಡದ ಚೇರ್ಮನ್‌ರು ಬುಗುರಿ ಮರದ ಕಾಯಿನ ರಸವನ್ನು ಹಾಲಿಗೆ ಸೇರಿಸಿ ಮಗುವಿಗೆ ಕೊಟ್ಟು ಮಲಗಿಸಿದ್ದರು. ಮಗು ಮಲಗಿದ ತಕ್ಷಣ ಗಡಿಬಿಡಿಯಲ್ಲೇ ಊರಿನಿಂದ ಬಂದವರೆಲ್ಲರನ್ನೂ ಹೊರಡಿಸಿದ್ದು, ನಾಗರಾಜ್‌ಗೆ ಅನುಮಾನಕ್ಕೆ ಎಡೆಮಾಡಿಕೊಟ್ಟಿತ್ತು.

ಮತ್ತಿಗೋಡಿಗೆ ಕರೆದುಕೊಂಡು ಹೋಗಿದ್ದು ತಪ್ಪಾಯಿತೇನೋ ಅಂದುಕೊಂಡಿದ್ದ ವೆಂಕಟೇಶ್ ಮತ್ತು ಮೀರಾಳಿಗೆ, ಗೊಬ್ಬಳಿಗೆ ಹೋಗಿದ್ದೂ ಇನ್ನೂ ಆಘಾತವೇ ಕಾದಿತ್ತು. ಕಾರಿನಿಂದಿಳಿದ ಮಗ, ಸೊಸೆಯ ಜೊತೆಗೆ ನಾಗರಾಜನನ್ನು ಬಹಳ ಆಶ್ಚರ್ಯದಿಂದಲೇ ಬರಮಾಡಿಕೊಂಡ ವೆಂಕಟೇಶನ ಅಪ್ಪ ಅಮ್ಮಂದಿರು, ಮನ್ನಸ್ಸಿನಲ್ಲಿದ್ದ ಗಾಬರಿಯನ್ನು ತೋರ್ಪಡಿಸಿ ಕೊಂಡಿರಲಿಲ್ಲ. 'ಬರುವ ವಿಷಯ ಫ಼ೋನ್ ಮಾಡಿ ಹೇಳಬಹುದಿತ್ತಲ್ಲ? ಏನು ವಿಚಾರ? ಎಲ್ಲಾ ಹುಶಾರಾಗಿದರಲ್ವಪ್ಪಾ?' ಎಂದು ಅಪ್ಪ ಕೇಳಿದಾಗ ಹೇಗೆ ವಿಷಯ ತಿಳಿಸುವುದೆಂದೇ ಗೊತ್ತಾಗದ ವೆಂಕಟೇಶನಿಗೆ ಸಹಾಯಕ್ಕೆ ಬಂದಿದ್ದವರು ನಾಗರಾಜ್. ಅದಕ್ಕೆ ಹೇಳುವುದು ಜೀವನದಲ್ಲಿ ಪ್ರಸಂಗಗಳನ್ನು ಎದುರಿಸಬೇಕಾದರೆ ಅನುಭವ ಮುಖ್ಯ ಎಂದು. ನಿಧಾನವಾಗಿ ವಿಷಯವನ್ನೆಲ್ಲಾ ಕೂಲಂಕುಶವಾಗಿ ಅಪ್ಪ, ಅಮ್ಮನಿಗೆ ತಿಳಿಸಿದಾಗ ಅವರ ಪ್ರತಿಕ್ರಿಯೆ ಹೇಗಿರುತ್ತದೆ ಎಂಬುದು ಊಹಿಸಲಸಾಧ್ಯ ಎಂಬುದು ತಿಳಿದಿದ್ದ ವೆಂಕಟೇಶ. ವಿಷಯ ತಿಳಿದು ಸಿಟ್ಟಿಗೆದ್ದು ಅಪ್ಪ ಒಳಗೆ ಹೋಗಿದ್ದು ವೆಂಕಟೇಶನಿಗೆ ಆಶ್ಚರ್ಯವೆನಿಸದಿದ್ದರೂ, ನಾಗರಾಜ್‌ಗೆ ತಾನು ಏನು ತಪ್ಪು ಹೇಳಿದೆನೋ ಎಂಬ ಭಯ ಬಂದಿತ್ತು. ಸ್ವಲ್ಪ ಸಮಯದ ನಂತರ ಒಳಗಿನಿಂದ ಬಂದ ವೆಂಕಟೇಶನ ತಂದೆ ಕೃಷ್ಣನನ್ನು ಮನೆಯಿಂದ ಹೊರೆಗೆ ಕರೆದುಕೊಂಡು ಹೋಗುವಂತೆ ಹೇಳಿದ್ದು ವೆಂಕಟೇಶ್ ಮತ್ತು ಮೀರಾಳಿಗೆ ಸಿಡಿಲು ಬಡಿದಂತಾಗಿತ್ತು. 'ನಮ್ಮ ಮನೆ ಬ್ರಾಹ್ಮಣರ ವಂಶ. ನಮ್ಮ ವಂಶದಲ್ಲಿ ಒಬ್ಬ ಹರಿಜನ ಪುನರ್ಜನ್ಮ ತಾಳಿ ಬರುವುದೆಂದರೆ ಏನು?' ಇದು ವೆಂಕಟೇಶನ ತಂದೆಯ ವಾದ. ಗೊಬ್ಬಳಿಯ ಹಿರಿಯ ಬ್ರಾಹ್ಮಣರ ವರೆವಿಗೂ ವಿಷಯ ಚರ್ಚೆಗೆ ಹೋದರೂ, ಹುಡುಗ ಹಿಂದಿನ ಜನ್ಮದಲ್ಲಿ ಹರಿಜನನಾದ್ದರಿಂದ ಬ್ರಾಹ್ಮಣರ ಮನೆಯಲ್ಲಿ ಸಲ್ಲ ಎಂಬ ತೀರ್ಪು ವೆಂಕಟೇಶ್ ಮತ್ತು ಮೀರಾಳಿಗೆ ಗೊಬ್ಬಳಿ ಬಿಟ್ಟು ಬರಬೇಕಾಗಿತ್ತು. ನಾಗರಾಜ್‌ಗೆ ಎದ್ದು ಎಲ್ಲರನ್ನೂ ಕೊಂದು ಹಾಕುವ ಕೋಪಬಂದರೂ ಸಮಾಧಾನ ತೆಗೆದುಕೊಂಡು ವೆಂಕಟೇಶ್ ಮತ್ತು ಮೀರಾಳನ್ನು ಕೃಷ್ಣನ ಜೊತೆ ತಮ್ಮ ಮನೆಗೆ ಕರೆತಂದು ಉಪಚಾರ ಮಾಡಿದ್ದರು ನಾಗರಾಜ್.

ಪಾಪನ ಕಡೇ ಗಳಿಗೆಯ ವಿಚಾರ ಬಂದ ತಕ್ಷಣ ಕೃಷ್ಣನಿಗೆ ಬುಗುರಿ ರಸದ ಜೊತೆಗೆ ಹಾಲು ಕುಡಿಸಿ ಆತುರ ಆತುರವಾಗಿ ತಮ್ಮನ್ನೆಲ್ಲಾ ಕಳುಸಿದ ಭೀರ್ಮಣ್ಣನರ ನಡವಳಿಕೆ ನಾಗರಾಜ್ ಮನದಲ್ಲಿ ಹುಳದಂತೆ ಇನ್ನೂ ಕೆಲಸ ಮಾಡುತ್ತಿತ್ತು. ವೆಂಕಟೇಶ್‌ಗಂತೂ ಇನ್ನು ಉಳಿದಿರುವುದು ಬಾಂಬೆಗೆ ಕರೆದುಕೊಂಡು ಹೋಗುವುದು. ಮತ್ತಿಗೋಡಿಗೆ ಹೋಗಿ ಬಂದ ಮೇಲಂತೂ ಕೃಷ್ಣ ಇನ್ನೂ ಹೆಚ್ಚು ಪಾಪನ ತರಹ ಮಾತಾಡುವುದಕ್ಕೆ ಶುರುಮಾಡಿದ್ದ. ಬಾಂಬೆಗೆ ಹೊರಟಿದ್ದ ದಂಪತಿಗಳಿಗೆ 'ಇನ್ನೊಂದು ಅವಕಾಶ ಕೊಡಿ ನಾನು ಅವನ ಮನಸ್ಸಿನಿಂದ ಪಾಪನನ್ನು ಓಡಿಸ್ತೀನಿ' ಅಂದಿದ್ರು ನಾಗರಾಜ್. ಅವರಿಗೆ ಎಲ್ಲಿಲ್ಲದ ಭರವಸೆ ಇತ್ತು. 'ಇನ್ನೊಂದು ಸಾರಿ ಮತ್ತಿಗೋಡಿಗೆ ಹೋಗಿ ಪಾಪನ ಕಡೇ ಘಳಿಗೆಯನ್ನು ಸೃಷ್ಟಿಮಾಡಿದರೆ ಕೃಷ್ಣನಲ್ಲಿ ಹಿಡಿದಿರೋ ಪಾಪ ಹೋಗುತ್ತಾನೆ' ಅಂತ. ಪ್ರಸಾದ್ ದಂಪತಿಗಳು ನಾಗರಾಜ್ ಮಾತಿನಲ್ಲಿ ನಂಬಿಕೆ ಬರದಿದ್ದರೂ, ನಾಗರಾಜ್‌ಗೆ ಕೃಷ್ಣನ ಮೇಲೆ ಎಷ್ಟು ಪ್ರೀತಿ ಇದೆ ಅನ್ನುವದೂ ಗೊತ್ತಿತ್ತು. ಆದ್ದರಿಂದ 'ಒಂದು ಕಡೇ ಯತ್ನ ಮಾಡೋಣ' ಅಂತ ಒಪ್ಪಿಕೊಂಡಿದ್ರು ಪ್ರಸಾದ್ ದಂಪತಿಗಳು. ನಾಗರಾಜ್ ಯಾರಿಗೂ ಹೇಳದಿರುವ ರೀತಿ ತನ್ನ ಒಬ್ಬ ಬಾಲ್ಯ ಸ್ನೇಹಿತ ಪೊಲೀಸ್ ಹಿರಿಯ ಅಧಿಕಾರಿಯೊಂದಿಗೆ ಗುಪ್ತವಾಗಿ ಮತ್ತಿಗೋಡಿನಲ್ಲಿ ನಡೆದ ಘಟನೆಗಳನ್ನು ಚರ್ಚಿಸಿದ್ದ. ಅದರಂತೆ ಕೆಲವು ಪೊಲೀಸರ ಸಹಾಯದಿಂದ ಒಂದು ಯೋಜನೆಯನ್ನೇ ಪೊಲೀಸರು ಹಾಕಿದ್ದರು. ಬಾಂಬೆಗೆ ಕರೆದು ಕೊಂಡುಹೋಗುವುದೊಂದೇ ದಾರಿ ಎಂದು ಕೊಂಡಿದ್ದ ವೆಂಕಟೇಶ್ ಮತ್ತು ಮೀರಾರಿಗೆ ನಾಗರಾಜ್ ಕಡೆಯ ಪ್ರಯತ್ನವಾಗಿ ಇನ್ನೊಂದು ಬಾರಿ ಮತ್ತಿಗೋಡಿಗೆ ಹೋಗಲು ಮನವೊಲಿಸಿದ್ದರು.

ನಾಗರಾಜ್, ಕೃಷ್ಣ, ಮೀರ, ವೆಂಕಟೇಶ್ ಮತ್ತಿಗೋಡಿಗೆ ಒಂದು ದಿನ ಹೊರಟರು. ಒಂದು ದಿವಸ ಮೊದಲೇ ಮಫ್ತಿಯಲ್ಲಿದ್ದ ಇಬ್ಬರು ಪೊಲೀಸರು ಮಂಚನ ಮನೆಗೆ ಬಂದು ಅವನಿಗೂ ತನ್ನ ಅಪ್ಪನ ಕಡೇ ಘಳಿಗೆಯ ಬಗ್ಗೆ ನಡೆಸುವ ಕಾರ್ಯದ ಬಗ್ಗೆ ವಿವರಗಳನ್ನು ಕೊಟ್ಟಿದ್ದರು. ಅಪ್ಪ ಸತ್ತ ವಿಚಾರದ ವಿವರಗಳನ್ನು ಕೂಲಂಕುಶವಾಗಿ ಪೊಲೀಸರಿಗೆ ಹೇಳಿದ್ದ ಮಂಚ. ಮೊದಲೇ ಯೋಜಿಸಿದ್ದಂತೆ ಮತ್ತಿಗೋಡಿಗೆ ಗುಟ್ಟಾಗಿ ಹೊರಟಿದ್ದರು. ಊರು ತಲಪುವ ಹೊತ್ತು ಸಂಜೆಯಾಗುತ್ತಿತ್ತು. ಅದು, ಅದೇ ಸಮಯ. ಕೃಷ್ಣ ಹೇಳುವ ರೀತಿಯ ಸಂಜೆಯ ವೇಳೆ. ಅದೇ ಕಾಲುವೆ ಏರಿ. ಊರಿನ ಕಡಿಯಿಂದ ಕಿಟ್ಟಿಯನ್ನು ಕಾಲುವೆ ಸೇತುವೆಯ ಬಳಿ ನಿಲ್ಲಿಸಲಾಗಿತ್ತು. ಕೃಷ್ಣನನ್ನು ಕಾಲುವೆಯ ಸೇತುವೆಬಳಿ ಬಿಡಲಾಯಿತು. ಕಿಟ್ಟಿಯನ್ನು ಕಂಡೊಡನೆಯೇ ಕೃಷ್ಣ ಪಾಪನ ರೀತಿ ಮಾತನಾಡಲು ಶುರುಮಾಡಿದ. ಅದೇ ಕಡೇ ಘಳಿಗೆಯ ಮಾತುಗಳು.

'ಕಿಟ್ಟಿ ಕಾಲ್ವೆ ಬಗ್ಗಿ ನೋಡ್ಬೇಡ. ಬಿದ್ದಿ ಗಿದ್ದೀಯಾ?' ಪಾಪ ಕೂಗುತ್ತಿದ್ದ. ಮಂಚ ತನ್ನ ಇತರ ರೈತರೊಡನೆ ಮರಳು ಗದ್ದೆಯಲ್ಲಿ ಭತ್ತ ಬಡಿಯೋಕೆ ಕಣದಲ್ಲಿ ಕೂತಿದ್ರು.

ಸೂರ್ಯ ಅಡಿಕೆ ತೋಟದ ಮಧ್ಯೆಯಿಂದ ಮುಳುಗ್ತಿದ್ದ. ಕಿಟ್ಟಿ ಗದ್ದೆ ಮೇಲೆ ಕೂಳಿನ ನೀರನ್ನು ಒದ್ಕೊಂಡು ಓಡ್ತಿದ್ದ. ಪಾಪ ಕಿಟ್ಟೀಗೆ ಕೂಳು ತುಳೀಬೇಡ ಅಂತ ಹೇಳ್ಕೊಂಡು ಪಾಪ ಬಿದ್ದು ಸತ್ತ ಸ್ಥಳಕ್ಕೆ ಬಂದ. ಅಲ್ಲಿಗೆ ಅದೇ ವೇಳೆಗೆ ಲಾರಿಯನ್ನು ತಂದುನಿಲ್ಲಿಸಿ, ಮಫ್ತಿಯಲ್ಲಿದ್ದ ಪೊಲೀಸ್ ಅಧಿಕಾರಿ ಪಾಪನ ಹತ್ತಿರ ಹೋಗಿ ಪ್ರಶ್ನೆಗಳ ಸುರಿಮಳೆಯನ್ನೇ ಸುರಿದರು.

‘ಇಲ್ಲೇ ಅಲ್ವ ನೀನು ಬಿದ್ದಿದ್ದು?’ ಅಂದರು ಪೊಲೀಸ್ ಅಧಿಕಾರಿ.

‘ಹೌದು ಬುದ್ಧಿ’ ಎಂದ ಕೃಷ್ಣ.

‘ಯಾಕೆ ಬಿದ್ದೆ?’

‘ಯಾರೋ ಕೋಲ್ನಾಗೆ ಹೊಡದ್ರು’

‘ಯಾರು ನಿನಗೆ ಹೊಡದ್ರು?’

‘ಅವರ ಮೊಕ ಚೂರ್‌ಚೂರ್ ಜ್ಞಪ್ತಿ ಆಯ್ತೆ. ನಮ್ಮೂರ ಸಂಕ್ರ ಅಂತ ಕಾಣಸ್ತೈತೆ. ಒಂದು ಕೋಲ್ನಾಗೆ ತಲ್ಗೇ ಬಡ್ದಿದ್ದ’.

‘ಮುಂದೇನಾಯ್ತು?’

‘ಹಂಗೆ ಬಡ್ಕೊಂಡೆ. ಮರಳು ಗದ್ದೆ ಕಣದಾಗೆ ಭತ್ತದ ಮೆದೆ ಮರ್ಯಾಗಿ ಯಾರೂ ಕಾಣಸ್ನಿಲ್ಲ. ನಮ್ಮ ಛೇರ್ಮನ್ ಕುಮಾರಸ್ವಾಮಿಗಳ ಮಗ ಸಂಕ್ರಯ್ನೋರು ನನ್ನ ಈ ಕಾಲವ್ಗೆ ತಳ್ಬಿಟ್ರು. ನನ್ನ ತಲೆ ಮ್ಯಾಲಿಂದ ರಕ್ತ ಸುರೀತಿತ್ತು. ಅಷ್ಟೇ ಜ್ಞಪ್ತಿ’.

‘ಶಂಕರ ನಿನ್ನನ್ನ ಯಾಕೆ ಕೊಲೆ ಮಾಡ್ತಾನೆ ?’

‘ಸಂಕ್ರಯ್ನೋರು ನಮ್ಮೂರ ಬೋರೇಗೌಡರ ಮಗ್ಳು ಸಾಂತನ್ನ ವಾಸಪ್ನೋರ್ ಕಬ್ಬಿನ ಗದ್ಯಾಗೆ ಕೆಡಿಸಿದ್ದನ್ನ ನಾನೇ ಕಣ್ಣಾರೆ ಕಂಡಿದ್ದೆ. ಅದನ್ನ ಯಾರ್ಗೂ ಹೇಳ್ಬೇಡ, ಬಾಯ್ಬಿಟ್ರೆ ಕೊಂದ್ಬಿಡ್ತೀನಿ ಅಂತಿಂದ್ರು. ನಾನು ಯಾರ್ಗೂ ಹೇಳಿರ್ಲಿಲ್ಲ’.

ಇಷ್ಟೇ ವಿಷಯ ಬೇಕಿತ್ತು ಪೊಲೀಸರಿಗೆ.

•

# ಹೀಗೊಂದು ದಿನ...

– ಪ್ರವೀಣ್ ಶಿವಶಂಕರ್

ಪ್ರತಿ ದಿನ ರಾತ್ರಿ ೧೦:೩೦ಕ್ಕೆ ಆಫೀಸಿನಿಂದ ಹೊರಡುತ್ತಿದ್ದವನು ಆವತ್ತು ಸಂಜೆ ೫:೦೦ ಘಂಟೆಗೇ ಬಿರಬಿರನೆ ಹೊರಟೆ. ಎಂದಿನಂತೆ ಮನೆಯ ಕಡೆ ಹೋಗೋಕೆ ಮನಸ್ಸು ಇರ್ಲಿಲ್ಲ. ಕಾರ್ ಓಡಿಸಿಕೊಂಡು ಬನಶಂಕರಿಯಲ್ಲಿದ್ದ ಪಾರ್ಕ್ ಕಡೆ ಹೊರಟೆ. ಮನಸ್ಸಿನಲ್ಲಿದ್ದ ಕೋಪವನ್ನು ರಸ್ತೆ ಮೇಲೆ ತೋರಿಸಿಕೊಂಡು ಪ್ರತೀ ಬಾರಿ ಹಾರ್ನ್ ಬಾರಿಸಿಕೊಂಡು ಕಾರ್ ಓಡಿಸಿದೆ. ಒಂದು ವಾರದಿಂದ ಜೀವನವೇ ಕಣ್ಣೆದುರಿಗೆ ಕುಸಿಯುತ್ತಿದ್ದ ಅನುಭವ ಮನಸ್ಸಿನಲ್ಲಿ ತುಂಬಿತ್ತು. ನಾನು, ಸಂಧ್ಯಾ ಒಬ್ಬರನ್ನೊಬ್ಬರು ಭೇಟಿ ಮಾಡಿ ಸರಿ ಸುಮಾರು ೨ ವರ್ಷಗಳು ಆಗೋಕೆ ಬಂತು. ಸ್ನೇಹದಿಂದ ಪ್ರೀತಿಗೆ ತಿರುಗಿದ ಬಾಂಧವ್ಯ, ಇದ್ದಕ್ಕಿದ್ದ ಹಾಗೆ ಅದೂ ಕೂಡ ಆಯ ತಪ್ಪಿದೆ! ವಾರದ ಪ್ರಾರಂಭದಲ್ಲೇ ನಮ್ಮ ಸಂಬಂಧಕ್ಕೆ ಇತಿಶ್ರೀ ಆಡೋ ಮಾತುಗಳು ಕೇಳಿ ಬರುತ್ತಿತ್ತು. ಬೆಂಗಳೂರಿನ ರಸ್ತೆಗಳಲ್ಲಿ ಕಾರ್ ಓಡಿಸೋದೇನು, ನಡೆಯೋದೂ ಕಷ್ಟವಾಗುತ್ತಿದೆ ಅನ್ನಿಸುತ್ತಿತ್ತು. ಒಂದು ವಿಧದಲ್ಲಿ ಇದೂ ಸಂಧ್ಯಾ ಥರ ಅಂತ ಅನ್ನಿಸೋಕೆ ಶುರುವಾಯ್ತು. ನನಗೆ ನನ್ನ ಮೇಲಿಗಿಂತ ಇಡೀ ವ್ಯವಸ್ಥೆಯ ಮೇಲೇ ಕೋಪ ಬರುತ್ತಿತ್ತು. ಎಲ್ಲವನ್ನ ಎಲ್ಲರನ್ನ ಮನಸ್ಸಿನಲ್ಲೇ ಶಪಿಸುತ್ತ ಪಾರ್ಕಿನ ಹೊರಗೆ ಕಾರ್ ನಿಲ್ಲಿಸಿ ಒಳಗೆ ಹೊರಟೆ. ಸಾಯಂಕಾಲದ ಸಮಯ, ಪಾರ್ಕಿನಲ್ಲಿ ಬಹಳಷ್ಟು ಜನರಿದ್ದರು. ಆದರೆ ಜನರಿಂದಲೇ ಜಿಗುಪ್ಸೆ ಆಗುತ್ತಿದ್ದ ನನಗೆ ಅವರ ಮಧ್ಯೆ ಇರಲು ಮನಸ್ಸು ಬರದೇ, ಹೆಚ್ಚು ಜನರಿರದ ಒಂದು ಮೂಲೆಗೆ ಹೋಗಿ ಬೆಂಚಿನ ಮೇಲೆ ಕುಳಿತೆ. ಮನಸ್ಸಿನಲ್ಲಿ ಗೊಂದಲ ಹೆಚ್ಚಾಗ್ತಿತ್ತು. ಸುತ್ತಲೂ ಕವಿಯುತ್ತಿದ್ದ ಕತ್ತಲಿನ ಹಾಗೇ ಮನಸ್ಸು ಹೆಚ್ಚು ಖಿನ್ನವಾಗುತ್ತಾ ಹೋಗಿತ್ತು. ಚಿಕ್ಕಂದಿನಿಂದಲೂ ಪ್ರತಿಯೊಂದರಲ್ಲೂ ಶ್ರೇಷ್ಠನಾಗಬೇಕು ಎನ್ನುವ ಹುಮ್ಮಸ್ಸಿತ್ತು. ಅಣ್ಣನ ಜೊತೆ ಕೂಡ ಇದೇ ಸ್ಪರ್ಧಾ ಮನೋಭಾವ. ಎಲ್ಲದರಲ್ಲೂ ಅವನನ್ನು ಮೀರಿಸಬೇಕು, ಅವನಿಗಿಂತ ಒಳ್ಳೇ ಕಾಲೇಜಿನಲ್ಲಿ ಇಂಜಿನೀಯರಿಂಗ್ ಸೀಟ್ ಪಡೆದೆ, ವಿದೇಶಕ್ಕೆ ಹೋದೆ, ಉನ್ನತ ವ್ಯಾಸಂಗ ಮುಗಿಸಿಕೊಂಡು,

ಅಲ್ಲೇ ಇರಬೇಕು ಎನ್ನುವ ನನ್ನ ಆಸೆ ಫಲಿಸಲಿಲ್ಲ. ಅಪ್ಪ ಅಮ್ಮನ ಒತ್ತಾಯಕ್ಕೆ ಮಣಿದು ಮತ್ತೆ ಭಾರತಕ್ಕೆ ಹಿಂದಿರುಗಬೇಕಾಯಿತು. ಅಲ್ಲಿನ ವಾತಾವರಣಕ್ಕೆ ಹೊಂದಿಕೊಂಡಿದ್ದ ಮನಸ್ಸಿಗೆ ಇಲ್ಲಿನ ಕಲುಷಿತ ಪರಿಸರ, ಎಲ್ಲೆಡೆ ಹಬ್ಬಿದ ರಾಜಕೀಯ ಹೇಸಿಗೆ ಹುಟ್ಟಿಸುತ್ತಿತ್ತು. ಆದರೆ ಇಲ್ಲೂ ಎಲ್ಲ ವಿಧದಲ್ಲಿ ಶ್ರೇಷ್ಠನಾಗುವ ದಾಹಕ್ಕೆ ಕುಂದುಬರಲಿಲ್ಲ. ಕೆಲಸ ಮಾಡುತ್ತಿದ್ದ ಆಫೀಸಿನಲ್ಲಿ ಎಲ್ಲರಿಗಿಂತ ಮುಂಚೂಣಿಯಲ್ಲಿದ್ದು, ಶೀಘ್ರದಲ್ಲೇ ಅತ್ಯುನ್ನತ ಹುದ್ದೆಗೆ ಬಡ್ತಿ ಸಿಗುವುದರಲ್ಲಿತ್ತು, ನನಗಿಂತಾ ಹೆಚ್ಚು ಅನುಭವ ಇರುವವರನ್ನೆಲ್ಲ ನಾನು ಹಿಂದೆ ಹಾಕಿ ಮುನ್ನಡೆದಿದ್ದೆ. ನನ್ನ ಕಂಪೆನಿಗೆ ನಾನು ಅತ್ಯಮೂಲ್ಯನಾಗಿದ್ದೆ. ಪ್ರತಿಯೊಂದು ಸಾಧನೆಯ ಜೊತೆ ಶ್ರೇಯಸ್ಸು, ಕೀರ್ತಿ ಎಷ್ಟೇ ಬಂದರೂ, ಮನಸ್ಸಿಗೆ ತೃಪ್ತಿ ಸಿಗಲಿಲ್ಲ. ಸಂಧ್ಯಾಳ ಪ್ರೀತಿ ಕೂಡ ಇದೇ ಸಾಧನೆಯ ಪರಿಧಿಯಲ್ಲಿ ಬಂದಿತ್ತು. ಆದರೆ ಒಂದನ್ನು ಗೆದ್ದ ನಂತರ ಇನ್ನೊಂದನ್ನು ಗೆಲ್ಲುವ ಮನಸ್ಸಾಗುತ್ತಿತ್ತು. ಸ್ವಂತದ್ದೇ ಬಂಗಲೆ, ಗಾಡಿಗಳು, ಆಸ್ತಿ, ಪ್ರತಿಯೊಂದು ಸ್ವತಃ ಮಾಡಿಕೊಂಡ ಹೆಮ್ಮೆ ತುಂಬಿತ್ತು. ಅಪ್ಪ, ಅಮ್ಮ, ಅಣ್ಣ, ಇವರ್ಯಾರಿಗೂ ನನ್ನ ವರ್ತನೆ ಸರಿ ಬರುತ್ತಿರಲಿಲ್ಲ. ಒಂದೊಂದಾಗಿ ಎಲ್ಲ ದೂರವಾಗಿದ್ದರು. ಅವರಲ್ಲಿ ನನ್ನ ಶ್ರೇಯಸ್ಸಿನ ಮೇಲೆ ಮತ್ಸರ ತುಂಬಿದೆ ಎಂದು ಸಮಾಧಾನ ಮಾಡಿಕೊಂಡೆ.

ನನ್ನದೇ ಸ್ವಂತದ್ದಾದ ಕೋಟೆ ನಿರ್ಮಾಣವಾಗಿತ್ತು ಮನಸ್ಸಿನಲ್ಲಿ. ನಾನೇ ಅಲ್ಲಿನ ರಾಜ, ನಾನೇ ಅಲ್ಲಿನ ಪ್ರಜೆ. ಇಷ್ಟೆಲ್ಲ ಆದರೂ ಒಳಗೆ ವರ್ಣಿಸಲಾಗದ ಶೂನ್ಯತೆ ಮನೆ ಮಾಡಿತ್ತು. ಏನೊಂದೂ ಅರ್ಥವಾಗುತ್ತಿರಲಿಲ್ಲ. ಮನಸ್ಸು ಸೋತು ಹೋಗಿತ್ತು, ಉತ್ಸಾಹ ಕುಂದಿ ಹೋಗಿತ್ತು. ಸುತ್ತಮುತ್ತಲಿನ ಜನರನ್ನು ಅವಲೋಕಿಸುತ್ತಿದ್ದೆ. ದೈಹಿಕ ಪರಿಶ್ರಮಕ್ಕಿಂತ ಮನಸ್ಸಿನ ವ್ಯಥೆ ನನ್ನನ್ನು ನಿದ್ದೆಯ ಮಡಿಲಿಗೆ ತಳ್ಳಲು ಹವಣಿಸುತ್ತಿತ್ತು. ಹಾಗೇ ಕಣ್ಣು ಮುಚ್ಚಿ ಹಿಂದೆ ಒರಗಿದೆ. ಸ್ವಲ್ಪ ಸಮಯ ಸಂದ ನಂತರ ಇದ್ದಕ್ಕಿದ್ದ ಹಾಗೆ ಮೈ ಮೇಲೆ ಏನೋ ಬಿದ್ದು, ಬೆಚ್ಚಿ ಎಚ್ಚರಗೊಂಡೆ. ಸುಖವಾಗಿ ಹತ್ತಿದ್ದ ನಿದ್ರೆಗೂ ಭಂಗ ತರುವರಲ್ಲ ಎಂದು ಬಹಳ ಕೋಪ ಬಂದು ತಿರುಗಿ ನೋಡಿದಾಗ, ಸುಮಾರು ೮–೯ ವರ್ಷದ ಹುಡುಗ ಓಡಿ ಬಂದ.

'ಸ್ಸಾರಿ ಅಂಕಲ್... ಬಾಲ್ ಬಂದು ಬಿತ್ತಾ?' ಎಂದು ಹೇಳಿ, ನನ್ನ ಉತ್ತರಕ್ಕೂ ಕಾಯದೆ, ಕೆಳಗೆ ಬಿದ್ದ ಚೆಂಡನ್ನು ಎತ್ತಿಕೊಂಡು ಓಡಲು ಪ್ರಯತ್ನಿಸಿದ.

'ಏಯ್ ! ನಿಂತ್ಕೊಳೋ! ಜನ ಇರೋ ಕಡೆ ಹುಷಾರಾಗಿ ಆಡ್ಬೇಕು ಅಂತ ಗೊತ್ತಾಗೋಲ್ವ ? ಯಾರಿಗಾದ್ರೂ ಏಟು ಬಿದ್ರೆ ಏನ್ ಕಥೆ?' ಗಡುಸಾಗಿ ಬೈದೆ. ಹುಡುಗನ ಮುಖ ಸ್ವಲ್ಪ ಕಪ್ಪಿಟ್ಟಿತು. ಇದೂವರೆವಿಗೂ ಅವನಲ್ಲಿದ್ದ ಒಂದು ಕಳೆ, ಇದ್ದಕ್ಕಿದ್ದ ಹಾಗೇ ಕಸಿದುಕೊಂಡು ಅಪರಾಧಿ ಭಾವನೆ ಕಾಡಲು ಪ್ರಾರಂಭವಾಯಿತು. ಅವನ ಕಡೆ ನೋಡಿ

ನಸು ನಕ್ಕೆ. ನಾನು ಹೋಗು ಎಂದು ಹೇಳುವುದನ್ನೇ ಕಾಯುತ್ತಾ ಚಡಪಡಿಸುತ್ತಿದ್ದ. ಅಲ್ಲೀ ತನಕ ಏಕಾಂತಕ್ಕಾಗಿ ಹಾತೊರೆಯುತ್ತಿದ್ದ ಮನಸ್ಸಿಗೆ, ಬಯಸದೇ ಸಿಕ್ಕಿದ ಈ ಪುಟ್ಟ ಗೊಂಬೆಯನ್ನು ಸುಲಭವಾಗಿ ಬಿಟ್ಟುಕೊಡುವ ಮನಸ್ಸಾಗಲಿಲ್ಲ. 'ಯಾರ್ಜೊತೆ ಆಟ ಆಡ್ತಿದ್ದೀಯ?' ಅಂದೆ. 'ಯಾರ್ಜೊತೆನೂ ಇಲ್ಲ! ನಾನೊಬ್ನೇ ಆಟ ಆಡ್ಕೊಳ್ತಿದ್ದೀನಿ'ಅಂದ ಪಿಲ್ಟು. ಕ್ಷಣಕಾಲ ನನ್ನ ಹಾಗು ಅವನ ಪರಿಸ್ಥಿತಿ ಏಕೋ ಒಂದೇ ಎನ್ನುವ ಭಾವನೆ ಬಂದು, 'ಒಬ್ನೇ ಆಟ ಆಡೋಕೆ ಬೇಜಾರಾಗೊಲ್ವ? ನನ್ಜೊತೆ ಆಟ ಆಡ್ತೀಯ?' ಅಂದೆ. 'ಅಯ್ಯೋ! ಇಲ್ಲಪ್ಪ, ನನಗೇನೂ ಬೇಜಾರಿಲ್ಲ! ನಿಮ್ಗೆ ಬೋರ್ ಆಗ್ತಿದೆ ಅಂದ್ರೆ, ನೀವು ಬಂದು ನನ್ಜೊತೆ ಆಟ ಆಡಿ.' ಸರಳವಾಗಿ ಹೇಳಿದ ಮಾತೂ, ಛಟ್ಟನೆ ಹೃದಯಕ್ಕೆ ನಾಟಿತು. ಇವನಿಗೂ ಬೇಡವಾಗಿದೆಯ ನನ್ನ ಸಂಗ ಎಂದು ಮನಸ್ಸು ಇನ್ನೂ ಬಾಡಿತು. ಒಂದು ವಿಧದ ವಿಚಿತ್ರ ಆಕ್ರೋಶ ಮನಸ್ಸಿನಲ್ಲಿ ಹುಟ್ಟಿತು. ಅವನಿಗೆ ನನ್ನ ಬೆಲೆ ಗೊತ್ತಿಲ್ಲದಿರಬಹುದು, ಬುದ್ಧಿ ಇಲ್ಲದ ಹುಡುಗ, ಇವನಿಗೆ ಜೀವನದ ಬಗ್ಗೆ ಹೇಳಿ ಕೊಡಬೇಕು ಎಂದೆನ್ನಿಸಿತು. 'ಬಾರೋ ಕೂತ್ಕೊ' ಎಂದು ಕರೆದೆ. 'ಏನು ನಿನ್ ಹೆಸರು?' ಒತ್ತಾಯಕ್ಕೆ ಒಪ್ಪಿ ಮನಸ್ಸಿಲ್ಲದ ಮನಸ್ಸಿನಿಂದ ಬಂದು ಕುಳಿತ. 'ನನ್ ಹೆಸರು ವಿಶ್ರುತ್' ಅಂದ ಮುದ್ದಾಗಿ. ಹೆಸರು ಕೇಳಿ ಏನೋ ಅರಿಯದ ಒಂದು ಸಂತಸ ಮನಸ್ಸನ್ನು ತುಂಬಿತು. ನನಗೂ ಸಂಧ್ಯಾಗೂ ಇಂಥದ್ದೇ ಒಂದು ಮಗುವಾದರೆ ಎಷ್ಟು ಚೆನ್ನಾಗಿರಬಹುದಲ್ಲಾ ಎಂದು ಮನಸ್ಸು ತನ್ನದೇ ಲೋಕಕ್ಕೆ ಹೋಗ ತೊಡಗಿತು. ಅಷ್ಟರಲ್ಲಿ ವಾಸ್ತವದ ಅರಿವಾಗಿ ಮತ್ತೇ ವರ್ತಮಾನಕ್ಕಿಳಿಯಿತು. ಹುಡುಗನ ಚಡಪಡಿಕೆ ಜಾಸ್ತಿಯಾಗುತ್ತಿತ್ತು. ಇನ್ನೂ ಚಿಕ್ಕವನು, ಇವನಿಗೆಲ್ಲಿಂದ ಬರಬೇಕು ಲೋಕಜ್ಞಾನ! ಅವನು ಒಂದು ದೊಡ್ಡ ಸಂಸ್ಥೆಯ ಉನ್ನತ ಅಧಿಕಾರಿಯ ಬಳಿ ಮಾತನಾಡುತ್ತಿದ್ದಾನೆ ಅನ್ನೋ ಪರಿವೆಯೇ ಇಲ್ಲ. ಅದೂ ನಿಜವೇ, ನಾನು ಚಿಕ್ಕಂದಿನಲ್ಲೇ ಎಷ್ಟು ಸ್ಪರ್ಧಾ ಮನೋಭಾವವನ್ನು ಬೆಳೆಸಿಕೊಂಡಿದ್ದೆ! ಅದಕ್ಕೇತಾನೇ ಇಷ್ಟರಮಟ್ಟಿಗೆ ಬೆಳೆದದ್ದು. ಅದನ್ನು ಕಂಡು ಜನರಿಗೆ ಹೊಟ್ಟೆ ಉರಿ, ನನ್ನ ಮನೆಯವರನ್ನೂ ಸೇರಿಸಿ ! ಇರಲಿ, ಅವರವರ ಸಣ್ಣತನ ಅವರವರಿಗೆ ! ಈ ಹುಡುಗನಿಗೆ ಸರಿಯಾದ ದಾರಿ ತೋರಿಸೋದು ನನ್ನ ಕರ್ತವ್ಯ ಎಂದು ಅನ್ನಿಸುತಿತ್ತು. 'ಎಷ್ಟನೇ ಸ್ಟಾಂಡರ್ಡ್ನಲ್ಲಿ ನೀನು ಓದ್ತಿರೋದು?' ಅಂತ ಕೇಳ್ದೆ. 'ನಾನು ೩ ಸ್ಟಾಂಡರ್ಡ್ನಲ್ಲಿ ಓದ್ತಿದ್ದೀನಿ'. '

'ಯಾವ ಸ್ಕೂಲ್?'

'ವಿದ್ಯಾವರ್ಧಿನಿ ಮಿಡಲ್ ಸ್ಕೂಲ್'.

'ಅದು ಇಲ್ಲೆಲ್ಲಾ ಸ್ಕೂಲ್‌ಗಳಿಗಿಂತ ಬೆಸ್ಟ್ ಸ್ಕೂಲ?'

'ನಂಗೇನ್ ಗೊತ್ತು? ನನಗಂತೂ ನನ್ ಸ್ಕೂಲ್ ಇಷ್ಟ!'

ಈ ಮಗುಗೆ ಏನು ಗೊತ್ತು ಶ್ರೇಷ್ಠನಾಗಿರೋದರ ಬಗ್ಗೆ ಅಂತ ಅವನ ಮೇಲೆ ಕನಿಕರ ಮೂಡಿತು ನನ್ನಲ್ಲಿ. ಇವತ್ತು ಒಳ್ಳೇ ಸ್ಕೂಲಿನಲ್ಲಿ ಓದಲಿಲ್ಲ ಎಂದರೆ, ನಾಳೆ ಇವನಿಗೆ ಒಳ್ಳೇ ಕಾಲೇಜಿನಲ್ಲಿ ಸೀಟ್ ಸಿಗೋದು ಹೇಗೆ ? ಆಮೇಲೆ ಒಳ್ಳೇ ಉದ್ಯೋಗ ದೊರಕಿಸಿಕೊಳ್ಳೋದು ಹೇಗೆ ? ಚಿಕ್ಕಂದಿನಲ್ಲೇ ನನಗೆ ನಾನು ಹೋದ ಪ್ರತಿಯೊಂದು ಶಾಲೆಯ ಬಗ್ಗೆ ಅಸಮಾಧಾನವಿತ್ತು. ಅಲ್ಲೆಲ್ಲೂ ನನ್ನ ಸಾಮರ್ಥ್ಯಕ್ಕೆ ತಕ್ಕ ವಾತಾವರಣವೇ ಇರಲಿಲ್ಲ.

ನನಗೆ ಸರಿಹೊಂದುವ ಶಾಲೆಗೆ ಸೇರಿಸುವುದು ನನ್ನ ಅಪ್ಪ ಅಮ್ಮನಿಗೆ ಒಂದು ದೊಡ್ಡ ಸವಾಲಾಗಿತ್ತು!

'ಅಲ್ವೋ ! ನೀನು ಒಳ್ಳೇ ಸ್ಕೂಲಿಗೆ ಹೋಗೋದಿಲ್ಲ ಅಂದ್ರೆ, ನಿನಗೆ ಒಳ್ಳೇ ಭವಿಷ್ಯ ಹೇಗೆ ಸಿಗುತ್ತೆ? ನಿನಗೆ ನಿನ್ ಸ್ಕೂಲ್ ಯಾಕೆ ಇಷ್ಟ? ಅದು ಬೆಸ್ಟ್ ಸ್ಕೂಲ್ ಆಗ್ದೇ ಹೋದ್ರೂ ಅದು ಹೇಗೆ ಇಷ್ಟಪಡ್ತೀಯ? ಬೇರೆ ಸ್ಕೂಲುಗಳನ್ನ ನೋಡಿದ್ದೀಯಾ ಹೇಗಿದೆ ಅಂತ?'

'ಇಲ್ಲ, ನನ್ ಸ್ಕೂಲ್ನಲ್ಲಿ ನನ್ ಫ್ರೆಂಡ್ಸ್ ಇದಾರೆ, ನಾವೆಲ್ಲಾ ಆಟ ಆಡ್ತೀವಿ, ಜೊತೆಗೆ ಓದ್ತೀವಿ, ನನಗೇ ಅದೇ ಸ್ಕೂಲ್ ಇಷ್ಟ'.

'ಹೋಗ್ಲಿ ಬಿಡು ಅದೇ ಸ್ಕೂಲ್ನಲ್ಲಿ ಇರು, ಹೋಗ್ಲಿ ಚೆನ್ನಾಗಿ ಓದ್ತೀಯ? ನೀನೇ ಫಸ್ಟ್ ರ್ಯಾಂಕ್ ಬರ್ತಿಯ?!'

'ಇಲ್ಲಪ್ಪ.... ನನ್ ಕ್ಲಾಸ್ನಲ್ಲಿ ರವಿ ಇದಾನೆ ಅವನೇ ಫಸ್ಟ್ ರ್ಯಾಂಕ್ ಬರೋದು ಯಾವಾಗ್ಲೂ!'

'ನೀನ್ಯಾಕೆ ಬರೊಲ್ಲ? ನೀನೂ ಫಸ್ಟ್ ರ್ಯಾಂಕ್ ಬರ್ಬೇಕು. ಅವನಿಗೆ ತಗೊಳ್ಳಕ್ಕೆ ಆಗುತ್ತೆ ಅಂದ್ರೆ ನಿನಗೂ ಆಗ್ಬೇಕು!' 'ಆಹಾ !! ಹಾಗೇನಿಲ್ಲ ನಂಗೆ ಚಿತ್ರ ಬರೆಯೋಕೆ ಬರುತ್ತೆ ಅವನಿಗೆ ಬರೋದೇ ಇಲ್ಲ, ಅವನಿಗೆ ಬ್ಯಾಟ್ ಬಾಲ್ ಆಡೋಕೇ ಬರೊಲ್ಲ!!'

'ಓ! ಹಾಗಿದ್ರೆ ನೀನು ಪೈಂಟರ್ ಆಗಬೇಕು ಅಂತ ಇದ್ದೀಯ?'

'ಇಲ್ಲ !'

'ಕ್ರಿಕೆಟ್ ಆಡ್ಬೇಕು ಅಂತ ಇದೀಯ?'

'ಇಲ್ಲಪ್ಪ...!!'

'ಮತ್ತೇನ್ ಆಗೋದಕ್ಕಿಷ್ಟ ನಿನಗೆ?!!'

'ನನಗೊತ್ತಿಲ್ಲ!' ನನಗೆ ಒಮ್ಮೆಲೆ ಆ ಮಗುವಿನ ಮೇಲೆ ಕನಿಕರ ಮತ್ತೆ ಮೂಡಿತು. ಇವನು ಮುಂದೆ ಜೀವನದಲ್ಲಿ ಏನಾಗಬೇಕು ಅನ್ನೋದನ್ನೇ ತಿಳ್ಕೊಂಡಿಲ್ಲ ಅಂದ್ರೆ, ಇವನು ಮುಂದೆ ಬೆಳೆದು ಏನಾಗ್ತಾನೆ? ಇವನ ವಯಸ್ಸಿನಲ್ಲಿ ನಾನು ಎಷ್ಟೆಲ್ಲ ಆಸೆ ಇಟ್ಕೊಂಡಿದ್ದೆ! ದೊಡ್ಡ ಕಾರ್ ಇರಬೇಕು, ದೊಡ್ಡ ಮನೆಯಲ್ಲಿ ಇರಬೇಕು ಅಂತೆಲ್ಲ. ಶ್ರೀಮಂತರ ಮನೆಗಳನ್ನ, ಆ ಮನೆಯಲ್ಲಿ ಆಡುತ್ತಿದ್ದ ಮಕ್ಕಳನ್ನ ನೋಡಿದಾಗಲೆಲ್ಲ, ನನ್ನ ಅಪ್ಪನ'ದುಃಸ್ಥಿತಿಯ ಬಗ್ಗೆ ಬೇಸರವಾಗುತ್ತಿತ್ತು. ನನ್ನಪ್ಪ ಯಾಕೆ ಅವರ ಹಾಗೆ ಆಗಲಿಲ್ಲ? ನನಗೂ ಆ ಎಲ್ಲಾ ಸುಖ ಸೌಲಭ್ಯಗಳನ್ನ ಕೊಡಬಹುದಿತ್ತು. ಒಂದು ವಿಧದಲ್ಲಿ ಆದರಿಂದ ನನ್ನ ವಂಚಿಸಿದ್ದು ನನ್ನ ತಂದೆ ತಾಯಿ ! ಇದರ ಬಗ್ಗೆ ನನಗೆ ಯಾವಾಗಲೂ ರೋಷ ಇದ್ದೇ ಇರುತ್ತೆ! ಅದೇ ಜಿದ್ದಿನಲ್ಲಿ ನಾನು ಎಷ್ಟೆಲ್ಲಾ ತ್ಯಾಗಗಳನ್ನ ಮಾಡಿಲ್ಲ! ಅಪ್ಪ ಅಮ್ಮ ಮಾಡಿಸುತ್ತಿದ್ದ ಯಾವುದೋ ಜುಜುಬಿ ಹುಟ್ಟು ಹಬ್ಬವನ್ನ ಬೇಡ ಅಂದಿದ್ದೆ! ಅದೇನೋ ಪುಣ್ಯ! ನನ್ನ ಶ್ರೀಮಂತ ಮಿತ್ರನ ಅಪ್ಪ ಅಮ್ಮ, ನನ್ನ ಮೇಲೆ ಸ್ವಲ್ಪ ಕನಿಕರಿಸಿ ಅಂದಿನ ದಿನಗಳಲ್ಲಿ ಹುಟ್ಟು ಹಬ್ಬವನ್ನ ಅವರ ಮನೆಯಲ್ಲಿ ಆಚರಿಸಿಕೊಟ್ಟರು. ಅದನ್ನೂ ಅಪ್ಪ ಅಮ್ಮನಿಂದ ಮುಚ್ಚಿಟ್ಟಿದ್ದಾಯ್ತು! ನಮ್ಮ ಅಪ್ಪ ಅಮ್ಮನಿಗೆ ಹುಟ್ಟು ಹಬ್ಬ ಮಾಡೋಕೆ ದುಡ್ಡಿಲ್ಲ ಅಂತ ಹೇಳಿದ್ನಲ್ಲ! ಅದೂ ನಿಜಾನೇ, ಇವರು ಮಾಡಿಸಿದ ರೀತಿ, ನಮ್ಮಪ್ಪ ಖಂಡಿತ ಮಾಡಿಸ್ತಿರ್ಲಿಲ್ಲ. ಅದಕ್ಕಿಂತ ಎಷ್ಟು ಜನ ಹುಡುಗರನ್ನ ದೂರ ಇಟ್ಟಿರಲಿಲ್ಲ! ಕೇವಲ ಶ್ರೀಮಂತ ಮನೆತನದ ಹುಡುಗರ ಜೊತೆ ಸ್ನೇಹ ಇಟ್ಟು ಕೊಂಡಿದ್ದು!! ಅದಕ್ಕೇ ತಾನೇ ಇಷ್ಟು ಎತ್ತರಕ್ಕೆ ಬೆಳೆಯೋಕೆ ಸಾಧ್ಯವಾಯಿತು! ವಿಶ್ರುತನ ಕಡೆ ನೋಡಿದೆ, ಅವನ ಪಾಡಿಗೆ ಕುಳಿತು, ಚೆಂಡನ್ನು ಮೇಲಕ್ಕೆತ್ತಿ ಎಸೆದು, ಅದನ್ನು ಹಿಡಿದು ಆಟವಾಡುತ್ತಿದ್ದ. ಇವರಪ್ಪ ಅಮ್ಮ ಪ್ರಾಯಶಃ ಅನುಕೂಲಸ್ಥರಿರಬಹುದು.

'ವಿಶ್ರುತ್! ನಿನ್‌ಮನೆ ಎಲ್ಲಿದೆ?'

'ಅಲ್ಲಿ.... ರೋಡ್ ಕಾಣಿಸ್ತಿದೆಯಾ?' ಪಾರ್ಕಿನ ಆಚಿನ ರಸ್ತೆಯ ಕಡೆ ಬೆರಳು ಮಾಡಿದ, ಸಾಲಾಗಿದ್ದ ಬಂಗಲೆಗಳು ಕಾಣಿಸಿದವು, 'ಅದರ ಹಿಂದೆ ಒಂದು ರೋಡ್ ಇದೆ, ಅಲ್ಲಿದೆ ನಮ್ಮನೆ'.

'ಓ! ಸರಿ, ತುಂಬಾ ದೊಡ್ಡ ಮನೆನಾ? ಏನೇನೆಲ್ಲಾ ಕೊಡಿಸ್ತಾರೆ ನಿಮ್ಮಪ್ಪ ನಿನಗೆ ಆಟ ಆಡೋಕೆ?'

'ಅಪ್ಪಾನಾ?' ಮಗುವಿನ ಮುಖ ಅರಳಿತು. ನನಗೆ ನನ್ನ ತಂದೆಯ ಬಗ್ಗೆ ಯೋಚಿಸಿದಾಗಲೆಲ್ಲ ಎಂದೂ ಹೀಗೆ ಮುಖವರಳಿಲ್ಲ. 'ಅಪ್ಪ ನಂಗೆ ಬ್ಯಾಟು, ಬಾಲು, ಕಾರು, ಗನ್ನು, ಆನೇ, ಸಿಂಹ, ಹುಲಿ, ಬೊಂಬೆ, ಮನೆ, ರೋಬಟ್, ಎಲ್ಲಾ ಕೊಡ್ಸಿದಾರೆ! ಇಷ್ಟಿಷ್ಟೇ ಇದೆ.... ಎಷ್ಟು ಚೆನ್ನಾಗಿದೆ ಗೊತ್ತಾ? ಬೇಕಾ? ನೀನೂ ಆಟ ಆಡ್ತಿಯ? ಬಾ!

ಕೊಡ್ತಿನಿ....' ಛಂಗನೆ ಕೆಳಗೆ ಜಿಗಿದು, ನನ್ನ ಕೈ ಹಿಡಿದು ಎಳೆಯ ತೊಡಗಿದ! ಮೊದಲ ಬಾರಿ ಅವನನ್ನ ಮುಟ್ಟಿದ್ದು! ಮನಸ್ಸು ಪುಳಕಗೊಂಡು ಚಿಗುರಿದ ಎಲೆಯಂತೆ ನವೀನ ಭಾವವನ್ನ ಅನುಭವಿಸುತ್ತಿತ್ತು. ಎಂಥ ಸ್ಪರ್ಶ! ಮಾಂತ್ರಿಕನಂತೆ ನನ್ನ ಎಳೆದುಕೊಂಡು ಅವನಾಡುತ್ತಿದ್ದ ಮರದ ಕೆಳಗೆ ಕರೆದೋಯ್ದು! ಎಲ್ಲೆಡೆ ಹರಡಿದ್ದ ಮಣ್ಣನ್ನು ಲೆಕ್ಕಿಸದೆ ಕೆಳಗೆ ಕುಳಿತು, 'ಕೂತ್ಕೊ!' ಎಂದು ಹೇಳಿತು ಮಗು. ಸ್ವಲ್ಪ ಹಸಿಯಾಗಿದ್ದ ಮಣ್ಣು.. ನನಗೆ ಸಂಕೋಚವಾಯಿತು. ಅದರ ಪರಿವೆಯೇ ಇಲ್ಲವೇನೋ ಅನ್ನೋ ಹಾಗೆ ವಿಶ್ರುತ್ ಅಲ್ಲಿ ಕೂತ. ಕಾರ್, ಬಸ್, ಲಾರಿ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಹರಡಿತ್ತು. ಒಂದು ಲಾರಿ ತಗೊಂಡು, ಅದರ ತುಂಬಾ ಕೆಳಗಿದ್ದ ಮಣ್ಣು ಹಾಕಿಕೊಂಡ !'

'ಈ ಲಾರಿ ಇಲ್ಲಿಂದ ಅಲ್ಲಿಗೆ ಹೋಗುತ್ತಂತಪ್ಪ.... ಬ್ರ್ ಬ್ರ್ ಬ್ರ್ ಬ್ರ್ ಬ್ರ್.... ಅಯ್ಯೋ ದಾರಿನಲ್ಲಿ ಮರ ಬಿದ್ದಿದೆ....(ಕಡ್ಡಿಯನ್ನ ಅತ್ತ ಸರಿಸಿ)....ಬ್ರ್ ಬ್ರ್ ಬ್ರ್.... ಈ ಕಡೆ ಇಂದ ಬಸ್ ಬಂತು.... ಪೊಂ ಪೊಂ.... ಝೂ....' ನಿಂತಿದ್ದ ನಾನು ಕುಳಿತಿದ್ದನ್ನೂ ಗಮನಿಸದೇ ಓಡಿಸುತ್ತಿದ್ದ ಅವನ ಲಾರಿಯನ್ನ. ಹೇಗಾದರೂ ಮಾಡಿ ಅವನನ್ನು ಮತ್ತೆ ಮಾತಿಗೆ ಎಳೆಯಬೇಕು ಎಂದು ಮನಸ್ಸು ಸತಾಯಿಸುತ್ತಿತ್ತು. ನೆವ ಹುಡುಕ ತೊಡಗಿದೆ.

'ನೀನು ದೊಡ್ಡವನಾದಾಗ ಏನಾಗ್ಬೇಕು ಅಂತ ಹೇಳ್ಲಾ?'

'ಸರಿ! ಹೇಳು'

'ನೀನು ಚಿತ್ರ ಬರೆಯೋನು ಆಗ್ತಿಯ?'

'ಯಾಕೆ ? ಅದ್ಯಾಕ್ ಆಗ್ಲಿ?'

'ನಿನಗೆ ಚಿತ್ರ ಬರೆಯೋಕೆ ಇಷ್ಟ ಅಲ್ವ? ಅದಕ್ಕೆ!'

'ನಾನು ಚಿತ್ರ ಬರೆಯೋದು ನನ್ನ ಇಷ್ಟಕ್ಕೆ! ಅದಕ್ಕೆ ಅಂತ ನಾನ್ಯಾಕೆ ಪೈಂಟರ್ ಆಗ್ಲಿ?' ಕೇವಲ ಸಂತೋಷಕ್ಕಾಗಿ ನಾನು ಏನೂ ಮಾಡಿದ್ದೇ ನೆನಪಿರಲಿಲ್ಲ. ಈಗ ಈ ಮಗುವಿನ ಮಾತನ್ನು ಅರ್ಥಮಾಡಿಕೊಳ್ಳುವ ಶಕ್ತಿ ನನಗಿರಲಿಲ್ಲ ಎಂದು ಭಾಸವಾಯಿತು. ಇಂದಿಗೂ ಕೂಡ ಪ್ರತಿಯೊಂದರಲ್ಲೂ ವ್ಯಾಪಾರ ಮನೋಭಾವವಿತ್ತು. ಸಂಧ್ಯಾಳ ಭಾವನೆಗಳೊಂದಿಗೂ ನಾನು ಇದೇ ರೀತಿ ನಡೆದುಕೊಂಡಿದ್ದೆ! ಎಲ್ಲವನ್ನ ಲಾಭ ನಷ್ಟಗಳ ತಕ್ಕಡಿಯಲ್ಲಿ ತೂಗುತ್ತಿದ್ದೆ. ಅವಳ ನಿರ್ಮಲವಾದ ಪ್ರೀತಿ ಕೂಡ ನನಗೆ ವ್ಯಾಪಾರವಾಯ್ತು. ಅವರಪ್ಪ ಖ್ಯಾತ ಉದ್ಯಮಿ ಎನ್ನುವ ಬಲವಾದ ಕಾರಣ ನನಗೆ ಅವಳನ್ನು ಪ್ರೀತಿಸಲು ಪ್ರೇರೇಪಿಸಿತು. ಈಗ ಅದೂ ಕೈ ತಪ್ಪುತ್ತಿತ್ತು. ನಾನು ಕಟ್ಟಿದ ಆಸೆಯ ಗೋಪುರ ನನ್ನ ಕಣ್ಣೆದುರಿಗೇ ಕುಸಿಯುತ್ತಿತ್ತು.

'ಬರೀ ಇಷ್ಟಕ್ಕೆ ಅಂತ ಚಿತ್ರ ಬರೀತಿಯ ? ಏನೇನ್ ಚಿತ್ರ ಬರೀತಿಯ? ತುಂಬಾ ಚೆನ್ನಾಗಿರುತ್ತ ನಿನ್ನ ಚಿತ್ರಗಳು? ಅದನ್ನ ಕಲಿಯೋಕೆ ಕ್ಲಾಸಿಗೆ ಹೋಗ್ತೀಯಾ?' ಒಂದು

ವಿಚಿತ್ರವಾದ ಪ್ರಾಣಿಯನ್ನು ನೋಡುವಂತೆ ನನ್ನ ಕಡೆ ನೋಡಿದ. ಮನಸ್ಸಿನಲ್ಲಿ ಏನೋ ಗೊಂದಲವಿದ್ದಂತೆ ! ಇವನ್ಯಾರು ಇದ್ದಕ್ಕಿದ್ದ ಹಾಗೆ ಬಂದು ಇಷ್ಟೆಲ್ಲಾ ಪ್ರಶ್ನೆ ಕೇಳ್ತಿದ್ದಾನಲ್ಲ ಅಂತ ಇರಬಹುದು.

'ನಾನ್ಯಾವ್ ಕ್ಲಾಸೂ ತಗೊಂಡಿಲ್ಲಪ್ಪ. ನನ್ ಮನಸ್ಗೆ ಹೇಗೆ ಬರುತ್ತೋ ಹಾಗೇ ಬರೀತಿನಿ. ಮನೆ, ಗಿಡ, ಮರ, ಹಕ್ಕಿ, ಇನ್ನೂ ಏನೇನೋ ಬರೀತೀನಿ' ಅಂದ. ಹುಚ್ಚು ಹುಡುಗ, ಎಲ್ಲಾ ಹುಡುಗಾಟ ಇವನಿಗೆ! ಮನಸ್ಸಿಗೆ ಬಂದಂತೆ ಚಿತ್ರ ಬಿಡಿಸ್ತಾನಂತೆ. 'ಮರವನ್ನ ಮರ ಇರೋ ಹಾಗೇ ಬರೀಬೇಕು ಕಣೊ! ನಿನಗೆ ಇಷ್ಟ ಬಂದ ಹಾಗೇ ಮರ ಬರೆದ್ರೆ, ಅದು ಮರ ಆಗೊಲ್ಲ!' ಅಂದೆ.

'ಅದು ನನ್ನ ಮರ. ನನಗೆ ಹೇಗ್ ಬೇಕೋ ಹಾಗೇ ಬರೀತಿನಿ.' ಒಂದು ವಿಧದ ಮುಗ್ಧ ಅಸಮಾಧಾನವಿತ್ತು ಅದರ ಮಾತಿನಲ್ಲಿ. ನನಗೇ ತಿಳಿಯದಂತೆ 'ಸ್ಸಾರಿ' ಬಂತು ಬಾಯಿಂದ. ಎಲ್ಲಾ ವಿಚಿತ್ರವಾಗಿದೆಯಲ್ಲ! ಏನಾಗ್ತಿದೆ ನನಗೆ! ಈ ಹುಡುಗನ ಹತ್ತಿರ ಬಂದ ತಕ್ಷಣ ನನಗೆ ಉತ್ತರಿಸಲಾಗದಂಥ ಪ್ರಶ್ನೆಗಳು ಮನಸ್ಸಿನಲ್ಲಿ ಮೂಡುತ್ತಿದೆ. ಮನಸ್ಸಿಗೆ ಬಂದ ಹಾಗೆ ನಾನು ನಿಜವಾಗಿಯೂ ಏನಾದರೂ ಮಾಡಿದ್ದೇನೆ? ಇದೂವರೆವಿಗೂ ಮಾಡಿದ ಸಾಧನೆಯೆಲ್ಲ ನನಗೆ ನನ್ನ ಮನಸ್ಸಿಗೆ ತೋರಿದ ವಿಷಯಗಳಾಗಿರಲಿಲ್ಲ. ಅದು ನನ್ನ ಮಹತ್ವಾಕಾಂಕ್ಷೆ, ಸ್ಪರ್ಧಾ ಮನೋಭಾವಗಳು ಬಿತ್ತಿದ ಬೀಜಗಳಾಗಿತ್ತು. ಈಗ ಅದು ಹೆಮ್ಮರವಾಗಿ ಬೆಳೆದು ಹೃದಯದ ಬೆಳಕು ಒಳಗೆ ಬರದಂತೆ ಆವರಿಸಿ ಕೇವಲ ಕತ್ತಲೆಯನ್ನು ಮಾತ್ರ ತುಂಬುವಂತೆ ಮಾಡಿದೆ. ಈ ಕತ್ತಲೆಯಲ್ಲಿ ನನ್ನ ಮನೆಯವರನ್ನ, ನನ್ನ ಸ್ನೇಹಿತರನ್ನ, ನನ್ನ ಪ್ರೀತಿಯನ್ನ ಕಳೆದುಕೊಂಡು ಅಳೆದಾಡುವ ಪ್ರೇತಾತ್ಮದಂತಿದ್ದೇನೆ. ಈ ಕತ್ತಲೆಯನ್ನು ನಿವಾರಿಸಲು ಧನದ ಕೃತಕ ಬೆಳಕಿನ ಮೊರೆ ಹೋಗಿದ್ದೇನೆ. ಈ ಅಲೆಮಾರಿತನ ಎಲ್ಲೀ ತನಕ.... 'ಢಮಾರ್!!! ಝೂಮ್..... ಟಪ ಟಪ..' ಬಸ್ಸಿಗೂ ಟ್ರಕ್ಕಿಗೂ ಢಿಕ್ಕೀ ಹೊಡಿಸಿ ವಿಶ್ರುತ್ ಟ್ರಕ್ಕನ್ನು ಕೆಳಗೆ ಬೀಳಿಸುತ್ತ ಆಡುತ್ತಿದ್ದ ಆಟ, ಪುನಃ ನನ್ನನ್ನು ಈ ಜಗತ್ತಿಗೆ ಕರೆ ತಂದಿತ್ತು. 'ಈ ಆಟ ಬೋರ್.... ಬ್ಯಾಟ್ ಬಾಲ್ ಆಟ ಆಡೋಣಾ?' ಚಿನಕುರುಳಿ ಪ್ರಶ್ನೆಗೆ ಸಮ್ಮತವೊಂದೇ ಉತ್ತರವಾಗಿತ್ತು. ಸಂತೋಷದಿಂದ ಚಪ್ಪಾಳೆ ತಟ್ಟುತ್ತ, ಚೆಂಡನ್ನು ನನ್ನೆಡೆಗೆ ಎಸೆದು, ಒಂದು ಬ್ಯಾಟ್ ಹಿಡಿದು ಮರದ ಕೆಳಗೆ ನಿಂತ. ಹತ್ತಿರದಲ್ಲೇ ನಿಂತು, ಒಮ್ಮೆ ಚೆಂಡನ್ನು ವೇಗವಾಗಿ ಎಸೆಯುವಂತೆ ಓಡಿ ಬಂದೆ, ಬೆಚ್ಚಿ ಪಟ್ಟನೆ ಕಣ್ಣು ಮುಚ್ಚಿದ, ಬಾಚಿ ತಬ್ಬಿ ಮುತ್ತಿಡುವ ಮನಸ್ಸಾಯಿತು. ಬದಲಿಗೆ, ಮೆಲ್ಲಗೆ ಚೆಂಡನ್ನು ಎಸೆದೆ. ಅವನ ಬ್ಯಾಟನ್ನು ಮೀರಿ ಮುಂದೆ ಹೋದ ಚೆಂಡಿನ ಹಿಂದೆ, ಬ್ಯಾಟ್ ಹಿಡಿದು, ಕೇಕೆ ಹಾಕಿ ನಗುತ್ತಾ, ಅಟ್ಟಿಸಿಕೊಂಡು ಹೋಗಿ, ಸಿಕ್ಕಿದ ಕಡೆಗೆ ಹೊಡೆಯುತ್ತ, ಆಟವಾಡ ತೊಡಗಿದ. ಸುತ್ತಲಿನ ಜನರೆಲ್ಲ ನೋಡ ತೊಡಗಿದರು. ಇವನಲ್ಲಿದ್ದ ನಗು ಅವರ ಮುಖದಲ್ಲಿ ಪ್ರತಿಫಲಿಸುತ್ತಿತ್ತು.

ಅಯಸ್ಕಾಂತದಂತೆ ಎಲ್ಲರ ಗಮನವನ್ನು ನಮ್ಮ ಕಡೆಗೆ ಸೆಳೆಯುತ್ತ, ನಗುತ್ತಾ ಒಬ್ಬನೇ ಆಟವಾಡುತ್ತಿದ್ದ. ಎಲ್ಲರ ಗಮನ ನನ್ನ ಕಡೆ, ಆ ಮಗುವಿನ ಕಡೆ ಇರುವುದನ್ನು ಗಮನಿಸಿದೆ. ನನಗೇ ಅರಿವಿಲ್ಲದೆ, ನನ್ನ ಚಾಳಿ ಆವರಿಸಿತು. 'ವಿಶು, ಬಾ ಇಲ್ಲಿ! ನಿನಗೆ ಸರಿಯಾಗಿ ಬ್ಯಾಟ್ ಮಾಡೋದನ್ನ ಹೇಳಿಕೊಡ್ತಿನಿ'. ಬ್ಯಾಟ್ ತಗೊಂಡು ಬಂದ. ಅವನನ್ನು ನಿಲ್ಲಿಸಿಕೊಂಡು ಅವನಿಗೆ ಬ್ಯಾಟ್ ಹಿಡಿಯುವ ವಿಧಾನದಿಂದ ಹಿಡಿದು, ಚೆಂಡನ್ನು ಹೊಡೆಯುವವರೆಗಿನ ಎಲ್ಲಾ ವಿಶ್ಲೇಷಣೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಕ್ಲಿಷ್ಟವಾಗಿ ಹೇಳಿದೆ. ಅಕ್ಕಪಕ್ಕದಲ್ಲಿ ಜನರು ನನ್ನನ್ನು ನೋಡುತ್ತಿರುವರೆಂದು ಆಗಾಗ ಪದೇ ಪದೇ ಖಾತರಿಪಡಿಸಿಕೊಳ್ಳುತ್ತಿದೆ. ನನ್ನ ಪಾಠವೆಲ್ಲಾ ಮುಗಿದ ಬಳಿಕ, ಕಡೆಗೆ ಅವನನ್ನು ಮತ್ತೆ ಕೆಳಗೆ ನಿಲ್ಲಿಸಿ 'ಈ ಸರ್ತಿ ಸರಿಯಾಗಿ ಹೊಡೀಬೇಕು ತಿಳೀತಾ ? ನಾನು ಹೇಳಿಕೊಟ್ಟಿದ್ದೀನಿ ಅಂದ್ರೆ ಚೆನ್ನಾಗಿ ಹೊಡೀಬೇಕು! ಹೇಗೆ ಬಾಲ್ ಹೊಡೀತಾರೋ ಹಾಗೇ ಹೊಡೀಬೇಕು, ನಿನ್ ಮನಸ್ಸಿಗೆ ಬಂದ ಹಾಗಲ್ಲ! ತಿಳೀತಾ?' ಎಂದು ಪದೇ ಪದೇ ಹೇಳಿದೆ. ಈ ಹುಡುಗ ಈಗ ಸರಿಯಾಗಿ ಹೊಡೀಲೇ ಬೇಕು, ಇಷ್ಟೆಲ್ಲ ನಾನು ಹೇಳಿಕೊಟ್ಟಿದ್ದೀನಿ, ಅದೂ ಇಷ್ಟು ಜನರ ಮುಂದೆ, ಸರಿ, ಮತ್ತೆ ಹೋಗಿ ಚೆಂಡನ್ನು ಎಸೆದೆ. ಕೈಯಿಂದ ಹೊರಟ ಚೆಂಡು ಮೆಲ್ಲನೆ ಅವನ ಕಡೆಗೆ ಓಡಿತು, ಬ್ಯಾಟನ್ನು ಎತ್ತಿದವನು, ಚೆಂಡನ್ನು ಅದರ ಕೆಳಗೆ ಹರಿಯಲು ಬಿಟ್ಟ, ಎಂದಿನಂತೆ ನಗುತ್ತಾ, ಅದನ್ನು ಅಟ್ಟಿಸಿಕೊಂಡು ಓಡತೊಡಗಿದ. ನನಗೆ ಕೆಂಡಾಮಂಡಲ ಕೋಪ ಆವರಿಸಿತು. 'ಏಯ್! ಬುದ್ಧಿ ಇದೆಯ ನಿನಗೆ? ಸುಮ್ನೆ ಹುಚ್ಚರ ಹಾಗೆ ಆಡೋದಲ್ಲ! ಹೇಗೆ ಆಡ್ಬೇಕು ಅಂತ ಗೊತ್ತಿಲ್ಲ ನಿನಗೆ? ಇಷ್ಟು ಹೊತ್ತು ಹೇಳಿ ಕೊಟ್ಟಿದ್ದೀನಿ. ಅದಾಗ್ಯೂ ಹೀಗೆ ಆಡ್ತೀಯಲ್ಲ! ನಿನ್ ಮನಸ್ಸಿಗೆ ಹೇಗೆ ತೋಚುತ್ತೋ ಹಾಗೆ ಆಡೋಕಲ್ಲ ಇರೋದು ಇದು. ಇದನ್ನ ಹೀಗೇ ಆಡ್ಬೇಕು! ಚೆಂಡನ್ನ ಹೀಗೇ ಹೊಡೀಬೇಕು! ನಿನಗೆಲ್ಲಿ ಗೊತ್ತಾಗ್ಬೇಕು ಇದೆಲ್ಲ. ಚೆನ್ನಾಗಿ ಓದೋ! ಮೊದಲನೆಯ ರ್‍ಯಾಂಕ್ ಬಾರೋ ಅಂದ್ರೆ ಇಲ್ಲ, ಹೋಗ್ಲಿ ಚಿತ್ರ ಚೆನ್ನಾಗಿ ಬರಿತಿಯ ಅಂದ್ರೆ, ಅದೂ ಇಲ್ಲ, ಸರಿಯಾಗಿ ಆಟ ಆಡೋಕೂ ಬರೊಲ್ಲ. ನಿನಗೆ ಮುಂದೆ ನೀನು ಎಲ್ಲಾರ್ಗಿಂತ ಹೇಗೆ ಚೆನ್ನಾಗಿ ಆಗ್ತೀಯ? ಹೇಗೆ ಎಲ್ಲಾರ್ಗಿಂತ ಮುಂದೆ ಬರ್ತೀಯ?' ಕ್ಷಣಕಾಲ ವಿಶ್ರುತ್ ದಿಗ್ಭ್ರಾಂತನಾದ. ಏನನ್ನು ಹೇಳಬೇಕು ತಿಳಿಯದೆ, ಗುಡುಗಿದ ನನ್ನ ಕಡೆ ಪೆಚ್ಚಾಗಿ ನೋಡಿದ. ಕಣ್ಣಲ್ಲಿ ನೀರು ತುಂಬ ತೊಡಗಿತು. ಅಲ್ಲೀ ತನಕ ಇದ್ದ ಸಂತೋಷ, ಉತ್ಸಾಹ, ಎಲ್ಲಾ ಮಾಯವಾಯಿತು! ಕಣ್ಣುಗಳು ಅಗಲವಾಗಿ, ಅದರಲ್ಲಿ ಕರಾಳ ಭಯ ತುಂಬಿತು. ನನಗೆ ಹೃದಯವೇ ಬಿರಿದ ಅನುಭೂತಿ. ಅವನನ್ನು ಬಾಚಿ ಹಿಡಿಯಲು ಹೋದೆ. 'ಬಿಡೋ! ಅಮ್ಮಾ....! ನಿನ್ನೊಜತೆ ಆಡೊಲ್ಲ ನಾನು! ಟೂ ನಿನ್ನೊಜತೆ! ನನಗೇನು ಹೀಗೇ ಬಾಲ್ ಹೊಡೀಬೇಕು ಅಂತಿಲ್ಲ. ನನಗೇನೂ ಬೆಸ್ಟ್ ಆಗ್ಬೇಕಾಗಿಲ್ಲ.... ನನ್ನಿಷ್ಟ ಬಂದ ಹಾಗೆ ನಾನು ಚಿತ್ರ ಬರೀತಿನಿ, ಆಟ ಆಡ್ತೀನಿ.. ನೀನೇನು ಬರ್ಬೇಕಾಗಿಲ್ಲ.... ಬಿಡೋ.... ಅಮ್ಮಾ!.... ನನ್ನ ಪಾಡಿಗೆ ನಾನಿರ್ತೀನಿ, ನಿಂಗೇನ್ ಕಷ್ಟ. ನನಗೆ ಹೀಗೇ ಇಷ್ಟ.

ನೀನಿಷ್ಟ ಇಲ್ಲ ನಂಗೆ' ಎಂದು ಚೀರುತ್ತ, ಅಳುತ್ತಾ, ಓಡಿದ ವಿಶ್ರುತ್. ತಡೆಯ ಹೊರಟ ನನ್ನ ಕೈಗಳು ಅಲ್ಲೇ ನಿಂತವು. ಬೆಳೆದು ನಿಂತ ನನ್ನ ಅಹಂಕಾರದ ವೃಕ್ಷಕ್ಕೆ ಅವನ ಒಂದೊಂದು ಮಾತೂ ಸಿಡಿಲಿನಂತೆ ಬಡಿದವು. ಹಬ್ಬಿದ ಗಾಢಾಂಧಕಾರದಲ್ಲಿ ಒಮ್ಮೆಲೆ ಮಿಂಚು ಬಡಿದಂತಾಯಿತು! ಅವನ ಮಾತಿನ ಗುಡುಗು, ನನ್ನನ್ನು ನಡುಗಿಸಿತು. ನನಗರಿವಿಲ್ಲದೇ ಕಣ್ಣುಗಳು ತೇವವಾದವು. ಮನಸ್ಸಿನಲ್ಲಿ ದುಃಖ ಕರಗಿ ಸುರಿಮಳೆಯಂತೆ ಮನಸ್ಸನ್ನು ತೊಳೆದಿತ್ತು. ಈ ಮಗುವೇ ಎಷ್ಟು ಪುಣ್ಯಶಾಲಿ. ತನ್ನ ಮನಸ್ಸಿಗೆ ಬಂದಂತೆ, ಸಂತೋಷವಾಗಿದ್ದ. ನಿಜವಾದ ತೃಪ್ತಿಯಿಂದ ಕೂಡಿದ್ದ ಎಲ್ಲವನ್ನು ಕಸಿದುಕೊಂಡ ಪಾಪಿ ನಾನು. ಕೇವಲ ಅವರಿವರ ಮನ್ನಣೆ ನನಗೆ ಹೆಚ್ಚಾಯಿತೇ ಹೊರತು, ನನಗೆ ನನ್ನ ಮನಸ್ಸಿನ ಶಾಂತಿ, ಸಂತೋಷ ಕಾಣಿಸಲೇ ಇಲ್ಲ. ಎಲ್ಲವಿದ್ದೂ ಕೂಡ ಬಡವನಾದೆ. ಸಾಗರದಷ್ಟು ವಿಶಾಲವಾಗಿದ್ದರೂ, ಬಾಯಾರಿದವನ ದಾಹ ಹಿಂಗಿಸಲಾಗದ ಕಾರ್ಪಣ್ಯತೆ ತುಂಬಿತ್ತು ನನ್ನ ಮನ್ನಣೆಯ ದಾಹದಲ್ಲಿ. ಈ ಮಗು ಸುಲಭವಾಗಿ ಹೇಳಿದ ಮಾತು, ದೊಡ್ಡವರಾದ ನಮ್ಮ ಮಾತಿನಲ್ಲಿ ಬರುವುದಿಲ್ಲ. ಪ್ರತಿಯೊಂದು ವಿಷಯವನ್ನೂ ಹಿರಿತನದ ಲೇಪದಲ್ಲಿ ಹೇಳುವ ನಮ್ಮ ಮಾತಿನಲ್ಲಿ ಢಂಭಾಚಾರ, ನಯವಂಚನೆ ತುಂಬಿದೆ. ನಿಜ, ಎಲ್ಲರಿಗಿಂತ ಶ್ರೇಷ್ಠನೇಕಿರಬೇಕು? ಕೇವಲ ಇತರರ ಮನ್ನಣೆ ಪಡೆಯಲೆ? ನನಗೆ ನನ್ನ ಮೇಲೇ ನಂಬಿಕೆ ಇರದೆ, ಇತರರ ಸನ್ಮಾನಗಳೇ ದರ್ಪಣವಾಗಿತ್ತು. ಆ ಮಗುವಿಗಿಂತ ಕೀಳ್ಮಟ್ಟದಲ್ಲಿ ನನ್ನ ಅಸ್ತಿತ್ವವಿತ್ತು. ಅವನು ಸಂತೋಷವಾಗಿದ್ದ, ನಾನು ಸದಾ ಅತೃಪ್ತನಾಗಿದ್ದೆ. ಇದೂವರೆವಿಗೂ ನಾನು ಬಾಳಿದ ಬದುಕು ಬಾಡಿಗೆಯ ಜೀವನವಾಗಿತ್ತು. ನಾನು ನನ್ನ ಬದುಕನ್ನು ಬದುಕಿರಲೇ ಇಲ್ಲ. ಅಪ್ಪ, ಅಮ್ಮ, ಅಣ್ಣ, ಅತ್ತಿಗೆ, ಸಂಧ್ಯಾ, ಎಲ್ಲರ ಮುಖ ಗಳೂ ಒಮ್ಮೆ ಕಣ್ಣೆದುರಿಗೆ ಹಾದು ಹೋದವು. ಹೆಜ್ಜೆ ಭಾರವಾಗಿತ್ತು, ನಡಿಗೆ ನಿಧಾನಿಸಿತ್ತು. ವಿಶ್ರುತನನ್ನು ಹುಡುಕಿದೆ. ಎಲ್ಲೂ ಅವನ ಸುಳಿವಿರಲಿಲ್ಲ. ಮಿಂಚಿನಂತೆ ಬಂದು ಕಣ್ತೆರೆಸಿ ಮಾಯವಾಗಿದ್ದ. ಕಾರಿನ ಕಡೆಗೆ ನಡೆದೆ. ಮನಸ್ಸು ನಿರಾಳವಾಗಿತ್ತು. ಅಪ್ಪ ಅಮ್ಮನ ಮನೆ ಕಡೆಗೆ ರಸ್ತೆ ಹಿಡಿದೆ.

•

# ಸ್ವಾತಂತ್ರ್ಯ

ಗುಂಡು ಶಂಕರ್
ಶೈಲಜ ಶಂಕರ್

ಯಾವಾಗಲೂ ಹೀಗೇ ಇರಲಿಲ್ಲ. ರಾಜ, ತನ್ನ ಹಿಂದಿನ, ಆನಂದಮಯವಾಗಿದ್ದ ಬಾಲ್ಯ ದಿನಗಳನ್ನು ನೆನಪಿಸಿಕೊಳ್ಳುತ್ತಿದ್ದ. ಕಾಲಕ್ರಮೇಣ ಮನೆಯಲ್ಲಿ ಕಷ್ಟ ಹೆಚ್ಚಾಗುತ್ತಿತ್ತು. ಅವರ ಬದುಕಿನ ಹೊರವಲಯದಲ್ಲಿ ಆಗುತ್ತಿದ್ದ ಸಣ್ಣ, ಸಣ್ಣ ಬದಲಾವಣೆಗಳು, ಮೊದಲಲ್ಲಿ ಗಮನಕ್ಕೇ ಬಾರದಂತಿದ್ದ ಬದಲಾವಣೆಗಳು, ಈಗ ಅವರ ಬದುಕನ್ನು ಸಂಪೂರ್ಣವಾಗಿ ಆಕ್ರಮಿಸಿಬಿಟ್ಟಿತ್ತು. ಈ ಎಲ್ಲ ಬದಲಾವಣೆಗೂ ಅವರಿದ್ದ ಮನೆ ಮೂಕಸಾಕ್ಷಿಯಾಗಿ, ಕಾಲಾತೀತವಾಗಿ, ಸ್ಥಿರವಾಗಿ ನಿಂತಿತ್ತು.

ಹಳ್ಳಿಯ ಮಧ್ಯಭಾಗದಲ್ಲಿ ದೊಡ್ಡ ಗುಡ್ಡವಿದೆ. ಆ ಗುಡ್ಡದ ಮೇಲಿದ್ದ ವಿಶಾಲವಾದ ಮನೆಯೇ ಅವರ ಮನೆ. ಆ ಮನೆಯ ಅಂಗಳದಲ್ಲಿ ನಿಂತು ನೋಡಿದರೆ, ಕಣ್ಣು ಹಾಯುವಷ್ಟು ದೂರದವರೆಗೂ ಇದ್ದ ಭೂಮಿ ಒಂದು ಕಾಲಕ್ಕೆ ಅವರಿಗೆ ಸೇರಿತ್ತು. ಈಗ ಉಳಿದಿದ್ದದ್ದು ಈ ಮನೆ ಮಾತ್ರ. ರಾಜ, ಈ ಮನೆ ಮತ್ತು ಮನೆಯ ಮುಂದಿನ ಅಂಗಳದಲ್ಲಿದ್ದ ಕಲ್ಲು ಬೆಂಚುಗಳನ್ನು ಅತ್ಯಂತವಾಗಿ ಇಷ್ಟಪಡುತ್ತಿದ್ದ. ಈ ಕಲ್ಲು ಬೆಂಚಿನ ಮೇಲೆ ಕುಳಿತು ನೋಡಿದರೆ ಹಳ್ಳಿಯ ಪಕ್ಷಿನೋಟದ ದರ್ಶನವಾಗುತ್ತಿತ್ತು. ಬೆಟ್ಟದ ಮೇಲೆ ಚುಕ್ಕಿಗಳಂತಿದ್ದ ಮರಗಳು, ಈ ಮನೆಯ ಮೆಟ್ಟಿಲ ಬುಡಕ್ಕೆ ಬರುತ್ತಿದ್ದ ಕಾಲುದಾರಿ, ಹಳ್ಳಿಯಿಂದ ಬಸ್ಸಿನ ರಸ್ತೆಗೆ ಹೋಗುವ ಕಾಲುದಾರಿ, ಎಡದಲ್ಲಿದ್ದ ಸಣ್ಣ ಗುಡ್ಡದ ಪಕ್ಕಕ್ಕಿರುವ ಕೊಳ ಇವೆಲ್ಲ ಕಾಣುತ್ತಿತ್ತು. ಹಳ್ಳಿಯವರ ಮನೆಗಳು ಅಲ್ಲಲ್ಲಿ ಸಣ್ಣ, ಸಣ್ಣ ಗುಡ್ಡದ ಸುತ್ತು ಬಳಸಿನಲ್ಲಿ ಚದುರಿತ್ತು. ಸಂಜೆಯ ಹೊತ್ತು ಈ ಬೆಂಚಿನ ಮೇಲೆ ಕೂಡುವುದು ಅವನಿಗೆ ಪ್ರಿಯವಾಗಿತ್ತು. ಮರಗಳ ಮಧ್ಯೆ ಮುಳುಗುತ್ತಿದ್ದ ಸೂರ್ಯ, ಅದಕ್ಕೆ ಹಿನ್ನೆಲೆಯೇನೋ ಎಂಬಂತೆ ಮೇಳೈಸುತ್ತಿದ್ದ ಕ್ರಿಮಿಕೀಟಗಳ ಸದ್ದು, ಮರದ ಗೂಡಿಗೆ ಧಾವಂತವಾಗಿ ಹಿಂತಿರುಗುತ್ತಿದ್ದ ಹಕ್ಕಿಗಳು – ಈ ನೋಟ ಅವನ ಮನಸ್ಸಿಗೆ ಶಾಂತಿ ಕೊಡುತ್ತಿತ್ತು. ಸಂಜೆ ಮುಳುಗಿ ರಾತ್ರಿಯಾಗುತ್ತಿದ್ದಂತೆ ಅವನ ಮನೆಯಲ್ಲಿ ಏನು ನಡೆಯಬಹುದೆಂಬುದು ಯಾರಿಗೂ ಗೊತ್ತಿರುತ್ತಿರಲಿಲ್ಲ.

ಮನೆಯ ಒಳಭಾಗ ವಿಶಾಲವಾಗಿತ್ತು. ದಪ್ಪ ಮರದ ಬಾಗಿಲನ್ನು ದಾಟಿದರೆ ದೊಡ್ಡ ಹಾಲು. ಅಲ್ಲಿ, ಗೋಡೆಯ ಮೇಲೆ ಮುತ್ತಾತ, ಮುತ್ತಜ್ಜಿಯರ ದೊಡ್ಡ ಭಾವಚಿತ್ರಗಳನ್ನು ಮರದ ಚೌಕಟ್ಟಿನಲ್ಲಿ ಸೇರಿಸಿ ಮೊಳೆಗೆ ನೇತು ಹಾಕಿತ್ತು. ಆ ಚಿತ್ರಗಳ ಕೆಳಗೆ ಪ್ರಮುಖವಾಗಿ ಕಾಣುತ್ತಿದ್ದುದು ಆ ಚಿತ್ರವನ್ನು ತೆಗೆದವನ ಹೆಸರೇ ಹೊರತು ಚಿತ್ರದಲ್ಲಿದ್ದ ಮನುಷ್ಯರದ್ದಲ್ಲ. ಹಾಲಿನ ಎಡಭಾಗಕ್ಕಿದ್ದ ಬಾಗಿಲನ್ನು ದಾಟಿದರೆ, ಅದರ ಎಡ ಮತ್ತು ಬಲದಲ್ಲಿ ಎರಡು ಕೋಣೆಗಳಿದ್ದುವು. ಎಡದಲ್ಲಿದ್ದ ಕೋಣೆಗಳಲ್ಲಿ ಒಂದು ತಾತನದು, ಮತ್ತೊಂದು ಅವನ ಅತ್ತೆ (ತಂದೆಯ ತಂಗಿ) ಯದು. ದೊಡ್ಡ ಹಾಲಿನ ಬಲಭಾಗಕ್ಕಿದ್ದ ಎರಡು ಕೋಣೆಗಳಲ್ಲಿ ದೊಡ್ಡದನ್ನು ಅವನ ಅಪ್ಪ-ಅಮ್ಮ, ಚಿಕ್ಕ ಕೋಣೆಯನ್ನು ಇವನು ಉಪಯೋಗಿಸುತ್ತಿದ್ದರು. ಈ ಹಾಲಿನ ಹಿಂದಿನ ಬಾಗಿಲನ್ನು ದಾಟಿದರೆ ಕಾಣುತ್ತಿದ್ದುದೇ ದೊಡ್ಡ ಅಂಗಳ. ಅಂಗಳದ ಎಡದ ಅಂಚಿಗೆ ಅಡುಗೆಮನೆ, ಉಗ್ರಾಣ, ದೇವರಮನೆ. ಬಲದಂಚಿನಲ್ಲಿ ಸಣ್ಣ ವಠಾರ. ಅದರ ಪಕ್ಕಕ್ಕೆ ಬಚ್ಚಲು ಮನೆ, ಕಕ್ಕಸ್ಸಿನ ಕೋಣೆಗಳು.

ಒಂದು ಕಾಲದಲ್ಲಿ, ಆ ಮನೆಯ ಕೆಲಸಗಳಿಗೆ ತನ್ನದೇ ಆದ ಲಯವಿತ್ತು. ಬೆಳಗಿನ ಹೊತ್ತು ಅವನ ಅಮ್ಮ ಮತ್ತು ಅತ್ತೆ ಮಿಕ್ಕವರು ಏಳುವ ಮುನ್ನವೇ ಎದ್ದು, ಹಸುವಿನ ಹಾಲನ್ನು ಕರೆದು, ಅಡುಗೆಮನೆಯ ಒಲೆಯಲ್ಲಿ ಉರಿ ಹಾಕುತಿದ್ದರು. ಬೆಳಗಿನ ತಿಂಡಿ, ಸ್ನಾನ, ಆಮೇಲೆ ಊಟ. ಅವನತ್ತೆ ವಿವಿಧ ದೇವರ ಪಟಗಳಿಂದ ಅಲಂಕೃತವಾದ ದೇವರಮನೆಯಲ್ಲಿ ಸುಮಾರು ಗಂಟೆಗಳ ಕಾಲವನ್ನು ಕಳೆಯುತ್ತಿದ್ದರು. ಅವರ ಆರ್ತ್ರವಾದ ಪ್ರಾರ್ಥನೆಗಳು ಅವರಿಗಿದ್ದ ಸಮಸ್ಯೆಯನ್ನು ಕಡಿಮೆ ಮಾಡಲು ಯಾವ ರೀತಿಯಲ್ಲೂ ಸಹಾಯಕವಾಗಿರಿಲ್ಲ. ಪ್ರಾರ್ಥನೆ, ದೇವರ ಪೂಜೆ ಮುಗಿದ ನಂತರ ಅವರೇ ಸಾಕಿದ ಬೆಕ್ಕು, ನಾಯಿಗಳೊಂದಿಗೆ ಅಡುಗೆ ಮನೆಗೆ ಹೋಗುತ್ತಿದ್ದರು. ಪ್ರತಿಯೊಂದು ನಾಯಿಗೂ, ಬೆಕ್ಕಿಗೂ ಪ್ರತ್ಯೇಕವಾಗಿ ಹೆಸರಿಸಿಟ್ಟಿದ್ದ ಅತ್ತೆ, ಅವುಗಳೊಂದಿಗೆ ಸಂಭಾಷಿಸುತ್ತಾ ಅಡುಗೆ ಮಾಡುತ್ತಿದ್ದರು. ಆ ನಾಯಿ, ಬೆಕ್ಕುಗಳು ಸದಾಕಾಲ ಅವರ ಹಿಂದೆಯೇ ಇದ್ದು, ರಾತ್ರೆ ಅವರ ಕೋಣೆಯಲ್ಲೇ ಮಲಗುತ್ತಿದ್ದವು. ಮದುವೆಯಾಗದ ಅತ್ತೆ ಕೊನೆಯವರೆಗೂ ಬ್ರಹ್ಮಚಾರಿಣಿಯಾಗೇ ಉಳಿದಿದ್ದರು. ರಾಜ, ಸದಾಕಲ ಅತ್ತೆಯೊಡನೆಯೇ ಇರುತ್ತಿದ್ದ ಬೆಕ್ಕು, ನಾಯಿಗಳೇ ಅವರ ಕುಟುಂಬವೆಂದು ಭಾವಿಸಿದ್ದ.

ರಾಜನ ಬಾಲ್ಯದ ನೆನಪು ಸುಖಕರವಾದದ್ದು. ಅವನು ತನ್ನ ಅಜ್ಜಿಯನ್ನು ಕಂಡೇ ಇರಲಿಲ್ಲ. ಆದರೆ, ತಾತನೊಡನೆ ಇರುವುದು ಅವನಿಗೆ ಸಂತೋಷ ತರುತ್ತಿತ್ತು. ಅವನ ತಾತ ಮಹಾರಾಜರ ಕೈ ಕೆಳಗೆ ಮೂವತ್ತು ವರುಷಗಳ ಕಾಲ ಕೆಲಸಮಾಡಿ ನಿವೃತ್ತರಾಗಿದ್ದರು. ಬೆಂಗಳೂರಿಗೆ ಹತ್ತಿರವಾಗಿದ್ದ ಈ ಹಳ್ಳಿಯ ಜಮೀನನ್ನು ಮಹಾರಾಜರು ಅವರಿಗೆ ಬಳುವಳಿಯಾಗಿ ನೀಡಿದ್ದರು. ಆ ದಿನಗಳು ಭಾರತದ ಸ್ವಾತಂತ್ರ್ಯಪೂರ್ವ ದಿನಗಳು.

ಮಹಾರಾಜರು ಬೇಕಾದಷ್ಟು ಭೂಮಿ, ಅರಮನೆಗಳು, ಕುದುರೆಗಳು, ವಿದೇಶಿ ಕಾರುಗಳು -- ಇವೆಲ್ಲವನ್ನೂ ಒಳಗೊಂಡು ದರ್ಪದಿಂದ ಇದ್ದ ದಿನಗಳು. ಬಳುವಳಿಯಾಗಿ ಕೊಟ್ಟ ಈ ಜಮೀನು ಬೆಂಗಳೂರಿನಿಂದ ಸ್ವಲ್ಪ ದೂರದಲ್ಲಿದ್ದ ಕಾರಣ ಬಹುಶಃ ತನ್ನ ತಾತ ಹೆಚ್ಚಿನ ಪದವಿಯ ಕೆಲಸದಲ್ಲಿ ಇರಲಿಲ್ಲ. ಇದ್ದಿದ್ದರೆ, ಬೆಂಗಳೂರು ನಗರದಲ್ಲಿಯೇ ಜಮೀನು ಸಿಕ್ಕಿರುತ್ತಿತ್ತು ಎಂದು, ರಾಜ ಆಲೋಚಿಸಿದ್ದ.

ತನ್ನ ಬಾಲ್ಯದ ಮೊದಲ ದಿನಗಳಲ್ಲಿ ತಾತ ಯಾವಾಗಲೂ ಮನೆಯಲ್ಲಿಯೇ ಇರುತ್ತಿದ್ದರು. ಮಹಾರಾಜರ ದರ್ಬಾರಿಗೆ ಹೋಗುವಾಗ ಧರಿಸುತ್ತಿದ್ದ ನುಣುಪಾದ ರೇಶಿಮೆಯ ವಸ್ತ್ರವನ್ನೇ ಈಗಲೂ ಧರಿಸುತ್ತಿದ್ದರು. ಜಮೀನನ್ನು ರೈತರಿಗೆ ಬಾಡಿಗೆ ಕೊಟ್ಟಿದ್ದರು. ರೈತರಿಂದ ಒಳ್ಳೆಯ ಆದಾಯವೇ ಸಿಗುತ್ತಿತ್ತು. ಅವನ ತಾತ ಪ್ರತಿದಿನ ಬೆಳಿಗ್ಗೆ ಸ್ನಾನವಾದ ನಂತರ ರೈತರೊಡನೆ ಮಾತನಾಡಲು ಹೋಗುತ್ತಿದ್ದರು. ತಾತ, ಪ್ರಾಮಾಣಿಕ ಮತ್ತು ಕರುಣಾಮಯ ವ್ಯಕ್ತಿ. ಹೀಗಾಗಿ ರೈತರು ಅವರನ್ನು ಬಹು ಮರ್ಯಾದೆಯಿಂದ ಕಾಣುತ್ತಿದ್ದರು.

ಸಂಜೆಯ ಹೊತ್ತು ರಾಜ ತಾತನೊಂದಿಗೆ ಕಲ್ಲುಬೆಂಚಿನ ಮೇಲೆ ಕೂಡುತ್ತಿದ್ದ. ತಾತ ಸುದ್ದಿಪತ್ರಿಕೆಯನ್ನು ಓದುತ್ತಿದ್ದರು. ಹಳ್ಳಿಯ ಜನರು ಈ ಹೊತ್ತಿನಲ್ಲಿ ತಾತನೊಡನೆ ಮಾತನಾಡಲು ಅಥವಾ ಅವರಿಂದ ತಮ್ಮ ಸಮಸ್ಯೆಗೆ ಪರಿಹಾರ ಪಡೆಯಲು ಬರುತ್ತಿದ್ದರು. ದೊಡ್ಡನಗರದ ಸಮಾಚಾರವೇನೆಂದು ಕೇಳುತ್ತಿದ್ದರು. ತಾತ ಅವರು ಕೇಳಿದ ಪ್ರಶ್ನೆಗೆ ಸಂಬಂಧಿಸಿದ ಉತ್ತರವನ್ನು ಸುದ್ದಿಪತ್ರಿಕೆಯಿಂದ ಓದಿ, ಅವರಿಗೆ ತಿಳಿಯದಿದ್ದಲ್ಲಿ, ಅರ್ಥವಾಗುವಂತೆ ಸುಲಭವಾದ ವಿವರಣೆ ಕೊಡುತ್ತಿದ್ದರು. ಬಹಳಷ್ಟು ಪ್ರಶ್ನೆಗಳು ತಾತನಿಗೆ ಅವರಿಂದ ಬರುತ್ತಿದ್ದವು. ಪ್ರಶ್ನೋತ್ತರ ಮುಗಿದನಂತರ, ಕೊನೆಯಲ್ಲಿ ತಮ್ಮ ಹಳ್ಳಿಯ ಜೀವನವೇ ಸುಖ ಎಂದು ತೀರ್ಮಾನಿಸಿ ಪಟ್ಟಣದ ವಿಚಿತ್ರ ಆಗುಹೋಗುಗಳಿಗೆ ತಮ್ಮ ತಲೆ ಕೊಡವಿ ಮನೆಗೆ ಮರಳುತ್ತಿದ್ದರು.

ಸುದ್ದಿಪತ್ರಿಕೆಯಲ್ಲಿ ಭಾರತಾದ್ಯಂತ ವಿವಿಧ ರಾಜ್ಯಗಳಲ್ಲಿ ನಡೆದ, ನಡೆಯುತ್ತಿರುವ ಘಟನೆಗಳ ವಿವರಗಳು ತುಂಬಿರುತ್ತಿದ್ದವು. ಭಾರತದ ಸ್ವಾತಂತ್ರ್ಯ ಹೋರಾಟ ರಾಜ ಹುಟ್ಟುವ ಮೊದಲೇ ಶುರುವಾಗಿತ್ತು. ರಾಜನಿಗೆ ಈ ವಿವಿಧ ರಾಜ್ಯಗಳು ಎಲ್ಲಿವೆಯೆಂದು ಗೊತ್ತಿರಲಿಲ್ಲ. ತಾತ ಈ ವಿವರಗಳನ್ನು ಓದಿ ಭಾರತದ ಸ್ವಾತಂತ್ರ್ಯ, ಗಾಂಧೀಜಿ ಎದುರಿಸುತ್ತಿದ್ದ ಕಷ್ಟಗಳು, ಭಾರತದ ನ್ಯಾಶನಲ್ ಕಾಂಗ್ರೆಸ್ಸಿನ ಹೋರಾಟ, ಇವುಗಳ ಬಗ್ಗೆ ಕಳಕಳಿಯಿಂದ ಮಾತನಾಡುತ್ತಿದ್ದರು. ಇದು ಅಲ್ಲಿದ್ದ ಜನರಿಗೆ ಒಮ್ಮೊಮ್ಮೆ ಹಾಸ್ಯಾಸ್ಪದವಾಗಿ ತೋರುತ್ತಿತ್ತು. ಹಳ್ಳಿಯವರಿಗೆ ಈ ಸ್ವಾತಂತ್ರ್ಯದ ಹೋರಾಟ ತಮ್ಮ ಜೀವನದಮೇಲೆ ಯಾವ ರೀತಿಯಲ್ಲಿ ಪರಿಣಾಮ ಬೀರಬಹುದೆಂಬುದು ತಿಳಿಯುತ್ತಿರಲಿಲ್ಲ. ಸದ್ಯಕ್ಕೆ ತಮ್ಮ ಜೀವನ ರೀತಿಯಲ್ಲಿ ಯಾವ ಬದಲಾವಣೆಯೂ ಇಲ್ಲದ ಕಾರಣ, ಹೆಚ್ಚಾಗಿ

ಅವರು ಇದಕ್ಕೆ ಗಮನ ಕೊಡುತ್ತಿರಲಿಲ್ಲ. ಅವರ ಈ ನಡವಳಿಕೆ ತಾತನಿಗೆ ಬಹಳ ಕೋಪ ತರಿಸುತ್ತಿತ್ತು. ಕೆಲವು ದಿನ ತಾತ ಇವರ ನಡವಳಿಕೆಯಿಂದ ಬೇಸತ್ತು, ಜೋರಾಗಿ ಇವರೆಲ್ಲರ ಮೇಲೆ ಕೂಗಿ, ನಿಸ್ಸಹಾಯಕತೆಯಿಂದ ಕೈ ಮೇಲೆತ್ತಿ ಗಾಳಿಯಲ್ಲಿ ಕೊಡವುತ್ತಿದ್ದರು. ಈ ವರ್ತನೆ ಹಳ್ಳಿಯವರಿಗೆ ನಗುತರಿಸಿ, ಅವರು ಮೆಲ್ಲಗೆ ನಕ್ಕು, ತಮ್ಮ ತಲೆ ಕೊಡುವುತ್ತಿದ್ದರು. ತಾತನಿಗೆ, ಆಗ, ಕೋಪ ಇನ್ನೂ ಹೆಚ್ಚುತ್ತಿತ್ತು.

ತಮ್ಮ ಹಳ್ಳಿಯ ಜನರ ಈ ಬೇಜವಾಬ್ದಾರಿ ನಡಾವಳಿಕೆಯೇ ಪ್ರಾಯಶಃ ತಾತನಲ್ಲಿ ಬೆಂಗಳೂರಿನ ಕಾಂಗ್ರೆಸ್ಸಿನ ಚಟುವಟಿಕೆಗಳಲ್ಲಿ ಖುದ್ದಾಗಿ ಭಾಗವಹಿಸುವಂತೆ ಪ್ರಚೋದಿಸಿದ್ದಿರಬೇಕು ಎಂಬ ಅಂಶ ರಾಜನಿಗೆ ಈಗಷ್ಟೇ ಹೊಳೆದಿತ್ತು. ಕಾಗ್ರೆಸ್ಸಿನ ಮೀಟಿಂಗಿನಲ್ಲಿ ಪಾಲ್ಗೊಳ್ಳಲು ತಾತ ಪ್ರತಿವಾರ ಬೆಂಗಳೂರಿಗೆ ಹೋಗುತ್ತಿದ್ದರು. ಕೆಲವೊಮ್ಮೆ ಅಲ್ಲಿಯ ಹೊಟೇಲ್ಲಿನಲ್ಲಿಯೇ ರಾತ್ರಿ ತಂಗುತ್ತಿದ್ದರು. ಮರುದಿನ ಹಳ್ಳಿಗೆ ಹಿಂತಿರುಗಿದ್ದ ತಾತ, ಸುಸ್ತಾಗಿದ್ದಂತೆ ಕಂಡರೂ, ಬೆಂಗಳೂರಿನಲ್ಲಿ ನಡೆದ ಘಟನೆಗಳು ಅವರನ್ನು ಉತ್ಸಾಹಶಾಲಿಯನ್ನಾಗಿಯೇ ಮಾಡಿತ್ತು. ಕಾಂಗ್ರೆಸ್ಸು, ಅದರ ಮುಖ್ಯಸ್ಥರು, ಗಾಂಧೀಜಿಯವರ ಸತ್ಯಾಗ್ರಹ -- ಈ ಎಲ್ಲ ವಿಚಾರಗಳನ್ನು ಕುರಿತು ತಾತ ಭಾವಪೂರ್ವಕವಾಗಿ ಮಾತನಾಡುತ್ತಿದ್ದರು. ರಾಜನಂತೂ ತಾತ ಪಟ್ಟಣದಿಂದ ಹಿಂದಿರುಗುವ ದಿನವನ್ನೇ ಎದಿರು ನೋಡುತ್ತಿದ್ದ. ತಾತ ತಮ್ಮ ಕೋಟಿನ ಜೇಬಿನಲ್ಲಿ ರಾಜನಿಗೆಂದೇ ಚಾಕಲೇಟುಗಳನ್ನು ಇಟ್ಟಿರುತ್ತಿದ್ದರು. ರಾಜ ಚಾಕಲೇಟನ್ನು ಬಾಯಲ್ಲಿ ಹಾಕಿಕೊಂಡು ತಾತನ ಕೈಹಿಡಿದು ತಾತನ ಜೊತೆಯೇ ಮನೆಗೆ ನಡೆದು ಬರುತ್ತಿದ್ದ. ಅಗಲವಾಗಿ, ಬಲವಾಗಿದ್ದ ತಾತನ ಕೈ ನರಗಳು ಉಬ್ಬಿದ್ದವು. ತಾತನ ಈ ಬಲವಾದ ಕೈಯನ್ನು ಹಿಡಿದು, ಉಬ್ಬಿದ್ದ ನರಗಳನ್ನು ತನ್ನ ಕೈಗಳಲ್ಲಿ ಒತ್ತಿದಾಗ ಅವು ಮೃದುವಾಗುತ್ತಿದ್ದ ರೀತಿ ರಾಜನಿಗೆ ಹಿತವೆನ್ನಿಸುತ್ತಿತ್ತು.

ತಾತ ಈಗ ಖದ್ದರ್ ಉಡುಪನ್ನೇ ಧರಿಸುತ್ತಿದ್ದರು. ಖಾದಿ ಬಟ್ಟೆಯನ್ನು ಗಾಂಧೀಜಿ ಭಾರತದ ಸ್ವಾವಲಂಬನೆಯ ಚಿಹ್ನೆಯಾಗಿ ಗುರುತಿಸಿದ್ದರು. ತಾತನ ರೇಷ್ಮೆಯ ಉಡುಪುಗಳು ಭದ್ರವಾದ ಸ್ಟೀಲು ಪೆಟ್ಟಿಗೆಯ ತಳ ಕಂಡಿತ್ತು. ಮುಖ್ಯಸ್ಥರಾದ ಜನಗಳು ಬೆಂಗಳೂರಿನಿಂದ ತಾತನನ್ನು ನೋಡಲು ಹಳ್ಳಿಗೆ ಬರಲಾರಂಭಿಸಿದ್ದರು. ಅದರಲ್ಲಿ ಕೆಲವರಂತೂ ಬಸ್ಸಿನಲ್ಲಿ ಬರದೆ ಹಳ್ಳಿಯೊಳಗೆ ತಮ್ಮ ಕಾರಿನಲ್ಲೇ ಬರುತ್ತಿದ್ದರು. ತಾತನಂತೂ ಸ್ವಾತಂತ್ರ್ಯ ಹೋರಾಟದಲ್ಲಿ ಪೂರ್ತಿಮುಳುಗಿ ಹಳ್ಳಿಯಲ್ಲಿ ಕಡಿಮೆ ಸಮಯ ಕಳೆಯುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಿಗೆ ಬೇಕಾಗುವ ದುಡ್ಡನ್ನು ಹೊಂದಿಸಲು ತಾತ ತಮಗೆ ಸೇರಿದ್ದ ಭೂಮಿಯ ಅಂಚಿನಲ್ಲಿದ್ದ ಜಮೀನನ್ನು ಮಾರಲಾರಂಭಿಸಿದ್ದರು. ರಾಜನ ಅತ್ತೆ ಮತ್ತು ಅಮ್ಮ ಈ ವಿಚಾರವನ್ನು ಒಂದು ರೀತಿಯ ಕೋಪ ಮಿಶ್ರಿತ ಭಯದಿಂದ ತಮ್ಮಲ್ಲೇ ಚರ್ಚಿಸುತ್ತಿದ್ದರೆ ವಿನಃ ತಾತನ ಎದುರಿಗೆ ಎಂದೂ ಮಾತನಾಡುತ್ತಿರಲಿಲ್ಲ. ತಾತನ ಇರುವಿಕೆ

ಮನೆಯಲ್ಲಿ ಕಡಿಮೆಯಾಗುತ್ತಿದ್ದಂತೆಯೇ ಮಿಕ್ಕವರ ನಡವಳಿಕೆಯಲ್ಲೂ ಬದಲಾವಣೆ, ಅದರಲ್ಲೂ ರಾಜನ ತಂದೆಯ ನಡವಳಿಕೆಯಲ್ಲಿ ಕಾಣತೊಡಗಿತ್ತು.

ರಾಜ ಎಂದೂ ತನ್ನ ತಂದೆಗೆ ಹತ್ತಿರದವನಾಗಿರಲಿಲ್ಲ. ಆ ದಿನಗಳಲ್ಲಿ, ಅವನ ತಂದೆ ಎತ್ತರವಾದ ಸ್ಫುರದ್ರೂಪೀ ಮನುಷ್ಯ. ಸದಾಕಾಲವೂ ತುಂಬ ಶಿಸ್ತಿನಿಂದ ಉಡುಗೆ ತೊಡುಗೆ ತೊಟ್ಟು ತನ್ನ ವಿಚಾರದಲ್ಲಿ ಆಸಕ್ತಿ ವಹಿಸಿದ ಮನುಷ್ಯ. ಪ್ರತಿದಿನವೂ ಬಟ್ಟೆ ಬದಲಿಸಿ ತಮ್ಮ ಪ್ಯಾಂಟು, ಷರಟುಗಳ ಕ್ರೀಸನ್ನು ತಿದ್ದಿ ತೀಡಿ ಎಚ್ಚರಿಕೆಯಿಂದ ಇಸ್ತ್ರಿ ಮಾಡುವಂತೆ ಧೋಬಿಯನ್ನು ಕೆಲಸದಲ್ಲಿ ತೊಡಗಿಸಿದ್ದ ಮನುಷ್ಯ. ಸಂತೋಷದಿಂದಿದ್ದ ಅವನ ತಂದೆ, ಪ್ರತಿಯೊಬ್ಬರ ವಿಚಾರದಲ್ಲೂ ಹಿತವಾದ ಮಾತನ್ನೇ ಆಡಿ ಹಳ್ಳಿಯಲ್ಲಿ ಎಲ್ಲರ ಪ್ರೀತಿಗೂ ಪಾತ್ರವಾಗಿದ್ದ ಮನುಷ್ಯ.

ರಾಜನಿಗೊಬ್ಬಳು ಅತ್ತೆಯಿದ್ದಳು. ಒಬ್ಬನೇ ಮಗನಾದ ಅಣ್ಣನನ್ನು ತನ್ನ ಅಮ್ಮ ಎಷ್ಟೊಂದು ಪ್ರೀತಿಸುತ್ತಿದ್ದಳು ಎನ್ನುವ ವಿಚಾರವನ್ನು ಅತ್ತೆ ರಾಜನಿಗೆ ಹಲಾವಾರುಸಲ ಹೇಳಿದ್ದಳು. ಅಣ್ಣನಿಗಂತೂ ಪ್ರೀತಿಯ ಸುರಿಮಳೆಯನ್ನೆ ಕರೆದಿದ್ದರು. ಅವನು ತನ್ನಮ್ಮನ ಕಣ್ಣಿನಲ್ಲಿ ಯಾವ ತಪ್ಪನ್ನೂ ಮಾಡಲಾರ, ಯಾವ ದಂಡನೆಗೂ ಒಳಪಡಲಾರ. ಅವರ ತಾಯಿ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡಿದ್ದ ಕಾರಣ, ಇವರಿಬ್ಬರೂ ಕೆಲಸದವರ ಆರೈಕೆಯಲ್ಲಿ ಬೆಳೆದಿದ್ದರು. ರಾಜನ ತಾತ ಮಹಾರಾಜರ ದರ್ಬಾರಿನಲ್ಲಿ ಕೆಲಸ ಮಾಡುತ್ತಿದ್ದ ಕಾರಣ ಮಕ್ಕಳ ಜೊತೆ ಕಳೆಯಲು ಹೆಚ್ಚು ಸಮಯವಿರಲಿಲ್ಲ. ಹೆಂಡತಿ ಸತ್ತನಂತರ ಮತ್ತೆ ಮದುವೆ ಆಗದಿದ್ದರೂ ತಾತ ಮಕ್ಕಳಿಗೇನೂ ಸಮೀಪವಾಗಿರಲಿಲ್ಲ.

ರಾಜ ತನ್ನ ತಂದೆ ಬೆಂಗಳೂರಿನಲ್ಲಿ ಕಾಲೇಜಿಗೆ ಹೋಗುತ್ತಿದ್ದ ದಿನಗಳನ್ನು ನೆನೆಪಿಸಿಕೊಂಡ. ತಂದೆ ಬೆಂಗಳೂರಿಗೆ ಬೆಳಿಗ್ಗೆ ಹೊರಟರೆ ಸಂಜೆ ತಡವಾಗಿ ಮನೆಗೆ ಬರುತ್ತಿದ್ದರು. ಅವರ ಹತ್ತಿರ ಓಡಾಡಲು, ತಿರುಗಲು ಬೇಕಾದ್ದಕಿಂತಲೂ ಹೆಚ್ಚು ಹಣವಿರುತ್ತಿತ್ತು. ರಾಜನಿಗೆ ಅವನ ತಂದೆಯ ಶ್ರೀಮಂತ ಅಭಿರುಚಿಯ ಕಥೆ ತಿಳಿದಿತ್ತು. ಅವನ ತಂದೆ ತೊಡುತ್ತಿದ್ದ ದುಬಾರಿ ಬೆಲೆಯ ಬಟ್ಟೆಗಳ ಬಗ್ಗೆ, ಸೇದುತ್ತಿದ್ದ ವಿದೇಶಿ ಸಿಗರೇಟಿನ ಬಗ್ಗೆ ನಡೆಯುತಿದ್ದ ಸಂಭಾಷಣೆಗಳು ಅವನ ಕಿವಿಗೂ ಬಿದ್ದಿದ್ದವು. ಹಳ್ಳಿಯ ಜನ ಅವನ ತಂದೆಯನ್ನು ನಿತ್ಯ ವಿದ್ಯಾರ್ಥಿ ಎಂದೇ ಕರಿಯುತ್ತಿದ್ದರು. ಈ ಪದದ ಅರ್ಥ ರಾಜನಿಗೆ ತಿಳಿದಿದ್ದು ಬಹಳಕಾಲದ ನಂತರವೇ.

ರಾಜ, ಅವನ ತಾತ ಸ್ವಾತಂತ್ರ್ಯ ಚಳುವಳಿಯ ಸಲುವಾಗಿ ಕಾಂಗ್ರೆಸ್ಸಿನ ಚಟುವಟಿಕೆಗಳಲ್ಲಿ ಭಾಗವಹಿಸಲು ತೊಡಗಿದಂತೆಯೇ ಅವನ ತಂದೆಯಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ನೆನೆಪಿಸಿಕೊಂಡ. ಅವನ ತಂದೆ ಪ್ರತಿ ದಿನ ಬೆಂಗಳೂರಿನಿಂದ ಮನೆಗೆ ಬರುವುದು ತಡವಾಗಲು ಶುರುವಾಗಿತ್ತು. ಅವನ ತಾಯಿ ಮತ್ತು ಅತ್ತೆ, ತಂದೆ ಬರುವವರೆಗೂ ಮನೆಯ ಮುಂದಿನ

ರಸ್ತೆಯಲ್ಲಿ ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ನಡೆದಾಡುತ್ತಾ ಸಮಯಕ್ಕೆ ಸರಿಯಾಗಿ ಬರದ ಆರೋಪಣೆಯುನ್ನು ನಗರದ ಬಸ್ಸುಗಳ ಮೇಲೆ ಹೊರೆಸುತ್ತಿದ್ದರು. ಇಂದಿನವರೆಗೂ ಎಂದೂ ತಡಮಾಡದೆ ಸಮಯಕ್ಕೆ ಸರಿಯಾಗಿ ಬೆಂಗಳೂರಿನಿಂದ ಹಳ್ಳಿಗೆ ಬರುತ್ತಿದ್ದ ಬಸ್ಸು ಈ ನಡುವೆ ಎದ್ವಾ-ತದ್ವಾ ಬರಲು ಕಾರಣ ಪ್ರಾಯಶಃ ಕಾಂಗ್ರೆಸ್ಸು ಚಳುವಳಿಗಾರರೂ, ಅವರ ಚಳುವಳಿಯ ಗಲಾಟೆ, ಇವೇ ಕಾರಣವಿರಬಹುದೆಂದು ಅತ್ತೆ ಮತ್ತು ಅಮ್ಮ ಒಬ್ಬರಿಗೊಬ್ಬರು ಸಮಾಧಾನ ಹೇಳಿಕೊಳ್ಳುತ್ತಿದ್ದರು. ಈ ಮಧ್ಯದಲ್ಲಿ ತಡವಾಗಿ ಬಂದ ಅಪ್ಪ, ಕೈಕಾಲು ತೊಳೆದು ತಾನು ಸಿಟಿಯಲ್ಲೇ ಊಟ ಮಾಡಿದ್ದಾಗಿದೆ ಎಂದು ಹೇಳಿ ನೇರವಾಗಿ ಮಲಗಲು ಹೋಗುತ್ತಿದ್ದ. ನಂತರ ರಾಜ, ಅವನ ತಾಯಿ ಮತ್ತು ಅತ್ತೆ ಊಟ ಮಾಡುತ್ತಿದ್ದರು.

ಕೆಲವೊಮ್ಮೆ ಅವನ ಅಪ್ಪ ಅವರ ಜೊತೆಗೇ ಊಟ ಮಾಡಿದ್ದು ಉಂಟು. ಆಗೆಲ್ಲ ಅವನ ಅಪ್ಪನಿಂದ ಒಂದು ರೀತಿಯ ಬೇರೆಯಾದ ವಾಸನೆ ಬರುತ್ತಿತ್ತು. ಅವನ ನಡಿಗೆ ಅಸ್ಥಿರವಾಗಿರುತ್ತಿತ್ತು. ಮೊದಮೊದಲಲ್ಲಿ ಅವನ ಅತ್ತೆ ಅಪ್ಪನನ್ನು ಕುಡಿತದ ವಿಚಾರವಾಗಿ ಬಯ್ಯುತ್ತಿದ್ದಳು. ಆಗೆಲ್ಲ ಅವನ ಅಪ್ಪ ತಾನು ಕುಡಿತವನ್ನು ಬಿಟ್ಟು ಬಿಡುವೆನೆಂದೋ ಅಥವಾ ಸ್ನೇಹಿತರ ಜೊತೆ ಸ್ವಲ್ಪ ಪ್ರಮಾಣದಲ್ಲಿ ಕುಡಿದ್ದಿದ್ದೆನೆಂದು ಹೇಳುತ್ತಿದ್ದ. ಅಮ್ಮ ತಂದೆಯ ತಟ್ಟೆಗೆ ಅಡುಗೆ ಬಡಿಸುತ್ತಿದ್ದದ್ದೂ, ಅಪ್ಪನಿಗೆ ಅದರ ಕಡೆ ಗಮನವೇ ಇಲ್ಲದುದ್ದನ್ನು ರಾಜ ಗಮನಿಸಿದ್ದ. ಅವನ ಅಪ್ಪ ತನ್ನ ಊಟ ಮುಗಿಸಿ ಮಿಕ್ಕವರ ಊಟ ಮುಗಿಯಲು ಕಾಯದೆ ಎದ್ದು ಹೋಗುತ್ತಿದ್ದ. ಸಿಗರೇಟು ಮುಗಿಸಿ ನಂತರ ಮಲಗುವ ಕೋಣೆಗೆ ಹೋಗುತ್ತಿದ್ದ. ಎಷ್ಟೋ ಬಾರಿ ರಾಜ ತನ್ನ ನಿದ್ದೆಯಿಂದ ಎಚ್ಚರಗೊಂಡು ತನ್ನ ಅಪ್ಪ ಕುಡಿತದ ಅಮಲಿನಲ್ಲಿ ಮಾತನಾಡುತ್ತಿದ್ದನ್ನೂ ಅವನ ತಾಯಿಯ ಮೆಲುವಾದ ಉಸಿರಾಟವನ್ನು ಕೇಳುತ್ತಿದ್ದ. ತನ್ನ ಅಂತರಾಳದಲ್ಲಿ ತನ್ನ ತಾಯಿಗೆ ಈ ವಿಚಾರದಲ್ಲಿ ಅನ್ನಿಸುತ್ತಿದ್ದ ಭಾವನೆಗಳನ್ನು ಅವನು ಕಲ್ಪಿಸಿಕೊಳ್ಳಲು ಯತ್ನಿಸುತ್ತಿದ್ದ. ಅವನಿಗೆ ನೆನಪಿದ್ದ ಹಾಗೆ, ಅವನ ತಾಯಿ ಒಮ್ಮೆಯಾದರೂ ಅವನ ತಂದೆಯ ವಿಚಾರದಲ್ಲಿ ನೇರವಾಗಿ ಟೀಕೆ ಮಾಡಿರಲಿಲ್ಲ. ಅವಳು ಯಾವಾಗಲೂ ಘನತೆ-ಗಾಂಭೀರ್ಯದಿಂದಲೇ ನಡೆದುಕೊಳ್ಳುತ್ತಲಿದ್ದಳು. ಅವಳ ಮನೋಬಲ, ಸಹನೆ, ಆತ್ಮಗೌರವದಿಂದ ನಡೆದುಕೊಳ್ಳುವ ರೀತಿ ರಾಜನಿಗೆ ಅವಳ ವಿಚಾರದಲ್ಲಿ ಪೂಜ್ಯ ಭಾವನೆಯನ್ನು ಉಂಟುಮಾಡಿತ್ತು.

ಅವನು ಕೇಳಿದ್ದ ಪ್ರಕಾರ, ಅಮ್ಮ ಅಪ್ಪನನ್ನು ಬಹು ಚಿಕ್ಕ ವಯಸ್ಸಿನಲ್ಲೇ ಮದುವೆಯಾಗಿದ್ದಳು. ಅವಳೂ ಅನುಕೂಲಸ್ತ ಮನೆತನಕ್ಕೆ ಸೇರಿದವಳೇ. ಆದರೆ, ಈಗ ಅವಳ ಮನೆಯವರಾರೂ ತಮ್ಮ ಜೊತೆ ಸಂಬಂಧ ಇಟ್ಟುಕೊಂಡಿರಲಿಲ್ಲ. ಅವಳು ಚಿಕ್ಕ ವಯಸ್ಸಿನಲ್ಲಿ ನೋಡಲು ಬಹಳ ಸುಂದರವಾಗಿದ್ದಳು. ಹಳ್ಳಿಯ ಜನ ಈಗಲೂ ಅವರ

ಮದುವೆಯ ವೈಭವವನ್ನು ಕುರಿತು ಮಾತನಾಡುತ್ತಿದ್ದುದುಂಟು. ಮದುವೆ ಹಳ್ಳಿಯಲ್ಲೇ ನಡೆದು ಹಳ್ಳಿಯ ಜನರೆಲ್ಲಾ ಮದುವೆಗೆ ಬಂದಿದ್ದರಂತೆ. ಎಲ್ಲರಿಗೂ ಭಾರಿ ಊಟೋಪಚಾರವಂತೆ. ಸಂಗೀತಗಾರರನ್ನೂ ಬೆಂಗಳೂರಿನಿಂದ ಕರೆ ತಂದಿದ್ದರಂತೆ. ಅಮ್ಮ ಈ ಹಳ್ಳಿಯ ಮನೆಗೆ ಚೆನ್ನಾಗಿ ಹೊಂದುಕೊಂಡು, ಕೆಲಸದವರಿದ್ದರೂ ಕಷ್ಟಪಟ್ಟೇ ದುಡಿಯುತ್ತಿದ್ದಳು.

ಮೊದಲಬಾರಿಗೆ ತನ್ನ ಅಪ್ಪ ಬೆಂಗಳೂರಿನಿಂದ ಸಂಜೆ ಹಳ್ಳಿಗೆ ಹಿಂತಿರುಗದ್ದಿದ್ದ ದಿನವನ್ನು ರಾಜ ನೆನಪಿಸಿಕೊಂಡ. ಅವನ ತಾಯಿ ಮತ್ತು ಅತ್ತೆ ಗಾಬರಿಯಿಂದ ಇಡೀ ರಾತ್ರೆ ನಿದ್ದೆ ಮಾಡಿರಲಿಲ್ಲ. ಮಾರನೆಯದಿನ ಸಂಜೆಯವರೆಗೂ ಹೇಗೋ ಯಾಂತ್ರಿಕವಾಗಿ ಮನೆಯ ಕೆಲಸದಲ್ಲಿ ಕಳೆದಿದ್ದರು. ಅವನ ತಾತನೂ ಹಳ್ಳಿಯಲ್ಲಿರಲಿಲ್ಲ. ಮಾರನೆಯ ಸಂಜೆ ಅಪ್ಪ ಮನೆಗೆ ಬಂದಿದ್ದ. ಅತ್ತೆ, ಅಪ್ಪನ ನಡುವೆ ಭಾರೀ ಜಗಳವೇ ನಡೆದಿತ್ತು. ಅಪ್ಪ, ಅತ್ತೆಯ ಪ್ರಶ್ನೆಗಳಿಗೆ ಭುಗಿಲೆದ್ದು ಸಿಡಿದ್ದಿದ್ದ. ರಾಜ ಈ ಎಲ್ಲ ಕೂಗು ಕಿರುಚಾಟಗಳನ್ನು ಹಾಲಿನ ಬಾಗಿಲಬಳಿ ನಿಂತು ನೋಡಿದ್ದ. ಅವನ ತಾಯಿ ಅಪ್ಪನಿಗೆ ಮೆಲ್ಲನೆ ಮಾತನಾಡಲು ಹೇಳಿದಾಗ, ಅಪ್ಪ ಪಟಾರನೆ ಅಮ್ಮನ ಕೆನ್ನೆಗೆ ಹೊಡೆದಿದ್ದ. ಹೊಡೆತದ ಶಬ್ದ, ಇದ್ದಕ್ಕಿದಂತೆ ನಿಶ್ಯಬ್ದವನ್ನು ತಂದಿತ್ತು. ಅಮ್ಮ ನಿಧಾನವಾಗಿ ಕೈಯೆತ್ತಿ ನೋಯುತಿದ್ದ ಎಡಗೆನ್ನೆಯನ್ನು ಉಜ್ಜಿಕೊಂಡಿದ್ದಳು. ತುಂಬಿಕೊಂಡಿದ್ದ ಕಣ್ಣೀರು ಅವಳ ಕೆನ್ನೆಯ ಮೇಲೆ ಹರಿದಿತ್ತು. ರಾಜನಿಗೆ ಅವನ ಅಮ್ಮನ ಕಣ್ಣನ್ನು ವರೆಸಬೇಕೆನ್ನಿಸಿದರೂ ಹಾಗೆ ಮಾಡಲಾಗದೆ ಈ ಅನಿರೀಕ್ಷಿತವಾದ ಕ್ರೌರ್ಯ, ಹೊಡೆತದಿಂದ ನಿಶ್ಚಲನಾಗಿದ್ದ. ಅತ್ತೆ, ಅಮ್ಮನನ್ನು ಅಪ್ಪಿ ನಿಧಾನವಾಗಿ ಅಡುಗೆ ಮನೆಯಕಡೆ ನಡೆಸಿಕೊಂಡು ಹೋಗಿದ್ದಳು -- 'ಯಾವ ಗಂಡಸೂ ಪ್ರವೇಶ ಮಾಡಲಾಗದ ಹೆಂಗಸರ ಸಂರಕ್ಷಿತಸ್ಥಳ' ಅದು ಎಂಬಂತೆ. ರಾಜ ಅವರನ್ನು ದೂರದಿಂದಲೇ ಹಿಂಬಾಲಿಸಿದ್ದ. ಅವನ ಕಣ್ಣೀರನ್ನು ಯಾರೂ ಗಮನಿಸಲಿಲ್ಲ.

ಮತ್ತೆ ದಿನ ಕಳೆದಂತೆ ಅಪ್ಪನ ಇಲ್ಲದಿರುವಿಕೆ ಅಭ್ಯಾಸವಾಗತೊಡಗಿತ್ತು. ಅಪ್ಪ ಯಾವಾಗ ಊರಿಗೆ ಹೋಗುತ್ತಾನೊ, ಯಾವಾಗ ಹಿಂತಿರುಗುತ್ತಾನೋ ಯಾರಿಗೂ ಗೊತ್ತಿರುತ್ತಿರಲಿಲ್ಲ. ಅಪ್ಪ ಮನೆಯಲ್ಲೇ ಉಳಿದ ರಾತ್ರೆ ಕಷ್ಟಕರವಾಗಿರುತ್ತಿತ್ತು. ಈಗೀಗ ಹೆಂಡವನ್ನು, ಅಪ್ಪ, ಮನೆಗೇ ತರುತ್ತಿದ್ದ, ಒಬ್ಬನೇ ಕೂತು ಕುಡಿಯುತ್ತಿದ್ದ. ಹಿಡಿತವಿಲ್ಲದ ಕೋಪ, ಕ್ರೌರ್ಯವನ್ನು ನೆಪವೇ ಇಲ್ಲದೆ ಮನಸ್ಸಿಗೆ ಬಂದಹಾಗೆ ಎಲ್ಲರಮೇಲೂ ಪ್ರಕಟಿಸುತ್ತಿದ್ದ. ಈ ವಿಚಾರ ಗೊತ್ತಿದ್ದೂ ಕೂಡ, ಅತ್ತೆಗೆ ಮಾತ್ರ ಅಪ್ಪನನ್ನು ಎದುರಿಸಿ ಮಾತನಾಡುವ ಧೈರ್ಯವಿತ್ತು.

ಹಳ್ಳಿಯಲ್ಲಿ ಬೇಗನೆ ಎಲ್ಲರಿಗೂ ಅಪ್ಪನ ವಿಚಾರ ತಿಳಿದಿತ್ತು. ಯಾರೂ ನೇರವಾಗಿ ರಾಜನೊಡನೆ ಈ ವಿಚಾರ ಮಾತನಾಡದಿದ್ದರೂ, ತಮ್ಮ ತಮ್ಮಲ್ಲೇ ಗುಸುಗುಟ್ಟಿಕೊಳ್ಳುತ್ತಿದ್ದರು. ಇವನನ್ನು ಕಂಡತಕ್ಷಣ ಮಾತನಾಡುವುದನ್ನು

ನಿಲ್ಲಿಸಿಬಿಡುತ್ತಿದ್ದರು. ಅಮ್ಮ, ಅತ್ತೆಯ ಮನಸ್ಸಿಗೆ ಆಗಿದ್ದ ಘಾಸಿ, ಅವಮಾನ ಇವನಿಗೂ ಆಗಿತ್ತು. ಅಮ್ಮ, ಅತ್ತೆ ಯಾರ ಬಳಿಯು ಈ ವಿಚಾರವನ್ನು ಚರ್ಚಿಸುತ್ತಿರಲಿಲ್ಲ. ಹಳ್ಳಿಯವರೂ ಸಹ ಈ ವಿಚಾರ ಅರಿತೂ ಅರಿಯದಂತೆಯೆ ವರ್ತಿಸುತ್ತಿದ್ದರು. ಅಮ್ಮ ಯಾರಲ್ಲಿಯೂ ತನ್ನ ದುಃಖವನ್ನು, ನೋವನ್ನೂ ತೋರಿಸಿಕೊಳ್ಳದೆ, ನಗುನಗುತ್ತ ಎಲ್ಲರೊಡನೆ ನಡೆದುಕೊಳ್ಳತ್ತಿದ್ದಳು. ರಾಜನಿಗೆ ಅಮ್ಮನ ಭಾವನೆ ಏನೆಂಬುದು ಸ್ಪಷ್ಟವಾಗಿ ತಿಳಿಯುತ್ತಲಿರಲಿಲ್ಲ. ಕೊನೆಯವರೆಗೂ ಈ ಬಗ್ಗೆ ಅಮ್ಮನೊಡನೆ ಅವನು ಚರ್ಚಿಸಲೇ ಇಲ್ಲ. ತಾಯಿ–ಮಗ ತಮಗಾದ ನೋವು, ಅವಮಾನವನ್ನು ನುಂಗಿಕೊಂಡು ಒಂದು ಬಗೆಯ ಸಂಯಮದಿಂದ ಕಾಲ ಕಳೆಯುತ್ತಿದ್ದರು.

ಈ ಎಲ್ಲದರ ಪರಿಣಾಮವಾಗಿ ರಾಜ ಚಿತ್ರಳಿಗೆ ಹತ್ತಿರವಾಗಿದ್ದ. ಚಿತ್ರ, ನೆರೆಯ ಅನುಕೂಲಸ್ತ ಗೌಡರ ಮಗಳು. ಅವಳಿಗೆ ಇಬ್ಬರು ಅಣ್ಣಂದಿರು. ದೊಡ್ಡ ಅವಿಭಕ್ತ ಕುಟುಂಬ ಅವರದು. ಅವರ ಮನಗೆ ಬಹಳ ಜನ ಬಂದು ಹೋಗುತ್ತಿದ್ದರು. ಅವರ ಅಡುಗೆಮನೆಯಿಂದ ಸದಾಕಾಲ ಅಡುಗೆಯ ವಾಸನೆ ಬರುತ್ತಿತ್ತು. ರಾಜನಿಗೆ ತಮ್ಮ ಮನೆಯವರಿಗಿಂತ ಅವರ ಸಂಸಾರವೇ ಯಾವಾಗಲೂ ಸುಖ ಸಂತೋಷದಿಂದ ಇರುವಂತೆ ಕಾಣುತ್ತಿತ್ತು.

ರಾಜ, ಚಿತ್ರ ಜೊತೆಯಲ್ಲೇ ಬೆಳೆದಿದ್ದರು. ಚಿಕ್ಕವರಾಗಿದ್ದಾಗ ಶಾಲೆಗೆ ಒಟ್ಟಿಗೇ ನಡೆಯುತ್ತಿದ್ದರು, ಜೊತೆಯೆಲ್ಲೇ ಆಟ ಆಡುತ್ತಿದ್ದರು, ಒಟ್ಟಿಗೇ ಮಲಗುತ್ತಿದ್ದುರು. ಕೊಳದ ಪಕ್ಕದಲ್ಲಿದ್ದ ಸಣ್ಣ ಗುಡ್ಡಕ್ಕೆ ಎಷ್ಟೋಬಾರಿ, ಅವಕಾಶ ಸಿಕ್ಕಾಗಲೆಲ್ಲ ಹೋಗಿದ್ದರು. ಗುಡ್ಡದ ಮಧ್ಯಕ್ಕಿದ್ದ ಎರಡು ದೊಡ್ಡ ಬಂಡೆಗಳ ಮೇಲೆ ಚಪ್ಪಟೆ ಬಂಡೆಯೊಂದು ಇದ್ದು ದೊಡ್ಡ ನೆರಳಿನ ಜಾಗವನ್ನು ನಿರ್ಮಿಸಿತ್ತು. ಹುಲ್ಲು ಮೇಯುತ್ತಿದ್ದ ಹಸುಗಳು, ಆಡುಗಳು ಕೂಡ ಬಿಸಿಲು ಹೆಚ್ಚಿದಾಗ ಈ ನೆರಳಿನ ಜಾಗಕ್ಕೆ ಬಂದು ನಿಲ್ಲುತ್ತಿದ್ದವು. ಈ ಜಾಗ ರಾಜ ಹಾಗು ಚಿತ್ರರ ಖಾಸಾ ಜಾಗವಾಗಿತ್ತು. ಇಲ್ಲಿ ರಾಜನಿಗೆ ಚಿತ್ರಳ ಜೊತೆಯಲ್ಲಿದ್ದಾಗ ಮನಃಶಾಂತಿ ಸಿಕ್ಕುತ್ತಿತ್ತು. ಲೆಕ್ಕವೇ ಇಲ್ಲದಷ್ಟು ತಾಸುಗಳನ್ನು ಅವರಿಬ್ಬರೂ ಹರಟುತ್ತಾ ಕಳೆದಿದ್ದರೂ, ಅವನಿಗೆ ಈಗ ಅವರಿಬ್ಬರ ನಡುವಿನ ಮಾತುಕತೆಯ ವಿಷಯವೇನು ಎಂಬುದು ನೆನಪಿಗೇ ಬರುತ್ತಿರಲಿಲ್ಲ. ಹಳ್ಳಿಯವರೆಲ್ಲ ಇವರಿಬ್ಬರ ಸ್ನೇಹವನ್ನು ಕುರಿತು ಮಾತನಾಡುತ್ತಿದ್ದರು. ರಾಜ ಕಂಡರೆ ಚಿತ್ರಳೂ ಹತ್ತಿರದಲ್ಲಿಯೇ ಇರಬೇಕು ಎಂದು. ಮನೆಯ ಕಷ್ಟಗಳಿಂದ ತಪ್ಪಿಸಿಕೊಳ್ಳಲು ರಾಜನಿಗೆ ಚಿತ್ರಳ ಆಸರೆ ಅಗತ್ಯವಾಗಿತ್ತು. ಇಬ್ಬರಿಗೂ ಯೌವನ ಸಮೀಪಿಸುತ್ತಿದ್ದ ಹಾಗೆಯೆ ಬೇರೆಬೇರೆ ರೀತಿಯಲ್ಲೂ ಪರಸ್ಪರರನ್ನು ಅರಿತುಕೊಂಡಿದ್ದರು.

ಭಾರತದ ಸ್ವಾತಂತ್ರ್ಯ ಹೋರಾಟ ಬಲದಿಂದ ಬೆಳೆದಿತ್ತು. ತಾತ ಇನ್ನೇನು ಕೆಲವು ದಿನಗಳಲ್ಲೇ ಸ್ವಾತಂತ್ರ್ಯ ಸಿಕ್ಕುವುದೆಂದು ಹೇಳಿದ್ದರು. ಬಹಳ ಅಪರೂಪಕ್ಕೆ ತಾತ ಹಳ್ಳಿಗೆ ಬರುತ್ತಿದ್ದರು. ಬ್ರಿಟಿಷರ ವಿರುದ್ಧ ಬೆಂಗಳೂರಿನಲ್ಲಿ ನಡೆಯುವ ಹೋರಾಟದಲ್ಲಿ ನಾಯಕರಾಗಿ

ಭಾಗವಹಿಸುತ್ತಿದ್ದುದರಿಂದ ಅವರನ್ನು ಅನೇಕ ಬಾರಿ ಸೆರೆಮನೆಗೆ ಕಳಿಸಿದ್ದರೂ ಅನಾರೋಗ್ಯದ ಕಾರಣದಿಂದ ಸೆರೆಮನೆಯಿಂದ ಬಿಡುಗಡೆ ಸಿಗುತ್ತಿತ್ತು.

ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನ ರಾತ್ರಿ ನೆಹರು 'ಫ್ರೀಡಮ್ ಅಟ್ ಮಿಡ್ನೈಟ್' ಭಾಷಣವನ್ನು ಇಡೀ ಜಗತ್ತಿಗೆ ಮಾಡಿದಾಗ ತಾತ ಭಾರತದ ಹೊಸ ಧ್ವಜದೊಡನೆ ಹಳ್ಳಿಗೆ ಹಿಂತಿರುಗಿದ್ದರು. ಧ್ವಜ ಹಾರಿಸಲು ಎತ್ತರವಾದ ಕಂಬವನ್ನು ನೆಟ್ಟು, ಹಳ್ಳಿಯವರನ್ನೆಲ್ಲ ಈ ಸಮಾರಂಭಕ್ಕೆ ಆಮಂತ್ರಿಸಿದ್ದರು. ಧ್ವಜ ಮಧ್ಯದಲ್ಲಿ ರೋಜಾ ಹೂವಿನ ದಳಗಳನ್ನಿಟ್ಟು ಮಧ್ಯರಾತ್ರಿ ಧ್ವಜವನ್ನು ವಿಜೃಂಭಣೆಯಿಂದ ಅನಾವರಣಮಾಡಿ ರೋಜಾಹೂವಿನ ದಳಗಳು ಭೂಮಿಯಕಡೆಗೆ ಬೀಳುತ್ತಿದ್ದಂತೆ ಬಹು ಹರ್ಷದಿಂದ, ತುಂಬು ಅಭಿಮಾನದಿಂದ, ಉಚ್ಚ ಕಂಠದಲ್ಲಿ ರಾಷ್ಟ್ರಗೀತೆಯನ್ನು ಹಾಡಿದ್ದರು. ಹಳ್ಳಿಯವರಿಗೆ ತಾತನ ವರ್ತನೆ ಸ್ವಲ್ಪ ಅಚ್ಚರಿ ಉಂಟುಮಾಡಿದ್ದರೂ ತಾತನಮೇಲೆ ಇರುವ ಮರ್ಯಾದೆಯಿಂದ ಸಮಾರಂಭದಲ್ಲಿ ಭಾಗವಹಿಸಿದ್ದರು.

ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ ಬಹಳ ಕಾಲ ತಾತ ಬದುಕಲಿಲ್ಲ. ಅವರು ಭಾರತ ಸ್ವಾತಂತ್ರ್ಯಗೊಳ್ಳುವುದನ್ನು ಕಾಣಲೆಂದೇ ತಮ್ಮ ಜೀವವನ್ನು ಬಿಗಿಹಿಡಿದಂತಿತ್ತು. ಅಪ್ಪ ತಾತನ ಶವವನ್ನು ಬೂದಿಮಾಡಿ ಮಿಕ್ಕ ಸಂಸ್ಕಾರ ಕಾರ್ಯಗಳನ್ನೂ, ಶಾಸ್ತ್ರಿಗಳು ಹೇಳಿದ್ದನ್ನೂ ಯಾಂತ್ರಿಕವಾಗಿ ಮಾಡುತ್ತಲಿರುವಂತೆ ಭಾಸವಾಗಿತ್ತು. ಅಪ್ಪನ ಮನಸ್ಸು ಮರಗಟ್ಟಿದಂತೆ ಕಂಡಿತ್ತು. ಕಣ್ಣೀರು, ಅಪ್ಪನ ಕಣ್ಣಿನಲ್ಲಿ ಬೇಕೆಂದರೂ ಬಂದಿರಲಿಲ್ಲ, ಬರುವಂತೆಯೂ ಇರಲಿಲ್ಲ.

ತಾತ ತೀರಿದ ಬಳಿಕ ಅಪ್ಪ ಮನೆಯಲ್ಲೇಯೇ ಇರುತ್ತಿದ್ದ. ಅವನ ಸ್ನೇಹಿತರು ಬೆಂಗಳೂರಿನಿಂದ ಅಪ್ಪನನ್ನು ನೋಡಲು ಹಳ್ಳಿಗೆ ಬರುತ್ತಿದ್ದರು. ಇಲ್ಲೇ ಉಳಿದು ರಾತ್ರಿಯೆಲ್ಲಾ ಹೆಚ್ಚು ದುಡ್ಡಿಗೆ ಇಸ್ಪೀಟು ಆಟ ಆಡುತ್ತಿದ್ದರು. ಮೊದಮೊದಲಲ್ಲಿ ಅಪ್ಪನನ್ನು ಕಾಣಬಂದ ಜನ ಭಾರೀ ಕಾರುಗಳಲ್ಲಿ ಬರುತ್ತಿದ್ದರು ಕೆಲವರು ನಮ್ಮಲ್ಲಿಯೇ ಉಳಿಯುತ್ತಿದ್ದರು. ದುಡ್ಡು ಮುಗಿಯುತ್ತ ಬಂದಹಾಗೆ ಅಪ್ಪನೂ ಜಮೀನನ್ನು ಮಾರಲು ಆರಂಭಿಸಿದ್ದ, ತನ್ನ ತಂದೆಯಂತೆಯೇ.

ರಾಜ, ಇಸ್ಪೀಟಿನ ಜೂಜಾಟವನ್ನು ರಾತ್ರೆಯವರೆಗೂ ನೋಡುತ್ತಿದ್ದ. ಅವನ ಅಪ್ಪ ಪ್ರತಿಬಾರಿಯೂ ಸೋಲುತ್ತಿದ್ದಂತೆ ಹೆಚ್ಚಿನ ಹೆಂಡವನ್ನು ಬೆಂಗಳೂರಿನ ಸ್ನೇಹಿತರು, ಅಪ್ಪನಿಗೆ ಕುಡಿಯಲು ಕೊಟ್ಟು, ಜೂಜಿನ ಮೊತ್ತವನ್ನೂ ಏರಿಸುತ್ತಿದ್ದರು. ರಾಜ ಅವರ ಕಣ್ಣುಗಳ ಮಧ್ಯೆ ನಡೆಯುತ್ತಿದ್ದ ಅರ್ಥಗರ್ಭಿತ ನೋಟಗಳನ್ನೂ, ಅಪ್ಪನ ಲೋಟ ನಿರಂತರವಾಗಿ ಹೆಂಡದಿಂದ ತುಂಬುತ್ತಿರುವುದನ್ನೂ, ಸರಪರ ಸರಪರ ಇಸ್ಪೀಟು ಎಲೆಗಳ ನಡೆದಾಡುವಿಕೆಯನ್ನೂ ಗಮನಿಸುತ್ತಲೇ ಇದ್ದ. ಕೊನೆಗೆ, ರಾತ್ರಿ ಯಾವಗಲೋ ಆಟ

ಮುಗಿದಾಗ, ಕೆಲವೊಮ್ಮೆ ಹಳ್ಳಿಯ ಅಂಗಡಿಯಿಂದ ಮತ್ತೆ ಹೆಂಡ ತರಲು ಅಪ್ಪ ಹೋಗುತ್ತಿದ್ದ. ಹಳ್ಳಿಯ ಮುಖ್ಯ ರಸ್ತೆಯಲ್ಲಿ ಮುಗ್ಗರಿಸೆದ್ದು ನಡೆಯುತ್ತಿದ್ದ ಅಪ್ಪ ರಸ್ತೆಯ ಕೊನೆಗೆ ಅಂಗಡಿಯ ಕಡೆಗೆ ತಿರುಗಿದ್ದು ಕಾಣುತ್ತಿತ್ತು. ಎಷ್ಟೋ ರಾತ್ರಿ ಅಪ್ಪ ಹೆಂಡದ ಅಂಗಡಿಯಿಂದ ಕೆಲವು ತಾಸಾದರೂ ಮನೆಗೆ ಬರದಿದ್ದಾಗ, ಅಮ್ಮ ಅದೇ ರಸ್ತೆಯಲ್ಲಿ ನಡೆದು ಅವಳ ಸಣ್ಣ ದೇಹವನ್ನು ಅಪ್ಪನಿಗೆ ಆಸರೆ ಕೊಟ್ಟು, ಮನೆಗೆ ಕರೆದು ತಂದು, ಅಪ್ಪನನ್ನು ಹಾಸಿಗೆಯಲ್ಲಿ ಮಲಗಿಸುವುದು ಸಾಮಾನ್ಯವಾಗಿಹೋಗಿತ್ತು.

ಈಗಂತೂ ಇದೇ ಅಪ್ಪನ ದಿನಚರಿಯಾಗಿತ್ತು. ರಾಜ ತನ್ನ ಹಾಸಿಗೆಯಲ್ಲಿ ಮಲಗಿ ಮನೆ ನಿಶ್ಯಬ್ದದಲ್ಲಿ ಮುಳುಗಿಹೋಗುವುದನ್ನು ಗಮನಿಸುತ್ತಿದ್ದ. ರಾತ್ರಿ ನಿದ್ದೆಯಲ್ಲಿ, ಅಪ್ಪ ಜೋರಾಗಿ ಮಾತನಾಡಿಕೊಳ್ಳುವಾಗ ಈ ನಿಶ್ಯಬ್ದ ಚದುರುತ್ತಿತ್ತು. ತ್ರಾಸದಿಂದ ಉಸಿರಾಡುತ್ತಿದ್ದ ಅಪ್ಪನ ಉಸಿರಾಟದ ಶಬ್ದ ಕೇಳುತ್ತಿದ್ದಂತೆಯೆ, ರಾಜನ ಎದೆಯಲ್ಲಿ ನಿಧಾನವಾಗಿ ಕೋಪದ ಬೆಂಕಿ ಉರಿಯಲಾರಂಭಿಸುತಿತ್ತು. ಕಾರಣವೇ ಇಲ್ಲದೆ ಅಮ್ಮನ ಮೇಲೆ ಅಪ್ಪ ನಡೆಸುತ್ತಿದ್ದ ಕ್ರೌರ್ಯ ಈಗಂತೂ ಸರ್ವೇಸಾಧಾರಣವಾಗಿ ಹೋಗಿತ್ತು.

ಅಪ್ಪನ ಕ್ರೌರ್ಯ ಹೆಚ್ಚುತ್ತಿದ್ದ ಹಾಗೆ ರಾಜನಿಗೆ ಅಪ್ಪನ ಮೇಲಿನ ದ್ವೇಷವು ಹೆಚ್ಚಾಗಿತ್ತು. ಎಷ್ಟೊವೇಳೆ, ಮನೆ ಬಿಟ್ಟು ಓಡಿ ಹೋಗುವ ಯೋಚನೆ ಬಂದಿದ್ದರೂ, ಅಮ್ಮ ಒಬ್ಬಳೇ ಆಗುವ ಕಾರಣದಿಂದ ಹಾಗೆ ಮಾಡಿರಲಿಲ್ಲ. ಅಪ್ಪನನ್ನು ಅನೇಕ ರೀತಿಗಳಲ್ಲಿ ಕೊಲ್ಲುವ ಕನಸನ್ನು ಕಂಡಿದ್ದ ರಾಜ. ಬೆಂಗಳೂರಿಗೆ ಹೋಗಿ ಬರುವಾಗ ಅಪ್ಪನಿಗೆ ದಾರಿಯಲ್ಲೇ ಏನಾದರೂ ಅನಾಹುತವಾಗಲಿ ಎಂದೂ ಕಳಕಳಿಯಿಂದ ಮೊರೆ ಇಟ್ಟಿದ್ದ. ಅವನಾಸೆ ಈಡೇರದಾಗ, ರಾಜನೂ ಅಪ್ಪನಿಗೆ ಕೇಡಾಗುವುದನ್ನೇ ಕಾಯುತ್ತಾ ಜೀವನವನ್ನು ಕಳೆಯತೊಡಗಿದ.

ಕೆಲವೇ ವರುಷಗಳಲ್ಲಿ, ಮನೆಯಲ್ಲಿದ್ದ ಹಣವೆಲ್ಲ ಮುಗಿದಿತ್ತು. ಇದ್ದೆಲ್ಲಾ ಜಮೀನೂ ಮಾರಟವಾಗಿತ್ತು, ನಂತರ ಅಮ್ಮನ ಒಡವೆಗಳು, ಕೊನೆಗೆ ಮನೆಯ ಮಂಚ, ಕುರ್ಚಿಗಳನ್ನೂ ಬಿಡದೆ ಅಪ್ಪ ಮಾರಿದ್ದ. ಅಪ್ಪನಿಗೆ ಬುದ್ಧಿ ಹೇಳಲು ಪ್ರಯತ್ನಪಟ್ಟಿದ್ದ ಚಿತ್ರನ ತಂದೆಯೂ ಕೊನೆಗೆ ಅಪ್ಪನಿಂದಲೇ ಎಲ್ಲ ಜಮೀನನ್ನು ಕಡಿಮೆ ಕ್ರಯಕ್ಕೆ ಕೊಂಡಿದ್ದರು. ಚಿತ್ರನಿಗೆ ಪಕ್ಕದ ಹಳ್ಳಿಯ ಗೌಡನೊಂದಿಗೆ ಮದುವೆ ಆಗಿತ್ತು. ಅಪರೂಪಕ್ಕೆ ತೌರಿಗೆ ಬಂದಾಗ ಚಿತ್ರ ಜೊತೆಯಲ್ಲಿ ಗಂಡ, ಮಕ್ಕಳನ್ನು ಕರೆತರುತ್ತಿದ್ದಳು. ರಾಜ–ಚಿತ್ರ ತಮ್ಮಿಬ್ಬರ ನಡುವೆ ಸಂಬಂಧವೇ ಇಲ್ಲದಿದ್ದಂತೆ ಪರಸ್ಪರ ಅಪರಿಚಿತರಂತೆ ನಡೆದುಕೊಳ್ಳುತ್ತಿದ್ದರು.

ಈಗ, ಅಪ್ಪ ಮನೆಯ ತರಕಾರಿ ತೋಟದಮೇಲೆ ಕಾಸಿಗೆ ಅವಲಂಬಿತನಾಗಿದ್ದ. ತೋಟದ ತರಕಾರಿಯನ್ನು ಬುಟ್ಟಿಯಲ್ಲಿ ತುಂಬಿಕೊಂಡು, ತರಕಾರಿಯನ್ನು ಬೆಂಗಳೂರಿನಲ್ಲಿ ಮಾರಿ, ಕುಡಿದು ಮನೆಗೆ ಬರುತ್ತಿದ್ದ. ಅವನ ವೇಷಭೂಷಣಗಳಲ್ಲಿ ಬಹಳ

ಬದಲಾವಣೆಯಾಗಿತ್ತು. ಅಪ್ಪ ಈಗ ಹಳ್ಳಿಯವರಲ್ಲಿ ಒಬ್ಬನಂತೆಯೇ ಕಾಣುತ್ತಿದ್ದ. ಸೋತ ಅಪ್ಪನ ಮುಖದಲ್ಲಿ ಆಗೊಮ್ಮೆ, ಈಗೊಮ್ಮೆ ಕಣ್ಣಿನಲ್ಲಿ ಹಳೆಯ ಅಭಿಮಾನ, ಮಿಂಚಿ ಮಾಯವಾಗುತ್ತಿತ್ತು. ಬಗ್ಗಿದ ಹೆಗಲನ್ನು ಹೊತ್ತು, ಕತ್ತು ಬಗ್ಗಿಸಿ ನಡೆಯುತ್ತಿದ್ದ ಅಪ್ಪನಿಗೆ ಯಾರೊಡನೆಯೂ ಮಾತನಾಡುವ ಇಚ್ಛೆ ಇರಲಿಲ್ಲ. ಹಳೆಯ ಅಪ್ಪನನ್ನು ನೆನೆಸಿಕೊಂಡರೆ ರಾಜನ ಮನಸ್ಸಿನಲ್ಲಿ ಮೂಡುತ್ತಿದ್ದ ಚಿತ್ರ, ಅಪ್ಪ ತನ್ನ ತಾಯಿಯ ಮೇಲೆ ತೋರುತಿದ್ದ ಕ್ರೌರ್ಯ, ಕುಡಿತ ಮಾತ್ರ.

ಒಂದು ದಿನ ಸಂಜೆ ರಾಜ ಮನೆಗೆ ಬರುವ ಹೊತ್ತಿಗೆ ಅಪ್ಪನೂ ಬೆಂಗಳೂರಿನಿಂದ ಹಿಂತಿರುಗಿದ್ದ. ಅಪ್ಪ ಹಾಗು ಅತ್ತೆಯ ನಡುವೆ ಮಾತಿನ ಹೋರಾಟ ಬಿರುಸಾಗಿಯೇ ನಡೆಯುತ್ತಿತ್ತು. ಅಮ್ಮನಿಗೆ ಅವಳ ಅಪ್ಪ ಮದುವೆಯಲ್ಲಿ ಕೊಟ್ಟಿದ್ದ ಚಿನ್ನದ ಬಳೆಗಳನ್ನು, ಅಪ್ಪ ತೆಗೆದುಕೊಂಡು ಹೋಗಿ ಆ ದಿನವೇ ಊರಿನಲ್ಲಿ ಮಾರಿ ಬಂದಿದ್ದ. ಅಪ್ಪನ ಈ ಕಾರ್ಯದಿಂದ ಅಮ್ಮನಿಗೂ ತಡೆಯಲಾಗದ ಕೋಪ ಬಂದಿತ್ತು. ಬಿರುಸಾದ ಮಾತುಕತೆ ನಡೆದನಂತರ, ಅಪ್ಪ ಎಂದಿನಂತೆ ಮನೆ ಬಿಟ್ಟು ಹೆಂಡದ ಅಂಗಡಿಯ ಕಡೆ ನಡೆದಿದ್ದ.

ಯಥಾಪ್ರಕಾರ, ಕೆಲವು ತಾಸಿನ ಬಳಿಕ, ಅಮ್ಮ ಅಪ್ಪನನ್ನು ಕರೆತರಲು ಹೊರಟಿದ್ದಳು. ಎಂದಿನಂತೆ ಮನೆಯ ಮುಂದಿನ ಕಲ್ಲು ಬೆಂಚಿನ ಮೇಲೆ ಕೂತು ರಾಜ ಅವರ ಬರುವಿಕೆಯನ್ನು ಎದುರು ನೋಡುತಿದ್ದ. ಸ್ವಲ್ಪ ಹೊತ್ತಿನಮೇಲೆ ಅತ್ತೆಯೂ ಹೊರಗೆ ಬಂದು ರಾಜನನ್ನು ಇವರಿಬ್ಬರ ಬಗ್ಗೆ ಕೇಳಿ ಮತ್ತೆ ತನ್ನ ಕೋಣೆಗೆ ಹಿಂತಿರುಗಿದ್ದಳು. ಮಧ್ಯರಾತ್ರಿ ಕಳೆದರೂ ಅಮ್ಮ, ಅಪ್ಪನ ಸುಳಿವಿಲ್ಲದಾಗ, ರಾಜ ತಾನೇ ಅವರನ್ನು ಹುಡುಕಿಕೊಂಡು ಬರಲು ಹೊರಟ. ಕತ್ತಲಿಂದ ಕೂಡಿದ್ದ ರಾತ್ರಿ ನಿಶ್ಚಲವಾಗಿತ್ತು, ನಿಶ್ಯಬ್ದವಾಗಿತ್ತು. ಸಣ್ಣ ಗುಡ್ಡದ ತುದಿಗೆ ತಿರುಗಿದಂತೆಯೆ ಯಾರೋ ಸ್ವಲ್ಪದೂರದ ರಸ್ತೆಯಲ್ಲಿ ಕುಳಿತಿದ್ದನ್ನು ಕಂಡಹಾಗೆ ಭಾಸವಾಗಿತ್ತು. ಅವನು ಅವರನ್ನು ಹತ್ತಿರ ಸಮೀಪಿಸುತ್ತಿದಂತೆಯೇ ಆ ವ್ಯಕ್ತಿ ಅಮ್ಮ, ಮತ್ತೆ ಯಾರೋ ರಸ್ತೆಯಲ್ಲಿ ಬಿದ್ದದ್ದು ಕಾಣಿಸಿತು. ಹತ್ತಿರ ಬಂದು ಮಸುಕಿದ ಚಂದ್ರನ ಬೆಳಕಿನನಲ್ಲಿ ಅಮ್ಮನ ಮುಖವನ್ನು ಕಂಡ. ನಿಸ್ತೇಜವಗಿದ್ದ ಅವಳ ಮುಖ ಒದ್ದೆಯಾಗಿತ್ತು. ಅವಳ ಪಕ್ಕಕ್ಕೆ ದೊಡ್ಡ ಕಲ್ಲೊಂದಿತ್ತು. ಅವಳ ಹಣೆಯಿಂದ ಒದ್ದೆಯನ್ನು ವರೆಸ ಹೊರಟಾಗ, ಆ ಒದ್ದೆ ತಣ್ಣಗಿನ ರಕ್ತವೆಂದು ಅರಿವಾಗಿತ್ತು. ಅವನ ಅಪ್ಪನ ಮುಖದೊಂದು ಭಾಗ ಜಜ್ಜಿತ್ತು, ಇನ್ನೊಂದು ಭಾಗ ಏನೂ ಆಗಿಲ್ಲವೆಂಬತ್ತಿತ್ತು.

ರಾಜ ಅಮ್ಮನ ಪಕ್ಕದಲ್ಲಿ ಕುಳಿತ. ಬಹಳ ಹೊತ್ತು ಇಬ್ಬರು ಮಾತಿಲ್ಲದೆ ಹಾಗೆಯೇ ಕುಳಿತಿದ್ದರು. ಆಮೆಲೆ, ರಾಜ ಎದ್ದು ತನ್ನಮ್ಮನ ಕೈ ಹಿಡಿದು ನಿಧಾನವಗಿ ರಸ್ತೆಯ ತಿರುವಿನಲ್ಲಿ ನಡೆಸಿಕೊಂಡು, ಮನೆಯನ್ನು ದಾಟಿ, ಕೊಳದಬಳಿ ಕರೆತಂದ. ತನ್ನ ಸುತ್ತಲ ಪರಿವೆಯೇ ಇಲ್ಲದೆ ಜಡಹಿಡಿದಂತೆ ಸ್ತಬ್ದವಾಗಿ ನಿಂತಿದ್ದ ಅವಳ ಮುಖ ಕೈಗಳನ್ನು

ತೊಳೆದ. ಅಮ್ಮನನ್ನು ಮನೆಗೆ ಕರೆತಂದು ಅವಳ ಕೋಣೆಯಿಂದ ಸೀರೆಯನ್ನು ಅವಳ ಕೈಗೆ ನೀಡಿದ. ಅವಳು ಸೀರೆ ಬದಲಿಸಿ ಕೋಣೆಯಿಂದ ಹೊರಬಂದಳು. ಕೋಣೆಯೊಳಗೆ ಹೋಗಿ ಬದಲಿಸಿದ್ದ ಒದ್ದೆ ಸೀರೆಯನ್ನು ಹೊರಕ್ಕೆ ತಂದು ಕೊಳದಬಳಿ ಬಂದ. ದೊಡ್ಡ ಕಲ್ಲನ್ನು ಸೀರೆಯಲ್ಲಿ ಸುತ್ತಿ ಕೊಳದೊಳಕ್ಕೆ ಎಸೆದ. ಕಲ್ಲು ಪಾತಳ ಮುಟ್ಟಿ, ಅದರ ಪರಿಣಾಮವಾಗಿ ಎದ್ದ ನೀರಿನ ತರಂಗಗಳು ಕೆಲವು ನಿಮಿಷಗಳ ಮೇಲೆ ಸ್ತಬ್ಧವಾಯಿತು. ಕೊಳ ಮತ್ತೆ ತನ್ನ ಹಿಂದಿನ ಶಾಂತ ನಿಶ್ಕಳಂಕ ರೂಪವನ್ನು ತಳೆದಿತ್ತು.

ಅವನು ಮನೆಗೆ ಹಿಂತಿರುಗಿದಾಗ ಮನೆ ನಿಶ್ಶಬ್ದವಾಗಿ ಉಸಿರಾಡುವಂತಿತ್ತು. ಅವನ ಅಮ್ಮ ಹಾಲಿನಲ್ಲಿ ಕುಳಿತಲ್ಲಿಯೆ ಕುಳಿತಿದ್ದಳು. ಒಬ್ಬರ ಮುಖವನ್ನೊಬ್ಬರು ಒಂದು ಕ್ಷಣ ನೋಡಿದರು. ಅವನ ಅಮ್ಮ ಏನನ್ನೋ ಹೇಳಲು ಯತ್ನಿಸುತ್ತಿರುವಂತೆಯೇ ಅವನ ಅತ್ತೆ ಹಾಲನ್ನು ಪ್ರವೇಶಿಸಿದಳು. ಅಮ್ಮ, ಅವನ ಮುಖವನ್ನು ಮತ್ತೊಮ್ಮೆ ದೀರ್ಘವಾಗಿ ನೋಡಿ ಸುಮ್ಮನಾದಳು. 'ಈ ಘಟನೆಯ ಬಗ್ಗೆ ಮಾತನಾಡುವ ಘಳಿಗೆ ಮೀರಿಹೋಗಿದ್ದು ಇನ್ನು ಮುಂದೆ ಎಂದೂ ಈ ವಿಚಾರವನ್ನು ಮಾತನಾಡುವ ಅವಕಾಶ ಮತ್ತೆ ಬರುವುದಿಲ್ಲ' ಎಂಬುದು ಅವನಿಗೆ ಆ ಕ್ಷಣದಲ್ಲಿ ಖಾತರಿಯಾಗಿತ್ತು. ರಾಜ ಅವನ ಅತ್ತೆಗೆ ಅಮ್ಮನಿಗೆ ಅಪ್ಪ ಸಿಗಲಿಲ್ಲವೆಂದೂ ತಾನೇ ಅಪ್ಪನನ್ನು ಹುಡುಕಲು ಹೋಗುವುದಾಗಿಯೂ ಹೇಳಿದ.

ಮನೆಬಿಟ್ಟು ಬೆಳ್ಳಿಯ ಚಂದ್ರನ ಬೆಳಕಿನಲ್ಲಿ ರಸ್ತೆಗೆ ಕಾಲಿಟ್ಟ. ಇಡೀ ರಸ್ತೆ, ಅಕ್ಕಪಕ್ಕದಲ್ಲಿದ್ದ ಮರಗಳು, ಎಲ್ಲ ಒಂದು ಥರದ ದುಃಸ್ವಪ್ನವೇನೋ ಎಂಬಂತೆ ವಿಚಿತ್ರವಾಗಿ ಕಾಣುತಿತ್ತು. ರಾಜ ತಾನೇ ರಸ್ತೆಯಲ್ಲಿ ನಡೆಯುತ್ತಿದ್ದರೂ, ಮತ್ತೆ ಯಾರೋ ರಸ್ತೆಯಲ್ಲಿ ನಡೆಯುತ್ತಿರುವುದನ್ನು ತಾನು ದೂರದಿಂದ ನೋಡುತ್ತಿರುವಂತೆ ಅವನಿಗೆ ಭಾಸವಾಗುತ್ತಿತ್ತು. ಅಪ್ಪನನ್ನು ಹುಡುಕಿಕೊಂಡು ಹೋಗುತ್ತಿರುವಾಗ ಅಕಸ್ಮಾತ್ತಾಗಿ ಅವನು ಅಪ್ಪನ ದೇಹವನ್ನು ಕಂಡ ರೀತಿಯನ್ನು, ಸಮಾಚಾರವನ್ನು ಊರವರಿಗೆ ತಾನು ವಿವರಿಸುವ ಬಗೆಯನ್ನು ಯೋಚಿಸುತ್ತ ರಸ್ತೆಯಲ್ಲಿ ನಡೆದ.

•

# ಅರಿತವರಾರೋ ಎದೆಯ?

– ಕೆ. ತ್ರಿವೇಣಿ ಶ್ರೀನಿವಾಸರಾವ್

ಅಲೆಅಲೆಯಾದ ಕಪ್ಪು ಕೂದಲನ್ನು ರಬ್ಬರ್‌ಬ್ಯಾಂಡಿನಲ್ಲಿ ಬಿಗಿದಿದ್ದಾಯಿತು. ಮುಖಕ್ಕೆ ಮತ್ತೊಮ್ಮೆ ನವಿರಾಗಿ ಪೌಡರ್ ಸವರಿದಳು. ತುಟಿಗಳಿಗೆ ಹವಳ ಬಣ್ಣದ ಲಿಪ್‌ಸ್ಟಿಕ್ ಲೇಪನವಾಯಿತು. ಕೊನೆಯದಾಗಿ ಕನ್ನಡಿಯಲ್ಲೊಮ್ಮೆ ತನ್ನನ್ನು ನೋಡಿಕೊಂಡು ತೃಪ್ತಿಯಿಂದ ತಲೆಯಾಡಿಸಿ, ಹೊರಡಲು ಅಣಿಯಾಗಿ ನಿಂತಳು ಚಂದನ. ಯಾವ ಉಲ್ಲಾಸವೂ ಇಲ್ಲದ ಮಗಳ ನಿರ್ಭಾವ ಮುಖವನ್ನೇ ಗಮನಿಸುತ್ತಿದ್ದರು ಸರೋಜಮ್ಮ. ಸದಾ ನಗುತ್ತ, ಎಲ್ಲರನ್ನೂ ನಗಿಸುತ್ತಿದ್ದ ಚಂದನ ಮೂಕಿಯಂತಾಗಿಹೋಗಿದ್ದಳು. ಅವಳ ನೋವಿಗೆ ಸರಿಯಾದ ಕಾರಣವನ್ನು ಅರಿಯದೆ ಕಂಗಾಲಾಗಿದ್ದರು. ತನ್ನ ಹಿಂದೆ ಬಂದು ನಿಂತಿದ್ದ ತಾಯಿಯ ಬಾಯಿಂದ ಬರಲಿರುವ ಮಾತುಗಳೇನೆಂಬುದು ಅವಳಿಗೆ ಗೊತ್ತು.

'ತಿಂಡಿ ಸಿದ್ಧವಾಗಿದೆ. ತಿಂದು ಹೋಗಬಾರದೇ ಚಂದು? ದಿನಾ ಯಾಕೆ ಹೀಗೆ ಉಪವಾಸ ಹೋಗ್ತೀಯಾ?' ಎಂದರು ಕಕ್ಕುಲತೆಯಿಂದ.

ಅವರ ಮಾತಿಗೆ ಬೇಡವೆನ್ನುವಂತೆ ತಲೆಯನ್ನು ಕೊಡವಿದಳು.

'ಬೇಡಮ್ಮ, ಈಗ ತಿಂಡಿ ತಿನ್ನಲು ಸಮಯವಿಲ್ಲ. ನಾನು ಬರೋದು ಲೇಟಾಗಬಹುದು. ಅದಕ್ಕಾಗಿ ಗಾಬರಿಯಾಗಬೇಡ ಅಪ್ಪನಿಗೂ ಹೇಳಿಬಿಡು' ಎಂದು ಅವಸರದಿಂದಲೇ ನುಡಿದು ಚೂಡಿದಾರದ ವೇಲ್ ಸರಿಪಡಿಸಿಕೊಳ್ಳುತ್ತಾ ಹೊರಟೇಹೋದಳು.

ಮಗಳು ಕಣ್ಮರೆಯಾಗುವವರೆಗೆ ನೋಡುತ್ತಾ ನಿಂತಿದ್ದ ಸರೋಜಮ್ಮ ಸೋತಂತೆ ಕುಸಿದು ಕುಳಿತರು.

ಅವರಿಗಿದ್ದವರು ಇಬ್ಬರೇ ಮಕ್ಕಳು. ಕೇಶವ ಮತ್ತು ಚಂದನ. ಕೇಶವನಿಗೆ ಬಾಲ್ಯದಲ್ಲಿ ಸತತವಾಗಿ ಬಂದ ಜ್ವರ ಅವನ ಎರಡೂ ಕಾಲುಗಳಲ್ಲಿನ ಬಲವನ್ನು ಪೂರ್ತಿಯಾಗಿ

ಕಸಿದುಕೊಂಡಿತ್ತು. ಆಗ ಲಭ್ಯವಿದ್ದ ಎಲ್ಲಾ ರೀತಿಯ ಚಿಕಿತ್ಸೆಗಳನ್ನು ಮಾಡಿದ್ದರೂ ಫಲ ದೊರಕಿರಲಿಲ್ಲ. ಯಾರಿಗೂ ಹೊರೆಯಾಗದಂತೆ ತನ್ನ ಕೆಲಸವನ್ನು ತಾನೇ ಕಷ್ಟಪಟ್ಟು ಮಾಡಿಕೊಳ್ಳುತ್ತಿದ್ದ. ಹೆಚ್ಚು ವಿದ್ಯೆಯೂ ಅವನ ತಲೆಗೆ ಹತ್ತಿರಲಿಲ್ಲ. ತನ್ನ ಅಲ್ಪ ಓದಿಗೆ ತಕ್ಕಂತೆ ಸ್ಥಳೀಯ ಕಾರ್ಖಾನೆಯೊಂದರಲ್ಲಿ ಸಣ್ಣ ಕೆಲಸವನ್ನು ಹುಡುಕಿಕೊಂಡಿದ್ದ. ಅಲ್ಲಿ ಬರುತ್ತಿದ್ದ ಸಂಬಳ ಯಾವ ಮೂಲೆಗೂ ಸಾಲದು. ಅದೂ ಕೂಡ ಬಂದರೆ ಬಂತು, ಇಲ್ಲದಿದ್ದರೆ ಇಲ್ಲ. ಕಾರ್ಖಾನೆ ನಷ್ಟದಂಚಿನಲ್ಲಿದ್ದುದರಿಂದ ಅದರ ಮಾಲೀಕರು ಕೂಡ ಅಸಹಾಯಕರಾಗಿದ್ದರು. ಜೊತೆಯವರೆಲ್ಲ ಬೇರೆ ಕಡೆಗಳಲ್ಲಿ ಕೆಲಸ ಹುಡುಕಿಕೊಂಡು ಹೊರಟುಹೋಗಿದ್ದರು. ಕೇಶವ ವಿಧಿ ಇಲ್ಲದೆ ಅಲ್ಲಿಗೇ ಅಂಟಿಕೊಂಡಿದ್ದ. ಅವನ ಸಂಪಾದನೆಯಿಂದ ಸಂಸಾರ ನಡೆಯುವುದಂತೂ ಸಾಧ್ಯವಿರಲಿಲ್ಲ. ಅದರ ಜೊತೆಗೆ ಗೋಪಾಲರಾಯರ ಪೆನ್‌ಷನ್ ಹಣವು ಬರುತ್ತಿತ್ತು. ಗೋಪಾಲರಾಯರಿಗೆ ಪಿತ್ರಾರ್ಜಿತವಾಗಿ ಬಂದಿದ್ದ ಸ್ವಲ್ಪ ಭತ್ತದ ಗದ್ದೆಯೂ ಇತ್ತು. ಅದನ್ನು ಹಳ್ಳಿಯಲ್ಲಿದ್ದ ಅವರ ತಮ್ಮನೇ ನೋಡಿಕೊಳ್ಳುತ್ತಿದ್ದು, ವರ್ಷಕ್ಕಾಗುವಷ್ಟು ಭತ್ತವನ್ನು ನಿರ್ವಂಚನೆಯಿಂದ ತಂದುಕೊಡುತ್ತಿದ್ದುದರಿಂದ ಜೀವನ ಹಾಗೂ ಹೀಗೂ ಸಾಗುತ್ತಿತ್ತು. ಯಾವ ದುಂದುವೆಚ್ಚಕ್ಕೆ ಹೋಗದೆ, ಹಿತಮಿತವಾಗಿ ಜೀವನ ನಡೆಸುವುದನ್ನು ಸರೋಜಮ್ಮನವರಿಗೆ ಯಾರೂ ಹೇಳಿಕೊಡಬೇಕಾಗಿರಲಿಲ್ಲ.

ಕೇಶವ ತುಂಬಾ ಮೆತ್ತನೆಯ ಹುಡುಗ. ದೈಹಿಕ ಅಸಾಮರ್ಥ್ಯ ಅವನಲ್ಲಿ ಹಿಂಜರಿಕೆಯನ್ನು ಬೆಳೆಸಿತ್ತು. ಯಾವುದಕ್ಕೂ ಮುನ್ನುಗ್ಗಿ ಹೋಗುವ ಸ್ವಭಾವವಲ್ಲ ಅವನದು. ಅವನನ್ನು ಕಷ್ಟಪಟ್ಟು ಓದಿಸಲು ಹೆತ್ತವರು ತಯಾರಿದ್ದರೂ, ಅಷ್ಟೇನೂ ಬುದ್ಧಿವಂತನಲ್ಲದ ಅವನು ಮುಂದೆ ಓದುವುದಿಲ್ಲವೆಂದು ಧೃಡನಿರ್ಧಾರ ಮಾಡಿಬಿಟ್ಟಿದ್ದ. ಸಿಕ್ಕಿರುವ ಕೆಲಸದಲ್ಲಿ, ಬರುತ್ತಿದ್ದ ಆದಾಯದಲ್ಲಿ ತೃಪ್ತ ಅವನು. ಚಂದನ ಹಾಗಲ್ಲ. ಬಹಳ ಮಹತ್ವಾಕಾಂಕ್ಷಿ ಹುಡುಗಿ ಮೊದಲಿನಿಂದಲೂ ಓದಿನಲ್ಲಿ ಮುಂದು. ಚಟುವಟಿಕೆಯ ಚಿಗುರು. ನಾಲ್ಕು ಜನರಲ್ಲಿ ಎದ್ದು ಕಾಣುವ ರೂಪ, ಮಾತುಗಾರಿಕೆ ಅವಳದು. ತಂದೆತಾಯಿಗಳಿಗೆ ಸ್ವಲ್ಪವೂ ಹೊರೆಯಾಗದಂತೆ ತನ್ನ ವಿದ್ಯಾಭ್ಯಾಸವನ್ನು ಮುಗಿಸಿಕೊಂಡಳು. ಓದು ಮುಗಿದ ಕೂಡಲೇ, ಅವಳ ಅದೃಷ್ಟವೋ ಎಂಬಂತೆ ಪ್ರತಿಷ್ಠಿತ ಖಾಸಗೀ ಕಂಪನಿಯೊಂದರಲ್ಲಿ ಕೆಲಸವೂ ದೊರಕಿಬಿಟ್ಟಿತು. ಕೈತುಂಬ ಸಂಬಳದ ಈ ಕೆಲಸ ದೊರಕಿದ ಮೇಲೆ ಮನೆಯಲ್ಲಿ ಸುಖ ಸಮೃದ್ಧಿ ನೆಲೆಸಿತ್ತು.

*

ಚಂದನ ಬದುಕಿನಲ್ಲೊಂದು ದಡ ಸೇರಿದ ನೆಮ್ಮದಿ ತಂದೆತಾಯಿಗಳಿಗಿದ್ದರೂ ಕೇಶವನ ಭವಿಷ್ಯವನ್ನು ನೆನೆದು ಅವರು ಕುಗ್ಗಿ ಹೋಗುತ್ತಿದ್ದರು. ತಮ್ಮ ನಂತರ ಅವನ ಗತಿಯೇನು? ಎಂಬ ಚಿಂತೆ ಅವರನ್ನು ಹಗಲಿರುಳು ಕಾಡುತ್ತಿತ್ತು.

ಈ ಚಿಂತೆಯ ಮೋಡದ ನಡುವೆಯೂ ಒಂದು ಸಂತಸದ ಕಿರಣ ಅವರ ಬಾಳಿನಲ್ಲಿ ತೂರಿಬಂದಿತ್ತು. ಗೋಪಾಲರಾಯರ ಬಾಲ್ಯದ ಗೆಳೆಯರಾದ ದಯಾಕರ್ ತಮ್ಮ ಮಗನಿಗೆ ಚಂದನಳನ್ನು ತಂದುಕೊಳ್ಳಲು ಮುಂದೆ ಬಂದಿದ್ದರು. ಖಾಸಗಿ ನರ್ಸಿಂಗ್‌ಹೋಮೊಂದರಲ್ಲಿ ವೈದ್ಯನಾಗಿ ಕೆಲಸಮಾಡುತ್ತಿದ್ದ ಪವನ್ ಯಾರಾದರೂ ಮೆಚ್ಚಿಕೊಳ್ಳುವಂತಿದ್ದ ಸುಂದರ ಯುವಕ. ಗುರುಹಿರಿಯರೆಂದರೆ ಅವನಿಗೆ ಬಹಳ ಗೌರವ. ಅಂತಹ ಹುಡುಗ ತಮ್ಮ ಅಳಿಯನಾಗುವುದಾದರೆ ಅದು ತಮ್ಮ ಪಾಲಿನ ಭಾಗ್ಯವೆಂದೇ ಗೋಪಾಲರಾಯರ ನಂಬಿಕೆಯಾಗಿತ್ತು.

ಪವನ್ ಕೂಡ ಚಂದನಳನ್ನು ಮೆಚ್ಚಿಕೊಂಡಿದ್ದ. ಆದರೆ ಇದು ಸರೋಜಮ್ಮನವರಿಗೆ ಅಷ್ಟೇನೂ ಸಂತೋಷ ಉಂಟುಮಾಡಿರಲಿಲ್ಲ. ಅದಕ್ಕೆ ಕಾರಣವೂ ಇತ್ತು. ದಯಾಕರ್ ಅವರೇನೋ ಚಂದನಳನ್ನು ತಮ್ಮ ಸೊಸೆಯಾಗಿಸಿಕೊಳ್ಳಲು ಬಯಸಿದ್ದರೂ, ಅವರ ಪತ್ನಿ ಶ್ರೀದೇವಿ ಬಹಳ ಜೋರಿನ ಹೆಂಗಸು. ತಮ್ಮ ಇಬ್ಬರು ಹೆಣ್ಣುಮಕ್ಕಳಿಗೆ ಬೇಕಾದ ಹಾಗೆ ಕೊಟ್ಟು, ಒಳ್ಳೆಯ ಸಂಬಂಧ ಹುಡುಕಿ ಮದುವೆ ಮಾಡಿಕೊಟ್ಟಿದ್ದರು. ಅವರು ಬರಿಗೈಲಿ ಬರುವ ಚಂದನಳನ್ನು ಆರತಿಯೆತ್ತಿ ಒಳಗೆ ಕರೆದುಕೊಳ್ಳಲು ತಯಾರಿದ್ದಾರೆಯೇ? ಎಂಬ ಅಳುಕು ಸರೋಜಮ್ಮನವರನ್ನು ಕಾಡುತ್ತಿತ್ತು.

ಶ್ರೀ ನರ್ಸಿಂಗ್‌ಹೋಮಿನಲ್ಲಿ ತನ್ನ ಪ್ರತಿಭೆಗೆ ತಕ್ಕ ಪುರಸ್ಕಾರವಿಲ್ಲದೆ, ಅತ್ಯಲ್ಪ ಸಂಬಳಕ್ಕೆ ಬೇರೊಬ್ಬರ ಅಡಿಯಾಳಾಗಿ ದುಡಿಯುತ್ತಿರುವ ಪವನನಿಗೆ ಅವನದೇ ಆದ ಸ್ವಂತ ನರ್ಸಿಂಗ್‌ಹೋಮ್ ಮಾಡಿಕೊಡಬೇಕೆಂಬುದು ಶ್ರೀದೇವಿಯ ಬಹುದಿನದ ಆಸೆಯಾಗಿತ್ತು. ಅದಕ್ಕೆ ಅವರ ಮುಂದಿದ್ದ ಏಕೈಕ ದಾರಿಯೆಂದರೆ ಅತಿ ಹೆಚ್ಚು ವರದಕ್ಷಿಣೆ ಕೊಡುವ ಕನ್ಯಾಪಿತೃವಿಗೆ ಮಗನನ್ನು ಮಾರಾಟ ಮಾಡುವುದು! ಇಬ್ಬರು ಹೆಣ್ಣುಮಕ್ಕಳ ಮದುವೆಗೆ, ಮಗನ ವೈದ್ಯಕೀಯ ವಿದ್ಯಾಭ್ಯಾಸಕ್ಕೆ ಕೈಲಿದ್ದ ಹಣವೆಲ್ಲ ವ್ಯಯವಾಗಿದ್ದುದರಿಂದ ಅವರ ಕನಸು ನನಸಾಗಲು ಇದಲ್ಲದೆ ಬೇರಾವ ದಾರಿಯೂ ಇರಲಿಲ್ಲ. ಅದಕ್ಕಾಗಿ ಭಾರೀ ವರದಕ್ಷಿಣೆ ತರುವ ಶ್ರೀಮಂತ ವಧುಗಳ ತಲಾಶೆಯಲ್ಲಿ ಮುಳುಗಿದ್ದ ಅವರಿಗೆ ದಯಾಕರ್ ತಮ್ಮ ಬಾಲ್ಯದ ಗೆಳೆಯ ಗೋಪಾಲರಾಯರಿಗೆ ಹೋಗಿ ಮಾತುಕೊಟ್ಟು ಬಂದಿದ್ದು ನುಂಗಲಾರದ ತುತ್ತಾಗಿತ್ತು.

ಚಂದನಳನ್ನು ಮೊದಲಿಂದಲೂ ನೋಡಿದ್ದ ಪವನ್ ಕೂಡ ತಂದೆಯ ಮಾತಿಗೆ ಕೂಡಲೇ ಸಮ್ಮತಿ ಸೂಚಿಸಿದ್ದ. ಶ್ರೀದೇವಿ ಇಲ್ಲೂ ಕೂಡ ನಷ್ಟ ಮಾಡಿಕೊಳ್ಳಲು ತಯಾರಿರಲಿಲ್ಲ. ಆಕೆ ಮಾತಿನಲ್ಲಿ ಬಲು ಜಾಣೆ. ಬೆಣ್ಣೆಯಲ್ಲಿ ಕೂದಲು ತೆಗೆದಂತೆ ನಯವಾಗಿ ಮಾತನಾಡುವ ಕಲೆಗಾರಿಗೆ ಇದ್ದ ಆಕೆ, ಗೋಪಾಲರಾವ್ ಸರೋಜಮ್ಮನವರ ಮುಂದೆ ತಮ್ಮ ಬೇಡಿಕೆಯನ್ನು ಇರಿಸಿದ್ದರು. ಅವರಿಬ್ಬರಿಗೂ ಹೌದು ಅನ್ನಿಸುವಂತೆ ತಮ್ಮ

ಯೋಜನೆಯನ್ನು ವಿವರಿಸಿದ್ದರು. ಮುಂದೆ ಅವರ ಅಳಿಯನಾಗಲಿರುವ ಪವನನ ಅಭಿವೃದ್ಧಿಗಾಗಿಯೇ ತಾವು ಇಷ್ಟೆಲ್ಲಾ ಮಾಡುತ್ತಿರುವುದೆಂದು ಅವರಿಬ್ಬರನ್ನು ನಂಬುವಂತೆ ಮಾಡಿದ್ದರು.

ಸುತ್ತಿ ಬಳಸಿ ಸಾಗುತ್ತಿದ್ದ ಅವರ ಮಾತಿನ ಸಾರಾಂಶವೇನೆಂದರೆ ಪವನ್ ಜೊತೆ ಚಂದನಳ ಮದುವೆಯಾಗಬೇಕಿದ್ದರೆ ಕೊನೆ ಪಕ್ಷ ಮೂವತ್ತು ಲಕ್ಷ ರೂಪಾಯಿಗಳನ್ನು ಮದುವೆಗೆ ಮೊದಲೇ ಅವರಿಗೆ ತಲುಪಿಸಬೇಕಿತ್ತು. ಅವರು ಬಾಯಿಬಿಟ್ಟು ಹೇಳದಿದ್ದರೂ, ಅಷ್ಟು ಹಣ ತಲುಪದಿದ್ದರೆ ಚಂದನಳ ಮದುವೆ ಪವನನ ಜೊತೆಗೆ ಸಾಧ್ಯವಿಲ್ಲವೆಂಬ ಸಂದೇಶ ಗೋಪಾಲರಾವ್ ದಂಪತಿಗಳ ಅಂತರಂಗಕ್ಕೆ ತಲುಪಿಬಿಟ್ಟಿತ್ತು.

ಸರೋಜಮ್ಮ ಶ್ರೀದೇವಿಯ ಬೇಡಿಕೆಯನ್ನು ಕೇಳಿ ಬೆಚ್ಚಿದರೂ, ಅದನ್ನು ತೋರಗೊಡದೆ ಮೆಲ್ಲಗೆ ಅವರ ಮನ ಒಲಿಸಲು ಪ್ರಯತ್ನಿಸಿದರು.

'ಶ್ರೀದೇವಿಯವರೆ, ನೀವು ನಿಮ್ಮ ಮಗನ ಶ್ರೇಯಸ್ಸನ್ನು ಬಯಸುವುದು ಸಹಜವಾಗಿಯೇ ಇದೆ. ಆದರೆ ನಮ್ಮ ಆರ್ಥಿಕ ಪರಿಸ್ಥಿತಿ ನಿಮಗೆ ತಿಳಿಯದ್ದಲ್ಲ. ನಾವು ಮದುವೆಯನ್ನು ಯಾವ ಕೊರತೆಯೂ ಇಲ್ಲದಂತೆ ನಿಮ್ಮ ಇಷ್ಟಾನುಸಾರ ನಡೆಸಿಕೊಡುತ್ತೇವೆ. ಆದರೆ ಇಷ್ಟೊಂದು ನಗದು ಹಣ ನಮ್ಮ ಕೈಲಿ ಹೊಂದಿಸುವುದು ಸಾಧ್ಯವಿಲ್ಲ. ಚಂದನಳೂ ಒಳ್ಳೆಯ ಕೆಲಸದಲ್ಲಿದ್ದಾಳೆ. ಅವಳ ದುಡಿಮೆಯೆಲ್ಲ ನಿಮ್ಮದೇ ಅಲ್ಲವೇ? ಹೇಗಾದರೂ ದೊಡ್ಡ ಮನಸ್ಸು ಮಾಡಿ, ನಮ್ಮ ಮಗಳನ್ನು ನಿಮ್ಮ ಮನೆ ತುಂಬಿಸಿಕೊಳ್ಳಿ' ಎಂದರು ಬೇಡಿಕೆಯ ದನಿಯಲ್ಲಿ.

ಶ್ರೀದೇವಿ ಸರೋಜಮ್ಮನವರ ಮಾತುಗಳಿಗೆ ಕೊಂಕು ನಗು ಬೀರಿದರು. 'ಮಗಳು-ಅಳಿಯ ಮುಂದೆ ಸುಖವಾಗಿರಬೇಕು ಅನ್ನೋ ಆಸೆ ನಿಮಗಿದ್ದರೆ ದಾರಿ ತಾನಾಗೇ ಕಾಣುತ್ತದೆ. ಮುಖ್ಯವಾಗಿ ನಿಮಗೆ ಮನಸ್ಸಿರಬೇಕು ಅಷ್ಟೇ'.

'ಏನು? ನಾವು ಕೈಲಿ ದುಡ್ಡಿಟ್ಟುಕೊಂಡು ಇಲ್ಲ ಅನ್ನುತ್ತಿದ್ದೀವಿ ಅಂತಾನಾ ನಿಮ್ಮ ಮಾತಿನ ಅರ್ಥ?' ಶ್ರೀದೇವಿಯವರ ಮಾತಿನ ಧಾಟಿ ಎತ್ತ ಹೊರಳುತ್ತಿದೆಯೆಂದು ಅರಿಯದೆ ಕೇಳಿದರು ಗೋಪಾಲರಾಯರು.

'ದುಡ್ಡಿದೆ ಅಂದರೆ ನಿಮ್ಮ ಕೈಲಿ ಈಗಿದೆ ಅಂತ ಅರ್ಥವಲ್ಲ, ಆದರೆ ನಿಮಗೆ ಕೊಡುವ ಮನಸ್ಸಿದ್ದರೆ ನಾನು ಕೇಳಿದ ಸಣ್ಣ ಮೊತ್ತ ಹೊಂದಿಸುವುದೇನು ಕಷ್ಟವಲ್ಲ' ಎಂದರು ಶ್ರೀದೇವಿ ಮಾರ್ಮಿಕವಾಗಿ ನೋಡುತ್ತಾ.

ಗೋಪಾಲರಾವ್, ಸರೋಜಮ್ಮನವರಿಗೆ ಅವರ ಮಾತಿನ ತಲೆಬುಡ ತಿಳಿಯಲಿಲ್ಲ. ಊಟ, ಬಟ್ಟೆ, ಬಂದು ಹೋಗುವ ನೆಂಟರಿಷ್ಟರು, ಕಾಯಿಲೆಕಸಾಲೆ, ಹಬ್ಬ ಹರಿದಿನಗಳನ್ನು

ನಿರ್ವಹಿಸಿಕೊಂಡು ದಿನಗಳನ್ನು ಕಳೆಯುವುದೇ ದೊಡ್ಡ ಸಾಹಸವಾಗಿರುವ ನಮ್ಮಲ್ಲಿ ಅಷ್ಟೊಂದು ಹಣವಿರಬಹುದೆಂಬ ಕಲ್ಪನೆಯಾದರೂ ಇವರಿಗೆ ಹೇಗೆ ಬಂದಿತು? ತಮಗೆ ಆಗದವರು ಯಾರಾದರೂ ಈರೀತಿ ಹಚ್ಚಿಕೊಟ್ಟು ಮದುವೆ ಮುರಿಯಲು ಸಂಚು ನಡೆಸಿರಬಹುದೇ? ಎಂದು ಶಂಕಿಸಿತು ಅವರ ಮನಸ್ಸು. ಹಿತೈಷಿಗಳ ನೆಪದಲ್ಲಿ ಈ ರೀತಿ ಹುಳಿ ಹಿಂಡುವ ಜನರಿಗೂ ಕಡಿಮೆ ಇರಲಿಲ್ಲ.

ಗೋಪಾಲರಾವ್ ಮನದ ಕುತೂಹಲವನ್ನು ಅಡಗಿಸಿಕೊಳ್ಳಲಾಗದೆ ಶ್ರೀದೇವಿಯವರಿಗೆ ಕೈ ಮುಗಿದು 'ತಾಯಿ, ನಾನು ಹಣ ಇಟ್ಟುಕೊಂಡು ಇಲ್ಲವೆಂದು ಹೇಳುವವನಲ್ಲ. ಒಂದು ವೇಳೆ ಇದು ಸುಳ್ಳಾದರೆ ನೀವು ಕೊಡುವ ಯಾವ ಶಿಕ್ಷೆಗೂ ನಾನು ಸಿದ್ಧ. ನನ್ನಲ್ಲಿ ಅಷ್ಟು ಹಣವಿಲ್ಲ. ನಮ್ಮನ್ನು ದಯವಿಟ್ಟು ನಂಬಿ' ಎಂದರು ದೈನ್ಯದಿಂದ.

ಶ್ರೀದೇವಿಯವರು ಇನ್ನು ಇವರನ್ನು ಸತಾಯಿಸುವುದು ಬೇಡವೆಂದು 'ನೀವು ಮನಸ್ಸು ಮಾಡಿದರೆ ಹಣ ಕೊಡಬಹುದು ಎಂದು ಹೇಳಿದೆನಲ್ಲವೇ? ಹಾಗೆಂದರೆ ನಿಮ್ಮ ಬಳಿ ಈಗಲೇ ಅಷ್ಟೊಂದು ಹಣವಿದೆ ಎಂದು ಅಲ್ಲ, ಆದರೆ ಹಳ್ಳಿಯಲ್ಲಿರುವ ನಿಮ್ಮ ಬಂಗಾರದಂತಹ ಜಮೀನನ್ನು ಮಾರಿದರೆ ಆ ಹಣ ನಿಮ್ಮ ಕೈ ಸೇರುವುದಿಲ್ಲವೇ?' ಎಂದರು ಕಣ್ಣುಗಳಲ್ಲಿ ಆಸೆಯನ್ನು ತುಳುಕಿಸುತ್ತ.

'ಏನೋ ನೀವು ಒಮ್ಮೆ ದುಡ್ಡು ಹೊಂದಿಸಿಕೊಂಡರೆ ಲಗ್ನಪತ್ರಿಕೆಗೆಂದು ಪ್ರತ್ಯೇಕ ಸಮಾರಂಭವೇನೂ ಬೇಕಾಗಿಲ್ಲ. ಮದುವೆಯ ಜೊತೆಯಲ್ಲೇ ಅದನ್ನೂ ಮಾಡಿಕೊಂಡರಾಯಿತು'.

ಶ್ರೀದೇವಿಯ ಯೋಚನೆ ಯಾವ ದಿಕ್ಕಿನಲ್ಲಿ ಹರಿಯುತ್ತಿದೆ ಎಂದು ಅರಿವಾದೊಡನೆ ಸರೋಜಮ್ಮ, ಗೋಪಾಲರಾಯರು ದಿಗ್ಭ್ರಾಂತರಾಗಿ ಕುಳಿತುಬಿಟ್ಟರು. ಮನದ ಆಂದೋಲನವನ್ನು ಮಾತಿನಲ್ಲಿ ತೋರಗೊಡದೆ 'ಸರಿ ನಾವಿನ್ನು ಬರುತ್ತೀವಮ್ಮ. ನೋಡೋಣ.... ಮಕ್ಕಳ ಜೊತೆ ಈ ಬಗ್ಗೆ ವಿಚಾರಮಾಡಿ ನಿಮಗೆ ವಿಷಯ ತಿಳಿಸುತ್ತೇವೆ' ಎದ್ದು ನಿಂತರು.

ಶ್ರೀದೇವಿ ಗೇಟಿನವರೆಗೆ ಇವರನ್ನು ಹಿಂಬಾಲಿಸಿ ಬಂದವರು 'ಯಾವುದಕ್ಕೂ ಬೇಗ ತಿಳಿಸಿದರೆ ನಮಗೂ ಬೇರೆ ಸಂಬಂಧಗಳನ್ನು ಹುಡುಕಲು ಅನುಕೂಲವಾಗುತ್ತದೆ' ಎಂದರು ನಿರ್ದಾಕ್ಷಿಣ್ಯದಿಂದ. ಆ ಕ್ಷಣದಲ್ಲಿ ಗೋಪಾಲರಾಯರಿಗೆ ಕೇವಲ ಹಣವೊಂದೇ ಈ ಜಗವನ್ನು ಆಳುತ್ತಿದೆಯೇನೋ ಎಂಬ ಅನಿಸಿಕೆ ಮನದಲ್ಲಿ ಮೂಡಿತು.

ಶ್ರೀದೇವಿಯವರ ಮನೆಯಿಂದ ಹೊರಬರುವುದನ್ನೇ ಕಾಯುತ್ತಿದ್ದವರಂತೆ ಸರೋಜಮ್ಮ ನಿಡಿದಾದ ಉಸಿರೆಳೆದುಕೊಂಡರು. ಅವರ ಮನದಲ್ಲಿ ಯೋಚನೆಗಳ

ಮಹಾಪೂರವೇ ಹರಿದಿತ್ತು. ಗಂಡನಿಗೆ ಹೇಳಿ ದಯಾಕರ್ ಅವರ ಬಳಿ ಈ ಬಗ್ಗೆ ಮಾತಾಡಿಸಿದರೆ ಹೇಗೆ ಅನ್ನಿಸಿತು. ಆದರೆ ಅವರ ಮನೆಯಲ್ಲಿ ಶ್ರೀದೇವಿಯ ಹೊರತು ಬೇರೆ ಯಾರ ಮಾತು ನಡೆಯದು ಎಂಬ ಸತ್ಯ ಅರಿತಿದ್ದರಿಂದ ಅದನ್ನು ಅಲ್ಲಿಗೇ ಕೈಬಿಟ್ಟರು.

'ಈ ಮದುವೆ ಆಗೋದಲ್ಲ ರೀ. ಆ ಆಸೆಯನ್ನು ನಾವು ಬಿಟ್ಟುಬಿಡುವುದೇ ಒಳ್ಳೆಯದೇನೋ. ನಮ್ಮದು ಅಂತ ಇರೋ ಆಸ್ತಿ ಅಂದರೆ ಅದೊಂದೇ. ಅದರ ಮೇಲೂ ಇವರ ಕಣ್ಣು ಬಿದ್ದಿದೆಯಲ್ಲ ಆಗಲೇ. ಚಂದನಳ ಅದೃಷ್ಟ ಚೆನ್ನಾಗಿದ್ದಲ್ಲಿ ಈ ಶ್ರೀದೇವಿಯ ಮಗನಿಗಿಂತ ಇನ್ನೂ ಉತ್ತಮನಾದ ವರನೇ ದೊರಕಬಹುದು....ಅವರು ಕೇಳುವಷ್ಟು ಹಣ ಹೊಂದಿಸುವುದು ನಮ್ಮಿಂದಂತೂ ಸಾಧ್ಯವಾಗದ ಮಾತು' ಎಂದು ಖಡಾಖಂಡಿತವಾಗಿ ನುಡಿದುಬಿಟ್ಟರು.

ಗೋಪಾಲರಾಯರಿಗೆ ಸರೋಜಮ್ಮನ ಮಾತು ಹಿಡಿಸಲಿಲ್ಲ. 'ಹಣ ಇವತ್ತು ಹೋಗುತ್ತದೆ, ನಾಳೆ ಬರುತ್ತದೆ. ಅದನ್ನೇ ಮುಂದಿಟ್ಟುಕೊಂಡು ಈ ಸಂಬಂಧ ಬಿಡುವುದು ಸರಿಯಲ್ಲ. ಅದೃಷ್ಟ ಹೇಗಿದೆಯೋ ಹಾಗೆ ಆಗಲಿ ಅಂತ ಅಂದುಕೊಂಡು ಈಗ ಅಂಗೈಯಲ್ಲಿ ಇರುವ ಈ ಬಂಗಾರದಂತಹ ಹುಡುಗನನ್ನು ಬಿಟ್ಟುಬಿಡೋದು ಜಾಣತನವೆನಿಸಿಕೊಳ್ಳುವುದೇ? ಏನಾದರೂ ಪ್ರಯತ್ನ ಮಾಡಲೇಬೇಕು' ಎಂದರು.

ಸರೋಜಮ್ಮ ಗಂಡನನ್ನು ನಿಮಗೆಲ್ಲೋ ಹುಚ್ಚು ಎನ್ನುವ ಭಾವದಲ್ಲಿ ಒಮ್ಮೆ ನೋಡಿ ಅಡುಗೆಮನೆಯನ್ನು ಸೇರಿಕೊಂಡರು. ಈ ವಿಷಯ ಅವತ್ತಿಗೆ ಮುಗಿದಂತೆ ಅನ್ನಿಸಿದರೂ ಇಬ್ಬರ ಮನಸ್ಸನ್ನು ಇದೇ ವಿಷಯ ಗುಂಗಿಹುಳದಂತೆ ಕೊರೆಯಲು ಪ್ರಾರಂಭ ಮಾಡಿತ್ತು.

*

ಗೋಪಾಲರಾಯರು ಸರೋಜಮ್ಮನವರ ಅಸಮ್ಮತಿ, ಪ್ರತಿಭಟನೆಯನ್ನು ಲೆಕ್ಕಿಸದೆ ಒಂದು ನಿರ್ಧಾರಕ್ಕೆ ಬಂದುಬಿಟ್ಟಿದ್ದರು. ಸರೋಜಮ್ಮನಿಗೆ ತಿಳಿಯದಂತೆ ಶ್ರೀದೇವಿಯವರಿಗೆ ಹಣ ಹೊಂದಿಸಿಕೊಡುತ್ತೇನೆಂದು ಹೇಳಿ ಬಿಟ್ಟಿದ್ದರು. ಇವರ ಮಾತಿನಿಂದ ಖುಷಿಯಾದ ಶ್ರೀದೇವಿ ಮದುವೆ ಯಾವಾಗ ಬೇಕಾದರೂ ಇಟ್ಟುಕೊಳ್ಳಬಹುದು ಎಂದು ಒಪ್ಪಿಗೆ ಸೂಚಿಸಿದ್ದರು.

ಗೋಪಾಲರಾಯರು ಹಳ್ಳಿಗೆ ಹೋಗಿ ಅಲ್ಲಿದ್ದ ತಮ್ಮನ ನೆರವಿನಿಂದ ಜಮೀನಿನ ವ್ಯಾಪಾರವನ್ನು ಕುದುರಿಸಿದ್ದರು. ನೀರಾವರಿ ಪ್ರದೇಶದಲ್ಲಿದ್ದ ಇವರ ಭೂಮಿಯನ್ನು ಕೊಳ್ಳಲು ಜನ ಕಾಯುತ್ತಿದ್ದುದರಿಂದ ಅದರ ಮಾರಾಟ ಅಂತಹ ಕಷ್ಟವಾಗಲಿಲ್ಲ. ಸ್ವಲ್ಪ ನಿಧಾನಿಸಿದರೆ, ಇನ್ನೂ ಒಳ್ಳೆಯ ಬೆಲೆ ಬರಬಹುದೆಂದು ಅವರ ತಮ್ಮ ವೆಂಕಟೇಶ ಹೇಳಿದರೂ

ಗೋಪಾಲರಾಯರು ಕಾಯಲು ತಯಾರಿರಲಿಲ್ಲ. ಭೂಮಿಯ ಬೆಲೆ ಬಂಗಾರದಂತೆ ಏರಿದ್ದರಿಂದ ಗೋಪಾಲರಾಯರ ನಿರೀಕ್ಷೆ ಮೀರಿಯೇ ಹಣ ಬಂತು. ಬೀಗರು ಕೇಳಿದ್ದ ಹಣವನ್ನು ಕೊಟ್ಟು, ಉಳಿದ ಹಣದಲ್ಲಿ ಮದುವೆಯನ್ನೂ ಮಾಡಿ ಮುಗಿಸಬಹುದೆಂದು ಲೆಕ್ಕಹಾಕಿದರು.

ಸರೋಜಮ್ಮನವರಿಗೆ ಮಗಳ ಮದುವೆಗೆ ಇದ್ದ ಆತಂಕ ನಿವಾರಣೆಯಾಗಿದ್ದು ಒಂದು ತರದ ನಿಶ್ಚಿಂತೆ ಉಂಟುಮಾಡಿತ್ತು. ಅದರೊಟ್ಟಿಗೆ ತಾವೇ ಕೇಶವನ ತಲೆಯ ಮೇಲೆ ಕಲ್ಲು ಚಪ್ಪಡಿಯನ್ನು ಹಾಕಿದಂತೆ ಆಗಲಿಲ್ಲವೇ ಎಂಬ ಕೊರಗು ಸಹ ಕಾಡುತ್ತಿತ್ತು. ಕೇಶವನೇನೋ ಒಂದು ಮಾತೂ ಆಡದೆ ಜಮೀನನ್ನು ಮಾರಲು ಅನುಮತಿ ಕೊಟ್ಟಿದ್ದ. ಆದರೂ ಯಜಮಾನರು ದುಡುಕಿದರೇನೋ ಅನ್ನಿಸುತ್ತಿತ್ತು.

ತಾವು ಇಬ್ಬರು ಮಕ್ಕಳನ್ನು ಸಮಾನವಾಗಿ ನೋಡಿಕೊಳ್ಳಲಿಲ್ಲ. ಮೊದಲೇ ವಿಧಿವಂಚಿತ ಕೇಶವನಿಗೆ ತಮ್ಮಿಂದಲೂ ವಂಚನೆ ಆಯಿತೇ? ಚಂದನ ವಿದ್ಯಾವಂತೆ, ಬುದ್ಧಿವಂತೆ. ಮಿಗಿಲಾಗಿ ಯಾರೂ ಮೆಚ್ಚುವಂತಹ ರೂಪವಂತೆ. ತನ್ನ ಕಾಲ ಮೇಲೆ ತಾನು ನಿಂತಿದ್ದವಳು. ಅವಳ ಮದುವೆ ಇಂದಲ್ಲ, ನಾಳೆ ಆಗಿಯೇ ಆಗುತ್ತಿತ್ತು. ಅವಳ ಮದುವೆಗಿಂತ ತಮಗೆ ಕೇಶವನ ಭವಿಷ್ಯ ಮುಖ್ಯವಾಗಬೇಕಿತ್ತಲ್ಲವೇ? ನೋಡಿದವರ ಕಣ್ಣಿಗೆ ತಮ್ಮ ಕೃತ್ಯ ಒಂದು ಕಣ್ಣಿಗೆ ಬೆಣ್ಣೆ, ಮತ್ತೊಂದು ಕಣ್ಣಿಗೆ ಸುಣ್ಣವನ್ನು ಹಚ್ಚಿದಂತೆ ಕಾಣುವುದಿಲ್ಲವೇ? ಎಂಬ ಅಳುಕು ಅವರನ್ನು ಆವರಿಸಿತು.

ಮನದಲ್ಲಿ ಉಂಟಾದ ಬೇಗುದಿಯನ್ನು ತಡೆಯಲಾರದೆ ತಮ್ಮ ಅಳಲನ್ನು ಗಂಡನ ಮುಂದಿಟ್ಟಾಗ –

'ನೋಡು ಸರೋಜ, ನಾವು ಎಷ್ಟೇ ಶ್ರಮಪಟ್ಟು ಹುಡುಕಿದ್ದರೂ ಚಂದನಳಿಗೆ ಪವನನಿಗಿಂತಲೂ ಉತ್ತಮನಾದ, ಸುಗುಣಿ ವರ ದೊರಕುವುದು ಸಾಧ್ಯವಿರಲಿಲ್ಲ. ಅವಳಾದರೂ ನೆಮ್ಮದಿಯಿಂದಿರಲಿ. ನಮ್ಮ ಕಾರ್ಪಣ್ಯಗಳು ನಮಗಿರಲಿ. ಅದೂ ಅಲ್ಲದೆ ಪವನ್ ಸಾಧು ಸ್ವಭಾವದ ಒಳ್ಳೆಯ ಹುಡುಗ. ಅವನೂ ಕೂಡ ಮುಂದೆ ಕೇಶವನಿಗೆ ನೆರವಾಗಬಾರದೆಂದಿದೆಯೇ? ಯಾರು ಸಹಾಯ ಮಾಡಲಿ, ಬಿಡಲಿ ಕೇಶವನಿಗೆ ನಾನಂತೂ ಅನ್ಯಾಯ ಮಾಡುವುದಿಲ್ಲ. ನನ್ನ ಕೈಕಾಲು ಇನ್ನೂ ಗಟ್ಟಿ ಇದೆ. ಮೈಯಲ್ಲಿ ದುಡಿಯುವ ಶಕ್ತಿ ಇದ್ದೇ ಇದೆ. ಅವನಿಗೆ ಒಂದು ದಾರಿ ಮಾಡಿಯೇ ನಾನು ಕಣ್ಣು ಮುಚ್ಚಿಕೊಳ್ಳುವುದು'. ಎಂದು ಭಾವಾವೇಶದಿಂದ ನುಡಿದರು.

ಗೋಪಾಲರಾಯರ ಮಾತುಗಳಿಂದ ಕುದಿಯುತ್ತಿದ್ದ ಮಾತೃಹೃದಯ ಎಷ್ಟೋ ತಂಪಾಯಿತು.

*

ಎಲ್ಲವೂ ಸರಿ ಹೋಯಿತು ಅಂದುಕೊಳ್ಳುವಷ್ಟರಲ್ಲಿಯೇ ಚಂದನ ಈ ಮದುವೆ ತನಗೆ ಸ್ವಲ್ಪವೂ ಇಷ್ಟವಿಲ್ಲ ಎಂಬ ಸತ್ಯವನ್ನು ಸ್ಫೋಟಿಸಿದ್ದು! ಒಂದು ಸಮಸ್ಯೆ ಪರಿಹಾರವಾಯಿತು ಅಂದುಕೊಳ್ಳುವ ಹೊತ್ತಿಗೆ ಇನ್ನೊಂದು ತಲೆ ಎತ್ತಿತ್ತು.

ಆ ದಿನ ಸರೋಜಮ್ಮ – ಗೋಪಾಲರಾವ್ ಚಂದನಳ ಮದುವೆಯನ್ನು ಎಲ್ಲಿ? ಹೇಗೆ ಮಾಡಿದರೆ ಒಳ್ಳೆಯದು ಎಂದು ತಮ್ಮೊಳಗೆ ಏನೋ ಸಮಾಲೋಚನೆ ಮಾಡಿಕೊಳ್ಳುತ್ತಿದ್ದರು. ಅದೇ ತಾನೇ ಆಫೀಸಿನಿಂದ ಬಂದಿದ್ದ ಚಂದನಳ ಕಿವಿಗೂ ಅವರು ಆಡಿಕೊಳ್ಳುತ್ತಿದ್ದ ಮಾತುಗಳು ಕೇಳಿಸಿದವು. ಬಿರುಗಾಳಿಯಂತೆ ನುಗ್ಗಿ ಬಂದ ಅವಳು 'ಅಪ್ಪ, ಅಮ್ಮ.... ನೀವು ಯಾರೂ ನನ್ನ ಮದುವೆಗಾಗಿ ಇಷ್ಟೊಂದು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ನನಗೆ ಈಗಲೇ ಮದುವೆ ಮಾಡಿಕೊಳ್ಳುವ ಇಷ್ಟವಿಲ್ಲ. ಅಪ್ಪ, ನೀವು ದಯಾ ಅಂಕಲ್ ಮನೆಗೆ ಹೋಗಿ ಈ ವಿಷಯ ತಿಳಿಸಿ ಬಂದು ಬಿಡಿ' ಎಂದಳು ಖಡಾಖಂಡಿತವಾದ ದನಿಯಲ್ಲಿ.

ಸರೋಜಮ್ಮ, ಗೋಪಾಲರಾವ್ ಇಬ್ಬರೂ ಚಂದನಳ ಈ ಅನಿರೀಕ್ಷಿತವಾದ ಮಾತಿಗೆ ಸನಿಹದಲ್ಲೇ ಸಿಡಿಲು ಬಡಿದಂತೆ ಬೆಚ್ಚಿಬಿದ್ದರು. ಮಗಳು ತಮಾಷೆ ಮಾಡುತ್ತಿದ್ದಾಳೆಯೇ ಎಂದು ಒಂದು ಕ್ಷಣ ಅನುಮಾನವೂ ಆಯಿತು. ಆದರೆ ಚಂದನಳ ಮುಖದಲ್ಲಿ ನಗೆಯ ಕುರುಹೂ ಕೂಡ ಇರಲಿಲ್ಲ.

ಪವನ್ ಚಂದನಳಿಗೆ ಹೊಸಬನೇನಲ್ಲ. ತಂದೆಯ ಜೊತೆ ಆಗಾಗ ಮನೆಗೆ ಹೋಗಿಬಂದು ಮಾಡುತ್ತಿದ್ದ. ಇಬ್ಬರೂ ಪಿಯುಸಿಯವರೆಗೆ ಶಿಕ್ಷಣವನ್ನು ಒಟ್ಟಿಗೆ ಮುಗಿಸಿದ್ದರು. ಅಲ್ಲಿಂದ ಮುಂದೆ ಅವರ ದಾರಿ ಕವಲೊಡೆದಿದ್ದರೂ ಅಂದಿನ ಸ್ನೇಹ ಮಾಸದೆ ಉಳಿದಿತ್ತು. ಈಗ ಮನೆಯಲ್ಲಿ ಮದುವೆಯ ಮಾತು–ಕತೆ ನಡೆಯುತ್ತಿದ್ದುದು ಅವಳಿಗೆ ತಿಳಿದ ವಿಷಯವೇ ಆಗಿತ್ತು. ಆದರೆ ಅದು ಇಷ್ಟೊಂದು ಮುಂದುವರೆದಿದೆ ಎಂದು ಅವಳಿಗೆ ತಿಳಿದಿದ್ದು ಈಗಲೇ.

ಪವನ್ ಚಂದನಳ ಮುಂದೆ ಎಂದೂ ತನ್ನ ಪ್ರೇಮವನ್ನು ವ್ಯಕ್ತಪಡಿಸದಿದ್ದರೂ, ಅವನು ತನ್ನನ್ನು ಇಷ್ಟಪಡುತ್ತಾನೆಂದು ಚಂದನಳಿಗೂ ತಿಳಿದಿತ್ತು. ಪವನನನ್ನು ಕಂಡಾಗ ಚಂದನಳ ಮುಖದಲ್ಲಿ ಅನುರಾಗದ ಕಂಪು ಹರಡುವುದನ್ನು ಸರೋಜಮ್ಮ ಎಷ್ಟೋ ಬಾರಿ ಗಮನಿಸಿಯೂ ಇದ್ದರು. ಒಂದೆರಡು ಬಾರಿ ಸೂಚ್ಯವಾಗಿ ಆ ಬಗ್ಗೆ ಅವಳಲ್ಲಿ ಹೇಳಿಯೂ ಇದ್ದರು. ಈಗ ಮದುವೆಯ ಮಾತುಕತೆ ಒಂದು ಹಂತಕ್ಕೆ ಬಂದು ನಿಂತಿರುವಾಗ ಮಗಳು ಈ ರೀತಿ ನಕಾರ ಸೂಚಿಸಬಹುದೆಂದು ಅವರು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ತಾವು ಮಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಎಡವಿದೆವೇನೋ ಎಂಬ ಅನುಮಾನವಾಯಿತು.

'ಯಾಕಮ್ಮ ಚಂದು? ಪವನನನ್ನು ನೀನು ಬೇಡ ಅನ್ನಲು ಕಾರಣವಾದರೂ ಏನು? ಮೊದಲಿನಿಂದ ಕಂಡು ಕೇಳಿದ ಜನ. ಪವನನ ಗುಣ, ಸ್ವಭಾವಗಳು ಹೇಗೆ ಅಂತ ನಮಗಿಂತ ನಿನಗೇ ಚೆನ್ನಾಗಿ ಗೊತ್ತಿದೆ. ಮದುವೆ ಇಷ್ಟು ಬೇಗ ಬೇಡ ಅನ್ನಿಸಿದರೆ, ಬೇಕಾದರೆ ಮುಂದೆ ಹಾಕೋಣ. ಆದರೆ ಒಂದೇ ಏಟಿಗೆ ಬೇಡವೆಂದು ಮಾತ್ರ ಹೇಳಬೇಡ ಕಣೇ....'

ಸರೋಜಮ್ಮ ಮಗಳನ್ನು ಅನುನಯಿಸಲು ನೋಡಿದರು.

'ದಯಾಕರ ನನ್ನ ಗೆಳೆಯನಾಗಿರುವುದರಿಂದ ನಮ್ಮ ಯೋಗ್ಯತೆ ತಿಳಿದೂ ಅವನೇ ಮೊದಲು ಈ ಮದುವೆಗೆ ಪೀಠಿಕೆ ಹಾಕಿದ್ದು. ಈಗ ಅವನಿಗೆ ಯಾವ ಬಾಯಿಂದ ಈ ಮದುವೆ ನಡೆಯದು ಎಂದು ಹೇಳಲಿ?' ಗೋಪಾಲರಾವ್ ತಮ್ಮ ಅಳಲನ್ನು ತೋಡಿಕೊಂಡರು.

ಸರೋಜಮ್ಮ, ಗೋಪಾಲರಾವ್ ಪರಿಪರಿಯಾಗಿ ಕೇಳಿಕೊಂಡರೂ ಚಂದನಳದು ಒಂದೇ ಹಟ. 'ನನಗೆ ಈ ಮದುವೆ ಬೇಡ. ಅದರ ಕಾರಣವನ್ನೂ ಕೇಳಬೇಡಿ. ನನಗೆ ಇಷ್ಟವಿಲ್ಲದ ಮದುವೆಗೆ ನಾನೆಂದೂ ಸಮ್ಮತಿ ನೀಡಲಾರೆ. ನೀವು ಅವರ ಮನೆಯವರಿಗೆ ಏನು ಹೇಳಿಕೊಳ್ಳುತ್ತೀರೋ ನನಗೆ ಗೊತ್ತಿಲ್ಲ. ಇಲ್ಲಿಗೆ ಈ ಅಧ್ಯಾಯ ಮುಗಿಯಿತು' ಎಂದು ಮುಂದೆ ಬೆಳೆಯಬಹುದಾಗಿದ್ದ ಮಾತುಕತೆಗೆ ಪೂರ್ಣ ವಿರಾಮ ಹಾಕಿ ತನ್ನ ಕೋಣೆ ಸೇರಿಕೊಂಡಳು.

*

ಅಂದಿನಿಂದ ಮನೆಯಲ್ಲಿದ್ದ ನೆಮ್ಮದಿ ಹಾರಿ ಹೋಗಿತ್ತು. ಎಲ್ಲರ ನಡೆ–ನುಡಿಯಲ್ಲೂ ಯಾಂತ್ರಿಕತೆ ನೆಲೆಸಿತ್ತು. ಗೋಪಾಲರಾಯರಿಗಂತೂ ಚಂದನಳ ನಿರ್ಧಾರದಿಂದ ಆಘಾತವಾಗಿತ್ತು. ಮಗಳ ಜೀವನವನ್ನು ಒಂದು ಹಂತಕ್ಕೆ ತಂದು ನಿಲ್ಲಿಸಬೇಕೆಂದು ತಮ್ಮ ಕೈಲಾದುದನ್ನೆಲ್ಲ ಮಾಡಿದ್ದರು. ಆದರೆ ಅವರು ಪಟ್ಟ ಶ್ರಮವೆಲ್ಲ ನೀರಿನಲ್ಲಿ ಮಾಡಿದ ಹೋಮದಂತೆ ಆಗಿತ್ತು. ಅದಲ್ಲದೆ ಗೆಳೆಯನಿಗೆ ಈ ಅಹಿತಕರ ವಾರ್ತೆಯನ್ನು ಅರುಹುವ ಹೊರೆ ಹೆಗಲ ಮೇಲೆ ಬಿದ್ದಿತು. ಶ್ರೀದೇವಮ್ಮನ ದುರಾಸೆ, ಕೊಂಕು ನಾಲಿಗೆಯ ಬಗ್ಗೆ ಅವರಿಗೆ ಬೇಸರವಿದ್ದರೂ, ಅವರ ಮತ್ತು ದಯಾಕರ್ ಸ್ನೇಹಕ್ಕೆ ಅದೆಂದೂ ಅಡ್ಡಿಯಾಗಿರಲಿಲ್ಲ. ಪವನ್ ಕೂಡ ಅಷ್ಟೆ. ಬಹಳ ಸುಸ್ವಭಾವದ ಯುವಕ. ಆದರೆ ಅವನಿಗೂ ತಾಯಿಯ ಮಾತಿಗೆ ಎದುರಾಡುವ ಧೈರ್ಯವಿರಲಿಲ್ಲ.

ಮಗಳು ಅವಿವೇಕದಿಂದ ತನ್ನ ಬಾಳನ್ನು ಕೈಯಾರೆ ಹಾಳು ಮಾಡಿಕೊಳ್ಳುತ್ತಿದ್ದಾಳೇನೋ ಎಂಬ ಸಂಕಟದ ಜೊತೆಗೆ ಸರೋಜಮ್ಮ ಕೇಳಿದ್ದ ಪ್ರಶ್ನೆಯೊಂದು ಅವರ ಚಿತ್ತವನ್ನು ಕದಡಿತ್ತು.

ಸರೋಜಮ್ಮ ಕೇಳಲೋ ಬೇಡವೋ ಎಂಬಂತೆ ತಮ್ಮ ಮನಸ್ಸಿನಲ್ಲಿದ್ದ ಅನುಮಾನವನ್ನು ಹೊರಗೆಡಪಿದ್ದರು 'ಅಲ್ಲ, ಚಂದನ ಈಗ ಮದುವೆಯನ್ನು ಇದ್ದಕ್ಕಿದ್ದಂತೆ ಬೇಡ ಅನ್ನುತ್ತಿದ್ದಾಳಲ್ಲ, ಅದಕ್ಕೇನು ಕಾರಣ ಇರಬಹುದು? ಅವಳು ತಾನು ಕೆಲಸ ಮಾಡುವ ಜಾಗದಲ್ಲಿ ಯಾರನ್ನಾದರೂ ಮೆಚ್ಚಿಕೊಂಡಿರಬಹುದೇ?' ಗೋಪಾಲರಾಯರಿಗೂ ಹೌದೇನೋ ಅನ್ನಿಸಿತು. ಇಲ್ಲದಿದ್ದರೆ ಅಪರಂಜಿಯಂತಹ ಪವನನನ್ನು ಯಾಕೆ ಬೇಡವೆನ್ನುತ್ತಿದ್ದಳು? ಆದರೆ ವಿಷಯ ಗೊತ್ತಿಲ್ಲದೆ ಹೆತ್ತವರಾದ ತಾವೇ ಇಲ್ಲದ ಊಹಾಪೋಹಾಗಳನ್ನು ಸೃಷ್ಟಿಸುವುದು ಸರಿಯಲ್ಲ ಎಂದುಕೊಂಡು ಆ ಯೋಚನೆಯನ್ನು ಮನದಿಂದ ತೆಗೆದುಹಾಕಿದರು.

ಈಗ ಕಾಲಹರಣ ಮಾಡುವ ಬದಲು ಆದಷ್ಟು ಬೇಗ ಹೋಗಿ ವಿವಾಹ ಮುರಿದು ಬಿದ್ದ ಸುದ್ದಿಯನ್ನು ತಿಳಿಸಿಬಿಡಬೇಕೆಂದು ಮನಸ್ಸು ಗಟ್ಟಿ ಮಾಡಿಕೊಂಡು ದಯಾಕರ್ ಮನೆಯತ್ತ ಹೊರಟರು. ಒಬ್ಬರೇ ಹೋಗಲು ಯಾಕೋ ಅಧೈರ್ಯವೆನ್ನಿಸಿ ಸರೋಜಮ್ಮನನ್ನು ಜೊತೆಗೆ ಬರುವಂತೆ ಕರೆದರು. ಸರೋಜಮ್ಮನಿಗೆ ಶ್ರೀದೇವಿಯ ಕುಹಕದ ಮಾತುಗಳನ್ನು ಕೇಳುವ ಇಷ್ಟವಿಲ್ಲದಿದ್ದರೂ ಪತಿ ಒಬ್ಬರನ್ನೇ ಕಳಿಸುವುದು ಉಚಿತವಲ್ಲವೆನ್ನಿಸಿ ತಾವೂ ಹೊರಟುನಿಂತರು.

ದಯಾಕರ್ ಎಲ್ಲವನ್ನೂ ಸಾವಧಾನದಿಂದ ಕೇಳಿಸಿಕೊಂಡರು. ಅವರೊಬ್ಬ ಲೋಕಾನುಭವವಿರುವ ವಿಶಾಲ ಮನಸ್ಸಿನ ಸಜ್ಜನ. ಚಂದನ ತಮ್ಮ ಮಗನನ್ನು ನಿರಾಕರಿಸಿದ್ದು ಅವರ ಮೇಲೆ ಅಂತಹ ಪರಿಣಾಮವನ್ನೇನೂ ಬೀರಲಿಲ್ಲ.

'ಹೋಗಲಿ ಬಿಡು ಗೋಪಾಲ. ನಾವೇನೋ ಗೆಳೆತನವನ್ನು ಸಂಬಂಧದ ಸೂತ್ರದೊಡನೆ ಬೆಸೆದು ಮತ್ತಷ್ಟು ಬಲಪಡಿಸಿಕೊಳ್ಳಲು ನೋಡಿದೆವು. ಆದರೆ ಇದು ದೈವಕ್ಕೆ ಒಪ್ಪಿಗೆಯಾಗಲಿಲ್ಲವೇನೋ. ನಮ್ಮ ಆಸೆಗಿಂತ ಮುಂದೆ ಬಾಳಿ ಬದುಕಬೇಕಾದ ಮಕ್ಕಳ ಹಿತ ಮುಖ್ಯ. ಅವರಿಗೇ ಬೇಡವಾದಲ್ಲಿ ನಾವೇನು ಮಾಡಲು ಸಾಧ್ಯ? ನಮಗೆ ಋಣಾನುಬಂಧವಿಲ್ಲ ಅನ್ನಿಸುತ್ತದೆ. ನಮ್ಮ ಸ್ನೇಹಕ್ಕೆ ಇದರಿಂದ ಯಾವ ಧಕ್ಕೆಯೂ ಬರುವುದಿಲ್ಲ, ನೀನೂ ಇದನ್ನು ಮನಸ್ಸಿಗೆ ಹಚ್ಚಿಕೊಂಡು ಕೊರಗಬೇಡ' ಎಂದು ನಿರಾಳವಾಗಿ ನುಡಿದುಬಿಟ್ಟರು.

ಶ್ರೀದೇವಿಯವರಿಗೆ ಮಾತ್ರ ಸುಮ್ಮನೆ ಇರಲು ಆಗಲಿಲ್ಲ. 'ಎಲ್ಲದಕ್ಕೂ ಕೇಳಿಕೊಂಡು ಬಂದಿರಬೇಕು. ಒಳ್ಳೆಯದೇ ಆಯಿತು ಬಿಡಿ. ನನಗೂ ಈ ಸಂಬಂಧ ಅಷ್ಟೇನೂ ಮನಸ್ಸಿಗೆ ಬಂದಿರಲಿಲ್ಲ. ಏನೋ ಇವರೇ ಆಕೆ ತಮ್ಮ ಸೊಸೆಯಾಗಿ ಬರಬೇಕೆಂದು ಆಸೆಪಟ್ಟಿದ್ದರು. ಇವರ ಹಾರಾಟಕ್ಕೆ ತಕ್ಕ ಶಾಸ್ತಿಯೇ ಆಯಿತು. ನಮ್ಮ ಹುಡುಗನಿಗೇನು? ಬೇಕಾದ ಹಾಗಿರುವ

ಸಂಬಂಧಗಳೇ ಸಿಗುತ್ತವೆ. ನಿಮಗೆ ಅದೃಷ್ಟವಿಲ್ಲ ಅಷ್ಟೆ' ಎಂದು ನಂಜಿನ ದನಿಯಲ್ಲಿ ಕೊಂಕು ನುಡಿದೇಬಿಟ್ಟರು.

ಅವರ ಮನೆಯಲ್ಲಿ ಹೆಚ್ಚು ಹೊತ್ತು ನಿಲ್ಲಲು ಮನಸ್ಸಾಗಲಿಲ್ಲ. ಪವನ್ ಮನೆಯಲ್ಲಿ ಇದ್ದಂತಿರಲಿಲ್ಲ. ಅವನು ಇಲ್ಲದಿದ್ದುದೇ ಒಳಿತಾಯಿತು ಎನ್ನಿಸಿತು. ಇವರ ಅಂತರಂಗದ ತುಮುಲವನ್ನು ಅರಿತಿದ್ದ ದಯಾಕರ್ ಕೂಡ ಒತ್ತಾಯ ಮಾಡಲಿಲ್ಲ. ಏನೂ ನಡೆದೇ ಇಲ್ಲವೆಂಬಂತೆ ಇವರನ್ನು ಮನೆಗೆ ಕಳಿಸಿಕೊಟ್ಟರು.

ಇದಾದ ನಂತರ ಚಂದನಳ ವರ್ತನೆಯಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಎಲ್ಲದರಲ್ಲೂ ಅನಾಸಕ್ತಿ. ಕಾರ್ಮೋಡ ಕವಿದ ಆಗಸದಂತೆ ಮೊಗವನ್ನು ಚಿಂತೆ ಆವರಿಸಿತು. ಅಂದಿನವರೆಗೆ ಎಲ್ಲರ ಪಾಲಿಗೂ ತೆರೆದ ಪುಸ್ತಕದಂತಿದ್ದ ಚಂದನ ಬಿಡಿಸದ ಒಗಟಿನಂತೆ ಆಗಿಹೋಗಿದ್ದಳು. ಯಾಂತ್ರಿಕವಾಗಿ ಅವಳ ಕೆಲಸವನ್ನು ಅವಳು ಮಾಡಿಕೊಂಡು ಹೋಗುತ್ತಿದ್ದರೂ ಯಾವುದರಲ್ಲೂ ಹಿಂದಿದ್ದ ಹುರುಪಿಲ್ಲ. ಸರೋಜಮ್ಮ ಮತ್ತು ಗೋಪಾಲರಾಯರಿಗೆ ಅವಳ ಮದುವೆ ನಿಂತುಹೋಗಿದ್ದುದಕ್ಕಿಂತಲೂ ಅವಳ ಮೌನವೇ ದೊಡ್ಡ ಸಮಸ್ಯೆಯೆನಿಸಿತ್ತು. ಚಂದನ ಮತ್ತೆ ಮೊದಲಿನಂತೆ ಆದರೆ ಸಾಕು ಎಂದು ಹೆತ್ತವರ ಹೃದಯ ಕಾಣದ ದೇವರಲ್ಲಿ ಮೊರೆಯಿಡುತ್ತಿತ್ತು.

*

ಕೇಶವ ಹೊರಗೆಲ್ಲೋ ಹೋಗಿದ್ದವನು ಅದೇ ತಾನೇ ಮನೆಗೆ ಬಂದಿದ್ದ. ಗೋಪಾಲರಾಯರು ಊಟ ಮಾಡದೆ ಅವನಿಗಾಗಿ ಕಾಯುತ್ತಾ ಕುಳಿತಿದ್ದರು. ಚಂದನಳ ತಟ್ಟೆ ಅಲ್ಲಿರದಿದ್ದುದನ್ನು ನೋಡಿ 'ಚಂದನಳ ಊಟ ಆಯಿತೇನಮ್ಮ?' ಎಂದ.

'ಇಲ್ಲಪ್ಪಾ...ಈಚೆಗೆ ಅವಳಿಗೆ ಊಟ, ತಿಂಡಿ ಯಾವುದೂ ಲೆಕ್ಕಕ್ಕಿಲ್ಲ. ಮಾಡಿದರೆ ಮಾಡುತ್ತಾಳೆ, ಇಲ್ಲದಿದ್ದರೆ ಹಸಿವಿಲ್ಲ ಎಂದುಬಿಡುತ್ತಾಳೆ. ನನಗಂತೂ ಸಾಕಾಗಿ ಹೋಗಿದೆ. ತನ್ನ ಹಟವನ್ನೇ ಸಾಧಿಸಿಕೊಂಡ ಮೇಲೂ ಹೀಗೆ ಊಟ, ತಿಂಡಿ ಬಿಟ್ಟು ಕೊರಗುವುದೇಕೋ ಕಾಣೆ....' ಎಂದರು ದುಃಖದಿಂದ.

ಕೇಶವನಿಗೂ ಮನೆಯಲ್ಲಿ ನಡೆದ ಎಲ್ಲಾ ವಿದ್ಯಮಾನಗಳೂ ತಿಳಿದಿತ್ತು. ಅವನೂ ತಂಗಿಯ ಮನವೊಲಿಸಲು ಪ್ರಯತ್ನಿಸಿ ಸೋತಿದ್ದ. ಅವಳ ಮನಸ್ಸಿನಲ್ಲಿ ಇರುವುದೇನೆಂದು ಅವನಿಗೂ ತಿಳಿದಿರಲಿಲ್ಲ. ಬಾಯಿಬಿಟ್ಟು ಮಾತನಾಡದೆ ಮೌನಿಯಾಗಿದ್ದ ತಂಗಿಯ ನಡುವಳಿಕೆ ಅವನಿಗೂ ಹೊಸದು. ಅಣ್ಣನಲ್ಲಿ ಎಲ್ಲವನ್ನೂ ಮನಬಿಚ್ಚಿ ಹೇಳಿಕೊಳ್ಳುತ್ತಿದ್ದಳು ಚಂದನ. ಅವರಿಬ್ಬರ ನಡುವೆ ರಹಸ್ಯವೆಂಬುದು ಇರಲೇಇಲ್ಲ.

ಕೇಶವ ತಂಗಿಯನ್ನು ಬಿಟ್ಟು ಎಂದೂ ಊಟ ಮಾಡಿದವನಲ್ಲ. ಈಗಲೂ ಉಪವಾಸವಿರುವ ಚಂದನಳನ್ನು ಬಿಟ್ಟು ಉಣ್ಣಲು ಮನಸ್ಸಾಗಲಿಲ್ಲ. 'ಯಾಕೆ ಊಟ ಮಾಡಲ್ಲವಂತೆ ? ಇರು, ನಾನೇ ಹೋಗಿ ಕರೆದುಕೊಂಡು ಬರುತ್ತೀನಿ' ಎಂದು ಎದ್ದು ಹೊರಟ. ಮೊದಲೇ ದಣಿದಿದ್ದ ಮಗ ಕಾಲೆಳೆದುಕೊಂಡು ತಂಗಿಯ ರೂಮಿನತ್ತ ಹೊರಟಿದ್ದುದನ್ನು ಕಂಡು ಸರೋಜಮ್ಮನ ಕರುಳು ಚುರುಕ್ಕೆಂದಿತು.

ಚಂದನ ನೆಲದ ಮೇಲೆ ಮಂಡಿಯೂರಿ ಕುಳಿತಿದ್ದಳು. ಈಚೆಗೆ ಅವಳ ತುಟಿಗಳ ಮೇಲೆ ನಗು ಕಂಡಿದ್ದೇ ಇಲ್ಲ. ಕಂಗಳು ಕಳಾಹೀನವಾಗಿತ್ತು. ತನ್ನದೇ ಆದ ಯೋಚನಾ ಲಹರಿಯಲ್ಲಿ ಮುಳುಗಿದ್ದ ಅವಳು ಕೇಶವ ಬಂದಿದ್ದನ್ನು ಗಮನಿಸಲಿಲ್ಲ. ಸದಾ ಹರುಷದ ಕಾರಂಜಿಯಂತೆ ಪುಟಿಯುತ್ತಿದ್ದ ತಂಗಿ ಶೋಕದೇವತೆಯಂತೆ ಕುಳಿತಿರುವುದನ್ನು ನೋಡಿ ಅವನಿಗೆ ಬಹಳ ದುಃಖವಾಯಿತು. ಅವಳು ಯಾವ ತಪ್ಪೂ ಮಾಡದೆ ಶಿಕ್ಷೆ ಅನುಭವಿಸುತ್ತಿರುವ ಖೈದಿಯಂತೆ ಕಂಡುಬಂದಳು.

ಆಗಲೇ ಅವನ ಕಣ್ಣಿಗೆ ತಂಗಿಯ ಮುಂದೆ ಅನಾಥವಾಗಿ ಬಿದ್ದಿದ್ದ ಭಾವಚಿತ್ರವೊಂದು ಕಾಣಿಸಿದ್ದು. ಬಾಗಿ ಅದನ್ನು ಕೈಗೆತ್ತಿಕೊಂಡ. ಅದು ನಸುನಗುತ್ತಿರುವ ಪವನನ ಭಾವಚಿತ್ರ. ಅದಕ್ಕೂ ಬದಲಾದ ತಂಗಿಯ ವರ್ತನೆಗೂ ಏನೋ ಸಂಬಂಧವಿರಲೇಬೇಕೆಂದು ಅವನಿಗೆ ಅನ್ನಿಸಿತು. ತಂಗಿಯ ಹೆಗಲ ಮೇಲೆ ಮೃದುವಾಗಿ ಕೈಯಿರಿಸಿ 'ಚಂದು' ಎಂದ ಮೆಲ್ಲಗೆ.

ಅಣ್ಣನನ್ನು ಅಲ್ಲಿ ನಿರೀಕ್ಷಿಸದಿದ್ದ ಚಂದನ ಬೆಚ್ಚಿಬಿದ್ದಳು. ಅವಳನ್ನು ಸಮಾಧಾನಿಸುವಂತೆ ತಲೆ ನೇವರಿಸಿ ಕೇಳಿದ 'ಚಂದು, ನಿನ್ನ ಮನಸ್ಸಿನಲ್ಲಿರುವುದೇನು ಎಂದು ನನಗಾದರೂ ಹೇಳಬಾರದೇ? ನೀನು ಪವನನನ್ನು ಬಹಳ ಪ್ರೀತಿಸುತ್ತೀಯೆಂದು ನನಗೆ ಗೊತ್ತು. ಹಾಗಿದ್ದ ಮೇಲೆ ಅವನೊಡನೆ ಮದುವೆಯನ್ನು ಬೇಡವೆಂದಿದ್ದಾದರೂ ಏಕೆ? ಈಗ ಎಲ್ಲಾ ನಿನ್ನ ಇಷ್ಟದಂತೆ ನಡೆದ ಮೇಲೂ ಹೊತ್ತು ಹೊತ್ತಿಗೆ ಊಟ ತಿಂಡಿಗಳಿಲ್ಲದೆ ಕೊರಗುತ್ತಿರುವುದಾದರೂ ಏಕೆ? ಹೇಳು ಚಂದು, ಈಗಲೂ ಕಾಲ ಮಿಂಚಿಲ್ಲ. ಏನೋ ವಿಷಗಳಿಗೆಯಲ್ಲಿ ನಡೆದಿದ್ದನ್ನು ಮರೆತುಬಿಡಿ ಎಂದು ದಯಾ ಅಂಕಲ್‌ಗೆ ಹೇಳಿ ಮದುವೆಯ ಮಾತನ್ನು ಮುಂದು ವರೆಸೋಣವೇ? ಅಪ್ಪ, ಅಮ್ಮನಿಗೂ ಇದರಿಂದ ಸಂತೋಷವಾಗುತ್ತದೆ' ಎಂದ ಉತ್ಸಾಹ ತುಂಬುವ ದನಿಯಲ್ಲಿ.

ಚಂದನ ಉತ್ತರಿಸಲಿಲ್ಲ. ಅಣ್ಣನ ಪ್ರಶ್ನೆಗಳಿಗೆಲ್ಲ ಅವಳ ಕಣ್ಣೀರೇ ಉತ್ತರವಾಯಿತು. ಕೇಶವನೇ ಮುಂದುವರಿಸಿದ 'ನೀನು ಏನು ಮಾತನಾಡದಿದ್ದರೆ ನನಗಾದರೂ ಹೇಗೆ ಅರ್ಥವಾಗಬೇಕು? ನಿನ್ನ ಮನಸ್ಸಿನಲ್ಲಿರುವುದನ್ನು ಮುಕ್ತವಾಗಿ ನನ್ನೊಡನೆ ಹೇಳಿಕೋ ಚಂದು' ಎಂದು ಪ್ರೀತಿಪೂರ್ವಕವಾಗಿ ಒತ್ತಾಯಿಸಿದ.

ಚಂದನಳಿಗೂ ಅಣ್ಣನೆಂದರೆ ಮಮತೆಯೇ. ಅವರ ಮನೆಯಲ್ಲಿ ಹಣಕಾಸಿಗೆ ಬಡತನವಿತ್ತೇ ಹೊರತು ಪ್ರೀತಿ ವಿಶ್ವಾಸಕ್ಕೆ ಎಂದೂ ಬರವಿರಲಿಲ್ಲ. ಅಣ್ಣನ ವಾತ್ಸಲ್ಯ ತುಂಬಿದ ಮಾತುಗಳಿಂದ ಸ್ವಲ್ಪ ಸಮಾಧಾನಗೊಂಡ ಚಂದನ ತನ್ನ ಅಂತರಂಗವನ್ನು ಕೇಶವನ ಮುಂದೆ ತೆರೆದಿಟ್ಟಳು.

'ಅಣ್ಣಾ... ನಿನ್ನ ಊಹೆ ಸರಿಯಾಗಿಯೇ ಇದೆ. ಪವನ್ ಎಂದರೆ ನನಗಿಷ್ಟ. ಅವರನ್ನು ನಾನು ಮನಸಾರೆ ಪ್ರೀತಿಸಿದ್ದೆ. ಮದುವೆಯಾಗಲು ತಯಾರಿದ್ದೆ. ಆದರೆ ಇದು ಎಲ್ಲಿಯವರೆಗೆ ಅಂದರೆ ಅವರು ನಮ್ಮ ಪ್ರೀತಿಗೆ ಒಂದು ಬೆಲೆಯನ್ನು ನಿರ್ಧರಿಸುವವರೆಗೆ....'

ತಂಗಿಯ ಮಾತಿನ ಜಾಡು ಎತ್ತ ಹೊರಳುತ್ತಿದೆ ಎಂದು ಅರಿತವನಂತೆ ಕೇಶವ ಅವಳನ್ನು ಅಲ್ಲೇ ತಡೆದು 'ಅದರಿಂದ ನಿನಗೇನು ತೊಂದರೆ? ಅದಕ್ಕೆ ಅಪ್ಪ ಈಗಾಗಲೇ ವ್ಯವಸ್ಥೆ ಮಾಡಿಕೊಂಡಿದ್ದಾರಲ್ಲ? ಅಷ್ಟಕ್ಕೂ ಇಲ್ಲಿ ಪವನನ ತಪ್ಪೇನೂ ಇದ್ದಂತೆ ಅನ್ನಿಸುತ್ತಿಲ್ಲ, ಎಲ್ಲಾ ಅವನ ತಾಯಿಯ ಮಧ್ಯಸ್ಥಿಕೆ ಅಷ್ಟೇ' ಎಂದ ಮಾತನ್ನು ತೇಲಿಸಲು ಹವಣಿಸುತ್ತಾ.

ಚಂದನ ತನ್ನ ವಾದವನ್ನು ಮುಂದುವರೆಸಿದಳು 'ಅಣ್ಣಾ....ನನಗೆ ಒಳ್ಳೆಯ ಉದ್ಯೋಗವಿದೆ, ಸುಭದ್ರ ಬಾಳ್ವೆಯ ಭರವಸೆ ಇದೆ. ನನ್ನ ಮುಂದೆ ನೂರು ಕನಸುಗಳು, ನೂರು ದಾರಿಗಳು ತೆರೆದುಕೊಂಡು ನಿಂತಿವೆ. ಆದರೆ ನಿನಗೇನಿದೆ? ನಿನ್ನ ಭವಿಷ್ಯವೆಲ್ಲ ಅನಿಶ್ಚಿತತೆಯ ಮರಳುಗುಡ್ಡೆಯ ಮೇಲೆ ನಿಂತಿದೆ. ಅಪ್ಪ-ಅಮ್ಮ ನನಗಿಂತ ಹೆಚ್ಚಾಗಿ ಅತಂತ್ರ ಸ್ಥಿತಿಯಲ್ಲಿರುವ ನಿನ್ನ ಬದುಕು - ಭವಿಷ್ಯದ ಬಗ್ಗೆ ಯೋಚಿಸಬೇಕಿತ್ತು. ನಿನ್ನ ಮುಂದಿನ ಜೀವನಕ್ಕೆ ಯಾವ ಆಧಾರವಿದೆ ? ನಮ್ಮ ಪಾಲಿನದು ಎಂದು ಇದ್ದ ಅಲ್ಪ-ಸ್ವಲ್ಪ ಆಸ್ತಿಯನ್ನು ಮಾರಿ, ಆ ಹಣವನ್ನು ಅವರ ಕೈಗಿಟ್ಟರೆ ಮುಂದೆ ನಿಮ್ಮ ಕಷ್ಟಕ್ಕೆ ಆಗುವವರು ಯಾರು? ಮದುವೆಗೆ ಮೊದಲೇ ವರದಕ್ಷಿಣೆ ಕೇಳುವ ಮೂಲಕ ತಮ್ಮ ದುರಾಸೆ ತೋರಿಸುತ್ತಿರುವ ಆ ಜನ ಅಷ್ಟಕ್ಕೆ ತೃಪ್ತರಾಗಿರುತ್ತಾರೆ ಎಂದು ಯಾವ ನಂಬಿಕೆ?'

ಕೇಶವನಿಗೂ ಈ ಯೋಚನೆ ಮೊದಲೇ ಬಂದಿತ್ತು. ಶ್ರೀದೇವಮ್ಮನ ಸ್ವಭಾವವನ್ನು ಬಲ್ಲ ಅವನು ಅವರು, ಕೊಟ್ಟ ಹಣಕ್ಕೆ ತೃಪ್ತರಾಗಿ, ತಂಗಿಯನ್ನು ಚೆನ್ನಾಗಿ ನೋಡಿಕೊಳ್ಳುವ ಬಗ್ಗೆ ಅವನಿಗೂ ಸಂದೇಹವಿತ್ತು. ಆದರೆ ಅದನ್ನು ಬಾಯಿಬಿಟ್ಟು ಮುದಿ ತಂದೆ-ತಾಯಿಗಳನ್ನು ನೋಯಿಸುವ ಮನಸ್ಸಾಗಿರಲಿಲ್ಲ. ಅಲ್ಲದೆ ಪವನನ ಸರಳ, ಸ್ನೇಹಪರ ನಡವಳಿಕೆ ಅಂತಹ ಯೋಚನೆಗಳನ್ನು ತಡೆದು ನಿಲ್ಲಿಸುತ್ತಿತ್ತು.

ಚಂದನ ಇಷ್ಟು ದಿನ ತನ್ನಲ್ಲೇ ತಡೆದಿಟ್ಟಿದ್ದ ಮಾತುಗಳನ್ನು ಮುಂದುವರೆಸಿದಳು 'ಪವನನದು ಏನು ತಪ್ಪಿಲ್ಲ ಅಂದೆಯಲ್ಲ, ಅವರು ನಿಜವಾಗಿ ನನ್ನನ್ನು ಪ್ರೀತಿಸುವುದೇ ನಿಜವಾಗಿದ್ದರೆ, ತಮ್ಮ ತಾಯಿಗೆ ನಮ್ಮ ಮನೆಯ ಪರಿಸ್ಥಿತಿಯನ್ನು ಮನವರಿಕೆ ಮಾಡಿಕೊಡಲು

ಪ್ರಯತ್ನಿಸಬೇಕಾಗಿತ್ತು. ಅವರ ಸ್ವಂತ ನರ್ಸಿಂಗ್ ಹೋಮಿನ ಕನಸನ್ನು ನಮ್ಮಿಬ್ಬರ ದುಡಿಮೆಯಿಂದ ನನಸಾಗಿಸುವುದು ಕಷ್ಟವಾಗಿರಲಿಲ್ಲ. ತಾಯಿಗೆ ಹೆದರಿ ವರದಕ್ಷಿಣೆಯಂತಹ ಅನಿಷ್ಟವನ್ನು ಬೆಂಬಲಿಸುವ ಅವರನ್ನು ಮದುವೆಯಾಗುವುದೆಂದರೆ ನನ್ನ ವ್ಯಕ್ತಿತ್ವವನ್ನು ನಾನೇ ಅವಮಾನಿಸಿಕೊಂಡಂತೆ. ನನಗೆ ಕೇವಲ ನನ್ನನ್ನು, ನನಗಾಗಿ ಮಾತ್ರ ಪ್ರೀತಿಸುವ ಧೀರೋದಾತ್ತನಾದ ಬಾಳ ಸಂಗಾತಿ ಬೇಕು. ಅಂತಹ ಗೆಳೆಯ ಸಿಗುವವರೆಗೂ ನಾನು ಸಹನೆಯಿಂದ ಕಾಯಬಲ್ಲೆ. ಒಂದು ವೇಳೆ ಸಿಗಲಿಲ್ಲ ಎಂದುಕೋ. ನನಗೆ ಆಗ ಮದುವೆಯೇ ಬೇಕಾಗಿಲ್ಲ, ಮದುವೆಯೊಂದೇ ಜೀವನದ ಪರಮಗುರಿ ಎಂದು ನಾನೆಂದಿಗೂ ಭಾವಿಸಿಲ್ಲ' ಎಂದಳು ಆವೇಶಭರಿತಳಾಗಿ.

ಚಂದನ ಅಷ್ಟೊಂದು ಮಾತನಾಡಿದ್ದನ್ನು ಕೇಶವ ಎಂದೂ ಕಂಡಿರಲಿಲ್ಲ.

ಚಂದನ ನಗುತ್ತಾ 'ಅಣ್ಣಾ ನನ್ನ ಮದುವೆಗಿಂತ ಈಗ ಮುಖ್ಯವಾಗಿ ಆಗಬೇಕಾದ ಕೆಲಸ ಇನ್ನೊಂದಿದೆ' ಎಂದಳು. ಅವಳು ಈವರೆಗೆ ಆಡಿದ ಮಾತುಗಳನ್ನೇ ಅರಗಿಸಿಕೊಂಡಿರದ ಅವನು ಮತ್ತೇನು ಕಾದಿದೆಯೇ ಎಂದು ಅವಳತ್ತ ಬೆರಗಿನಿಂದ ನೋಡಿದ.

'ಈಗ ಹಳ್ಳಿಯ ಜಮೀನನ್ನು ಮಾರಿ ಬಂದಿರುವ ಹಣದ ಜೊತೆಗೆ ಯಾವುದಾದರೂ ಬ್ಯಾಂಕಿನಿಂದಲೂ ಸ್ವಲ್ಪ ಹಣವನ್ನು ಸಾಲವಾಗಿ ಪಡೆಯೋಣ. ನಿನಗೆ ಹೆಚ್ಚಿನ ಶ್ರಮವಾಗದಂತಹ ಸಣ್ಣ ಪ್ರಮಾಣದ ಸ್ವಂತ ವ್ಯವಹಾರವನ್ನು ಪ್ರಾರಂಭಿಸೋಣ. ಅದಕ್ಕೆ ಹಣ ಹೊಂದಿಸಿಕೊಡುವುದರಿಂದ ಹಿಡಿದು ಎಲ್ಲಾ ರೀತಿಯ ಮೇಲ್ವಿಚಾರಣೆಯ ಭಾರ ನನ್ನದು, ನೀನು ನಿನ್ನ ಶಕ್ತಿ, ಸಾಮರ್ಥ್ಯಗಳಿಗೆ ಸರಿಹೊಂದುವಂತಹ ಉದ್ಯಮದ ಬಗ್ಗೆ ಯೋಚಿಸು' ಎಂದಳು ಆತ್ಮವಿಶ್ವಾಸದ ಮಿಂಚನ್ನು ಕಣ್ಣುಗಳಲ್ಲಿ ಮಿನುಗಿಸುತ್ತ.

ಕೇಶವನಿಗೆ ತನ್ನ ಸುತ್ತ ತುಂಬಿದ್ದ ಗಾಢಾಂಧಕಾರವೆಲ್ಲ ಒಮ್ಮೆಗೇ ದೂರ ಸರಿದ ಅನುಭವವಾಯಿತು. ಮಬ್ಬು ತುಂಬಿದ ತನ್ನ ಬದುಕಿಗೆ ಬೆಳಕು ನೀಡಲು ತನ್ನೆದೆಯೊಲವನ್ನೇ ಪಣವಾಗಿರಿಸಿದ ತಂಗಿಯ ಬಗೆಗೆ ಅಭಿಮಾನ ಉಕ್ಕಿ ಬಂದಿತು. ಅವಳ ಪ್ರತಿಭೆ, ಒಳ್ಳೆಯತನಕ್ಕೆ ತಕ್ಕ ಪ್ರತಿಫಲ ದೊರಕಲಿ ಎಂದು ಅವನ ಹೃದಯ ಮನಸಾರೆ ಹಾರೈಸಿತು. ಅಣ್ಣನಾಗಿ ತಾನೇ ಮುಂದೆ ನಿಂತು ತಂಗಿಯ ಮದುವೆಯನ್ನು ಅವಳೊಪ್ಪುವ ವರನ ಜೊತೆಗೆ ನಡೆಸುತ್ತೇನೆ ಎಂದು ಮನಸ್ಸಿನಲ್ಲಿ ಧೃಡಸಂಕಲ್ಪ ಮಾಡಿಕೊಂಡು ಚಂದನಳ ಯೋಜನೆಗಳಿಗೆ ತನ್ನ ಒಪ್ಪಿಗೆ ಸೂಚಿಸಿದ.

ತಂಗಿಯನ್ನು ಊಟಕ್ಕೆ ಕರೆತರಲು ಹೋದ ಮಗ ಕೂಡ ಬರದಿದ್ದುದರಿಂದ ಕಾದು ಬೇಸತ್ತ ಸರೋಜಮ್ಮ, ತಾವೇ ಎದ್ದು ಚಂದನಳ ಕೋಣೆಯತ್ತ ಹೊರಟರು. ಗೋಪಾಲರಾಯರು ಒಳಗೇನೂ ರಾಮಾಯಣ ನಡೆದಿದೆಯೋ ಎಂಬ ಭಯದಿಂದ ತಾವೂ

ಅವರನ್ನು ಹಿಂಬಾಲಿಸಿದರು. ಕೋಣೆಯಲ್ಲಿ ಅವರು ನಿರೀಕ್ಷಿಸದೆ ಇದ್ದ ಸಂತೋಷದ ದೃಶ್ಯವನ್ನು ಕಂಡು ಇಬ್ಬರಿಗೂ ಆಶ್ಚರ್ಯವಾಯಿತು.

'ಅಲ್ಲವೋ ಕೇಶವ, ಊಟಕ್ಕೂ ಬರದೆ ನೀವಿಬ್ಬರೇ ಇಲ್ಲಿ ಮಾತಾಡಿಕೊಂಡು ಕೂತಿದ್ದೀರಲ್ಲ? ವಿಷಯ ಏನೆಂದು ನಮಗೂ ಹೇಳಬಾರದೇನೋ?' ಎಂದರು ಹುಸಿಕೋಪದಿಂದ.

ಚಂದನ ಸರೋಜಮ್ಮನೆಡೆಗೆ ಪ್ರೀತಿಯಿಂದ ನೋಡುತ್ತಾ 'ಹೇಳುತ್ತೇನೆ, ಮೊದಲು ದೇವರಿಗೆ ತುಪ್ಪದ ದೀಪ ಹಚ್ಚಮ್ಮ....'ಎಂದಳು ಸಂಭ್ರಮದಿಂದ.



# ನೊಂದ ಹೃದಯಿ

– ನಂಜುಂಡಸ್ವಾಮಿ

ಡಾಕ್ಟರ್ ಜೇಕಬ್ಸ್ ಅವರ ಆಫೀಸು ಕಿಕ್ಕಿರಿದು ತುಂಬಿತ್ತು. ಹೆಂಗಸರೇ ಜಾಸ್ತಿ. ಅಲ್ಲಲ್ಲಿ ಕೆಲವು ಮಕ್ಕಳು. ಒಬ್ಬರೋ ಇಬ್ಬರೋ ಗಂಡಸರು. ಒಂದು ಘಂಟೆಗೆ ಆಫೀಸಿಗೆ ಬರಬೇಕಾಗಿದ್ದ ಡಾಕ್ಟರು ಎರಡಾದರೂ ಬಂದಿರಲಿಲ್ಲ. ವೈಟಿಂಗ್‌ರೂಮಿನಲ್ಲಿದ್ದ ಮ್ಯಾಗಜ಼ೀನುಗಳನ್ನು ಓದುತ್ತ ಕುಳಿತಿದ್ದವರು ಕೆಲವರು. ಪಕ್ಕದವರೊಡನೆ ಪಿಸುಮಾತಾಡುತ್ತಿದ್ದವರು ಇನ್ನು ಕೆಲವರು. ಎರಡೆರಡು ನಿಮಿಷಕ್ಕೂ ಗಡಿಯಾರ ನೋಡುತ್ತ ಬೇಸರದಿಂದ ಆಕಳಿಸುತ್ತ ಕುಳಿತಿದ್ದವರು ಮತ್ತೆ ಕೆಲವರು. ಅಲ್ಲೇ ಇದ್ದ ಟೆಲಿವಿಷನ್ನಿನಲ್ಲಿ ಪ್ರೆಸಿಡೆಂಟ್ ಕೆನೆಡಿಯವರ ಭಾಷಣ ಬರುತ್ತಿತ್ತು. ಆದರೆ ಕೇಳಲು ಯಾರಿಗೂ ಉತ್ಸಾಹವಿರಲಿಲ್ಲ. ಆಫೀಸು ತುಂಬಿದ್ದರೂ ಒಂದು ಬಗೆಯ ವಿಷಣ್ಣ ನಿಶ್ಶಬ್ದತೆ.

ಗೋಡೆಯ ಮೇಲಿದ್ದ ಗಡಿಯಾರ ಎರಡೂವರೆ ತೋರಿಸುತ್ತಿತ್ತು. ಡಾಕ್ಟರ್ ಜೇಕಬ್ಸ್ ಅವರ ನರ್ಸ್ ಜೂಡಿ ಮಿಲ್ಲರ್ ಒಳಬಾಗಿಲ ಬಳಿ ಬಂದು ನಿಂತು, 'ಡಾಕ್ಟರ್ ಜೇಕಬ್ಸ್ ಇನ್ನೂ ಸರ್ಜರಿಯಲ್ಲಿದ್ದಾರೆ. ಆಫೀಸಿಗೆ ಬರಲು ಕ್ವಡೆಯ ಪಕ್ಷ ಇನ್ನೂ ಎರಡು ಘಂಟೆಯಾಗಬಹುದು. ಬೇಕಾದರೆ ಅವರ ಪಾರ್ಟನರ್ ಪಾರ್ಕರ್ ಅವರು ನಿಮ್ಮಲ್ಲಿ ಕೆಲವರನ್ನು ನೋಡುತ್ತಾರೆ. ಮಿಕ್ಕವರಿಗೆ ಇನ್ನೊಂದು ಅಪಾಯಿಂಟ್‌ಮೆಂಟನ್ನು ಕೊಡುತ್ತೇವೆ. ಈ ಅನಾನುಕೂಲಕ್ಕೆ ನಿಮ್ಮೆಲ್ಲರ ಕ್ಷಮೆ ಬೇಡುತ್ತೇವೆ' ಎಂದಳು. 'ಎಮರ್ಜೆನ್ಸಿ. ಏನು ಮಾಡುವುದಕ್ಕಾಗುತ್ತದೆ?' ಎಂದು ಉದ್ಗರಿಸುತ್ತ ಒಬ್ಬೊಬ್ಬರಾಗಿ ಎದ್ದರು. ಡಾಕ್ಟರ್ ಪಾರ್ಕರ್ ಅವರನ್ನು ನೋಡಲು ಉಳಿದವರು ಒಂದಿಬ್ಬರು ಮಾತ್ರ.

ಒಬ್ಬೊಬ್ಬರಾಗಿ ಬಂದಿದ್ದ ಪೇಷಂಟುಗಳು ಸೆಕ್ರೆಟರಿಯ ಹತ್ತಿರ ಹೊಸ ಅಪಾಯಿಂಟ್‌ಮೆಂಟ್ ಕಾರ್ಡನ್ನು ತೆಗೆದುಕೊಂಡು ಹೊರಹೊರಟರು. ಕಟ್ಟಕಡೆಯವರು ಒಬ್ಬ ಯುವ ದಂಪತಿಗಳು. ಆ ಹೆಂಗಸು ನರ್ಸ್ ಅನ್ನು ನೋಡುತ್ತ 'ನಾವು ಇನ್ನೂರು

ಮೈಲಿಯಾಚೆಯಿಂದ ಬಂದಿದ್ದೇವೆ. ಡಾಕ್ಟರ್ ಜೇಕಬ್ಸ್ ಅವರನ್ನು ಇಂದೇ ನೋಡಲು ಸಾಧ್ಯವೇ? ನಮ್ಮ ಡಾಕ್ಟರು, ನಾನು ಅವರನ್ನೇ ನೋಡಬೇಕೆಂದು ಹೇಳಿ ಕಳಿಸಿದ್ದಾರೆ' ಎನ್ನುತ್ತಾ ತನ್ನ ಡಾಕ್ಟರು ಕೊಟ್ಟಿದ್ದ ಲಕೋಟೆಯನ್ನು ನರ್ಸಿಗೆ ಕೊಟ್ಟಳು. ಲಕೋಟೆಯೊಡನೆ ಒಳಕ್ಕೆ ಹೋದ ನರ್ಸ್ ಮಿಲ್ಲರ್ ಒಂದೈದು ನಿಮಿಷದ ನಂತರ ಆಚೆಗೆ ಬಂದು 'ನೀವು ಇಲ್ಲೇ ಕುಳಿತುಕೊಂಡಿರಿ. ಡಾಕ್ಟರು ಆಪರೇಷನ್ ಮುಗಿದಕೂಡಲೇ ಬಂದು ನಿಮ್ಮನ್ನು ನೋಡುತ್ತಾರೆ' ಎಂದಳು.

ಡಾಕ್ಟರ್ ಜೇಮ್ಸ್ ಜೇಕಬ್ಸ್ ಪಿಟ್ಸ್‌ಬರ್ಗಿನ ಹೆಸರಾಂತ ಸ್ತ್ರೀರೋಗ ಪರಿಣತರು. ವಿಶ್ವವಿಖ್ಯಾತ ಜಾನ್ಸ್ ಹಾಪ್‌ಕಿನ್ಸ್ ಆಸ್ಪತ್ರೆಯಲ್ಲಿ ತರಬೇತಿ ಪಡೆದು ಪಿಟ್ಸ್‌ಬರ್ಗಿಗೆ ಬಂದು ನೆಲೆಸಿದ್ದರು. ವೈದ್ಯಕೀಯ ಪರಿಣತೆ, ರೋಗಿಗಳ ಬಗ್ಗೆ ಅವರಿಗಿದ್ದ ಅಂತಃಕರಣ, ಇನ್ನೂ ಕಲಿಕೆಯಲ್ಲಿದ್ದ ಯುವ ಡಾಕ್ಟರುಗಳ ಟ್ರೈನಿಂಗಿನಲ್ಲಿ ಅವರು ತೋರಿಸುತ್ತಿದ್ದ ಮುತುವರ್ಜಿ, ಅವರ ತಾಳ್ಮೆ, ಹಾಸ್ಯ ಪ್ರವೃತ್ತಿ ಇವೆಲ್ಲದರ ಕಾರಣ ಅವರು ಆ ಊರಿಗೆ ಬಂದ ಕೆಲವೇ ವರ್ಷಗಳಲ್ಲಿ ಅತ್ಯಂತ ಜನಪ್ರಿಯರಾಗಿದ್ದರು. ಅವರ ಪ್ರಾಕ್ಟೀಸು ಇತರರಿಗೆ ಅಸೂಯೆ ಬರಿಸುವಂತೆ ಬೆಳೆದಿತ್ತು. ಅವರ ಖ್ಯಾತಿ ಪಿಟ್ಸ್‌ಬರ್ಗಿನ ಸುತ್ತಮುತ್ತ ನೂರಾರು ಮೈಲು ಹರಡಿತ್ತು. ಇನ್ನೂರು ಮೈಲಿಗಳಾಚೆಯಿಂದ ಜೀನ್ ರಾಬರ್ಟ್ಸ್ ಮತ್ತು ಅವಳ ಗಂಡ ವಿಲಿಯಂ ಡಾಕ್ಟರ್ ಜೇಕಬ್ಸ್‌ರನ್ನು ನೋಡಲು ಬರಲು ಇದೇ ಕಾರಣ.

ಡಾಕ್ಟರ್ ಜೇಕಬ್ಸ್ ಆಫೀಸಿಗೆ ಬರುವ ಹೊತ್ತಿಗೆ ಮಧ್ಯಾಹ್ನ ನಾಲ್ಕಾಗಿತ್ತು. ನರ್ಸ್ ಮಿಲ್ಲರ್, ಅವರನ್ನು ಬರಮಾಡಿಕೊಳ್ಳುತ್ತ, 'ಪೇಷಂಟುಗಳನ್ನು ರಿಷೆಡ್ಯೂಲ್ ಮಾಡಿದ್ದೇನೆ. ಒಬ್ಬರು ಮಾತ್ರ-- ಹೊರ ಊರಿನವರು -- ನಿಮಗಾಗಿ ಕಾಯುತ್ತಿದ್ದಾರೆ. ಬಹಳ ಬಿಜ಼ಿ ದಿನ, ಅಲ್ಲವೇ?' ಎಂದಳು. ಡಾಕ್ಟರ್ ಜೇಕಬ್ಸ್ ನಗುತ್ತಾ, 'ನನ್ನ ಹಣೇಬರಹ ! ಹೊಸ ವಿಷಯವೇನೂ ಅಲ್ಲವಲ್ಲ. ರಾತ್ರಿ ಮೂರು ಡೆಲಿವರಿಗಳು, ಬೆಳಗ್ಗೆ ಮೂರು ಆಪರೇಷನ್‌ಗಳನ್ನು ಮುಗಿಸುವ ಹೊತ್ತಿಗೆ ಮತ್ತೊಂದು ಎಮರ್ಜೆನ್ಸಿ ಸರ್ಜರಿ. ಬ್ರೇಕ್‌ಫಾಸ್ಟ್, ಲಂಚ್ ಏನೂ ಇಲ್ಲ. ಮಧ್ಯಾಹ್ನ ಒಂದು ಕ್ಯಾನ್ ಕೋಕ್ ಕುಡಿದೆ ಅಷ್ಟೆ!' ಎಂದರು 'ರೆಫ್ರಿಜಿರೇಟರಿನಲ್ಲಿ ಒಂದು ಸ್ಯಾಂಡ್‌ವಿಚ್ ಇದೆ. ಅದನ್ನು ತಿಂದು ಸ್ವಲ್ಪ ಹಾಲು ಕುಡಿದು ಆಮೇಲೆ ಪೇಷಂಟನ್ನು ನೋಡಲು ಹೋಗಿ' ಎಂದಳು ನರ್ಸ್ ಮಿಲ್ಲರ್. 'ಈಗ ಬೇಡ. ಪೇಷಂಟನ್ನು ನೋಡಿದ ಮೇಲೆ' ಎನ್ನುತ್ತಾ ಡಾಕ್ಟರು ತಮ್ಮ ರೂಮಿಗೆ ಹೋದರು.

'ಗುಡ್ ಮಾರ್ನಿಂಗ್ ಅ.... ಅ.... ಗುಡ್ ಆಫ್ಟರ್‌ನೂನ್.... ಯಾಕೆ ಗುಡ್ ಈವಿನಿಂಗ್ ಅಂತಲೇ ಹೇಳಬಹುದು' ಎಂದು ನಗುತ್ತಾ ಡಾಕ್ಟರ್ ಜೇಕಬ್ಸ್ ತಮಗಾಗಿ ಕಾಯುತ್ತಿದ್ದ ಪೇಷಂಟಿನ ಕೈಕುಲುಕಿದರು.

'ನಾನು ಡಾಕ್ಟರ್ ಜಿಮ್ ಜೇಕಬ್ಸ್. ನಿಮ್ಮನ್ನು ಇಷ್ಟು ಹೊತ್ತು ಕಾಯಿಸಿದ್ದಕ್ಕಾಗಿ ಕ್ಷಮಿಸಿ'

'ನಾನು ಜೇನ್ ರಾಬರ್ಟ್ಸ್. ಇವರು ನನ್ನ ಗಂಡ ಬಿಲ್' ಎಂದಳು ಜೇನ್ ಡಾಕ್ಟರನ್ನು ಮೊದಲ ಬಾರಿಗೆ ನೋಡುತ್ತಾ ಎತ್ತರವಾದ ನಿಲವು. ಹಸನ್ಮುಖಿ. ವಯಸ್ಸು ನಲವತ್ತಿದ್ದರೆ ಹೆಚ್ಚು. ಈ ಚಿಕ್ಕವಯಸ್ಸಿನಲ್ಲೇ ಎಂತಹ ಒಳ್ಳೆಯ ಹೆಸರು ಪಡೆದಿದ್ದಾರೆ ಎಂದು ಮನಸ್ಸಿನಲ್ಲೇ ಅಂದುಕೊಂಡಳು.

'ನಿಮ್ಮ ಡಾಕ್ಟರು ಕಳಿಸಿದ್ದ ಇನ್ಟ್ರೊಡಕ್ಷನ್ ಲೆಟರನ್ನು ನೋಡಿದೆ. ಅವರು ನಿಮ್ಮ ತೊಂದರೆಯ ಬಗ್ಗೆ ಜಾಸ್ತಿಯೇನೂ ಬರೆದಿಲ್ಲ. ಅಷ್ಟು ದೂರದಿಂದ ನನ್ನನ್ನು ನೋಡಲು ಬಂದ ಕಾರಣವೇನು ಎಂದು ತಿಳಿಸುತ್ತೀರಾ?'

ಜೇನ್ ತನ್ನ ತೊಂದರೆಯನ್ನು ವಿವರವಾಗಿ ಡಾಕ್ಟರಿಗೆ ತಿಳಿಸಿದಳು. ಅವಳ ವಯಸ್ಸು ಮೂವತ್ತೆರಡು. ಮದುವೆಯಾಗಿ ಆಗಲೇ ಹನ್ನೆರಡು ವರ್ಷವಾಗಿತ್ತು. ಆದರೆ ಮಕ್ಕಳಿಲ್ಲ. ಇದೇ ಅವಳ ದೊಡ್ಡ ಚಿಂತೆ. ನಾಲ್ಕಾರು ಡಾಕ್ಟರುಗಳನ್ನು ನೋಡಿದ್ದಳು, ಹತ್ತಾರು ಟೆಸ್ಟುಗಳನ್ನು ಮಾಡಿಸಿಕೊಂಡಿದ್ದಳು. ಏನೂ ಪ್ರಯೋಜನವಾಗಿರಲಿಲ್ಲ. ಕಡೆಗೆ ಯಾರೋ ಜೇಕಬ್ಸ್ ಅವರ ಬಳಿ ಹೋಗಲು ಸಲಹೆ ಮಾಡಿದ್ದರು. 'ಈ ಹಿಂದೆ ಮಾಡಿದ್ದ ಟೆಸ್ಟುಗಳ ರಿಪೋರ್ಟನ್ನು ತಂದಿದ್ದೀರಾ?'

'ತಂದಿದ್ದೇನೆ, ಇದೋ ಇಲ್ಲೇ ಇದೆ' ಎನ್ನುತ್ತಾ ಜೇನ್ ತನ್ನೊಡನೆ ತಂದಿದ್ದ ಒಂದು ದೊಡ್ಡ ಕವರನ್ನು ಅವರ ಕೈಗಿತ್ತಳು. 'ನರ್ಸ್ ಮಿಲ್ಲರ್ ನಿಮ್ಮನ್ನು ಪರೀಕ್ಷೆಗೆ ಸಿದ್ಧಮಾಡುತ್ತಾಳೆ. ಅಷ್ಟರಲ್ಲಿ ಈ ರಿಪೋರ್ಟುಗಳನ್ನು ಓದಿ ಬರುತ್ತೇನೆ' ಎನ್ನುತ್ತಾ ಡಾಕ್ಟರು ಆ ರೂಮು ಬಿಟ್ಟರು.

ಜೇನ್‌ಳ ಪರೀಕ್ಷೆಯನ್ನು ಮುಗಿಸಿ ಡಾಕ್ಟರು ಜೇನ್ ಮತ್ತು ಅವಳ ಗಂಡನ ಜೊತೆ ಮಾತನಾಡಲು ಕುಳಿತರು. ಡಾಕ್ಟರ್ ಜೇಕಬ್ಸ್ ಅವರ ಮುಖ ಗಂಭೀರವಾಗಿತ್ತು. 'ಜೇನ್, ನಿಮ್ಮ ಗರ್ಭಕೋಶಕ್ಕೆ ಸೇರಿದಂತೆ ಒಂದು ಗೆಡ್ಡೆ ಬೆಳೆದಂತಿದೆ. ಒಂದು ಕಿತ್ತಲೇಹಣ್ಣಿನ ಗಾತ್ರವಿದೆ. ಇದರಿಂದಾಗಿ ನಿಮಗೆ ಮಕ್ಕಳಾಗದೆ ಇರಲು ಸಾಧ್ಯ. ಈ ಗೆಡ್ಡೆಯನ್ನು ತೆಗೆಯಬೇಕಾದರೆ ಆಪರೇಷನ್ ಅತ್ಯಗತ್ಯ.'

'ಆಪರೇಷನ್ ಮಾಡಿದಮೇಲೆ ಮಕ್ಕಳಾಗುತ್ತವೆಯೇ?' ಅವಳ ಗಂಡ ಬಿಲ್ ಕೇಳಿದ.

'ಮಕ್ಕಳಾಗುವ ಸಾಧ್ಯತೆ ಇದೆ. ಆದರೆ ಆಗಿಯೇ ಆಗುತ್ತದೆ ಎನ್ನುವ ಖಾತರಿಯಿಲ್ಲ' ಎಂದರು ಜೇಕಬ್ಸ್. ಜೇನ್ ಗಂಡನ ಕಡೆ ಒಮ್ಮೆ ನೋಡಿದಳು. 'ಆಮೇಲೆ, ಮಕ್ಕಳಾಗುವ ಸಾಧ್ಯತೆ ಇದ್ದರೆ ಆಪರೇಷನ್ನಿಗೆ ಸಿದ್ಧ' ಎಂದಳು.

'ಆಪರೇಷನ್ನಿಗೆ ಸಿದ್ಧವಾಗುವ ಮೊದಲು ಈ ಆಪರೇಷನ್ನಿನ ಬಗ್ಗೆ ಇನ್ನೊಂದೆರಡು ವಿಷಯ ನಿಮಗೆ ಹೇಳಬೇಕು. ಮೊದಲನೆಯದಾಗಿ, ಈ ಗೆಡ್ಡೆಯನ್ನು ತೆಗೆಯಲು ಪ್ರಯತ್ನಿಸುತ್ತಿರುವಾಗ ಏನಾದರೂ ತೊಂದರೆಯಾದರೆ ಗರ್ಭಕೋಶವನ್ನೇ ತೆಗೆಯಬೇಕಾಗಬಹುದು. ಹಾಗೇನಾದರೂ ಆದರೆ ಮಕ್ಕಳಾಗುವ ಸಾಧ್ಯತೆಯೇ ಇರುವುದಿಲ್ಲ. ಎರಡನೆಯದಾಗಿ ಈ ಗೆಡ್ಡೆ ಕ್ಯಾನ್ಸರ್ ಆಗಿರುವ ಸಂಭವವೂ ಇದೆ. ಹಾಗಿದ್ದರೆ ನಿನ್ನ ಜೀವ ಉಳಿಸಲು, ಕ್ಯಾನ್ಸರಿಂದ ನಿನ್ನನ್ನು ಗುಣಪಡಿಸಲು ಏನು ಬೇಕೋ ಆ ಪ್ರಯತ್ನವನ್ನೆಲ್ಲ ಮಾಡಬೇಕಾಗುತ್ತದೆ. ಗರ್ಭಕೋಶವನ್ನು ತೆಗೆಯ ಬೇಕಾಗುತ್ತದೆ'.

'ಕ್ಯಾನ್ಸರ್' ಎನ್ನುವ ಪದವನ್ನು ಕೇಳಿದ ದಂಪತಿಗಳು ಹೌಹಾರಿದರು. ಜೀನ್‌ನ ಕಣ್ಣಲ್ಲಿ ನೀರೂರಿತು. ಗಂಡ ಅವಳ ಕೈಯನ್ನು ಬಿಗಿಹಿಡಿದ. ಆತನ ಮುಖದಲ್ಲೂ ಆತಂಕ ಮನೆ ಮಾಡಿತ್ತು. ನಡುಗುತ್ತಿದ್ದ ಧ್ವನಿಯೊಡನೆ ಜೀನ್ ಕೇಳಿದಳು, 'ಕ್ಯಾನ್ಸರ್?'

'ಕ್ಯಾನ್ಸರ್ ಎಂದು ಹೇಳಿದೆ ನಿಜ. ಆದರೆ ನೀವುಗಳು ಅಷ್ಟೊಂದು ಆತಂಕಪಡಬೇಕಾಗಿಲ್ಲ. ಸಾಧಾರಣವಾಗಿ ಇಂತಹ ಗೆಡ್ಡೆಗಳು ಕ್ಯಾನ್ಸರ್‌ಗಳಲ್ಲ. ಆದರೆ ಆ ಸಂಭವವನ್ನು ನೆನಪಿನಲ್ಲಿಟ್ಟು ಕೊಂಡಿರಬೇಕು ಎನ್ನುವುದಕ್ಕಾಗಿ ಹೇಳಿದೆ. ಆ ಸಾಧ್ಯತೆಯ ಬಗ್ಗೆ ಅಷ್ಟೊಂದು ಕಾಳಜಿ ಇರಬೇಕಾಗಿಲ್ಲ. ನಾನು ಹೇಳಿರುವುದನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು ಈ ಬಗ್ಗೆ ಚೆನ್ನಾಗಿ ಯೋಚನೆ ಮಾಡಿ. ಇನ್ನೊಂದು ವಾರದಲ್ಲಿ ಇಬ್ಬರೂ ಪುನಃ ಬನ್ನಿ. ಮಾಡಬೇಕಾದ ಟೆಸ್ಟುಗಳನ್ನೆಲ್ಲ ಈಗಾಗಲೇ ಮಾಡಿಯಾಗಿದೆ. ಇನ್ನು ಬೇರಾವ ಟೆಸ್ಟುಗಳನ್ನೂ ಈಗ ಮಾಡುವ ಅಗತ್ಯವಿಲ್ಲ.... ಇನ್ನೇನಾದರೂ ಹೇಳುವುದಿದೆಯೇನು?' ಕೇಳಿದರು ಡಾಕ್ಟರ್ ಜೇಕಬ್ಸ್. 'ಸದ್ಯಕ್ಕೆ ಇನ್ನೇನೂ ಇಲ್ಲ.... ಓ....ಮರೆತಿದ್ದೆ. ಹತ್ತು ಹನ್ನೆರಡು ವರ್ಷಗಳ ಹಿಂದೆ ನನ್ನನ್ನು ಆಸ್ಪತ್ರೆಗೆ ಸೇರಿಸಿದ್ದರು.... ಹೊಟ್ಟೆ ನೋವಿಗಾಗಿ ಎಂದು ನನ್ನ ನೆನಪು.... ಆ ರೆಕಾರ್ಡನ್ನೂ ತಂದಿದ್ದೇನೆ' ಎನ್ನುತ್ತ ಇನ್ನೊಂದು ದೊಡ್ಡ ಕವರನ್ನು ಡಾಕ್ಟರ ಕೈಗೆ ಕೊಟ್ಟಳು. ಡಾಕ್ಟರು ಅದನ್ನು ತೆಗೆದುಕೊಂಡು, 'ಸರಿ, ಇನ್ನೊಂದು ವಾರಕ್ಕೆ ಬನ್ನಿ, ನೋಡೋಣವಂತೆ' ಎನ್ನುತ್ತ ತಮ್ಮ ರೂಮಿಗೆ ಹೊರಟರು.

'ನಿಮ್ಮ ಟೇಬಲ್ಲಿನ ಮೇಲೆ ಒಂದು ಸ್ಯಾಂಡ್‌ವಿಚ್‌ನ್ನೂ ಒಂದು ಲೋಟ ಹಾಲನ್ನೂ ಇಟ್ಟಿದ್ದೇನೆ, ನಿಮಗಾಗಿ' ಎಂದಳು ನರ್ಸ್ ಮಿಲ್ಲರ್.

ಮೂವತ್ತಾರುಗಂಟೆ ಸತತವಾಗಿ ದುಡಿದು ಡಾಕ್ಟರಿಗೆ ತುಂಬ ಸುಸ್ತಾಗಿತ್ತು. ಸ್ವಲ್ಪಹೊತ್ತು ಸುಧಾರಿಸಿಕೊಳ್ಳುವ ಎಂದು ತಮ್ಮ ರೂಮಿನಲ್ಲಿದ್ದ ಸೋಫಾದ ಮೇಲೆ ಹಾಗೇ ಒರಗಿ, ಜೀನ್ ತಂದಿದ್ದ ಆಸ್ಪತ್ರೆಯ ರೆಕಾರ್ಡನ್ನು ಓದುತ್ತ ಕುಳಿತರು.

ಆಗಲೇ ಸಂಜೆ ಆರು ಗಂಟೆಯಾಗಿಹೋಗಿತ್ತು. ಆಫೀಸನ್ನು ಮುಚ್ಚಲು ಅಣಿಮಾಡಿಕೊಳ್ಳುತ್ತ ನರ್ಸ್ ಮಿಲ್ಲರ್ ಡಾಕ್ಟರ್ ಜೇಕಬ್ಸ್ ಅವರ ರೂಮಿಗೆ ಬಂದಳು. ಡಾಕ್ಟರು ಅಲ್ಲಿದ್ದ ಸೋಫಾ ಮೇಲೆಯೇ ಮಲಗಿಕೊಂಡಿದ್ದರು. ಗಾಢನಿದ್ರೆ. ಜೇನ್ ಕೊಟ್ಟಿದ್ದ ಕವರು ಅವರ ಎದೆಯ ಮೇಲೆ. ತಾನು ತಂದಿರಿಸಿದ್ದ ಸ್ಯಾಂಡ್‌ವಿಚ್ ಮತ್ತು ಹಾಲು ಇನ್ನೂ ಟೇಬಲಿನ ಮೇಲೆಯೇ ಉಳಿದಿತ್ತು. 'ಈತನ ದುಡಿತಕ್ಕೆ ಕೊನೆ – ಮೊದಲೇ ಇಲ್ಲವಲ್ಲ! ಆಸ್ಪತ್ರೆ, ಪೇಷಂಟು ಅಂದರೆ ಪ್ರಪಂಚವನ್ನೇ ಮರೆತುಬಿಡುತ್ತಾರೆ. ಹೆಂಡತಿ, ಮಕ್ಕಳು ಅಂತ ಇದ್ದಿದ್ದರೆ ಮನೆಯ ಕಡೆ ಸ್ವಲ್ಪ ಗಮನ ಬರುತ್ತಿತ್ತೋ ಏನೋ. ಅದಾವುದೂ ಇಲ್ಲದ ಒಂಟಿ ಜೀವಿ' ಎಂದುಕೊಳ್ಳುತ್ತ ಕಿಟಕಿಯ ಮೇಲಿನ ಕರ್ಟನನ್ನು ಎಳೆದಳು. ಡಾಕ್ಟರನ್ನು ಎಬ್ಬಿಸಲು ಮನಸ್ಸು ಬರಲಿಲ್ಲ. ಅವರ ಎದೆಯ ಮೇಲಿದ್ದ ರೆಕಾರ್ಡನ್ನು ತೆಗೆದು ಟೇಬಲಿನ ಮೇಲಿಟ್ಟು, ಅಲ್ಲಿಯೇ ಅವರಿಗಾಗಿ ಒಂದು ಚೀಟಿಯನ್ನು ಬರೆದಿಟ್ಟು ಆಫೀಸಿನ ಬಾಗಿಲು ಹಾಕಿಕೊಂಡು ಹೊರಟಳು.

ಒಂದು ವಾರದ ನಂತರ ರಾಬರ್ಟ್ಸ್ ದಂಪತಿಗಳು ಡಾಕ್ಟರ್ ಜೇಕಬ್ಸ್ ಅವರ ಆಫೀಸಿಗೆ ಬಂದರು. ಜೇನ್, ಬಿಲ್, 'ಆಪರೇಷನ್ ಬಗ್ಗೆ ಯೋಚನೆ ಮಾಡಿದ್ದೀರಾ ?' 'ದೀರ್ಘವಾಗಿ ಯೋಚನೆ ಮಾಡಿದ್ದೀವಿ, ಡಾಕ್ಟರ್. ಆಪರೇಷನ್ ಮಾಡಿಸಿಕೊಳ್ಳುವುದು ಅಂತ ಇಬ್ಬರೂ ಒಮ್ಮತದಿಂದ ನಿರ್ಧರಿಸಿದ್ದೇವೆ' ಎಂದಳು. ಜೇನ್ ನಗುತ್ತ. ಅವಳ ಗಂಡನೂ ತಲೆಯಳ್ಳಾಡಿಸುತ್ತ ಒಪ್ಪಿಗೆ ಸೂಚಿಸಿದ. 'ಆಪರೇಷನ್ನಿನಲ್ಲಿ ಆಗಬಹುದಾದ ಅಪಾಯಗಳ ಬಗ್ಗೆ ಯೋಚಿಸಿದ್ದೀರಾ?' ಎಂದು ಕೇಳಿದರು ಡಾಕ್ಟರು. 'ಯೋಚಿಸಿದ್ದೀವಿ. ಆದರೆ ಆ ಬಗ್ಗೆ ನಮಗೆ ಕಾಳಜಿಯೇನೂ ಇಲ್ಲ. ನಿಮ್ಮಲ್ಲಿ, ನಿಮ್ಮ ಸಾಮರ್ಥ್ಯದಲ್ಲಿ ನಮಗೆ ಪೂರ್ಣವಾಗಿ ಭರವಸೆ ಇದೆ' ಎಂದ ಬಿಲ್. 'ಇನ್ನೊಂದು ವಿಷಯ ನೀವುಗಳಿಬ್ಬರೂ ಚೆನ್ನಾಗಿ ನೆನಪಿನಲ್ಲಿಟ್ಟು ಕೊಳ್ಳಬೇಕು. ಜೇನ್‌ನ ಹೊಟ್ಟೆಯೊಳಗೆ ಏನಾಗುತ್ತಿದೆ ಎನ್ನುವುದು ಇನ್ನೂ ಸರಿಯಾಗಿ ನಿರ್ಧಾರವಾಗಿಲ್ಲ. ಅದು ಸರಿಯಾಗಿ ಗೊತ್ತಾಗುವುದು ಆಪರೇಷನ್ ಮಾಡಿದಾಗಲೇ. ಆಪರೇಷನ್ನಿನಲ್ಲಿ ಅನಿರೀಕ್ಷಿತ ಪರಿಸ್ಥಿತಿಯೇನಾದರೂ ಸಂಭವಿಸಿದರೆ ನಿನ್ನ ಜೀವವನ್ನುಳಿಸಲು, ನಿನ್ನ ಗರ್ಭಕೋಶವನ್ನು ಉಳಿಸಿಕೊಳ್ಳಲು ನನ್ನ ಕೈಲಾದದ್ದನ್ನೆಲ್ಲಾ ಮಾಡುತ್ತೇನೆ ಎಂಬ ಭರವಸೆ ಕೊಡುತ್ತೇನೆ'. ಎಂದರು ಜೇಕಬ್ಸ್. 'ಅದು ನಮಗೆ ಚೆನ್ನಾಗಿ ಗೊತ್ತು. ಅದರಿಂದಲೇ ಯಾವ ಬಗೆಯ ಹಿಂದೇಟೂ ಹಾಕದೆ ಈ ಆಪರೇಷನ್ನಿಗೆ ಒಪ್ಪಿಕೊಂಡಿದ್ದೇವೆ. ನಿಮ್ಮ ಪರಿಚಯವಾದದ್ದು ನಮ್ಮ ಭಾಗ್ಯ' ಎಂದಳು ಜೇನ್. 'ಹಾಗಾದರೆ ಈ ವಾರದಲ್ಲೇ ನಿನ್ನ ಆಪರೇಷನ್ನಿಗೆ ವ್ಯವಸ್ಥೆ ಮಾಡುತ್ತೇನೆ. ನರ್ಸ್ ಮಿಲ್ಲರ್ ನಿಮ್ಮೊಡನೆ ಈ ವಿಷಯದಲ್ಲಿ ವ್ಯವಹರಿಸುತ್ತಾಳೆ' ಎನ್ನುತ್ತಾ ಎದ್ದು ಅವರಿಬ್ಬರ ಕೈಕುಲುಕಿ ಡಾಕ್ಟರು ಅಲ್ಲಿಂದ ಆಚೆಗೆ ಹೋದರು.

ಮೂರು ದಿನದ ನಂತರ. ಡಾಕ್ಟರ್ ಜೇಕಬ್ಸ್ ತಮ್ಮ ಕೈಕೆಳಗೆ ಕಲಿಯುತ್ತಿದ್ದ ಯುವ ಡಾಕ್ಟರ್ ಜ್ಯಾಕ್ ಥಾಮಸ್ ಜೊತೆ ಆಪರೇಟಿಂಗ್ ರೂಮಿಗೆ ಬಂದರು. ಅಲ್ಲಿ ಜೀನ್ ಆಪರೇಷನ್ನಿಗೆ ಸಿದ್ಧಳಾಗಿ ಮಲಗಿದ್ದಳು. 'ಜೀನ್, ಇವರು ನನ್ನ ರೆಸಿಡೆಂಟ್ ಡಾಕ್ಟರ್ ಥಾಮಸ್. ಇವರು ನಿನ್ನ ಆಪರೇಷನ್ನಿನಲ್ಲಿ ಮತ್ತು ನಿನ್ನ ಶುಶ್ರೂಷೆಯಲ್ಲಿ ನನಗೆ ಸಹಾಯ ಮಾಡುತ್ತಾರೆ. ನಿನಗೆ ಈಗ ಅನಿಸ್ತೀಸಿಯ ಕೊಡಲು ಸಿದ್ಧವಾಗಿದೆ. ನೀನು ಮಲಗುವ ಮುಂಚೆ ಹೇಳುವುದೇನಾದರೂ ಇದೆಯೆ ?'

'ಏನೂ ಇಲ್ಲ. ನಿಮ್ಮ ಮೇಲೆ ಪೂರ್ಣ ಭರವಸೆ ಹಾಕಿ ಆಪರೇಷನ್ನಿಗೆ ಸಿದ್ಧಳಾಗಿದ್ದೇನೆ'.

'ಆಪರೇಷನ್ ಆದಕೂಡಲೆ ನಾನು ಆಚೆಗೆ ಹೋಗಿ ನಿನ್ನ ಗಂಡನ ಜೊತೆ ಮಾತನಾಡುತ್ತೇನೆ'.

ಐದು ನಿಮಿಷದಲ್ಲಿ ಜೀನ್ ಅನೀಸ್ತೀಸಿಯದೊಳಗಿದ್ದಳು. ಡಾಕ್ಟರ್ ಜೇಕಬ್ಸ್ ಆಪರೇಷನ್ ಪ್ರಾರಂಭಿಸುವ ಮೊದಲು ಮತ್ತೊಂದುಬಾರಿ ಆಂತರಿಕವಾಗಿ ಅವಳ ಪರೀಕ್ಷೆ ಮಾಡಿದರು. ಡಾಕ್ಟರ್ ಥಾಮಸ್ ಅವರೂ ಪರೀಕ್ಷೆ ಮಾಡಿದರು. ಗರ್ಭಕೋಶಕ್ಕೆ ಸೇರಿದಂತೆ ಅದರ ಬಲಭಾಗದಲ್ಲೊಂದು ಕಿತ್ತಳೇಹಣ್ಣಿನ ಗಾತ್ರದ ಗೆಡ್ಡೆ. 'ಗೆಡ್ಡೆ ಮುಟ್ಟಲು ಇಷ್ಟು ಗಟ್ಟಿಯಾಗಿದೆಯಲ್ಲಾ, ಇದು ಕ್ಯಾನ್ಸರ್ ಇರಬಹುದೇ?' ಡಾಕ್ಟರ್ ಥಾಮಸ್ ಕೇಳಿದರು. 'ಅದೇ ನನ್ನ ಹೆದರಿಕೆ. ಅದಕ್ಕಾಗಿ ಅವಳು ಈಗ ಆಪರೇಷನ್ ಮಾಡಿಸಿಕೊಳ್ಳಬೇಕೆಂದು ನಾನು ಒತ್ತಾಯ ಮಾಡಿದೆ. ಇದು ಕ್ಯಾನ್ಸರ್ ಆದರೆ ಅವಳ ಅಂಡಾಶಯಗಳನ್ನೂ ಗರ್ಭಕೋಶವನ್ನೂ ತೆಗೆಯಬೇಕಾಗುತ್ತದೆ. ಇದು ಕ್ಯಾನ್ಸರ್ ಅಲ್ಲದಿರಲಿ ಎಂದು ಮನಸ್ಸಿನಲ್ಲೇ ಆಶಿಸುತ್ತಿದ್ದೇನೆ' ಎಂದರು ಡಾಕ್ಟರ್ ಜೇಕಬ್ಸ್.

ಆಪರೇಷನ್ ಸಾವಧಾನವಾಗಿ ಮುಂದುವರೆದಿತ್ತು. ಮಿಕ್ಕ ಅಂಗಗಳನ್ನು ಪಕ್ಕಕ್ಕೆ ಒತ್ತರಿಸಿ ಡಾಕ್ಟರ್ ಜೇಕಬ್ಸ್ ಗರ್ಭಕೋಶವನ್ನೂ ಅದಕ್ಕೆ ಸೇರಿದಂತಿದ್ದ ಗೆಡ್ಡೆಯನ್ನೂ ನೇರವಾಗಿ ಪರೀಕ್ಷಿಸಿದರು. 'ಮುಟ್ಟಲು ಕ್ಯಾನ್ಸರಿನಂತೆ ಕಾಣುವುದಿಲ್ಲ. ಕತ್ತರಿಸಿ ಇದನ್ನು ಕ್ಯಾನ್ಸರೇ ಅಲ್ಲವೇ ಎಂದು ನೋಡಬಹುದು. ಆದರೆ ಅಕಸ್ಮಾತ್ ಇದು ಕ್ಯಾನ್ಸರಾಗಿದ್ದರೆ ಹಾಗೆ ಮಾಡುವುದು ತುಂಬ ತಪ್ಪು. ಕ್ಯಾನ್ಸರ್ ಹರಡುವ ಪರಿಸ್ಥಿತಿ ಉಂಟಾಗುತ್ತದೆ. ಆದ್ದರಿಂದ ಇಡೀ ಗೆಡ್ಡೆಯನ್ನು ಯಾವ ರೀತಿಯ ಜಖಂ ಆಗದಂತೆ ಬಿಡಿಸಿ ತೆಗೆಯುವುದು ನನ್ನ ಉದ್ದೇಶ' ಎನ್ನುತ್ತ ಮುಂದುವರಿದರು.

ಗೆಡ್ಡೆಯನ್ನು ಗರ್ಭಕೋಶದಿಂದ ಬಿಡಿಸಿ ತೆಗೆಯುವ ಕೆಲಸ ಕಷ್ಟವಾಗಿತ್ತು. ಇದರಿಂದಾಗಿ ಅವರ ಕೆಲಸ ಬಹಳ ನಿಧಾನವಾಗಿ ಮುಂದುವರೆದಿತ್ತು. 'ಇಂಥ ಗೆಡ್ಡೆಯನ್ನು ನಾನು ಹಿಂದೆಂದೂ ನೋಡಿಯೇ ಇಲ್ಲ. ಗರ್ಭಕೋಶವನ್ನು ಬಿಗಿದಪ್ಪಿ ಹಿಡಿದಿದೆ. ಆದರೆ

ಗರ್ಭಕೋಶವನ್ನು ಅತಿಕ್ರಮಿಸಿಲ್ಲ. ಎಚ್ಚರಿಕೆಯಿಂದ ಅದನ್ನು ಬೇರ್ಪಡಿಸುತ್ತಿದ್ದೇನೆ ಅದೂ ಬೇರ್ಪಡುತ್ತಿದೆ -- ಅದರಿಂದಾಗಿ ಇದು ಕ್ಯಾನ್ಸರಲ್ಲ ಎಂದು ನನ್ನ ನಂಬಿಕೆ. ಕ್ಯಾನ್ಸರ್ ಆಗಿದ್ದರೆ ಅದನ್ನು ಬೇರ್ಪಡಿಸಲು ಸಾಧ್ಯವಾಗುತ್ತಿರಲಿಲ್ಲ' ಎಂದರು ಡಾಕ್ಟರ್ ಜೇಕಬ್ಸ್.

ಆ ಗೆಡ್ಡೆಯನ್ನು ಪೂರ್ತಿಯಾಗಿ ಗರ್ಭಕೋಶದಿಂದ ಬಿಡಿಸಿ ತೆಗೆಯುವ ಹೊತ್ತಿಗೆ ಆಪರೇಷನ್ ಪ್ರಾರಂಭಿಸಿ ಮೂರು ಘಂಟೆಯ ಮೇಲಾಗಿತ್ತು. ಡಾಕ್ಟರ್ ಜೇಕಬ್ಸ್ ಕುಶಲತೆಯಿಂದ ಆ ಗೆಡ್ಡೆಯನ್ನು ಗರ್ಭಕೋಶದಿಂದ ಬೇರ್ಪಡಿಸಿ ತೆಗೆದಿದ್ದರು. ಅವರ ಮುಖದಲ್ಲಿ ಒಳ್ಳೆಯ ಕೆಲಸವನ್ನು ಸಾಧಿಸಿದ ತೃಪ್ತಿ ಕಾಣುತ್ತಿತ್ತು. 'ಈ ಗೆಡ್ಡೆಯನ್ನು ಪೆಥಾಲಜಿ ಡಿಪಾರ್ಟ್‌ಮೆಂಟಿಗೆ ಕೂಡಲೇ ಕಳಿಸು, ಅದು ಏನೆಂದು ದಯವಿಟ್ಟು ತಿಳಿಸಿ ಎಂದು ಡಾಕ್ಟರ್ ಕೂಪರ್ ಅವರನ್ನು ಕೇಳಿಕೊ' ಎನ್ನುತ್ತ ಆ ಗೆಡ್ಡೆಯನ್ನು ಆಪರೇಟಿಂಗ್ ರೂಮಿನ ನರ್ಸಿಗೆ ಕೊಟ್ಟರು. ಆಪರೇಷನ್‌ನ್ನು ಮುಗಿಸುವ ಹಂತದಲ್ಲಿ ತೊಡಗಿದರು. ಹದಿನೈದು ನಿಮಿಷ ಕಳೆದಿತ್ತು. ಜೇನ್‌ಳ ಆಪರೇಷನ್ ಪೂರ್ತಿಯಾಗಿ ಮುಗಿದಿತ್ತು. ಅವಳನ್ನು ರಿಕವರಿ ರೂಮಿಗೆ ಕರೆದೊಯ್ಯುವ ಸಿದ್ಧತೆ ನಡೆಯುತ್ತಿತ್ತು. ಡಾಕ್ಟರ್ ಜೇಕಬ್ಸ್ ಡಾಕ್ಟರ್ ಥಾಮಸ್ ಅವರ ಜೊತೆ ಆ ಆಪರೇಶನ್ನಿನ ಜಟಿಲತೆಯ ಬಗ್ಗೆ ಮಾತನಾಡುತ್ತ ಆಪರೇಟಿಂಗ್ ರೂಮಿನಲ್ಲಿ ನಿಂತಿದ್ದರು. ಆಗ ಪೆಥಾಲಜಿಸ್ಟ್ ಕೂಪರ್ ದಡದಡನೆ ಓಡುತ್ತ ಆಪರೇಟಿಂಗ್ ರೂಮಿಗೆ ಬಂದು ಬಾಗಿಲಲ್ಲಿ ನಿಂತರು. ಡಾಕ್ಟರ್ ಜೇಕಬ್ಸ್‌ಡಾಕ್ಟರ್ ಕೂಪರ್ ಕಡೆ ಕಳವಳದಿಂದ ನೋಡುತ್ತ 'ಕ್ಯಾನ್ಸರೇನು?' ಎಂದರು.

ಡಾಕ್ಟರ್ ಕೂಪರ್ ತಲೆಯಳ್ಳಾಡಿಸುತ್ತ, ಮೆಲ್ಲನೆ ಧ್ವನಿಯಲ್ಲಿ 'ಅಲ್ಲ. ಕ್ಯಾನ್ಸರಲ್ಲ. ಅದು ಕಿಡ್ನಿ (ಮೂತ್ರ ಜನಕಾಂಗ). ಯಾವ ರೋಗವೂ ಇಲ್ಲದೆ ಸಹಜ ಸ್ಥಿತಿಯಲ್ಲಿರುವ ಕಿಡ್ನಿ. ನಾನು ಚೆನ್ನಾಗಿ ಪರೀಕ್ಷಿಸಿದ್ದೇನೆ. ಅದು ಕಿಡ್ನಿ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ' ಎಂದರು. ಡಾಕ್ಟರ್ ಜೇಕಬ್ಸ್ ಅವರಿಗೆ ಪೆಥಾಲಜಿ ರಿಪೋರ್ಟ್ ಕೇಳಿ ಸಿಡಿಲು ಬಡಿದಂತಾಗಿತ್ತು. ಅವರ ಮುಖ ವಿವರ್ಣವಾಗಿ ಬಿಳಿಚಿಕೊಂಡಿತು. 'ಕಿಡ್ನಿ....ಕಿಡ್ನಿ...! ಅದು ಹೇಗೆ ಸಾಧ್ಯ?' ಎನ್ನುತ್ತಾ ತಲೆಯ ಮೇಲೆ ಕೈಹೊತ್ತು ನಿಂತರು. ಮಗು ತಾಯಿಯ ಗರ್ಭದಲ್ಲಿ ಬೆಳೆಯುತ್ತಿರುವಾಗ ಆಗಾಗ ಕಿಡ್ನಿಯ ಬೆಳವಣಿಗೆ ನಿಂತು ಅದು ಕಿಬ್ಬೊಟ್ಟೆಯಲ್ಲೇ ಉಳಿದುಬಿಡುತ್ತದೆ. ಇದು ಅಂತಹ ಪೆಲ್ವಿಕ್ ಕಿಡ್ನಿ ಇರಬೇಕು ಎನಿಸಿತು ಜೇಕಬ್ಸ್ ಅವರಿಗೆ. ಆದದ್ದು ಆಗಿಹೋಗಿತ್ತು. ಈಗ ಇನ್ನೇನೂ ಮಾಡುವ ಸಾಧ್ಯತೆ ಇರಲಿಲ್ಲ. ಕತ್ತರಿಸಿ ಆಚೆಗೆ ತೆಗೆದ ಆ ಅಂಗವನ್ನು ಪುನಃ ಒಳಗಿಟ್ಟು ಹೊಲಿಯುವಂತಿರಲಿಲ್ಲ. ಹಾಗೇ ಯೋಚಿಸುತ್ತ, ಕಿಡ್ನಿ ಜೋಡಿ ಅಂಗ ತಾನೆ. ಇನ್ನೊಂದು ಕಿಡ್ನಿ ಇವಳನ್ನು ಕಾಯುತ್ತದೆ. ಎಂದುಕೊಳ್ಳುತ್ತಾ ಆಪರೇಟಿಂಗ್ ರೂಮಿನಿಂದ ಆಚೆಗೆ ಬಂದರು.

ಆಪರೇಟಿಂಗ್ ರೂಮಿನ ಆಚೆ ಅವರಿಗಾಗಿ ಜೇನ್‌ಳ ಗಂಡ ಮತ್ತು ಅವಳ ತಂದೆ – ತಾಯಿಯರು ಕಾಯುತ್ತಿದ್ದರು. ಅವರನ್ನು ಕಂಡೊಡನೇ ಗಂಡ ಬಿಲ್ ಜೇನ್ ಹೇಗಿದ್ದಾಳೆ ? ಎಂದು ಕಳಕಳಿಯಿಂದ ಕೇಳಿದ. ಡಾಕ್ಟರ್ ಜೇಕಬ್ಸ್, ತಮ್ಮ ಮನಸ್ಸಿನ ಉದ್ವೇಗವನ್ನು ಅದುಮಿ ಹಿಡಿಯುತ್ತ, ಜೇನ್ ಆಪರೇಷನ್ ಚೆನ್ನಾಗಿಯೇ ತಡೆದುಕೊಂಡಳು. 'ಕ್ಯಾನ್ಸರ್‌ನ ಸೂಚನೆ ಏನೂ ಕಾಣಲಿಲ್ಲ. ಅವಳ ಗರ್ಭಕೋಶವನ್ನೂ ಯಾವ ಜಖಮ್ಮೂ ಇಲ್ಲದೆ ಉಳಿಸಲು ಸಾಧ್ಯವಾಯಿತು' ಎಂದರು. ಅದನ್ನು ಕೇಳಿದ ಅವಳ ಗಂಡ, ತಂದೆ ತಾಯಿಯರು ನೆಮ್ಮದಿಯ ನಿಟ್ಟುಸಿರುಬಿಟ್ಟರು. ಡಾಕ್ಟರ್ ಜೇಕಬ್ಸ್ ಮುಂದುವರಿಸುತ್ತಾ 'ಆಚೆಗೆ ತೆಗೆದ ಗೆಡ್ಡೆಯಮೇಲೆ ಹಂಗಾಮಿಯಾಗಿ ನಡೆಸಿದ ಪರೀಕ್ಷೆ, ಅದು ಜನ್ಮದಿಂದಲೇ ಪರಸ್ಥಾಯಿಗಾಗಿ ಕಿಬ್ಬೊಟ್ಟೆಯಲ್ಲಿ ಬೆಳೆಯುತ್ತಿದ್ದ ಅವಳ ಕಿಡ್ನಿ ಎಂದು ತಿಳಿಸುತ್ತದೆ. ಇನ್ನೆರಡು ದಿನಗಳಲ್ಲಿ ಖಚಿತವಾಗಿ ಅದು ಏನು ಎಂದು ಹೇಳಬಹುದು. ಅದು ಕಿಡ್ನಿಯೇ ಆಗಿದ್ದರೆ ಅನಾವಶ್ಯಕವಾಗಿ ಅದನ್ನು ತೆಗೆದಂತಾಗುತ್ತದೆ. ಅದರ ಜವಾಬ್ದಾರಿಯನ್ನು ನಾನು ಹೊರಬೇಕಾಗುತ್ತದೆ. ಆದರೆ ಕಿಡ್ನಿ ಜೋಡಿ ಅಂಗ. ಒಂದು ಕಿಡ್ನಿ ಹೋದರೆ ಇನ್ನೊಂದು ಅದರ ಕೆಲಸವನ್ನು ವಹಿಸಿಕೊಳ್ಳುತ್ತದೆ. ಈ ಕಿಡ್ನಿ ತೆಗೆದಿದ್ದರಿಂದ ಜೇನ್‌ಗೆ ಯಾವ ರೀತಿಯ ತೊಂದರೆಯೂ ಆಗಲಾರದು ಎನ್ನುವುದೇ ನನ್ನ ಎಣಿಕೆ 'ಎಂದರು.

ಜೇಕಬ್ಸ್ ಅವರೊಡನೆ ಸಂಭಾಷಣೆ ಮುಗಿಸಿದಾಗ ಜೇನ್‌ನ ಮನೆಯವರೆಲ್ಲ ಆಪರೇಷನ್ ಬಗ್ಗೆ ಸಂತುಷ್ಟರಾಗೇ ಇದ್ದರು. ಅವಳ ಗರ್ಭಕೋಶವನ್ನು ಉಳಿಸಲಾಯಿತಲ್ಲಾ ಎಂಬುದೇ ದೊಡ್ಡ ತೃಪ್ತಿ. ಆದರೆ ಜೇಕಬ್ಸ್ ಅವರ ಮುಖದ ಹಳೆಮಾತ್ರ ಹಿಂದಿರುಗಿರಲಿಲ್ಲ.

ಅಲ್ಲಿಂದ ರಿಕವರಿ ರೂಮಿಗೆ ಬಂದ ಡಾಕ್ಟರ್ ಜೇಕಬ್ಸ್, ಇನ್ನೂ ನಿದ್ರೆಯಲ್ಲಿದ್ದ ಜೇನ್‌ಳನ್ನು ಇನ್ನೊಂದು ಸ್ಪೆಷಲ್ ಕಿಡ್ನಿ ಎಕ್ಸ್–ರೇ ಗಾಗಿ ಕಳಿಸಿದರು. ಉದ್ದೇಶ ಅವಳ ಇನ್ನೊಂದು ಕಿಡ್ನಿ ಎಲ್ಲಿದೆ ಮತ್ತು ಹೇಗೆ ಕೆಲಸಮಾಡುತ್ತಿದೆ ಎಂದು ತಿಳಿಯಲು. ಒಂದು ಕಿಡ್ನಿ ಹುಟ್ಟಿನಿಂದಲೇ ಅಸಹಜ ಪರಿಸ್ಥಿತಿಯಲ್ಲಿದ್ದರೆ ಇನ್ನೊಂದು ಕಿಡ್ನಿಯಲ್ಲಿಯೂ ತೊಂದರೆಯಿರುವುದು ಸಾಮಾನ್ಯ ಎಂದು ಡಾಕ್ಟರ್ ಜೇಕಬ್ಸ್ ಅವರಿಗೆ ಗೊತ್ತು. ಆದ್ದರಿಂದ ಜೇನ್ ಬಗ್ಗೆ ಯೋಚಿಸುತ್ತ, ಪವಾಡವನ್ನಾಶಿಸುತ್ತ, ದೇವರನ್ನು ಪ್ರಾರ್ಥಿಸುತ್ತ, ಶಥಪಥ ಓಡಾಡಿದರು. ಆದರೆ ಎಕ್ಸ್–ರೇ ರಿಸಲ್ಟು ಬಂದಾಗ ಇನ್ನೂ ಕೆಟ್ಟ ಸುದ್ದಿ ಕಾದಿತ್ತು. ಎಕ್ಸ್–ರೇಯನ್ನು ನಾಲ್ಕಾರು ಎಕ್ಸ್–ರೇ ಪರಿಣಿತರು ಪರಿಶೀಲಿಸಿ ಒಂದೇ ನಿರ್ಧಾರಕ್ಕೆ ಬಂದಿದ್ದರು : ಈ ಹುಡುಗಿಯಲ್ಲಿ ಕೆಲಸ ಮಾಡುತ್ತಿರುವ ಬೇರೊಂದು ಕಿಡ್ನಿಯೇ ಇಲ್ಲ.

ಡಾಕ್ಟರ್ ಜೇಕಬ್ಸ್ ತಲೆ ಸುತ್ತಲಾರಂಭಿಸಿತು. ನಿಲ್ಲಲು ಕಾಲಿನಲ್ಲಿ ಶಕ್ತಿಯೇ ಇಲ್ಲ. ಕಣ್ಣು ಕಪ್ಪಿಟ್ಟಿತು. ಎಂಥ ಅನ್ಯಾಯ ! ಅಮ್ಮನ ಗರ್ಭದಲ್ಲಿ ಬೆಳೆಯುತ್ತಿದ್ದಾಗಲೇ ಒಂದು

ಕಿಡ್ನಿಯ ಬೆಳವಣಿಗೆ ನಿಂತು, ಇನ್ನೊಂದೇ ಕಿಡ್ನಿ ಅವಳ ಕಿಬ್ಬೊಟ್ಟೆಯಲ್ಲಿ ಉಳಿದು ಕೆಲಸ ಮಾಡಿಕೊಂಡಿತ್ತು. ಒಂದು ಕಿಡ್ನಿಯೇ ಅವಳನ್ನು ಮೂವತ್ತೆರಡು ವರ್ಷ ಕಾಪಾಡಿಕೊಂಡು ಬಂದಿತ್ತು. ಈಗ ಈ ಆಪರೇಷನ್ನಿನ ಕಾರಣ ಅವಳ ಜೀವ ಇದ್ದಕ್ಕಿದ್ದಂತೆ ಮೃತ್ಯುವಿನ ದವಡೆ ಯಲ್ಲಿತ್ತು. ಜೇಕಬ್ಸ್ ಜೀನ್ ಅನ್ನು ನೆನಪಿಸಿಕೊಳ್ಳುತ್ತಾ ಗಳಗಳನೆ ಕಣ್ಣೀರು ಸುರಿಸಿದರು. ಜೀನ್‌ಳ ಜೀವ ಉಳಿಸುವುದು ಸಾಧ್ಯವೇ ಇಲ್ಲ. ಜೀವಚೈತನ್ಯದಾಯಕ ಅಂಗ ಕಿಡ್ನಿ. ಅದಿಲ್ಲದೇ ಬದುಕುವಂತೆಯೇ ಇಲ್ಲ ಎಂಬ ಸತ್ಯವನ್ನು ಜೇಕಬ್ಸ್ ತಿಳಿಸಿದಾಗ ಅವಳ ಗಂಡ ಮತ್ತು ಇತರ ಬಂಧುಗಳು ತಮ್ಮ ಕಿವಿಯನ್ನೇ ನಂಬಲಾರದಾದರು. ಎಲ್ಲರಿಗೂ ಸಿಡಿಲು ಹೊಡೆದಂತಾಗಿತ್ತು. ಜೀನ್‌ಳ ಬಂಧುಗಳಷ್ಟೇ ಏಕೆ, ಅದಕ್ಕಿಂತ ಹೆಚ್ಚು-ದುಃಖತಪ್ತರಾಗಿದ್ದರು ಡಾಕ್ಟರ್ ಜೇಕಬ್ಸ್.

ಮುಂದಿನ ದಿನಗಳಲ್ಲಿ, ಜೀನ್‌ಳ ಗಂಡನ ಇಚ್ಛೆಯಂತೆ, ಡಾಕ್ಟರ್ ಜೇಕಬ್ಸ್ ಅವರು ಜೀನ್‌ಗೆ ಅವಳ ಪರಿಸ್ಥಿತಿಯ ಅರಿವನ್ನು ಮಾಡಿಕೊಡಲೇ ಇಲ್ಲ. ತನ್ನ 'ಗರ್ಭಕೋಶ ಉಳಿದಿದೆ. ಅಲ್ಲಿದ್ದ ಗೆಡ್ಡೆ ತೆಗೆದಾಯಿತು. ಇನ್ನು ತನಗೆ ಮಕ್ಕಳಾಗಲೂ ಯಾವ ಅಡ್ಡಿಯೂ ಇಲ್ಲ' ಎಂಬ ಆಶಾವಾದದ ಸ್ಥಿತಿಯಲ್ಲೇ ಅವಳು ತನ್ನ ಕಡೆಯ ದಿನಗಳನ್ನು ಕಳೆದಳು. ಆಪರೇಷನ್ ಆದ ನಾಲ್ಕು ದಿನ ಅವಳು ಚೆನ್ನಾಗಿಯೇ ಇದ್ದಳು. ಐದನೆಯದಿನ ತಪ್ಪಿದ ಪ್ರಜ್ಞೆ ಪುನಃ ಬರಲೇ ಇಲ್ಲ. ಆಪರೇಷನ್ ಆದ ಹತ್ತನೆಯದಿನ ಜೀನ್ ಆಸ್ಪತ್ರೆಯಲ್ಲೇ ಮೃತಳಾದಳು.

ಜೀನ್ ಮೃತಳಾದ ಎರಡು ವಾರದ ನಂತರ ಆಸ್ಪತ್ರೆಯಲ್ಲಿ ಈ ಬಗ್ಗೆ ಒಂದು ಕಾನ್ಫರೆನ್ಸ್. ಕಾನ್ಫರೆನ್ಸ್ ಹಾಲು ಡಾಕ್ಟರುಗಳಿಂದ, ನರ್ಸುಗಳಿಂದ ಕಿಕ್ಕಿರಿದು ತುಂಬಿತ್ತು. ಡಾಕ್ಟರ್ ಜೇಕಬ್ಸ್ ಮುಂದಿನ ಸಾಲಿನಲ್ಲಿ ನೆಲವನ್ನು ನಿಟ್ಟಿಸಿ ನೋಡುತ್ತ, ದೀರ್ಘವಾಗಿ ಯೋಚಿಸುತ್ತ ಕುಳಿತಿದ್ದರು. ಅವರ ರೆಸಿಡೆಂಟ್ ಡಾಕ್ಟರ್ ಥಾಮಸ್ ಮೊದಲು ಜೀನ್‌ಳ ಕಥೆಯನ್ನು ಸಭೆಗೆ ತಿಳಿಸಿದರು. ಅದಾದಮೇಲೆ ಸಭೆ ಕೇಸಿನ ಬಗ್ಗೆ ದೀರ್ಘವಾದ ಚರ್ಚೆ ನಡೆಸಿತು: ಆಪರೇಷನ್ನಿನ ಅವಶ್ಯಕತೆ ಇತ್ತೆ? ಆಪರೇಷನ್ನಿಗೆ ಮೊದಲು ಇನ್ನು ಯಾವುದಾದರೂ ಟೆಸ್ಟ್ ಅಥವಾ ಎಕ್ಸ್-ರೇ ಮಾಡಬೇಕಾಗಿತ್ತೇ? ಆಪರೇಷನ್ ಮಾಡುತ್ತಿದ್ದಾಗ ಈ ಗೆಡ್ಡೆಯನ್ನು ತೆಗೆಯುವ ಮುಂಚೆ ಅದರ ಒಂದು ಸ್ಯಾಂಪಲ್‌ನ್ನು ಪರೀಕ್ಷೆಗೆ ಕಳಿಸಬೇಕಾಗಿತ್ತೇ? ಎಂಬ ಪ್ರಶ್ನೆಗಳ ಸುತ್ತ ಚರ್ಚೆ ನಡೆದಿತ್ತು.

ಕಡೆಗೆ ಸಭೆಯ ಅಧ್ಯಕ್ಷತೆವಹಿಸಿದ್ದ ಹಿರಿಯ ವೈದ್ಯ ಡಾಕ್ಟರ್ ಬ್ರೇಡಿಯವರು ಮಾತನಾಡುತ್ತ: 'ಯಾವಾಗಲೂ ಹಿಂದಾಲೋಚನೆಯ ದೃಷ್ಟಿ ಬಹಳ ಸೂಕ್ಷ್ಮ ಮತ್ತು ನಿಖರವಾದದ್ದು. ಆಟ ಮುಗಿದಮೇಲೆ ಹೀಗೆ ಮಾಡಿದ್ದು ತಪ್ಪು, ಹಾಗೆ ಮಾಡಬೇಕಾಗಿತ್ತು ಎಂದು ಆಟಗಾರರನ್ನು ಟೀಕಿಸುವುದು ಬಹಳ ಸುಲಭ. ಅಂತೆಯೇ ಶಸ್ತ್ರಚಿಕಿತ್ಸೆ ಸಹ.

ಮಾಡಿದ ಕೆಲಸ ಸರಿಹೋಗಲಿಲ್ಲ ಆದರಿಂದ ಬೇರೆ ತರಹ ಮಾಡಬೇಕಿತ್ತು ಎಂದು ಹೇಳುವುದು ಸುಲಭ. ಆದರೆ ಆ ಆಪರೇಷನ್ನಿನ ಮೊದಲು, ಅದು ನಡೆಯುತ್ತಿದ್ದಾಗ, ಡಾಕ್ಟರ್ ಜೇಕಬ್ಸ್ ಅವರ ಮನಸ್ಸಿನಲ್ಲಿನ ಝಂಝಾಟ ಯಾರಿಗೆ ಗೊತ್ತು? ಅವರ ಮನಸ್ಸನ್ನು ಹೊಕ್ಕು ನೋಡಿದವರಾರು? ಇಷ್ಟೆಲ್ಲ ಚರ್ಚೆಯಾದ ಮೇಲೂ ಸಹ ನನಗೆ ಜೀನ್ ನನ್ನ ಹತ್ತಿರ ಚಿಕಿತ್ಸೆಗೆ ಬಂದಿದ್ದರೆ, ನಾನೂ ಜೇಕಬ್ಸ್ ಮಾಡಿದಂತೆಯೇ ಮಾಡುತ್ತಿದ್ದೆ ಎನಿಸುತ್ತದೆ' ಎಂದರು. ಆಮೇಲೆ ಡಾಕ್ಟರ್ ಜೇಕಬ್ಸ್ ಅವರ ಕಡೆ ತಿರುಗಿ 'ಡಾಕ್ಟರ್ ಜೇಕಬ್ಸ್, ಈ ಸಮ್ಮೇಳನ ಮುಗಿಯುವುದಕ್ಕೆ ಮುಂಚೆ ನೀವು ಹೇಳುವುದೇನಾದರೂ ಇದೆಯೆ ? 'ಎಂದು ಕೇಳಿದರು.

ಡಾಕ್ಟರ್ ಜೇಕಬ್ಸ್ ಸಾವಧಾನವಾಗಿ ಎದ್ದರು. ಕಣ್ಣಲ್ಲಿ ನೀರು ತುಂಬಿತ್ತು. ಗಂಭೀರವಾದ ತಗ್ಗಿದ ಧ್ವನಿಯಲ್ಲಿ ಮಾತನಾಡುತ್ತ 'ಈ ಕೇಸನ್ನು ತುಂಬಾ ಚೆನ್ನಾಗಿ ಚರ್ಚಿಸಿದ್ದೀರಿ. ನಿಮ್ಮೆಲ್ಲರ ಸಹಾನುಭೂತಿಗೆ, ಅಂತಃಕರಣಕ್ಕೆ ನಾನು ಋಣಿ. ಡಾಕ್ಟರ್ ಬ್ರೇಡಿಯವರು ತಾವೂ ಜೀನ್‌ನ್ನು ನನ್ನಂತೆಯೇ ನೋಡಿಕೊಳ್ಳುತ್ತಿದ್ದೆ ಎಂದು ಹೇಳಿದ್ದಾರೆ. ಪ್ರಾಯಶಃ ನನ್ನ ಎದೆಯ ಧಗೆಯನ್ನು ಶಮನ ಮಾಡಲು ಹೇಳಿರುವ ಮಾತು. ಅವರಿಗೆ ನನ್ನ ಧನ್ಯವಾದಗಳು. ಆದರೆ ಜೀನ್ ನನ್ನ ಹತ್ತಿರ ಬರದೆ ಡಾಕ್ಟರ್ ಬ್ರೇಡಿಯವರ ಬಳಿಗೆ ಹೋಗಿದ್ದರೆ ಈ ದಿನ ಬದುಕಿರುತ್ತಿದ್ದಳೇನೋ!'

'ನಾನು ಅವಳ ಚಿಕಿತ್ಸೆಯಲ್ಲಿ ಅನೇಕ ತಪ್ಪುಗಳನ್ನು ಮಾಡಿದ್ದೇನೆ. ಜೀನ್ ನನ್ನ ಆಫೀಸಿಗೆ ಚಿಗರೆಯಂತೆ ಜಿಗಿಯುತ್ತ ಬಂದಳು. ಅವಳನ್ನು ಪರೀಕ್ಷಿಸಿ ಕ್ಯಾನ್ಸರಿರಬಹುದೆಂಬ ಶಂಕೆಯಿಂದ ಬೇಗ ಆಪರೇಷನ್ ಮಾಡಲು ನಿರ್ದರಿಸಿದೆ. ಸಾವಧಾನವಾಗಿ ಇದನ್ನು ಪರಿಶೀಲಿಸಬೇಕಾಗಿತ್ತು. ಕೆಲವು ಟೆಸ್ಟುಗಳನ್ನೂ ಮುಖ್ಯವಾಗಿ ಕಿಡ್ನಿ ಎಕ್ಸ್-ರೇ ಗಳನ್ನೂ ಮಾಡಬೇಕಾಗಿತ್ತು. ಬೆಳವಣಿಗೆಯ ತೊಂದರೆಯಿಂದ ಆಗಾಗ ಕಿಬ್ಬೊಟ್ಟೆಯಲ್ಲಿ ಕಿಡ್ನಿ ಉಳಿಯುತ್ತದೆ ಎನ್ನುವುದು ನನಗೆ ಗೊತ್ತಿಲ್ಲದ ವಿಷಯವೇ ?'

'ಆಪರೇಷನ್ನಿನಲ್ಲಿ ಗರ್ಭಕೋಶದಿಂದ ಬಿಡಿಸಿದಮೇಲಾದರೂ ಇದೇನು ? ಎಂದು ನಾನು ಯೋಚಿಸಬೇಕಾಗಿತ್ತು. ಖಂಡಿತವಾಗಿ ಆ ಗೆಡ್ಡೆಯನ್ನು ತೆಗೆಯುವ ಮುನ್ನ ಅದರ ಸಣ್ಣದೊಂದು ಸ್ಯಾಂಪಲ್‌ನ್ನು ನಾನು ಪರೀಕ್ಷೆಗಾಗಿ ಕಳಿಸಬಹುದಾಗಿತ್ತು'.

ಆಮೇಲೆ ಡಾಕ್ಟರ್ ಜೇಕಬ್ಸ್ ಅರೆನಿಮಿಷ ಸ್ತಬ್ಧರಾಗಿ ನಿಂತರು ಆಮೇಲೆ ಉಕ್ಕಿ ಬರುತ್ತಿದ್ದ ದುಃಖವನ್ನು ತಡೆಹಿಡಿಯುತ್ತ.... 'ನಿಜವಾಗಿ ನಾನು ಮಾಡಿದ ದೊಡ್ಡತಪ್ಪು ಎಂದರೆ, ಜೀನ್ ಇನ್ನೊಂದು ಆಸ್ಪತ್ರೆಯಿಂದ ತಂದು ಕೊಟ್ಟ ಈ ರೆಕಾರ್ಡನ್ನು ಪೂರ್ತಿಯಾಗಿ ಓದದೇ ಇದ್ದುದು. ಅದನ್ನು ಓದಿದ್ದಿದ್ದರೆ....' ಎನ್ನುತ್ತಾ ಜೇಕಬ್ಸ್ ತಮ್ಮ ದುಃಖವನ್ನು ತಡೆಯಲಾರದೆಯೇ ಗದ್ಗದ ಕಂಠರಾಗಿ ಅಲ್ಲೇ ಕುರ್ಚಿಯಮೇಲೆ ಕುಸಿದರು.

ಅಕ್ಕಪಕ್ಕದವರು ಅವರನ್ನು ಸಮಾಧಾನಪಡಿಸತೊಡಗಿದರು. ಡಾಕ್ಟರ್ ಬ್ರೇಡಿಯವರು ಜೇಕಬ್ಸ್ ಕೈಲಿದ್ದ ಮೆಡಿಕಲ್ ರೆಕಾರ್ಡನ್ನು ತೆಗೆದುಕೊಂಡು ಮನಸ್ಸಿನಲ್ಲೇ ಓದಿಕೊಂಡರು. ಓದುತ್ತಿದ್ದಂತೆ ಅವರ ಮುಖ ಗಂಭೀರವಾಯಿತು. ಹನ್ನೆರಡು ವರ್ಷಗಳ ಹಿಂದೆ ಅದರಲ್ಲಿ ಆ ಆಸ್ಪತ್ರೆಯ ಡಾಕ್ಟರು 'ಈ ಹುಡುಗಿಯ ಕಿಬ್ಬೊಟ್ಟೆಯಲ್ಲಿ ಒಂದು ಗಂಟಿದೆ. ಎಕ್ಸ್-ರೇ ಪ್ರಕಾರ ಇದು ಅವಳ ಏಕಮಾತ್ರ ಕಿಡ್ನಿ. ಅದಕ್ಕಾಗಿ ಈ ಗೆಡ್ಡೆಯ ಬಗ್ಗೆ ಏನೂ ಮಾಡದೆ ಇದ್ದೇವೆ' ಎಂದು ಬರೆದಿತ್ತು. 'ಡಾಕ್ಟರ್ ಜೇಕಬ್ಸ್ ಅವರಿಗೆ ಇದನ್ನು ಓದಿದ ನೆನಪಿಲ್ಲ. ಓದಿದ್ದರೆ ಆಪರೇಷನ್ ಅನಾವಶ್ಯಕ ಎಂದು ಗೊತ್ತಾಗುತ್ತಿತ್ತು'.

ಡಾಕ್ಟರ್ ಬ್ರೇಡಿಯುವರು ಈ ವಿಷಯುವನ್ನೂ ಸಭೆಗೆ ಸೂಕ್ಷ್ಮವಾಗಿ ತಿಳಿಸಿ ಸಮ್ಮೇಳನವನ್ನು ಮುಗಿಸಿದರು. ಡಾಕ್ಟರ್ ಜೇಕಬ್ಸ್ ತಲೆ ತಗ್ಗಿಸಿ ಅಪರಾಧಿಯಂತೆ ನಿಧಾನವಾಗಿ ನಡೆಯುತ್ತ ಆ ಹಾಲಿನಾಚೆಗೆ ಬಂದರು.

ಜೀನ್‌ಳ ನಿಧನದಿಂದ ಡಾಕ್ಟರ್ ಜೇಕಬ್ಸ್‌ರವರ ಮನಸ್ಸಿನ ಮೇಲೆ ಆದ ಆಘಾತವನ್ನು ತೂಗಲು ಸಾಧ್ಯವಿಲ್ಲ. ಅವರ ವ್ಯಕ್ತಿತ್ವದಲ್ಲಿ ಮೂಲಭೂತವಾದ ಬದಲಾವಣೆ ಕಂಡುಬಂದಿತು. ಅವರ ಹಸನ್ಮುಖ ಮಾಯವಾಯಿತು. ಚಹರೆಗೆ ಮಂಕುಬಡೆದಿತ್ತು. ಪಾದರಸದಂತೆ ಹಗಲೂ-ರಾತ್ರಿ ಕೆಲಸ ಮಾಡುತ್ತಿದ್ದಾತ ತಾವು ಮಾಡಬೇಕಾದ ಡೆಲಿವರಿಗಳನ್ನೂ ಆಪರೇಶನ್‌ಗಳನ್ನೂ ಬೇರೆ ಡಾಕ್ಟರುಗಳಿಗೆ ವಹಿಸಿಕೊಟ್ಟು ತಾವು ದಿಕ್ಕೆಟ್ಟವರಂತೆ ಓಡಾಡತೊಡಗಿದರು. ಓಡಾಡುವಾಗ ನೆಲದಮೇಲಿಟ್ಟ ದೃಷ್ಟಿಯನ್ನು ಮೇಲಕ್ಕೆತ್ತುತ್ತಿರಲಿಲ್ಲ. ಅತ್ಯಂತ ಖಿನ್ನರಾಗಿ ಯಾವಾಗಲೂ ಅಂತರ್ಮುಖಿಯಾಗಿ ಯಾರೊಡನೆಯೂ ಮಾತನಾಡದೆ ಚಿಂತಾಕ್ರಾಂತರಾಗಿ ಕುಳಿತಿರುತ್ತಿದ್ದರು. ಆಗಾಗ ತಮ್ಮೊಡನೆ ತಾವೇ ಮಾತಾಡಿಕೊಳ್ಳುತ್ತ ಪರಿತಪಿಸುತ್ತಿದ್ದರು. 'ನಿಮ್ಮಲ್ಲಿ ನನಗೆ ಪೂರ್ಣಭರವಸೆ ಇದೆ, ನಿಮ್ಮ ಪರಿಚಯವಾದದ್ದು ನನ್ನ ಭಾಗ್ಯ' ಎಂಬ ಜೀನ್‌ನ ಮಾತುಗಳು ಪದೇಪದೇ ನೆನಪಿಗೆ ಬಂದು ಜೇಕಬ್ಸ್ ಅವರ ಕರುಳನ್ನು ಹಿಂಡಿದವು.

'ನೀನು ಈ ವಿಷಯವನ್ನು ತುಂಬ ಮನಸ್ಸಿಗೆ ಹಚ್ಚಿಕೊಂಡಿದ್ದೀಯೆ. ಸ್ವಲ್ಪ ದಿನ ರೆಸ್ಟ್ ತೆಗೆದುಕೊಳ್ಳುವುದು ಒಳ್ಳೆಯದು. ನಿನ್ನ ಪೇಷಂಟುಗಳ ಜವಾಬ್ದಾರಿಯನ್ನು ಇನ್ನಾರಿಗಾದರೂ ವಹಿಸಿ ಒಂದೆರಡುವಾರ ಎಲ್ಲಾದರೂ ಹೋಗಿ ಬಾ' ಎಂಬ ಡಾಕ್ಟರ್ ಬ್ರೇಡಿಯವರ ಸಲಹೆಗೆ ಓಗೊಟ್ಟು ಡಾಕ್ಟರ್ ಜೇಕಬ್ಸ್ ರಜೆಯಮೇಲೆ ಹೊರಟರು. ಅವರು ಆ ಆಸ್ಪತ್ರೆಯಲ್ಲಿ ಕಾಲಿಟ್ಟದ್ದು ಅದೇ ಕೊನೆ.

ಒಂದುವಾರದ ನಂತರ ಮನೆಗೆಲಸದ ಬಾರ್ಬರ ಡಾಕ್ಟರ್ ಜೇಕಬ್ಸ್ ಅವರ ಮನೆಯನ್ನು ಶುಚಿಗೊಳಿಸುವುದಕ್ಕಾಗಿ ಅವರ ಮನೆಗೆ ಬಂದಳು. ಬೆಳಗ್ಗೆ ಒಂಬತ್ತಾಗಿತ್ತು. ಡಾಕ್ಟರ

ಕಾರು ಇನ್ನೂ ಗರಾಜಿನಲ್ಲೇ ಕುಳಿತಿತ್ತು. ಡಾಕ್ಟರು ರಜದ ಮೇಲಿದ್ದಾರೆಂದು ಅವಳಿಗೆ ಗೊತ್ತು.... ಡಾಕ್ಟರ್ ಮಲಗುವ ಕೋಣೆಯ ಬಳಿ ಬಂದಳು. ಕೋಣೆಯ ಬಾಗಿಲು ಹಾಕಿತ್ತು. 'ಡಾಕ್ಟರ್ ಜೇಕಬ್ಸ್.... ಡಾಕ್ಟರ್ ಜೇಕಬ್ಸ್....' ಎಂದು ಎರಡು ಮೂರು ಬಾರಿ ಕರೆದಳು. ಉತ್ತರವಿಲ್ಲ. ಹಾಗೇ ಬಾಗಿಲನ್ನು ತಳ್ಳಿದಳು. ಬಾಗಿಲು ತೆರೆಯಿತು. ಮಂಚದ ಮೇಲೆ ದಾಕ್ಟರ್ ಜೇಕಬ್ಸ್ ಅವರ ಮೃತದೇಹ. ಅವರ ಪಕ್ಕದಲ್ಲಿ ಹಿಂದಿನ ದಿನ ತಾನೆ ಡಾಕ್ಟರು ಅವರಿಗೆ ನಿದ್ದೆಗಾಗಿ ಕೊಟ್ಟಿದ್ದ ಮೂವತ್ತು ಮಾತ್ರೆಗಳ ಡಬ್ಬಿ ಬಿದ್ದಿತ್ತು. ಡಬ್ಬಿ ಖಾಲಿಯಾಗಿತ್ತು.

•

# ಸಂಬಂಧ

– ವಿಶ್ವನಾಥ್ ಹುಲಿಕಲ್

ಮುಂದಿನ ತನ್ನ ಜೀವನದ ಗತಿಯನ್ನು ನಿರ್ದೇಶಿಸುವಂತಹ ನಿರ್ಧಾರ ಮಾಡಬೇಕಾದ ಹೊಸ್ತಿಲಲ್ಲಿ ಆಶ್ಲೀ ಬಂದು ನಿಂತಿದ್ದಳು. ಹೊಸದಾಗಿ ಬೆಳಕಿಗೆ ಬಂದ ಸತ್ಯದ ಆಧಾರದ ಮೇಲೆ ತಾನು ಮಾಡಬೇಕಾದುದಾದರೂ ಏನು ಎಂದು ಚಿಂತಿಸುತ್ತ ರಾತ್ರಿಯೆಲ್ಲಾ ಮಂಚದಲ್ಲಿ ಹೊರಳಾಡುತ್ತಿದ್ದ ಅವಳಿಗೆ ಮನಸ್ಸು ನಿಚ್ಚಳವಾಗಿದ್ದು ಬೆಳಗಿನ ಜಾವದಲ್ಲಿ! ನಿದ್ರೆಯಿಲ್ಲದೆ ಕಣ್ಣುಗಳು ಕೆಂಪಾಗಿ, ದೇಹ ವಿಶ್ರಾಂತಿ ಇಲ್ಲದೆ ಭಾರವಾಗಿದ್ದರೂ, ಮನಸ್ಸು ಮಾತ್ರ ಹೊಯ್ದಾಟದಿಂದ ಮುಕ್ತಿ ಹೊಂದಿ ಹಗುರವಾಗಿತ್ತು.

ಹಾಗೆ ನೋಡಿದರೆ ಆಶ್ಲೀಯ ಸ್ಥಿತಿ ಹದಿನೈದು ವರ್ಷಗಳ ಹಿಂದಿನ ಅವಳಮ್ಮನ ಸ್ಥಿತಿಗಿಂತ ಹೆಚ್ಚೇನು ಭಿನ್ನವಾಗಿರಲಿಲ್ಲ. ಆಗಿನ್ನೂ ಆಶ್ಲೀಗೆ ಹದಿಮೂರು ವರ್ಷ. ಜೀವನದ ಎಳೆಯ ಬೆಳೆಯುವ ದಿನಗಳಲ್ಲಿ ಪ್ರತಿಯೊಂದನ್ನೂ ಕುತೂಹಲದಿಂದ ನೋಡಿ, ಉತ್ಸಾಹದಿಂದ ದಿನನಿತ್ಯದ ಕಾರ್ಯಗಳಲ್ಲಿ ಭಾಗವಹಿಸುವ ಹದಿಹರೆಯ ಅದು. ಅಮೆರಿಕನ್ ದಂಪತಿಗಳಿಗೆ ಹುಟ್ಟಿದ ಮೂರು ಮಕ್ಕಳಲ್ಲಿ ಎರಡನೆಯವಳಾಗಿದ್ದಳು. ಬಿಳಿಯ ಮೈಬಣ್ಣ, ಹೊಂಗೂದಲು, ಹಸಿರು ಕಣ್ಣುಗಳು ಸಪೂರ ದೇಹ ಮತ್ತು ತನ್ನ ಶಾಲೆಯ ಇತರ ಹೆಣ್ಣುಮಕ್ಕಳು ಅಸೂಯೆಪಡುವಂತಹ ಸೌಂದರ್ಯ. ಆದರೂ, ಮನೆಯಲ್ಲಿ ಮಾತ್ರ ದಿನನಿತ್ಯ ರಂಪಾಟ. ಅವಳ ಅಪ್ಪ ಅಮ್ಮರ ಬದುಕು ಸಾಗರದ ಮೇಲೆ ಶಾಂತವಾಗಿ ತೇಲುತ್ತಿರುವ ಹಡಗಿನಂತಿರದೆ, ಸಮುದ್ರದ ಭೀಕರ ಅಲೆಗಳಿಗೆ ಸಿಕ್ಕಿ ಹಾಕಿಕೊಂಡ ಹಾಯಿ ದೋಣಿಯಂತಿತ್ತು. ಹಾಗೂ, ಹೀಗೂ ಆ ಕರ್ಮಕಾಂಡದಲ್ಲಿ ತನ್ನ ಮೊದಲ ಹದಿನೆಂಟು ವರ್ಷದ ಜೀವನ ಸವೆಸಿ ಮನೆಬಿಟ್ಟು ಹೊರಬಂದಾಗ ಆಶ್ಲೀಗೆ, ಮುಂದಿನ ಸ್ವಾವಲಂಬನೆಯ ಬದುಕು ಒಡ್ಡುವ ಸವಾಲುಗಳ ಮಧ್ಯೆಯೂ ಸ್ವಾತಂತ್ರ್ಯದ ನವಚೇತನ ಮನಸ್ಸಿಗೆ ಆಹ್ಲಾದ ನೀಡಿದುದರಲ್ಲಿ ಆಶ್ಚರ್ಯವಿರಲಿಲ್ಲ. ಹೈಸ್ಕೂಲು ಡಿಪ್ಲೊಮಾ ಪಡೆದವಳಿಗೆ ಕ್ಯಾಲಿಫೋರ್ನಿಯಾದಲ್ಲಿ ಕೆಲಸ ಸಿಗುವುದೇನು ಕಷ್ಟವೇ? ಯಾವುದೋ ರಿಯಲ್ ಎಸ್ಟೇಟ್ ಕಂಪನಿಯಲ್ಲಿ ಆಫೀಸ್

ಅಸಿಸ್ಟೆಂಟ್ ಆಗಿ ಕೆಲಸಕ್ಕೆ ಸೇರಿಕೊಂಡಳು. ಜೀವನ ನಿರ್ವಹಣೆಗೆ ದಾರಿ ದೊರಕಿದ ಮೇಲೆ, ಅರ್ಥ ಸಮಸ್ಯೆ ಪರಿಹಾರವಾದಂತೆಯೇ ಸರಿ !

ತನ್ನನ್ನು ಕಾಡುತ್ತಿದ್ದ ಯೋಚನೆಯಿಂದ ಮುಕ್ತಳಾದಮೇಲೂ, ತನ್ನ ಮನಸ್ಸು ಧುತ್ತೆಂದು ಹದಿಹರೆಯದ ಅವಸ್ಥೆಗೇಕೆ ಹಿಂದಿರುಗಿತೆಂದು ಗಮನಿಸಿ, ಆಶ್ಲೀ ಚಕಿತಳಾದಳು. ಶವರ್ ಮಾಡುತ್ತಿದ್ದಾಗ ದೊರಕಿದ ಬಿಡುವಿನ ಕೆಲವೇ ಕ್ಷಣಗಳಲ್ಲಿ ಮನಸ್ಸು ಭೂತಕಾಲಕ್ಕೆ ಕರೆದೊಯ್ದಿತ್ತು. ಸ್ನಾನದ ನಂತರ ಮೈಗೆಲ್ಲಾ ತೆಳುವಾಗಿ 'ಮಾಯಿಶ್ಚರೈಸಿಂಗ್ ಕ್ರೀಮ್‌ನ್ನು ಲೇಪಿಸಿಕೊಂಡು, ಡಿ ಓಡರೈಸರ್‌ನ್ನು ಮೈಮೇಲೆ ಓಡಿಸಿ, ಬಟ್ಟೆ ಹಾಕಿಕೊಳ್ಳತೊಡಗಿದಳು. ಕನ್ನಡಿಯಲ್ಲಿ ಕಾಣಿಸಿದ ಪ್ರಮಾಣಬದ್ಧವಾದ ಅಂಗಸೌಷ್ಠವ ನೋಡಿಕೊಂಡು, ಫ್ಯಾಮಿಲಿ ರೂಂಗೆ ಮರಳಿದಳು. ಅಂದಿನ ವಾರ್ತಾಪತ್ರಿಕೆ ಸ್ಯಾನ್ ಹೋಸೆ ಮರ್ಕ್ಯುರಿ ನ್ಯೂಸ್‌ಯನ್ನು ತಿರುವಿ ಹಾಕತೊಡಗಿದಳು. ಹಿಂದಿನ ದಿನದ ಘಟನೆ ಮನಃಪಟಲದಲ್ಲಿ ಬಿಚ್ಚಿಕೊಳ್ಳತೊಡಗಿತು.

ಆ ದಿನ ಶುಕ್ರವಾರ. ಮೈಕ್ ಆಫೀಸಿನ ಕೆಲಸದ ಮೇಲೆ ಡಾಲ್ಲಾಸ್‌ಗೆ ಹೊಗುವುದಾಗಿ ಹೇಳಿ ಹಿಂದಿನ ದಿನವೇ ಹೋಗಿದ್ದ. ಕೆಲಸ ಮುಗಿಸಿಕೊಂಡು ಹಿಂದಿರುಗಿದ ಆಶ್ಲೀಗೆ ಮನೆ ಬಿಕೋ ಎನ್ನಿಸತೊಡಗಿತು. ಮೈಕ್ ಇದ್ದಾಗ ಸಾಮ್ಯಾನವಾಗಿ ಅವರು ಮೂವಿಗೋ ಅಥವಾ ಬೋಲಿಂಗ್ ಆಡಲೋ ಹೋಗುತ್ತಿದ್ದರು. ಈಗೇನು ಮಾಡುವುದು? ಶುಕ್ರವಾರ ಸಂಜೆ ಸ್ಯಾನ್ ಫ್ರಾನಿಸ್ಕೋ ನಗರಕೇಂದ್ರ ಉತ್ಸಾಹದಿಂದ ಕಂಗೊಳಿಸುತ್ತಿರುತ್ತದೆ; ತುಂಬಾ ದಿನದಿಂದ ಅಲ್ಲಿಗೆ ಹೋಗಬೇಕೆಂದು ಅಂದುಕೊಳ್ಳುತ್ತಿದ್ದ ಆಶ್ಲೀಗೆ ಸದವಕಾಶ ದೊರಕಿತೆಂದು ಭಾಸವಾಗಿ, ಅಲ್ಲಿಗೆ ಹೊರಟಳು. ಸ್ಯಾನ್ ಹೋಸೆ ಎವರ್‌ಗ್ರೀನ್ ಪ್ರದೇಶದಿಂದ ಸ್ಯಾನ್ ಫ್ರಾನ್ಸಿಸ್ಕೋಗೆ ಕೇವಲ ಒಂದು ಗಂಟೆ ಹಾದಿ. ೨೮೦ ಫ್ರೀವೇ ಹಿಡಿದು ಕಾರಿನಲ್ಲಿ ಪಶ್ಚಿಮಘಟ್ಟಗಳ ನಯನ ಮನೋಹರ ದೃಶ್ಯವನ್ನು ಸವಿಯುತ್ತಾ ಪಯಣ ಬೆಳೆಸಿದಳು. ವ್ಯಾನ್‌ನೆಸ್ ಅವೆನ್ಯೂ ಎಕ್ಸಿಟ್ ತೆಗೆದುಕೊಂಡು, ಮಾರ್ಕೆಟ್ ಸ್ಟ್ರೀಟ್‌ನ ಪಾರ್ಕಿಂಗ್ ಗ್ಯಾರೆಜ್‌ನಲ್ಲಿ ಕಾರು ನಿಲ್ಲಿಸಿ, ನಿಯಾನ್ ಲೈಟ್‌ನಿಂದ ಝಗಝಗಿಸುತ್ತಿದ್ದ ನೈಟ್ ಕ್ಲಬ್‌ಅನ್ನು ಪ್ರವೇಶಿಸಿದಳು.

ಅದೊಂದು ಪ್ರಖ್ಯಾತ ನೈಟ್‌ಕ್ಲಬ್; ಅದರಷ್ಟು ದೊಡ್ಡದು ಪ್ರಾಯಶಃ ಆ ನಗರದಲ್ಲಿ ಬೇರೆಲ್ಲೂ ಇರಲಿಲ್ಲ. ಶುಕ್ರವಾರ ರಾತ್ರಿಯೆಂದರೆ ಕೇಳಬೇಕೆ? ತರುಣ – ತರುಣಿಯರಿಂದ ತುಂಬಿ ತುಳುಕುತ್ತಿತ್ತು. ಕಿವಿ ಗಡಚಿಕ್ಕುವ ಸಂಗೀತ. ಬಣ್ಣ ಬಣ್ಣದ ಲೈಟುಗಳ ಬೆಳಕಿನ ನೃತ್ಯೋಲ್ಲಾಸ ನೋಡಲು ಕಣ್ಣುಗಳೆರಡು ಸಾಲದು. ಮಂದ ಬೆಳಕಿನಲ್ಲಿ ಸಂಗೀತದ ಲಯಕ್ಕೆ ನರ್ತಿಸುತ್ತಿದ್ದ ಜೋಡಿಗಳು ನೂರಾರು. ಹೇಗೋ ಜಾಗ ಮಾಡಿಕೊಂಡು ಒಳಸೇರಿ, ಮಾದಕ ಪಾನೀಯಗಳನ್ನು ಮಾರುತ್ತಿದ್ದ ಮೂಲೆಗೆ ಹೋಗಿ, ಹೈಸ್ಟೂಲಿನ ಮೇಲೆ ಕುಳಿತು ಲಾರ್ಜ್ ವ್ಹಿಸ್ಕಿ ಆರ್ಡರ್ ಮಾಡಿದಳು. ಅಲೆಅಲೆಯಾಗಿ ಬರುತ್ತಿದ್ದ ಸಂಗೀತಕ್ಕೆ ತನ್ನ

ಕೊರಳನ್ನು ಕುಣಿಸುತ್ತಾ ಆಶ್ಲೀ ಎರಡು ನಿಮಿಷ ಕಾಯುವುದರೊಳಗೆ ಡ್ರಿಂಕ್ಸ್ ಅವಳ ಕೈ ಸೇರಿತು. ನಿಧಾನವಾಗಿ ಹೀರುತ್ತಾ ಸಂಭ್ರಮ, ಸಂತೋಷದಿಂದ ನರ್ತಿಸುತ್ತಿದ್ದ ತರುಣ ಪೀಳಿಗೆಯನ್ನು ಸಿಂಹಾವಲೋಕನ ಮಾಡತೊಡಗಿದಳು.

ದೂರದಲ್ಲಿ ನರ್ತಿಸುತ್ತಿದ್ದ ಜೋಡಿಯನ್ನು ನೋಡಿದಳು. ಮಂದ ಬೆಳಕಿನಲ್ಲಿ ಅವರ ಮುಖ ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಕಣ್ಣನ್ನು ಚುರುಕುಗೊಳಿಸಿಕೊಂಡು ನೋಡಿದಾಗ, ಕಣ್ಣಿಂದ ನೋಡಿದ ಬಿಂಬ ಮನಃಪಟಲದ ಮೇಲೆ ಮೂಡಿ, ಹೃದಯದಲ್ಲಿ ಅರ್ಥವಾಗುವ ಹೊತ್ತಿಗೆ ಕೆಲವೇ ಕ್ಷಣಗಳು ಬೇಕಾದವು. ಸಂಭ್ರಮ ಮತ್ತು ಉಲ್ಲಾಸದಿಂದ ಕಂಗೊಳಿಸುತ್ತಿದ್ದ ಮುಖ ಬಾಡಿತು. ಕಣ್ಣುಗಳು ನಿಸ್ತೇಜವಾದವು. ಮನಸ್ಸು ಎಂದಿನ ನವೋಲ್ಲಾಸವನ್ನು ಕಳೆದುಕೊಂಡಿತು. ಒಂದು ಕ್ಷಣದಲ್ಲಿ ತನ್ನ ಜೀವನ ಚೈತನ್ಯವೆಲ್ಲಾ ಉಡುಗಿ ಹೋದಂತಾಯಿತು. ಇಷ್ಟೆಲ್ಲಾ ಆಘಾತಕ್ಕೆ ಕಾರಣವಾದ, ಅವಳು ನೋಡಿದ್ದಾದರೂ ಏನು? ತನ್ನಿನಿಯ ಮೈಕ್ ಇನ್ನೊಬ್ಬ ಮೆಕ್ಸಿಕನ್ನಳಂತೆ ಕಾಣುತ್ತಿದ್ದ ತರುಣಿಯೊಬ್ಬಳ ತೋಳ್ತೆಕ್ಕೆಯಲ್ಲಿ!

ಉಡುಗಿದ ಚೈತನ್ಯ ಮತ್ತೆ ಬರಲು ಕೆಲವೇ ನಿಮಿಷಗಳು ಬೇಕಾದವು. ಅದು ವಾಪಸ್ ಬಂದಾಗ ಶಾಂತರೂಪದಲ್ಲಿರದೆ, ಕೋಪೋದ್ರಿಕ್ತವಾಗಿತ್ತು. ಬಿರುಗಾಳಿಯಂತೆ ಮೈಕ್ ನರ್ತಿಸುತ್ತಿದ್ದ ಜಾಗಕ್ಕೆ ಜನರನ್ನು ದೂಡಿಕೊಂಡೇ ಹೋದಳು. ಆ ವೇಳೆಗೆ ಅವಳು ಸಂಪೂರ್ಣ ಆವೇಶಕ್ಕೆ ಒಳಗಾಗಿದ್ದಳು. ಅವನ ಬಳಿ ತಲುಪಿದವಳೇ, ಅವನ ಕೆನ್ನೆಗೆ ಜೋರಾಗಿ ಬಾರಿಸಿದಳು. ಮೈಕನನ್ನುದ್ದೇಶಿಸಿ ಸ್ಫೋಟಿಸಿದಳು 'ನೀನು ಇಂತಹ ನೀಚ ಕೆಲಸಕ್ಕೆ ಕೈಹಾಕುತ್ತೀಯೆಂದು ನಾನಂದುಕೊಂಡಿರಲಿಲ್ಲ. ಈ 'ಬಿಚ್' ಜೊತೆ ಸೇರಲು, ನನ್ನಲ್ಲಿ ನೀನು ಯಾವ ಕೊರತೆಯನ್ನು ಕಂಡೆ? ಎಂಟು ವರ್ಷ ನಿನ್ನೊಡನೆ ಏಕ ಮನಸ್ಸಿನಿಂದ ಜೀವಿಸಿದ್ದಕ್ಕೆ ಇದೇ ಏನು ನೀನು ಕೊಟ್ಟ ಬಳುವಳಿ? ನಿನ್ನ ಮುಖ ನೋಡುವುದಕ್ಕೂ ನನಗೆ ಅಸಹ್ಯವಾಗುತ್ತಿದೆ. ಮತ್ತೆಂದೂ ನನ್ನ ಮನೆಗೆ ಬರಬೇಡ !' ಎಂದು ಹೇಳಿ ಬಿರುಗಾಳಿಯಂತೆ ಹೊರಟು ಹೋದಳು. ಮೈಕ್, 'ನೀನು ಅಂದುಕೊಂಡಂತೆ ಏನೂ ನಡೆದಿಲ್ಲ. ನಾನು ನಿನಗೆ ಎಲ್ಲವನ್ನು ವಿವರಿಸಿ ಹೇಳುತ್ತೇನೆ' ಎಂದು ಹೇಳುತ್ತಾ ಅವಳನ್ನೇ ಅನುಸರಿಸಿ ಹಿಂದೆ ಸಾಗಿದ. ಅವನ ಮಾತುಗಳಾವುದನ್ನು ಕಿವಿ ಮೇಲೆ ಹಾಕಿಕೊಳ್ಳದೆ, ಆಶ್ಲೀ ನೈಟ್‌ಕ್ಲಬ್‌ನಿಂದ ಹೊರನಡೆದಳು. ಮನ ಆಗಲೇ ಮುರಿದು ಹೋಗಿತ್ತು!

೨

ಮೈಕ್ ದಿಙ್ಮೂಢನಾದ. ಆಶ್ಲೀ ಕೈಯಲ್ಲಿ 'ರೆಡ್ ಹ್ಯಾಂಡೆಡ್ ಆಗಿ ಸಿಕ್ಕು ಹಾಕಿಕೊಂಡಿದ್ದು ಅವನ ಚಾತುರ್ಯಕ್ಕೆ ಚೆನ್ನಾಗಿಯೇ ಪೆಟ್ಟು ಬಿದ್ದಂತಿತ್ತು. ತಾನು ಎಮಿಲಿಯ ಜೊತೆ ನೈಟ್‌ಕ್ಲಬ್ಬಿನಲ್ಲಿ ನರ್ತಿಸುದ್ದು ತಪ್ಪೇ? ತಾನೇನು ಜೀವನ ಪರ್ಯಂತ ಆಶ್ಲೀಯ ಜೊತೆ ಇರುತೇನೆಂದು ಮಾತು ಕೊಟ್ಟಿದ್ದೇನೆಯೆ? ಈ ಹೆಂಗಸರದ್ದು ಇದೇ ಹಣೆಬರಹ!

ಒಟ್ಟಿಗೆ ಕಾಲಕಳೆದಂತೆ ತಮ್ಮನ್ನು ಆಳಲು ಪ್ರಾರಂಭಿಸುತ್ತಾರೆ. ಕದ್ದು ಸಿಕ್ಕಿಹಾಕಿಕೊಂಡಾಗ ಆಗುವ ಅವಮಾನಕ್ಕಿಂತ, ಈ ಘಟನೆ ಅವನ ಮುಂದಿನ ಜೀವನದ ಸೌಕರ್ಯಕ್ಕೆ ಪೆಟ್ಟು ಕೊಟ್ಟಿರುವುದು ಅವನನ್ನು ಚಿಂತೆಗೀಡುಮಾಡಿತ್ತು.

ಬಂದದಾರಿಗೆ ಸುಂಕವಿಲ್ಲದಂತೆ ನೈಟ್‌ಕ್ಲಬ್ಬಿಗೆ ವಾಪಸ್ ಮರಳಿದ. ಅವನು ನರ್ತಿಸುತ್ತಿದ್ದ ಜಾಗಕ್ಕೆ ಹಿಂದಿರುಗಿದರೆ, ಅಲ್ಲಿ ಎಮಿಲಿ ಕಾಣಲಿಲ್ಲ. ಎಲ್ಲೆಲ್ಲಿ ಹುಡುಕಿದರೂ ಅವಳ ಸುಳಿವೇ ಇಲ್ಲ. ಆರು ತಿಂಗಳಿಂದ ಮಧುರ ಕ್ಷಣಗಳನ್ನು ಕಳೆದ ಈ ಹೆಣ್ಣೂ ತನ್ನ ಕೈತಪ್ಪಿ ಹೋಯಿತೆ? ಕೊಂಡ ಹಣ್ಣಿಗಿಂತ ಕದ್ದು ತಿಂದ ಹಣ್ಣೇ ಹೆಚ್ಚು ರುಚಿ ಎಂದು ಯಾರೋ ಹೇಳಿದ್ದು ಸುಳ್ಳಲ್ಲ. ಆಶ್ಲೀ ಅವತ್ತೇ ಬರಬೇಕಾಗಿತ್ತೆ? ಇನ್ನಷ್ಟು ದಿನ ತಳ್ಳಿದ್ದರೆ, ಎಮಿಲಿಯ ಜೊತೆ ಸಂಬಂಧ ಸಧೃಡವಾಗಿರುತ್ತಿತ್ತು. ಆಗ ಆಶ್ಲೀ ಕೈಬಿಟ್ಟುಹೋಗಿದ್ದರೆ, ಎಮಿಲಿಯಾದರೂ ಇರುತ್ತಿದ್ದಳೇನೋ! ಇಬ್ಬರೂ ಕೈತಪ್ಪಿ ಹೋಗಿದ್ದು ಅತೀವ ಬೇಸರಕ್ಕೆ ಕಾರಣವಾಗಿತ್ತು. ನಿರುಪಾಯನಾಗಿ ಕಾರನ್ನು ಡ್ರೈವ್ ಮಾಡಿಕೊಂಡು ಹೈವೇ ೧೦೧ ಮೇಲೆ ಸಾಗುತ್ತಿದ್ದ. ಆಶ್ಲೀಯ ಕೈಯಲ್ಲಿ ಸಿಕ್ಕಿಹಾಕಿಕೊಂಡಿದ್ದ ಅವಮಾನಕ್ಕಿಂತ ಹೆಚ್ಚಾಗಿ, ಆ ಇಬ್ಬರು ಹೆಣ್ಣುಗಳನ್ನು ಪಟಾಯಿಸಲು ತಾನು ಪಟ್ಟ ಶ್ರಮ, ಕಾಲ ಮತ್ತು ಹಣವೆಲ್ಲ ವ್ಯರ್ಥವಾಯಿತಲ್ಲಾ ಎಂಬ ಹಾತಾಶೆ ಅವನನ್ನು ಆವರಿಸಿತು. ಈಗ ತನ್ನ ಮನೆಗೂ ಹೋಗುವ ಹಾಗಿಲ್ಲ. ಸರಿ, ರೆಡ್‌ವುಡ್ ಸಿಟಿಯಲ್ಲಿರುವ ಮೊಟೇಲ್ ಆರರಲ್ಲಿ ಚೆಕಿನ್ ಮಾಡಿ ರೂಂನ್ನು ಸೇರಿಕೊಂಡ.

ಮಾರನೆಯ ದಿನ ಬೆಳಿಗ್ಗೆ ಎದ್ದ ಮೇಲೆ ಸಣ್ಣಗೆ ತಲೆ ನೋಯುತ್ತಿತ್ತು. ಮುಖ ತೊಳೆದುಕೊಂಡು ರೂಮಿಗೆ ಮರಳಿದ. ಅನ್ಯಮನಸ್ಕನಾಗಿ ಟೀವಿಯ ಚಾನೆಲ್‌ಗಳನ್ನು ಒಂದರ ನಂತರ ಇನ್ನೊಂದನ್ನು ಬದಲಾಯಿಸತೊಡಗಿದ. ಕಣ್ಣುಗಳು ಯಾಂತ್ರಿಕವಾಗಿ ಟೀವಿಯನ್ನು ನೋಡುತ್ತಿದ್ದರೂ ಮನಸ್ಸು ನಾಗಾಲೋಟದಿಂದ ತನ್ನ ಬಾಲ್ಯಕ್ಕೆ ನೆಗೆದಿತ್ತು.

ಮೈಕ್ ಹುಟ್ಟಿದ್ದು ಕ್ಯಾಲಿಫೋರ್ನಿಯಾದ ಸ್ಯಾಲಿನಾಸ್‌ನಲ್ಲಿ. ಅವನ ತಂದೆ ತಾಯಿಗೆ ಹುಟ್ಟಿದ ೨ ಮಕ್ಕಳಲ್ಲಿ ಇವನೇ ಮೊದಲನೆಯವನು. ಮಧ್ಯಮ ವರ್ಗದ ಕುಟುಂಬ ಅವರದು. ತಾಯಿ ಗೃಹಕೃತ್ಯದ ನಿರ್ವಹಣೆ ಹೊತ್ತಿದ್ದರೆ, ತಂದೆ ಸಂಸಾರ ನಿರ್ವಹಣೆಗೆ ಅಗತ್ಯವಾದ ಇಂಧನದ ಪೂರೈಕೆಯ ಜವಾಬುದಾರಿ ಹೊತ್ತಿದ್ದ. ತಾಯಿಯಾದರೋ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದಳು. ಆ ಮನೆಯಲ್ಲಿ ಎಲ್ಲವೂ ಅವಳು ಹೇಳಿದಂತೆಯೇ ಆಗಬೇಕು. ತಂದೆ ಶಾಂತಮೂರ್ತಿ, ಹಲ್ಲು ಮುಡಿ ಕಚ್ಚಿಕೊಂಡು ಹೇಗೋ ಸಂಸಾರ ನಡೆಸಿಕೊಂಡು ಹೋಗುತ್ತಿದ್ದ. ತಾಯಿ ಮಾತ್ರ ಮಕ್ಕಳನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಅದೇನೇ ಭಿನ್ನಾಭಿಪ್ರಾಯಗಳಿದ್ದರೂ, ಅದು ಗಂಡ ಹೆಂಡಿರ ನಡುವೆ. ಮೈಕ್ ಮದುವೆಯ ಬಗ್ಗೆ ನಿರ್ದುಷ್ಟ ಅಭಿಪ್ರಾಯಗಳನ್ನು ರೂಪಿಸಿಕೊಳ್ಳುವುದರಲ್ಲಿ ಅವನ ಮನೆಯ ವಾತಾವರಣದ ಪ್ರಭಾವವನ್ನು ತಳ್ಳಿಹಾಕುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ.

ಈಗ ಬಂದೊದಗಿದ ಸಮಸ್ಯೆಯನ್ನು ಹೇಗೆ ಬಗೆಹರಿಸಬೇಕೆಂದು ಮೈಕ್ ಚಿಂತಿಸಲಾರಂಭಿಸಿದ. ಸಂಘರ್ಷ ಉತ್ಪನ್ನವಾದಾಗ, ಅದನ್ನು ಮುಖಾ ಮುಖಿ ಎದುರಿಸಿ ಪರಸ್ಪರ ಸಮಾಲೋಚನೆ ಮಾಡಿ ಪರಿಹರಿಸಿಕೊಳ್ಳುವುದೇ ರಾಜಮಾರ್ಗ ಎಂಬ ಅಚಲ ನಂಬಿಕೆ ಅವನದಾಗಿತ್ತು. ಮನೆಗೆ ಕಾಲ್ ಮಾಡಿ, ಆಶ್ಲೀನ ಭೇಟಿ ಮಾಡಿ ಮಾತುಕತೆಗೆ ಸಮಯ ನಿಗದಿಪಡಿಸಿಕೊಳ್ಳಲು ಕಾತುರನಾದ. ಐದು ಸಲ ಫೋನ್ ನಿನಾದಿಸಿದ ಮೇಲೆ ಆನ್ಸರಿಂಗ್ ಮೆಶೀನ್‌ಗೆ ಹೋಯಿತು. ಫೋನ್ ಮಾಡಿದಾಗ ಮನೆಯಲ್ಲಿದ್ದರೂ ಎತ್ತಿಕೊಳ್ಳದವಳು, ಮೆಸೇಜ್ ಬಿಟ್ಟರೆ ಕಾಲ್ ಮಾಡುತ್ತಾಳೆ ಎಂದುಕೊಂಡು, ಆಶ್ಲೀಗೆ ಸಂದೇಶ ಬಿಡದೆ ಹಾಗೇ ಫೋನನ್ನು ಇಟ್ಟ.

೩

ಫೋನ್ ರಿಂಗಾಗುತ್ತಿದೆಯೆಲ್ಲಾ ಎಂದು ಫೋನ್ ಕಡೆಗೆ ಆಶ್ಲೀ ನೋಡಿದಳು. ಕಾಲರ್ ಐಡಿ ಸೌಕರ್ಯ ಇದ್ದುದರಿಂದ, ಮೋಟೇಲ್ ೬ ಎಂದು ತೋರಿಸುತ್ತಿತ್ತು. ಬೆಳಗಿನ ಸಮಯದಲ್ಲಿ ಆ ಹೊಟೇಲ್‌ನಿಂದ ಫೋನ್ ಮಾಡುವವರು ಇನ್ಯಾರು ಎಂದು ತರ್ಕಿಸಿ, ಮೈಕ್‌ನದೇ ಇರಬೇಕೆಂದು ತೀರ್ಮಾನಿಸಿದಳು. ಆಗ ತಾನೇ ಶಾಂತಸ್ಥಿತಿಗೆ ಹಿಂದಿರುಗಿದ್ದ ಮನಸ್ಸನ್ನು ಇಷ್ಟು ಬೇಗನೆ ಕದಡಲು ಅವಳಿಗೆ ಮನಸ್ಸು ಬರಲಿಲ್ಲ. ಫೋನನ್ನು ಉತ್ತರಿಸುವ ಗೋಜಿಗೆ ಹೋಗಲಿಲ್ಲ.

ತನ್ನ ಈಗಿನ ಪರಿಸ್ಥಿತಿ ಮತ್ತೊಮ್ಮೆ ಅವಳನ್ನು ಬಾಲ್ಯಕ್ಕೆ ಕರೆದೊಯ್ದಿತು. ಆಗ ಆಶ್ಲೀಗೆ ಹದಿಮೂರು ವರ್ಷ. ಆಗತಾನೇ ಅವಳಪ್ಪ ಅವರಮ್ಮನಿಗೆ ವಿವಾಹ ವಿಚ್ಛೇದನ ಕೊಟ್ಟಿದ್ದ. ಮೂರು ಮಕ್ಕಳನ್ನು ಹಡೆದು ಸಂಸಾರದಲ್ಲಿ ಬಳಲಿದ ತನ್ನ ತಾಯಿ ಸೌಂದರ್ಯವನ್ನಷ್ಟೇ ಅಲ್ಲದೆ ಕಾಂತಿ ಮತ್ತು ಉತ್ಸಾಹವನ್ನು ಕಳೆದುಕೊಂಡು ನೀರಸವಾಗಿದ್ದಾಳೆ ಎಂದು ತೀರ್ಪುಕೊಟ್ಟು ಮನೆಯಿಂದ ಹೊರ ನಡೆದ ಅವಳಪ್ಪನನ್ನು ಆಶ್ಲೀ ಪುನಃ ನೋಡಿಯೇ ಇರಲಿಲ್ಲ. ಬಾಲ್ಯದ ವಯಸ್ಸಿನಲ್ಲೇ ತಂದೆಯ ಪ್ರೀತಿಯಿಂದ ವಂಚಿತಳಾಗಿ ಸಂಸಾರದ ಕಷ್ಟಕಾರ್ಪಣ್ಯಗಳಿಗೆ ಒಳಗಾಗಬೇಕಾದ ಪರಿಸ್ಥಿತಿ ಅವಳದಾಗಿತ್ತು. ಅದುವರೆಗೂ ಮನೆಯ ಹೊರಗಡೆ ದುಡಿಯದಿದ್ದ ಅವಳ ತಾಯಿ ಯಾವುದೋ ರೆಸ್ಟೊರಾಂಟಿನಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದಳು. ಮನೆಯಲ್ಲಿ ದೊಡ್ಡವಳಾದ ಆಶ್ಲೀಯೇ ತನ್ನ ತಂಗಿ ತಮ್ಮಂದಿರಿಗೆ ತಿನ್ನಲು ಕೊಟ್ಟು ಶಾಲೆಗೆ ಹೋಗಬೇಕಾದ ಪರಿಸ್ಥಿತಿ ಉಂಟಾಗಿತ್ತು. ಚಿಕ್ಕ ವಯಸ್ಸಿನಲ್ಲೇ ಸಂಸಾರ ನಿರ್ವಹಣೆಯ ಭಾರ ಅವಳ ಚಿಕ್ಕ ಹೆಗಲ ಮೇಲೆ ಬಿದ್ದುದು ವಿಧಿಯ ವಿಪರ್ಯಾಸವೇ ಸರಿ !

ತಾನು ಮನಸ್ಸಿನ ಭೂತದ ವಶವಾಗುತ್ತಿರುವೆನೆಲ್ಲಾ ಎಂದೆನಿಸಿ ಆಶ್ಲೀಗೆ ಭಯವಾಯಿತು. ಈ ಮನೆಯಲ್ಲಿ ಸುಮ್ಮನೆ ಕುಳಿತಿದ್ದರೆ ತಾನೆ, ಇಲ್ಲ ಸಲ್ಲದ ಭಾವನೆಗಳು ಬಂದು ತನ್ನನ್ನು

ಕಾಡುವುದು? ನೀಟಾಗಿ ಸಿಂಗರಿಸಿಕೊಂಡು ಮನೆಯಿಂದ ಹೊರಗೆ ಬಂದು ಕಾರಿನಲ್ಲಿ ಡ್ರೈವ್ ಮಾಡುತ್ತಾ ಸಾಗಿದಳು, ಎಲ್ಲಿಗೆ ಹೋಗಬೇಕೆನ್ನುವುದು ಮಾತ್ರ ಸ್ಪಷ್ಟವಾಗಿರಲಿಲ್ಲ! ಹೈವೇ ೧೦೧ ಮೇಲೆ ಸಾಗುತ್ತಿದ್ದಾಗ, ದೂರದಲ್ಲಿ AMC ಮರ್ಕಾಡೋ ಚಿತ್ರಮಂದಿರದ ಫಲಕಗಳ ಮೇಲೆ ಮಿನುಗುತ್ತಿದ್ದ ನಕ್ಷತ್ರಗಳ ಆಕೃತಿಗಳು ತನ್ನನ್ನು ಸ್ವಾಗತಿಸುತ್ತಿರುವಂತೆ ಭಾಸವಾಯಿತು. ಕಳೆದ ತಿಂಗಳಷ್ಟೇ ೧೩೦ ಮಿಲಿಯನ್ ಡಾಲರ್‌ಗಳಿಗಿಂತಲೂ ಅಧಿಕ ಖರ್ಚುಮಾಡಿ ಬಿಡುಗಡೆಯಾದ 'Star Wars: Revenge of the Sith' ಸಿನಿಮಾವನ್ನು ನೋಡೋಣವೆಂದು ಅಲ್ಲಿಗೆ ಹೋದಳು.

ಮೂವಿಯನ್ನು ಅದ್ಧೂರಿಯಾಗಿ ಚಿತ್ರೀಕರಿಸಲಾಗಿತ್ತು. ಮನಸ್ಸು ಎಂದಿನ ಉಲ್ಲಾಸಕ್ಕೆ ಮರಳಿತ್ತು. ಅದೇ ಉತ್ಸಾಹದಲ್ಲಿ ಮಿಲ್ಪಿಟಾಸ್‌ನ ಗ್ರೇಟ್ ಮಾಲ್‌ಗೆ ಹೋಗಿ, ಆಶ್ಲೀ ಶಾಪಿಂಗ್ ಮಾಡಿದಳು. ಅಷ್ಟು ಹೊತ್ತಿಗಾಗಲೇ ಹೊಟ್ಟೆ ತಾಳ ಹಾಕುತ್ತಿತ್ತು. ಫ್ಲಾಂಟಾನಾ ಇಟಾಲಿಯನ್ ರೆಸ್ಟೋರಾಂಟಿನಲ್ಲಿ ಊಟ ಮಾಡಿಕೊಂಡು ಮನೆಗೆ ಮರಳಿದಾಗ ರಾತ್ರಿ ಹತ್ತು ಗಂಟೆ. ಶವರ್ ತೆಗೆದುಕೊಂಡು ಹಾಸಿಗೆಯ ಮೇಲೆ ಉರುಳಿಕೊಂಡಳು.

ದೇಹ ವಿಶ್ರಾಂತಿಯನ್ನು ಬೇಡುತ್ತಿದ್ದರೂ ಮನಸ್ಸು ಚಟುವಟಿಕೆಯಿಂದ ಭೂತ ಭವಿಷ್ಯತ್, ವರ್ತಮಾನಗಳಲ್ಲೆಲ್ಲಾ ವ್ಯಾಪಿಸಿಕೊಂಡು ಹುಚ್ಚು ಕುದುರೆಯಂತೆ ಎಲ್ಲೆಲ್ಲೋ ಓಡುತ್ತಿತ್ತು. ಹೀಗೆ ಓಡುತ್ತಿದ್ದ ಮನಸ್ಸು ಎಂಟು ವರ್ಷಗಳ ಭೂತಕಾಲದಲ್ಲಿ ಸ್ಥಾಯಿಯಾಯಿತು.

ಆಗ ಆಶ್ಲೀಗೆ ೨೦ ವರ್ಷದ ನವ ಯೌವನ. ಒಂದು ದಿನ ಆಕೆ ಸನ್ನಿವೇಲ್‌ನಲ್ಲಿರುವ ಸಿಂಗಲ್ಸ್ ಬಾರ್‌ಗೆ ಶುಕ್ರವಾರ ರಾತ್ರಿ ಹೋಗಿದ್ದಳು. ಆ ಬಾರ್‌ಗೆ ಅವಳು ಭೇಟಿ ನೀಡಿದ್ದು ಅದೇ ಮೊದಲು. ಆ ಬಾರ್‌ನ ಮೂಲೆಗೆ ಹೋಗಿ ಬಂದು ವೋಡ್ಕಾವನ್ನು ಕೊಂಡು ನಿಧಾನವಾಗಿ ಹೀರತೊಡಗಿದಳು. ಕಿಕ್ಕಿರಿದ ಬಾರ್‌ನಲ್ಲಿರುವ ಪುರುಷ ಕಣ್ಣುಗಳು ಸುಂದರಿಯರನ್ನೇ ಹುಡುಕುತ್ತಿರುವಷ್ಟೆ. ಸರಿ, ಆಶ್ಲೀ ಅಲ್ಲಿ ಕುಳಿತ ಐದು ನಿಮಿಷಗಳೊಳಗೆ ಸ್ಫುರದ್ರೂಪಿ ತರುಣನೊಬ್ಬ ಅವಳ ಬಳಿ ಬಂದು, 'ನಾನು ಇಲ್ಲಿ ಕುಳಿತರೆ ನಿಮ್ಮ ಅಭ್ಯಂತರವಿಲ್ಲವಷ್ಟೆ?' ಎಂದು ಕೇಳಿ, ಅವಳೊಪ್ಪಿಗೆ ಪಡೆದು, ಅವಳ ಬಳಿ ಕುಳಿತ. 'ನಾನು ಮೈಕ್, ನಿಮ್ಮ ಹೆಸರನ್ನು ಕೇಳಬಹುದೇ?' ಎಂದು ಕೇಳಿದ. 'ನಾನು ಆಶ್ಲೀ, ನಿಮ್ಮ ಪರಿಚಯವಾದದ್ದು ಸಂತೋಷ' ಎಂದು ಆಶ್ಲೀ ಮಂದಸ್ಮಿತಳಾಗಿ ಹೇಳಿದಳು. 'ನಾನಂತೂ ಈ ವಾರಾಂತ್ಯವನ್ನೇ ಎದುರು ನೋಡುತ್ತಿದ್ದೆ. ಆಫೀಸಿನಲ್ಲೋ ತುಂಬಾ ಕೆಲಸ. ಹೀಗಾಗಿ ಕೆಲಸ ಮುಗಿಸಿಕೊಂಡು, ಇಲ್ಲಿಗೆ ಓಡೋಡಿ ಬಂದ ಮೇಲೆ, ನಿಮ್ಮ ಪರಿಚಯವಾದದ್ದು ನನಗೆ ನಿಜಕ್ಕೂ ಸಂತೊಷವಾಗಿದೆ' ಎಂದು ಹೇಳಿದ. ಹೀಗೆ ಆರಂಭವಾದ ಕುಶಲೋಪರಿ ಸಂಭಾಷಣೆ, ಎರಡು – ಮೂರು ಗಂಟೆಗಳೊಳಗೆ

ಅವರೀರ್ವರನ್ನು ಸಾಕಷ್ಟು ಹತ್ತಿರಕ್ಕೆ ತಂದಿತ್ತು. ಮೈಕ್‌ನ ಸಂಭಾಷಣಾ ಚಾತುರ್ಯ, ಆವಳ ಮೇಲೆ ಅವನು ತೋರಿಸುತ್ತಿದ್ದ ಕಾಳಜಿಯಿಂದಾಗಿ ಆಶ್ಲೀಗೆ ಅವನಾಗಲೇ ಪ್ರಿಯನಾಗತೊಡಗಿದ್ದ. ಆಶ್ಲೀಯ ಮಾದಕ ಸೌಂದರ್ಯ, ನಿಸ್ಸಂಕೋಚ ನಗು ಮತ್ತು ಸ್ನೇಹಪರತೆ – ಮೈಕ್‌ನ ಮನಸೆಳೆದಿದ್ದವು. ಬಾರ್‌ನಲ್ಲಿ ಕುಡಿದ ಮಾದಕ ಪಾನೀಯ ಮತ್ತು ನಂತರ ಜೊತೆಜೊತೆಯಾಗಿ ಸಂಗೀತದ ಅಲೆಗಳಿಗೆ ತಕ್ಕಂತೆ ಕುಣಿದ ನರ್ತನ ಅವರಿಬ್ಬರನ್ನು ಸಾಕಷ್ಟು ಹತ್ತಿರಕ್ಕೆ ತಂದು ನಿಲ್ಲಿಸಿದ್ದವು. ಮಧ್ಯರಾತ್ರಿಯಲ್ಲಿ ಆಶ್ಲೀಯನ್ನು ಆವಳ ಮನೆಗೆ ಮೈಕ್ ತಂದುಬಿಟ್ಟಿದ್ದ. ಆಗ ಬಾಗಿಲ ಹೊಸ್ತಿಲ ಬಳಿ ಮೈಕ್ ನೀಡಿದ 'ಗುಡ್ ಬೈ ಕಿಸ್' ಕೊಂಚ ದೀರ್ಘ ಮತ್ತು ಆಳವಾಯಿತೇನೋ! ಯೌವನದ ದೈಹಿಕ ಕಾಮನೆಗಳ ಆರ್ಭಟವನ್ನು ತಡೆದುಕೊಳ್ಳುವುದು ಇಬ್ಬರಿಗೂ ಶಕ್ಯವಿರಲಿಲ್ಲ. ಪ್ರಥಮ ಪರಿಚಯವೇ ಸಮಾಗಮದಲ್ಲಿ ಪರ್ಯಾವಸಾನವಾಗಿದ್ದು ಅಮೆರಿಕಾದ ನೆಲದ ಸಂಸ್ಕೃತಿಯಲ್ಲಿ ಅಂತಹ ಅಸಹಜವಾದದ್ದೇನೂ ಆಗಿರಲಿಲ್ಲ!

ಆ ಮಧುರ ಭಾವದ ಮರುಕಳಿಕೆಯಲ್ಲಿ ಆಶ್ಲೀ ಕ್ಷಣ ಮಾತ್ರ ಮೈ ಮರೆತಿದ್ದರೂ, ವಾಸ್ತವಕ್ಕೆ ಹಿಂದಿರುಗಿ, ನಿದ್ರಾದೇವಿಯ ವಶವಾಗಲು ಹವಣಿಸಿದಳು.

೪

ಆ ದಿನ ರಾತ್ರಿಯಲ್ಲಿ ಮೈಕ್‌ಗೆ ಕೂಡ ಆಶ್ಲೀಯದೇ ನೆನೆಪು. ಆಶ್ಲೀ ತನ್ನ ಮೇಲೆ ಕೋಪಿಸಿಕೊಂಡು, ತನ್ನನ್ನು ತಿರಸ್ಕರಿಸಿ, ಧಿಕ್ಕರಿಸಿ ಹೋಗಿದ್ದು ಮೈಕ್‌ಗೆ ಅನೀರೀಕ್ಷಿತ ಆಘಾತವಾಗಿದ್ದರೂ ಸಹ, ಅವನ ಮನಸ್ಸು ತಾನು ಮತ್ತು ಆಶ್ಲೀ ಒಟ್ಟಿಗೆ ಕಳೆದ ಎಂಟು ವರ್ಷಗಳ ಮಧುರ ಅವಧಿಯನ್ನೇ ಮೆಲಕು ಹಾಕುತ್ತಿತ್ತು. ಈ ಅವಧಿಯಲ್ಲಿ ಅವರು ಮಕ್ಕಳಾಗದಂತೆ ಎಚ್ಚರಿಕೆವಹಿಸಿದ್ದರು. ಅನಿರ್ಬಂಧಿತ ಆನಂದವನ್ನು ಅನುಭವಿಸಿದ್ದರು. ವಾರಾಂತ್ಯದ ವಿರಾಮದ ದಿನಗಳಲ್ಲಿ ಇಬ್ಬರೂ ಜೊತೆ ಜೊತೆಯಾಗಿ ತಮ್ಮ ಸಾಮಾನ್ಯ ಅಭಿರುಚಿಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು.

ಪ್ರಥಮ ಪರಿಚಯದ ನಂತರ, ಅವರಿಬ್ಬರೂ ನಿಯಮಿತವಾಗಿ ಡೇಟ್ ಮಾಡಲಾರಂಭಿಸಿದರು. ಅವರಿಬ್ಬರ ಮಧ್ಯದ ಸೆಳೆತ ಎಷ್ಟು ಬಲವಾಗಿತ್ತೆಂದರೆ, ಒಂದೆರಡು ತಿಂಗಳೊಳಗೆ ಒಟ್ಟಿಗೆ ಒಂದೇ ಅಪಾರ್ಟ್‌ಮೆಂಟಿನಲ್ಲಿ ವಾಸಿಸಲಾರಂಭಿಸಿದರು. ಇಬ್ಬರೂ ದುಡಿಯುತ್ತಿದ್ದರು. ಆದ್ದರಿಂದ ಗೃಹಕೃತ್ಯದ ಖರ್ಚೆಲ್ಲವನ್ನು ಸಮಾನವಾಗಿ ಭರಿಸುತ್ತಿದ್ದರು. ಮನೆಯ ಅಡುಗೆಯ ಕೆಲಸ, ಓರಣವಾಗಿ ಇಟ್ಟುಕೊಳ್ಳುವುದು, ಮನೆಯ ಶುಚಿ ಮತ್ತು ನೈರ್ಮಲ್ಯವನ್ನು ಕಾಪಾಡುವಂತಹ ಕೆಲಸಗಳನ್ನೂ ಸಹ ಹಂಚಿಕೊಂಡು ಮಾಡುತ್ತಿದ್ದರು.

ಕಾಲಚಕ್ರ ಉರುಳಿತು. ಸತಿಪತಿಯರಂತೆ ಸರ್ವವಿಧದಲ್ಲಿಯೂ ಜೀವಿಸುತ್ತಿದ್ದರೂ, ಮೈಕ್ ಅವಳನ್ನಿನ್ನೂ ಮದುವೆಯಾಗುವುದಾಗಿ ಪ್ರಸ್ತಾಪ ಮಾಡಿರಲಿಲ್ಲ. ಮಾಡುವ ಅವಶ್ಯಕತೆಯಿನ್ನೂ ಅವನಿಗೆ ಕಂಡುಬಂದಿರಲಿಲ್ಲ. ಮದುವೆಯ ಬಂಧನವಿಲ್ಲದೇ ವೈವಾಹಿಕ ಜೀವನದ ಸಮಸ್ತ ಸುಖಗಳೂ ದೊರೆಯುತ್ತಿರುವಾಗ, ವಿವಾಹ ಜೀವನದ ಜವಬ್ದಾರಿ ಅವನಿಗೇಕೆ ಬೇಕು? ಸಮಾನ ಹಕ್ಕುಗಳ ನೆಲೆಯಲ್ಲಿ ವೈವಾಹಿಕ ಜೀವನ ನೆಲೆಯೂರಿದ್ದರೆ, ಅವನು ಮದುವೆಯಾಗಲು ಹಿಂಜರಿಯುತ್ತಿರಲಿಲ್ಲವೇನೋ ಆದರೆ ತನ್ನ ಅಮ್ಮ ತನ್ನ ಏಕಾಧಿಪತ್ಯದಿಂದ ತನ್ನ ತಂದೆಯ ಜೀವನವನ್ನು ದುರ್ಭರಗೊಳಿಸಿದ್ದುದು ಅವನ ಮನಃಪಟಲದಿಂದ ಮಾಯವಾಗಿರಲಿಲ್ಲ. ಈಗ ಒಳ್ಳೆಯ ಹುಡುಗಿಯಂತೆ ಸಹಕರಿಸುತ್ತಿದ್ದ ಆಶ್ಲೀ, ಮದುವೆಯ ನಂತರ ತನ್ನನ್ನು ಆಳಲು ಶುರುಮಾಡಿದರೆ ಏನು ಮಾಡುವುದು? ತನ್ನ ಸ್ವಾತಂತ್ರ್ಯದ ಹರಣವನ್ನು ಯಾವುದೇ ಕಾರಣಕ್ಕೆ ಒಪ್ಪಲು ಮೈಕ್ ಸಿದ್ಧನಿರಲಿಲ್ಲ. ಹೀಗಾಗಿ ವಿವಾಹದ ಪ್ರಸ್ತಾಪವನ್ನೇ ಮಾಡದೆ, ನಡೆದಷ್ಟು ದಿನ ನಡೆಯಲಿ ಎಂಬ ಧೋರಣೆಯೊದಿಗೆ ಮೈಕ್ ಆಶ್ಲೀಯ ಜೊತೆ ಜೀವನಯಾತ್ರೆಯನ್ನು ಮುಂದುವರೆಸಿದ್ದ.

೫

ಇತ್ತ ಆಶ್ಲೀಯೂ ತನ್ನ ಜೀವನದ ಇದುವರೆಗಿನ ಗತಿಯ ಬಗ್ಗೆಯೇ ಚಿಂತಿಸುತ್ತಿದ್ದಳು. ಅವಳಿಗೂ ಮದುವೆಯ ಆಲೋಚನೆಗಳು ಇದುವರೆಗೂ ಬಂದಿಲ್ಲವೆಂದಲ್ಲ. ಆದರೆ ತನ್ನ ತಂದೆ ತನ್ನ ತಾಯಿಯನ್ನು ಸಂಸಾರದ ನಡುನೀರಿನಲ್ಲಿ ಕೈ ಬಿಟ್ಟು ನಡೆಯದಿದ್ದರೆ, ಅಷ್ಟು ಹೊತ್ತಿಗೆ ಅವಳು ವಿವಾಹಿತಳಾಗಿರುತ್ತಿದ್ದಳೇನೋ. ತನ್ನಮ್ಮ ಅವಳ ಜೀವನದಲ್ಲಿ ಅನುಭವಿಸಿದ ಕಷ್ಟಕಾರ್ಪಣ್ಯಗಳು ಅವಳು ಮದುವೆಯಾಗಿ, ತನ್ಮೂಲಕ ಜೀವನದ ಸಮಸ್ಯೆಗಳನ್ನೆದುರಿಸುವ ಧೈರ್ಯವನ್ನೇ ಕಳೆದುಕೊಂಡುಬಿಟ್ಟಿದ್ದಳು. ಸದ್ಯಕ್ಕೆ ತನಗಿನ್ನೂ ಮಕ್ಕಳಾಗಿರಲಿಲ್ಲ! ತನ್ನ ಕಟ್ಟೆಚ್ಚರ ತನ್ನನ್ನು ಇದುವರೆಗೆ ಕಾಪಾಡಿತ್ತು. ಕಾಮ ವಿವೇಕವನ್ನು ಹಾಳುಮಾಡುವ ಶತೃಗಳಲ್ಲಿ ಅಗ್ರಪಂಕ್ತಿಯಲ್ಲಿರುತ್ತದೆಂದು ಎಲ್ಲೋ ಓದಿದ ನೆನಪು. ಮಕ್ಕಳಾದ ಮೇಲೆ ಅಪ್ಪಿ ತಪ್ಪಿ ವಿವಾಹ ವಿಚ್ಛೇದನವಾದರೆ, ಮುಗಿದೇ ಹೋಯಿತು. ತನ್ನ ತಾಯಿ ತನ್ನೆದುರಿಗೇ ಪಟ್ಟಕಷ್ಟ ತನ್ನ ಶತೃಗಳಿಗೂ ಬೇಡ!

ಮದುವೆಯಾಗದೆ ಮೈಕ್‌ನಿಂದ ಸಕಲ ಸುಖಗಳೂ ಲಭ್ಯವಾಗಿದ್ದವು. ಮೈಕ್‌ನ ಬಾಲ್ಯದ ಕರಾಳ ಛಾಯೆಯಿಂದಾಗಿ, ತನಗಿದುವರೆವಿಗೂ ವಿವಾಹದ ಪ್ರಸ್ತಾಪವನ್ನೇ ಮಾಡಿರಲಿಲ್ಲ. ಇದುವರೆವಿಗೆ ಹೇಗೋ ಜೀವನ ಕಳೆಯಿತು. ಮುಂದೆ? ವೃದ್ಧಾಪ್ಯದ ಚಿಂತೆ ತನಗೇಕೆ ಬರುತ್ತಿದೆ ಎಂದು ಆಶ್ಲೀ ಚಕಿತಳಾಗಿದ್ದೂ ಉಂಟು. ಜೀವನದ ಮುಸ್ಸಂಜೆಯಲ್ಲಿ ದೊರಕಬಹುದಾದ ಕೊಂಚ ಆಸರೆಗಾಗಿ ತಾರುಣ್ಯದ ಪ್ರವರ್ಧಮಾನದಲ್ಲಿನ ಸುಖ, ಸಂತೋಷ ಮತ್ತು ಸ್ವಾತಂತ್ರ್ಯಗಳನ್ನು ಒತ್ತೆಇಡುವುದರಲ್ಲಿ ಯಾವ ಔಚಿತ್ಯವೂ

ಆಶ್ಲೀಗೆ ಕಂಡುಬಂದಿರಲಿಲ್ಲ. ಸಾಮಾನ್ಯವಾಗಿ ಇಂತಹ ಸಂಬಂಧಗಳಲ್ಲಿ ಗಂಡು ಮದುವೆಯಾಗುವುದನ್ನು ಮುಂದೂಡುತ್ತಿರುತ್ತಿರುವುದು ಹಾಗೂ ಹೆಣ್ಣು ಮದುವೆಗೆ ಅವನನ್ನು ಒತ್ತಾಯಿಸುತ್ತಿರುವುದು ಸಾಮಾನ್ಯ ಸಂಗತಿ. ಆದರೆ ಆಶ್ಲೀ ಮದುವೆಯ ಆಲೋಚನೆಯನ್ನೇ ಮಾಡದೆ, ಸಹಜೀವನದಲ್ಲೇ ಆರಾಮವಾಗಿ ಇದ್ದುಬಿಟ್ಟಿದ್ದಳು. ಹೆಣ್ಣೇ ವಿವಾಹದ ಬಗ್ಗೆ ತಲೆಕೆಡಿಸಿಕೊಳ್ಳದಿದ್ದರೆ, ಗಂಡೇಕೆ ಅದರ ಬಗ್ಗೆ ಚಿಂತಿಸುತ್ತಾನೆ? ಮೈಕ್ ಸಹ ಆರಾಮವಾಗಿ ಇದ್ದುಬಿಟ್ಟಿದ್ದು ಆಶ್ಲೀಯ ಗಮನಕ್ಕೆ ಬಾರದೇ ಇರಲಿಲ್ಲ.

೬

ಆಶ್ಲೀಯಿಂದ ತಿರಸ್ಕೃತಗೊಂಡ ಮೈಕ್ ಕಳೆದ ಮೂರು–ನಾಲ್ಕು ದಿನಗಳಲ್ಲಿ ಅವಳನ್ನು ದೂರವಾಣಿ ಮೂಲಕ ಸಂಪರ್ಕಿಸಲು ಅನೇಕ ಸಲ ಪ್ರಯತ್ನಿಸಿದ್ದುಂಟು. ಆದರೆ ಅದುವರೆವಿಗೂ ಅವಳು ಫೋನನ್ನೇ ಎತ್ತಿರಲಿಲ್ಲ. ಅಕಸ್ಮಾತ್ ಈ ಸಂಬಂಧ ಮುರಿದು ಬಿದ್ದರೂ, ಆರ್ಥಿಕವಾಗಿ ಅದು ಯಾವ ಆಘಾತವನ್ನು ಮಾಡಲಿಕ್ಕೆ ಸಾಧ್ಯವಿರಲಿಲ್ಲ ಎಂಬ ಸಂಗತಿಯೇ ಅದಕ್ಕೆ ಕಾರಣವಾಗಿತ್ತು. ಅಪ್ಪಿತಪ್ಪಿ ಮದುವೆಯಾಗಿಬಿಟ್ಟಿದ್ದರೆ, ತನ್ನ ಮನೆಯಲ್ಲಿ ಅರ್ಧ ಭಾಗ – ವಿವಾಹ ವಿಚ್ಛೇಧನದ ನಂತರ ಜೀವನಾಂಶವಾಗಿ ಆಶ್ಲೀಗೆ ಕೊಡಬೇಕಾಗುತ್ತಿತ್ತು. ಆದರೆ ಅವರದೊಂದು ಇಬ್ಬರು ವಯಸ್ಕರ, ಪರಸ್ಪರ ಒಪ್ಪಿಕೊಂಡ ಸಹಜೀವನವಾದ್ದರಿಂದ ಪರವಾಗಿರಲಿಲ್ಲ. ಆಶ್ಲೀಯ ಜೊತೆ ಸಹಯೋಗ ಮೈಕ್‌ಗೆ ಆಹ್ಲಾದತೆಯನ್ನು ಒದಗಿಸಿತ್ತು. ಅದಕ್ಕಾಗಿಯೇ ಅವನು ಆ ಸಂಬಂಧವನ್ನು ಉಳಿಸಲು ತನ್ನ ಪ್ರಯತ್ನವನ್ನು ಜಾರಿಯಲ್ಲಿಟ್ಟಿದ್ದ.

ಹಾಗಾದರೆ ಸುಸ್ಥಿತಿಯಲ್ಲಿ ಇಬ್ಬರಿಗೂ ಸಂತೋಷದಾಯಕವಾದ ಸಂಬಂಧ ಹಳಿ ತಪ್ಪಲು ತಾನೆಲ್ಲಿ ತಪ್ಪು ಮಾಡಿದೆ ಎಂದು ಮೈಕ್ ಚಿಂತಿಸಿದ್ದುಂಟು. ಎಂಟು ವರ್ಷಗಳಷ್ಟು ದೀರ್ಘಕಾಲ ಒಬ್ಬಳೊಂದಿಗೇ ಜೀವನ ಕಳೆದ ಮೈಕ್‌ಗೆ ಕಾಮ ಜೀವನದಲ್ಲಿ ವೈವಿಧ್ಯ ಬೇಕಿತ್ತೆ? ಅದನ್ನರಸಿಕೊಂಡು ತಾನು ಹೋದನೆ? ಆತ್ಮಾವಲೋಕನ ಮಾಡಿಕೊಂಡಾಗ, ಮೈಕ್‌ಗೆ ಹೊಳೆದದ್ದು ಆ ವ್ಯಾಖ್ಯಾನ ಪೂರ್ತಿ ಸರಿಯಲ್ಲ ಎಂಬುದು. ಆಶ್ಲೀ ಒಮ್ಮೆ ತನ್ನ ಗೆಳತಿಯರ ಜೊತೆ ಪಾರ್ಟಿಗೆ ಹೋಗಿದ್ದಾಗ, ಮನೆಯಲ್ಲಿ ಒಬ್ಬನೇ ಇರಲು ಬೇಸರವಾಗಿ ಬಾರ್‌ಗೆ ಆರು ತಿಂಗಳ ಕೆಳಗೆ ಹೋಗಿದ್ದು ಇನ್ನೂ ಅಚ್ಚಳಿಯದೆ ಮನದಲ್ಲಿದೆ. ಆಗಲೇ ಅವನಿಗೆ ಎಮಿಲಿಯ ಪರಿಚಯ ಅಪ್ರಾಸಂಗಿಕವಾಗಿ ಆದ್ದದ್ದು. ಪ್ರಥಮ ಮಿಲನದಲ್ಲಿ ಯಾವ ಕಾರಣಕ್ಕಾಗಿ ಆಶ್ಲೀಯ ಪರಿಚಯವಾಗಿತ್ತೋ, ಅದೇ ಕಾರಣಕ್ಕಾಗಿಯೇ ಆಗ ತಾನು ಎಮಿಲಿಯಲ್ಲಿ ಪ್ರಣಯಾಸಕ್ತನಾದದ್ದನ್ನು ಜ್ಞಾಪಿಸಿಕೊಂಡ. ಹೂವಿಂದ ಹೂವಿಗೆ ಹಾರುವ ದುಂಬಿಯಂತೆ ಮೈಕ್ ಅವಳನ್ನು ತನ್ನ ಮನಸ್ಸಿನಿಂದ ತೆಗೆದು ಹಾಕಲಾರದವನಾಗಿದ್ದ. ಅವಳ ಮಾದಕ ಸೌಂದರ್ಯ ಮಧುವನ್ನು ಒಸರಿಸುವಂತಹ ಮಾತುಗಾರಿಕೆ ಮೈಕ್‌ನನ್ನು

ಪೂರ್ತಿ ಮೋಡಿ ಮಾಡಿಕಿದ್ದವು. ಪದೇ ಪದೇ ಕದ್ದು ಭೇಟಿಯಾಗತೊಡಗಿದ. ಹೀಗೆ ಏಕಕಾಲದಲ್ಲಿ ಎರಡು ಸಮಾನಾಂತರ ಸಂಬಂಧಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಅನೈತಿಕ ಎಂದು ತಿಳಿದು ಹೊರಬರಲು ತಾನು ಪ್ರಯತ್ನಿಸಿದ್ದೂ ಉಂಟು. ಆದರೆ ಎಮಿಲಿ ಮೈಕ್‌ನನ್ನು ಬಿಡುವ ಸ್ಥಿತಿಯಲ್ಲಿರಲಿಲ್ಲ. ಎಷ್ಟೋ ಸಲ ತಾನೇಕೆ ಆಶ್ಲೀಗೆ ವಿವಾಹಿತನಾದಷ್ಟು ಬದ್ಧನಾಗಿರಬೇಕೆಂದು ಪ್ರಶ್ನಿಸಿಕೊಂಡಿದ್ದೂ ಉಂಟು. ಹೀಗೆ ತಾನು ಇಬ್ಬಂದಿಯಲ್ಲಿರುವಾಗಲೇ, ತಮ್ಮೀರ್ವರ ಪ್ರಣಯ ಉಚ್ಛ್ರಾಯಸ್ಥಿತಿ ಯಲ್ಲಿರುವಾಗಲೇ, ಆಶ್ಲೀಯಿಂದ ರೆಡ್- ಹ್ಯಾಂಡೆಡ್ ಆಗಿ ಸಿಕ್ಕಿಹಾಕಿಕೊಂಡಿದ್ದ. ಅರ್ಧ ಪ್ರಾಯಶ್ಚಿತ್ತ, ಅರ್ಧ ತಾನು ಮಾಡಿದ್ದೇನು ಅಂತಹ ತಪ್ಪಲ್ಲ ಎಂಬ ಸಮರ್ಥನೆ - ಇಂತಹ ಮನಸ್ಥಿತಿಯಲ್ಲಿ ಮೈಕ್ ನಿದ್ದೆಹೋದ.

೭

ತನ್ನ ಮುಂದಿನ ಜೀವನದ ಗತಿಯ ಬಗ್ಗೆ ನಿರ್ಧರಿಸಿ ಎರಡು - ಮೂರು ದಿನಗಳಾದರೂ, ಅದನ್ನು ಕಾರ್ಯರೂಪಕ್ಕೆ ಇಳಿಸಲು ತಡವಾಗುತ್ತಿರುವುದು ಆಶ್ಲೀಗೆ ಸಮಾಧಾನ ತಂದಿರಲಿಲ್ಲ. ಮೈಕ್ ಜೊತೆ ತನ್ನ ಮದುವೆಯಾಗಿದ್ದರೂ ಸಹ, ಅವನೇನಾದರೂ ವಿವಾಹಬಾಹಿರ ಪ್ರಣಯಲೀಲೆಯಲ್ಲಿ ತೊಡಗಿದ್ದರೆ, ಅಂತಹ ವಿವಾಹದಿಂದ ಹೊರ ಬರಲು ನಿರ್ಧರಿಸುವುದು ಅವಳಿಗೇನೂ ಕಷ್ಟವಾಗುತ್ತಿರಲಿಲ್ಲ ಎಂದುಕೊಂಡ ಆಶ್ಲೀ, ಇನ್ನು ವಿವಾಹವೇ ಆಗದವನ ಜೊತೆ ಜೀವನ ಮುಂದುವರಿಸುವ ಅರ್ಥ, ಅನಿವಾರ್ಯತೆ, ಆಗತ್ಯವಾವುದೂ ಕಾಣಿಸಲಿಲ್ಲ. ಅವನನ್ನು ಒದ್ದೋಡಿಸಿ, ತಾನು ಇನ್ನೊಬ್ಬನನ್ನು ಹುಡುಕಿಕೊಳ್ಳುವುದು ಕಷ್ಟವಾಗಲಾರದು. ಇಪ್ಪತ್ತೆಂಟು ವರ್ಷದ ಯೌವನದಿಂದ ಕಂಗೊಳಿಸುತ್ತಿದ್ದ ಸುಂದರಿಯಾದ ಅವಳ ಕಾಲ ಬಳಿ ಬೀಳಲು ಯುವಕರ ದಂಡೇ ಸಿದ್ಧವಾಗಿದ್ದು ಆಶ್ಲೀಗೆ ಮೊನ್ನೆ ಮೊನ್ನೆ ಕೂಡ ಅನುಭವಕ್ಕೆ ಬಂದಿತ್ತು. ಸದ್ಯ, ಮೈಕ್‌ನನ್ನು ಈಗ ಬಿಡಲು ನಿರ್ಧರಿಸಿದ್ದು ಒಳ್ಳೆಯದಾಯಿತು. ಇನ್ನು ಹತ್ತು ವರ್ಷಗಳದ ಮೇಲೆ ಬಿಟ್ಟಿದ್ದರೆ, ಆಗ ಯಾರು ತಾನೇ ಯೌವನ ಜಾರುತ್ತಿರುವ ತನ್ನನ್ನ ನೋಡುತ್ತಾರೆ? ಈ ಸಂಬಂಧದ ವೈಫಲ್ಯಕ್ಕೆ ತಾನೇನೂ ಕಾರಣಳಲ್ಲ ಹಾಗೂ ಅದನ್ನು ತಾನು ವೈಯಕ್ತಿಕವಾಗಿ ಪರಿಭಾವಿಸಬಾರದೆನ್ನುವಷ್ಟರಮಟ್ಟಿನ ಪ್ರಾಯೋಗಿಕ ಮನೋಭಾವ ಅವಳದಾಗಿತ್ತು. ಜೀವನವೊಂದು ಸತತ ಹೋರಾಟ ಮತ್ತು ಬಾಳ ಸಂಗಾತಿಯು ನಿರಂತರ ಹುಡುಕಾಟವೆಂದುಕೊಂಡು, ನೆಮ್ಮದಿಯ ನಿಟ್ಟುಸಿರನ್ನು ಬಿಟ್ಟು, ಮೈಕ್ ಸೆಲ್‌ಗೆ ಫೋನ್ ಮಾಡಿದಳು. ಅವನ ಯಾವ ಮಾತಿಗೂ, ವಿವರಣೆಗೂ ಅವಕಾಶವನ್ನೇ ಕೊಡದೆ, ತನ್ನ ಅಚಲಿತ ನಿರ್ಧಾರವನ್ನು ತಿಳಿಸಿ, ಪ್ರಸ್ತುತ ಸಂಬಂಧದ ಪರ್ಯಾವಸಾನವನ್ನು ಹಾಡಿದಳು.

•

## ಲೇಖಕರ ಪರಿಚಯ

### ಆಹಿತಾನಲ (ನಾಗ ಐತಾಳ್)

ಹುಟ್ಟಿದ್ದು ಕರ್ನಾಟಕದ ಕರಾವಳಿ ಪ್ರದೇಶದ ಉಡುಪಿ ಜಿಲ್ಲೆಯ ಕೋಟದಲ್ಲಿ. ಬೆಂಗಳೂರಿನಲ್ಲಿ ಓದು-ಬರಹ. ಬೆಂಗಳೂರಿನ Indian Institute of Scienceನಿಂದ M.Sc. & Ph.D. ಡಿಗ್ರಿ. ಕ್ಯಾಲಿಫ಼ೋರ್ನಿಯದ USC School of Medicineನಲ್ಲಿಯೂ, ಕ್ಯಾನಡಾದಲ್ಲಿ University of Western Ontario & University of Guelph ಗಳಲ್ಲಿ ಜೀವ ರಸಾಯನಶಾಸ್ತ್ರದಲ್ಲಿ ಸಂಶೋಧನೆ. ಸುಮಾರು ೨೬ ವರ್ಷ University of Chicagoದಲ್ಲಿ ಸಂಶೋಧನಾ ಅಧ್ಯಾಪಕರಾಗಿ ಕೆಲಸ. ಈಗ, ಸ್ವಲ್ಪ ಸಮಯ ಕ್ಯಾಲಿಫ಼ೋರ್ನಿಯದ ಆರ್ಕೇಡಿಯದಲ್ಲಿ ಮಗಳು ಅನುರಾಧಾಳ ಮನೆಯಲ್ಲಿಯೂ, ಸ್ವಲ್ಪ ಸಮಯ ನ್ಯೂಜರ್ಸಿಯಲ್ಲಿರುವ ಮಗ ಅರವಿಂದ ಮತ್ತು ಸೊಸೆ ಸೆಪಿಡೆಯರ ಮನೆಯಲ್ಲಿಯೂ, ಧರ್ಮಪತ್ನಿ ಲಕ್ಷ್ಮಿಯೊಡನೆ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಪುಟಾಣಿ ಮೊಮ್ಮಕ್ಕಳಿಬ್ಬರು (ಅಲೆಕ್ಸಾಂಡರ್ ಕೃಷ್ಣ ಮತ್ತು ಕ್ಯಾಮರಾನ್ ಕವಿ) ಅವರ ನಿವೃತ್ತ ಜೀವನಕ್ಕೆ ಸವಿ-ಜೇನುಗೂಡಿಸಿದ್ದಾರೆ. ಕೆಲವು ಸಾಮಾಜಿಕ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಕೆಲಸ ಮಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ತುಂಬಾ ಆಸಕ್ತಿಯಿದ್ದು, ಆಗಾಗ್ಗೆ ಲೇಖನಗಳನ್ನು ಬರೆಯುತ್ತಿದ್ದಾರೆ. ಕಾರಂತ ಚಿಂತನ (ಕಾರಂತ ಸಾಹಿತ್ಯ ಕುರಿತು) ಯದುಗಿರಿಯ ಬೆಳಕು (ಪು.ತಿ.ನ. ಸಾಹಿತ್ಯ ಕುರಿತು) ಅಮೆರಿಕನ್ನಡಿಗನೊಬ್ಬನ ದಿನಚರಿಯಿಂದ ಮುಖ್ಯಪುಸ್ತಕಗಳು.

**ಸಂಪರ್ಕ** : 816, Othello Street,
Arcadia, CalifOrnia, 91006
e-mail: nagaaithal@yahoo.com

### ಜಯರಾಮ ಉಡುಪ

ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ಼್ ಸೈನ್ಸ್‌ನಲ್ಲಿ ಕಂಪ್ಯೂಟರ್ ಯಂತ್ರಶಾಸ್ತ್ರದಲ್ಲಿ ೧೯೭೬ರಲ್ಲಿ ಚಿನ್ನದ ಪದಕದೊಂದಿಗೆ ಪಿ.ಎಚ್.ಡಿ ಪದವಿ. ೧೯೭೮ರಲ್ಲಿ ಯೂನಿವರ್ಸಿಟಿ ಆಫ಼್ ಬಫ಼ಲೊದ ಕಂಪ್ಯೂಟರ್ ವಿಜ್ಞಾನ ವಿಭಾಗದಲ್ಲಿ ಸೇರಿ, ೧೯೮೧ರಲ್ಲಿ

ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯದ ರೇಡಿಯಾಲಜಿ ವಿಭಾಗಕ್ಕೆ ಬಂದು, ಅಲ್ಲಿನ ಮೆಡಿಕಲ್ ಇಮೆಜಿಂಗ್ ವಿಭಾಗದ ಮುಖ್ಯಸ್ಥರೂ ಪ್ರೊಫೆಸರರೂ ಆಗಿ ೧೯೮೧ ರಿಂದ ಕೆಲಸ ಮಾಡುತ್ತಿದ್ದಾರೆ. ಕಂಪ್ಯೂಟರ್ ಗ್ರಾಫಿಕ್ಸ್, ಇಮೆಜಿಂಗ್ ಮತ್ತು ಇವುಗಳ ವೈದ್ಯಕೀಯ ಉಪಯೋಗಗಳ ಮೇಲೆ ಆಳವಾದ ಸಂಶೋಧನೆ ನಡೆಸಿದ್ದಾರೆ. ಈ ವಿಷಯದ ಮೇಲೆ ಸುಮಾರು ಇನ್ನೂರ ತೊಂಬತ್ತು ಸಂಶೋಧನಾ ಲೇಖನಗಳನ್ನೂ, ಎರಡು ಪುಸ್ತಕಗಳನ್ನೂ, ಹಲವು ಬೃಹತ್ ಸಾಫ್ಟ್‌ವೇರ್ ಸಿಸ್ಟಮ್‌ಗಳನ್ನೂ ಪ್ರಕಟಿಸಿದ್ದಾರೆ. ಇವರು ಈ ಕ್ಷೇತ್ರದಲ್ಲಿ ಹಲವು ಮೈಲಿಗಲ್ಲುಗಳನ್ನು ಸ್ಥಾಪಿಸಿ, ೧೨೦ ಕ್ಕೂ ಹೆಚ್ಚಿನ ಆಮಂತ್ರಿತ ಭಾಷಣಗಳನ್ನು ಪ್ರಪಂಚದಾದ್ಯಂತ ನೀಡಿದ್ದಾರೆ. ಸಂಗೀತಶಾಸ್ತ್ರ, ರಾಗ ಸಂಯೋಜನೆ, ಯೋಗಾಭ್ಯಾಸ ಮತ್ತು ಕಲಿಗ್ರಫಿಗಳಲ್ಲಿ ವಿಶೇಷ ಪರಿಣತಿ. 'ಅಮೆರಿಕನ್ನಡ'ದ ಮೊದಲ ಎರಡು ಸಂಚಿಕೆಗಳ ಬಹುಪಾಲು ಲೇಖನಗಳನ್ನು ಕೈಲಿಪಿಯಿಂದಲೇ ಬರೆದು, ಈ ಪತ್ರಿಕೆಯನ್ನು ಹೊರಡಿಸುವುದರಲ್ಲಿ ಮುಖ್ಯ ಪಾತ್ರವಹಿಸಿದ್ದಾರೆ. 'ತ್ರಿವೇಣಿ' ಕನ್ನಡ ಕೂಟದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಇವರು ಅದರ ಅಧ್ಯಕ್ಷರೂ ಆಗಿ ಕೆಲಸ ಮಾಡಿದ್ದಾರೆ.

**ಸಂಪರ್ಕ :** JayaramK.Udupa
402, Redwing Lane
Audubon PA 19403
Email:jay@mipg.upenn.edu

## ಗುರುಪ್ರಸಾದ್ ಕಾಗಿನೆಲೆ

ಹುಟ್ಟಿದ್ದು ಶಿವಮೊಗ್ಗ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂಬಿಬಿಎಸ್ ಮತ್ತು ಎಂ ಡಿ ಪದವಿ ಪಡೆದು ತುಮಕೂರಿನ ಸಿದ್ದಾರ್ಥ ವೈದ್ಯಕೀಯ ವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಕೆಲಸ. ಆನಂತರ ದೆಹಲಿಯ ಭತ್ರ ಆಸ್ಪತ್ರೆಯ ನೆಫ್ರಾಲಜಿ ವಿಭಾಗದಲ್ಲಿ ಸೀನಿಯರ್ ರೆಸಿಡೆನ್ಸಿ. ೧೯೮೫ರಲ್ಲಿ ಅಮೆರಿಕೆಗೆ ವಲಸೆ. ಡೆಟ್ರಾಯ್ಟ್‌ನ ವೇಯ್ನ್‌ಸ್ಟೇಟ್ ವಿಶ್ವವಿದ್ಯಾನಿಲಯ ಹಾಗೂ ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯಗಳಲ್ಲಿ ತರಬೇತಿ. ಸದ್ಯಕ್ಕೆ ಮಿನೆಸೊಟಾ ರಾಜ್ಯದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣಿತ ಮತ್ತು ಪ್ರಭವರೊಟ್ಟಿಗೆ ವಾಸ. ನಾರ್ತ್ ಮೆಮೋರಿಯಲ್ ಆಸ್ಪತ್ರೆಯ ಎಮರ್ಜೆನ್ಸಿ ಮೆಡಿಸಿನ್ ವಿಭಾಗದಲ್ಲಿ ಎಮರ್ಜೆನ್ಸಿ ವೈದ್ಯನಾಗಿ ಕೆಲಸ. ಸಣ್ಣಕತೆ ಮತ್ತು ಪ್ರಬಂಧಗಳು ಕನ್ನಡದ ನಿಯತಕಾಲಿಕೆಗಳಲ್ಲಿ, ಸಾಪ್ತಾಹಿಕಗಳಲ್ಲಿ, ದೀಪಾವಳಿ ವಿಶೇಷಾಂಕಗಳಲ್ಲಿಯೂ ಅಂತರ್ಜಾಲ ಪೋರ್ಟಲ್‌ಗಳಾದ 'ದಟ್ಸ್ ಕನ್ನಡ ಡಾಟ್‌ಕಾಮ್' 'ಕನ್ನಡ ಸಾಹಿತ್ಯ ಡಾಟ್‌ಕಾಮ್'ಗಳಲ್ಲಿ

ಪ್ರಕಟವಾಗಿದೆ. ಕೆಲವು ಸಣ್ಣಕತೆಗಳು ಯುಗಾದಿ ಕಥಾಸ್ಪರ್ಧೆಯಲ್ಲಿ ಬಹುಮಾನಿತವಾಗಿವೆ. ಪ್ರಕಟಿತ ಕೃತಿಗಳು: 'ನಿರ್ಗುಣ' (ಕಥಾಸಂಕಲನ) 'ವೈದ್ಯ, ಮತ್ತೊಬ್ಬ' (ಲೇಖನಸಂಗ್ರಹ.)

**ಸಂಪರ್ಕ :** 6044 Granite Dr NW
Rochester, MN- 55901
Email : gkaginele@hotmail.com

## ರವಿ ಗೋಪಾಲರಾವ್

ಬೆಂಗಳೂರಿನವರಾದ ಡಾ. ರವಿ ಗೋಪಾಲರಾವ್ ಕಳೆದ ಎರಡು ದಶಕಗಳಿಂದ ಶೈಕ್ಷಣಿಕ, ಕನ್ಸಲ್ಟಿಂಗ್ ಮತ್ತು ಐ.ಟಿ. ಉದ್ಯಮಗಳಲ್ಲಿ ಅನುಭವ ಪಡೆದವರು. ಅಮೆರಿಕದಲ್ಲಿ ನೆಲಸುವ ಮುನ್ನ ಅವರು ಭಾರತದ ಇಸ್ರೋನಲ್ಲಿ ಕೆಲವು ವರ್ಷಗಳ ಕಾಲ ಅನುಭವ ಪಡೆದಿದ್ದಾರೆ. ಅವರು ಬೆಂಗಳೂರು ವಿಶ್ವವಿದ್ಯಾಲಯದಿಂದ ಇಂಜಿನಿಯರಿಂಗ್ ಡಿಗ್ರಿ, ದೆಹಲಿ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಮತ್ತು ಅಮೆರಿಕದ ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯದಿಂದ ಡಾಕ್ಟರೇಟ್ ಪದವಿಯನ್ನೂ ಗಳಿಸಿದ್ದಾರೆ. ಅವರ ಹವ್ಯಾಸಗಳು -- ಛಾಯಾಚಿತ್ರಣ, ಸಂಗೀತ ಮತ್ತು ಮಲ್ಟಿ-ಮೀಡಿಯ. ಕನ್ನಡ ಸಾಹಿತ್ಯ, ಕಲೆ ಮತ್ತು ಚರಿತ್ರೆಯಲ್ಲಿ ಅಪಾರ ಆಸಕ್ತಿಯನ್ನುಳ್ಳ ರವಿ ಗೋಪಾಲರಾವ್ ಕನ್ನಡದಲ್ಲಿ ಕೆಲವು ಸಣ್ಣಕಥೆ, ವಿಡಂಬನೆ ಮತ್ತು ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟ ಪ್ರಕಟಿಸುವ ವಾರ್ಷಿಕ ಸಂಚಿಕೆ 'ಸ್ವರ್ಣಸೇತು'ವಿನ ಮುಖ್ಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ತಮ್ಮ ಬಿಡುವಿನ ವೇಳೆಯಲ್ಲಿ ಅವರು ಸ್ವಯಂಸೇವಕರಾಗಿ ದುಡಿಯುವುದರ ಜೊತೆಗೆ ಪ್ರಸ್ತುತ ನೆಬ್ರಾಸ್ಕ ಕನ್ನಡ ಕೂಟದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ರವಿ ಮತ್ತು ಅವರ ಪತ್ನಿ ಪ್ರತಿಭಾ, ಇಬ್ಬರು ಮಕ್ಕಳೊಂದಿಗೆ ಕ್ಯಾಲಿಫೋರ್ನಿಯದ ಸ್ಯಾನ್‌ಹೋಸೆ ನಗರದಲ್ಲಿ ವಾಸವಾಗಿದ್ದಾರೆ.

**ಸಂಪರ್ಕ :** Ravi Gopalarao, Ph.D.
3955 Lake Ridge Lane
San Jose, CA 95148
Email:ravigopalarao@sbcglobal.net

## ಶಶಿಕಲ ಚಂದ್ರಶೇಖರ್

ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಅಪಾರ ಆಸಕ್ತಿಯುಳ್ಳ ಶ್ರೀಮತಿ ಶಶಿಕಲಾ ಅವರು ಅನೇಕ ಕಥೆ, ಕವನ ಮತ್ತು ಲೇಖನಗಳನ್ನು ಪ್ರಕಟಿಸಿದ್ದಾರೆ. ಇವರ ಕೃತಿಗಳು ಭಾರತದ ಅನೇಕ ಪತ್ರಿಕೆಗಳಲ್ಲಿ-- ಪ್ರಜಾವಾಣಿ, ತುಷಾರ, ವಿಜಯಕರ್ನಾಟಕ, ಮಯೂರ,

ಕನ್ನಡಪ್ರಭ (ಸಾಪ್ತಾಹಿಕ ಪ್ರಭ ಮತ್ತು ದೀಪಾವಳಿ ವಿಶೇಷಾಂಕ) ಲಂಕೇಶ್ ಪತ್ರಿಕೆ, ದಟ್ಸ್ ಕನ್ನಡ ಡಾಟ್‌ಕಾಮ್‌ಗಳಲ್ಲಿ ಪ್ರಕಟವಾಗಿವೆ. ವಾಷಿಂಗ್ಟನ್ ಡಿಸಿ ಪ್ರದೇಶದ ಕನ್ನಡ ಕೂಟ 'ಕಾವೇರಿ'ಯು ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸುತ್ತಿರುವುದಲ್ಲದೆ ಅಧ್ಯಕ್ಷಿಣಿಯಾಗಿಯೂ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. 'ಅಮೆರಿಕ, ಅಮೆರಿಕ', 'ನನ್ನ ಪ್ರೀತಿಯ ಹುಡುಗಿ' ಮತ್ತು 'ಪ್ಯಾರಿಸ್ ಪ್ರಣಯ' ಚಲನಚಿತ್ರಗಳಿಗೆ ಕಥೆ, ಸಂಭಾಷಣೆ ಮತ್ತು ಹಾಡುಗಳನ್ನು ಬರೆದಿದ್ದಾರೆ. ಪ್ರಕಟಿತ ಕೃತಿ 'ದೀಪವು ನಿನದೇ, ಗಾಳಿಯು ನಿನದೇ'ಗೆ ಕಳೆದ ವರ್ಷದ ಕನ್ನಡ ಸಾಹಿತ್ಯ ಪರಿಷತ್ತಿನ 'ರೇವಯ್ಯ ದತ್ತಿ' ಪ್ರಶಸ್ತಿ ದೊರಕಿದೆ. 'ಪ್ರತಿಬಿಂಬ' ಮೆಗಾ ಧಾರಾವಾಹಿಯ ಕೆಲವು ಭಾಗಗಳಿಗೆ ಚಿತ್ರಕಥೆಯನ್ನು ಬರೆದಿದ್ದಾರೆ. ಪ್ರಸ್ತುತ ಮೇರಿಲ್ಯಾಂಡಿನ ಬಾಯ್ಡ್ಸ್‌ನಲ್ಲಿ ಇವರು ಪತಿ ವಿಜ್ಞಾನಿ ಚಂದ್ರಶೇಖರ್ ಮತ್ತು ಮಕ್ಕಳಾದ ಚಿನ್ಮಯಿ ಮತ್ತು ರೇವತಿಯವರ ಜತೆ ವಾಸಿಸುತ್ತಿದ್ದಾರೆ.

**ಸಂಪರ್ಕ :** 18450, Broad Leaf Road,
Boyds, Maryland 20841
Email: shashic@hotmail.com

## ಗೋಪಿನಾಥ ತಾತಾಚಾರ್

ಮೂಲತಃ ಮೈಸೂರಿನವರಾದ ಗೋಪಿನಾಥ್ ಕಳೆದ ಹದಿನೆಂಟು ವರ್ಷದಿಂದ ನ್ಯೂಜರ್ಸಿ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ವೃತ್ತಿಯಿಂದ ಇಂಜಿನಿಯರ್ ಆದ ಗೋಪಿನಾಥರು ಕೆಲವು ವರ್ಷಗಳಿಂದ ಕತೆ, ಕವನಗಳನ್ನು ಬರೆಯುತ್ತಿದ್ದಾರೆ. ಇವರ ಕವನಗಳು 'ಕನ್ನಡ ಸಾಹಿತ್ಯ ಡಾಟ್‌ಕಾಮ್', 'ದೇಶ ಕಾಲ' ಇತರ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಸಂಪರ್ಕ :** Gopinat Tatachar
3 Cartwright drive. West Windsor, NJ08550
Email: sulabhano@hotmail.com

## ವೈ. ಶ್ರೀ. ನಟರಾಜ

ಡಾ. ವೈ.ಶ್ರೀ. ನಟರಾಜ ವೃತ್ತಿಯಿಂದ ಇಂಜಿನಿಯರು, ಪ್ರವೃತ್ತಿಯಿಂದ ಬರಹಗಾರರು. ಅಮೆರಿಕ ಕೇಂದ್ರ ಸರ್ಕಾರದ ಅಣುಶಕ್ತಿನಿಯಂತ್ರಣ ಸಂಸ್ಥೆಯಲ್ಲಿ ಜಿಯೋಟೆಕ್ನಿಕಲ್ ಇಂಜಿನಿಯರಿಂಗ್ ಮತ್ತು ರಾಕ್ ಮೆಕ್ಯಾನಿಕ್ಸ್ ವಿಭಾಗದ ತಾಂತ್ರಿಕ

ನಿಪುಣರಾಗಿ ಅಂತರರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ. ಎರಡು ನಾಟಕ ಸಂಕಲನಗಳನ್ನೂ, ಎರಡು ಕವನ ಸಂಕಲನಗಳನ್ನೂ ಬರೆದು ಪ್ರಕಟಿಸಿದ್ದಾರೆ. ಇವರ ಮೊದಲ ಕವನ ಸಂಗ್ರಹ 'ನಾನೂ ಅಮೆರಿಕನ್ ಆಗಿಬಿಟ್ಟೆ' (೧೯೮೮) ಅಮೆರಿಕನ್ನಡಿಗರಲ್ಲಿ ಅತ್ಯಂತ ಜನಪ್ರಿಯವಾಗಿದೆ. ಇವರ ಇತ್ತೀಚಿನ ಕವನ ಸಂಕಲನ 'ಮಧುಚಂದ್ರ-ಸಿರಿಕೇಂದ್ರ'ಕ್ಕೆ ೨೦೦೩ರಲ್ಲಿ ಗೊರೂರು ಪ್ರತಿಷ್ಠಾನದ ಪ್ರಶಸ್ತಿ ದೊರಕಿದೆ. ದಟ್ಸ್ ಕನ್ನಡ ಡಾಟ್ ಕಾಮ್ ಅಂತರ್ಜಾಲ ಪತ್ರಿಕೆಯಲ್ಲಿ 'ಜಾಲತರಂಗ' ಎಂಬ ಅಂಕಣದಲ್ಲಿ ಹಲವಾರು ಲೇಖನಗಳನ್ನೂ, ಕವನಗಳನ್ನೂ ಬರೆದಿದ್ದಾರೆ. ೧೯೮೫ರಲ್ಲಿ ಕಾವೇರಿಯ ಅಧ್ಯಕ್ಷರಾಗಿದ್ದ ನಟರಾಜರು ಅಮೆರಿಕದಲ್ಲಿ ಕನ್ನಡ ನಾಟಕಗಳನ್ನು ರಂಗದಮೇಲೆ ತಂದವರಲ್ಲಿ ಮೊದಲಿಗರು. ಇವರ ಮೊದಲ ನಾಟಕ 'ಮರಳಿ ಯತ್ನವ ಮಾಡು' ಕೊಲಂಬಿಯ ವಿಶ್ವವಿದ್ಯಾಲಯದ ಆಕಾಶವಾಣಿಯಲ್ಲಿ ಹಾಗು ಕೆನಡಾದ ಮಾಂಟ್ರಿಯಾಲಿನ ದೂರದರ್ಶನದಲ್ಲಿ ಪ್ರಸಾರವಾಗುವುದರ ಮೂಲಕ ಭಾರತದಾಚೆ ಬಾನುಲಿ ಮತ್ತು ದೂರದರ್ಶನದಲ್ಲಿ ಪ್ರಸಾರವಾದ ಪ್ರಥಮ ಕನ್ನಡ ನಾಟಕ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇವರ ಇತರ ನಾಟಕಗಳು ಅಮೆರಿಕದ ಅನೇಕ ಕನ್ನಡ ಕೂಟಗಳಲ್ಲೂ ಮತ್ತು ಕರ್ನಾಟಕದಲ್ಲೂ ಅನೇಕ ಪ್ರದರ್ಶನಗಳನ್ನು ಕಂಡಿವೆ. ಪೆನ್ಸಿಲ್ವೇನಿಯ, ನ್ಯೂಜೆರ್ಸಿ ಮತ್ತು ಡೆಲವೇರ್ ರಾಜ್ಯಗಳ ಕನ್ನಡ ಸಂಘ 'ತ್ರಿವೇಣಿ' ಇವರ ಪ್ರತಿಭೆಯನ್ನು ಗುರುತಿಸಿ ೧೯೮೮ರಲ್ಲಿ 'ನೀಲಮ್ಮ ಮೆಟ್‌ಗುಡ್' ಪಾರಿತೋಷಕವನ್ನಿತ್ತು ಸನ್ಮಾನಿಸಿತು. ಮಂಗಳೂರಿನ ಕನ್ನಡ ಪತ್ರಿಕೆ ಹೃದಯವಾಹಿನಿ ಇವರಿಗೆ ೧೯೯೭ರಲ್ಲಿ ಹೃದಯವಂತರು ಪಾರಿತೋಷಕವನ್ನಿತ್ತು ಸತ್ಕರಿಸಿತು. ಹ್ಯೂಸ್ಟನ್ ಕನ್ನಡ ವೃಂದ ೨೦೦೩ರಲ್ಲೂ ಅಮೆರಿಕದ ರಾಜಧಾನಿಯ ಕನ್ನಡ ಸಂಸ್ಥೆ ಕಾವೇರಿಯು ೨೦೦೩ ಮತ್ತು ೨೦೦೪ರಲ್ಲಿ ಇವರಿಗೆ ಗೌರವ ಫಲಕವನ್ನಿತ್ತು ಇವರ ಬಹುಮುಖ ಪ್ರತಿಭೆಯನ್ನು ಗುರುತಿಸಿವೆ. ಇವರು ತಮ್ಮ ಪತ್ನಿ ಗೀತಾ ಮತ್ತು ಮಕ್ಕಳೊಂದಿಗೆ ಮೇರೀಲ್ಯಾಂಡಿನ ಪೊಟೋಮೆಕ್‌ನಲ್ಲಿ ವಾಸಿಸುತ್ತಾರೆ.

**ಸಂಪರ್ಕ :** 10510 Beechknoll lane,
Potomac,
MD 20854, USA
Email: mysreena@aol.com

## ಶರತ್ ಜಿ.ನೊಣಬೂರು

ಹುಟ್ಟಿದ್ದು ಶಿವಮೊಗ್ಗದ ತೀರ್ಥಹಳ್ಳಿಯಲ್ಲಿ. ಮೆಕ್ಯಾನಿಕಲ್ ಇಂಜಿನಿಯರಿಂಗ್‌ನಲ್ಲಿ ತರಬೇತಿ, ಆನಂತರ ಎಂ ಬಿ ಎ ಮಾಡಿ ಸದ್ಯಕ್ಕೆ ನ್ಯೂಜರ್ಸಿಯ ಕ್ಲಿಂಟನ್‌ನಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ನೊಣಬೂರರು ಹವ್ಯಾಸಿ ಲೇಖಕರು.

ನೂರಕ್ಕೂ ಹೆಚ್ಚು ಹನಿಗವನಗಳು, ಕೆಲ ಕವನ, ಕತೆಗಳು, ನಗೆ ಲೇಖನಗಳನ್ನು ಬರೆದಿದ್ದಾರೆ.

**ಸಂಪರ್ಕ :** Sharath Kumar G Nonaburu
11, School Street, Apt 39, Clinton, NJ -08809
Email: sharath.ng@gmail.com

## ಪ್ರಕಾಶ್ ಪಯ್ಯಾರ್

ಪ್ರಕಾಶ್ ಕೆ. ರಾವ್. ಓದಿದ್ದು ಬಿ.ಕಾಂ., ಮೈಸೂರಿನಲ್ಲಿ ನಂತರ ಮುಂಬೈ ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ ಎ. ಕಂಪ್ಯೂಟರ್ ಡಿಪ್ಲೊಮ. ಯು ಎ ಇ ಯ ಅಲ್ಯೂಮಿನಿಯಮ್ ಉತ್ಪಾದನಾ ಸಂಸ್ಥೆಯೊಂದರಲ್ಲಿ ಲೆಕ್ಕಾಧಿಕಾರಿ. ನಾಟಕ ರಚನೆ, ನಿರ್ದೇಶನ. ಕತೆ, ಕವನ ಬರೆಯುವುದು ಹವ್ಯಾಸ. ಇವರ ಕತೆ, ಕವನ ಮತ್ತು ನಾಟಕಗಳು ಕರ್ನಾಟಕ ಮತ್ತು ಮುಂಬಯಿಯಿಂದ ಪ್ರಕಟಿತ ಎಲ್ಲಾ ದಿನಪತ್ರಿಕೆ, ವಾರಪತ್ರಿಕೆ ಹಾಗೂ ಮಾಸಿಕಗಳಲ್ಲಿ ಪ್ರಕಟಗೊಂಡಿವೆ.

ಪ್ರಕಟಿತ ಕೃತಿಗಳು : ೧.ವಿಪರ್ಯಾಸ (ಕವನ ಸಂಕಲನ)–೧೯೮೫ , ೨.ಕೂಗು (ಕವನ ಸಂಕಲನ)–೧೯೮೭, ೩.ರಂಗ ಧ್ವನಿ (ಕನ್ನಡ ರಂಗ ಭೂಮಿ ವಿಮರ್ಶೆ–ವಿವಿಧ ಲೇಖಕರು)ಸಂಪಾದಿತ– ೧೯೯೦ ೪.ಇಂದಿರಾ ಪ್ರಿಯದರ್ಶಿನಿ (ನಾಟಕ– ಮಾಜಿ ಪ್ರಧಾನಿ ದಿವಂಗತ ಶ್ರೀಮತಿ ಇಂದಿರಾ ಗಾಂಧಿ ಅವರ ಜೀವನಚರಿತ್ರೆ ಆಧಾರಿತ)–೧೯೯೯ ೫.ಸೂರ್ಯನಿಗೊಂದು ಸವಾಲು(ನಾಟಕ)– ೨೦೦೦. ೬.ತಾರೆ ಎಣಿಸಿ ವೊತ್ತ ಹೇಳಿ. (ಅನಿವಾಸಿ ಕವನ ಸಂಕಲನ–ಸಂಪಾದಿತ–ಯು.ಎ.ಇ.ಯಿಂದ ಪ್ರಕಟಿತ)–೨೦೦೪ ೭.ಕನ್ನಡ ನಾಡು ನುಡಿ ರಕ್ಷಣೆ ಯಾಕೆ ಮತ್ತು ಹೇಗೆ? (ವಿವಿಧ ಲೇಖಕರು– ಸಂಪಾದಿತ)–೨೦೦೫

ಕಳೆದ ಇಪ್ಪತ್ತು ವರ್ಷಗಳಿಂದ ಹೊರನಾಡಿನಲ್ಲಿ ಕನ್ನಡ ಚಟುವಟಿಕೆಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ೧೯೮೫ರಲ್ಲಿ ಮುಂಬೈಯಲ್ಲಿ ಧ್ವನಿ ಬಳಗದ ಸ್ಥಾಪಕ ಅಧ್ಯಕ್ಷರಾಗಿ ಆ ಮೂಲಕ ನಾಟಕ ಮತ್ತು ಸಾಹಿತ್ಯಿಕ ಚಟುವಟಿಕೆಗಳು, ನಾಟಕ ದಿಗ್ಗಜರಾದ ಕೈಲಾಸಂ, ಶ್ರೀರಂಗರ ನಾಟಕಗಳು ಸೇರಿದಂತೆ ೨೫ಕ್ಕೂ ಹೆಚ್ಚು ನಾಟಕಗಳ ನಿರ್ದೇಶಿಸಿದ್ದಾರೆ. ೨೦೦೧ರಲ್ಲಿ ಯು.ಎ.ಇ.ಗೆ ವಲಸೆಬಂದು ಅಲ್ಲಿ 'ಧ್ವನಿ' ಬಳಗದ ಘಟಕ ಸ್ಥಾಪಿಸಿ ಅಲ್ಲಿನ ಅನೇಕ ಕನ್ನಡ ಚಟುವಟಿಕೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.

**ಸಂಪರ್ಕ :** ಅಂಚೆಪೆಟ್ಟಿಗೆ ಸಂಖ್ಯೆ ೨೩೨೩೫,
ಶಾರ್ಜಾ, ಯು. ಎ. ಇ.
Email: prakashpayyar@yahoo.com

**ಸದಾಶಿವ ಫಡ್ನಿಸ್**

ಕಳೆದ ನಾಲ್ಕು ವರ್ಷಗಳಿಂದ ಸ್ಯಾಂಡಿಯೆಗೊದಲ್ಲಿ ಕೆಲಸ. ಬರವಣಿಗೆಯನ್ನ ಕೈಗೆತ್ತಿಕೊಂಡಿದ್ದು ಇತ್ತೀಚಿನ ನಾಲ್ಕಾರು ತಿಂಗಳಲ್ಲಿ. ಮೊದಲ ಕಥೆ 'ಓಡಿಹೋದವರು' ಅಂತರ್ಜಾಲದಲ್ಲಿ ಬೆಳಕು ಕಂಡಿದೆ. ನಾಟಕಗಳಲ್ಲಿ ಅದರಲ್ಲೂ ಅಸಂಗತ ನಾಟಕಗಳಲ್ಲಿ ವಿಶೇಷ ಆಸಕ್ತಿ. ಸ್ಯಾಂಡಿಯಾಗೋದಲ್ಲಿನ ಕನ್ನಡ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಚಿತ್ರಕಲೆ (ಜಲವರ್ಣ) ಮತ್ತು ಛಾಯಾಚಿತ್ರ ಇವರ ಉಳಿದ ಹವ್ಯಾಸಗಳು.

**ಸಂಪರ್ಕ :** Sadashiv Phadnis
13539 Sparren Av
San Diego CA 92129
Email:sadashiv.phadnis@sbcglobal.net

**ಇರ್ಶಾದ್ ಮೂಡಬಿದ್ರಿ:**

ದುಬೈ ಜಾಹೀರಾತು ಸಂಸ್ಥೆಯೊಂದರಲ್ಲಿ ಉದ್ಯೋಗಿಯಾಗಿರುವ ಇರ್ಶಾದ್ ಮೂಡಬಿದ್ರಿಯುವರು ದಕ್ಷಿಣ ಕನ್ನಡದ ಯುವ ಪೀಳಿಗೆಯ ಪ್ರಮುಖ ಬರಹಗಾರರಲ್ಲೊಬ್ಬರು. ಅವರ ಕಥೆ, ಚಿತ್ರಲೇಖನ, ನುಡಿ ಬರಹ, ಚುಟುಕುಗಳು, ನಗೆಬರಹ ಇತ್ಯಾದಿ ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಬಿ ಎ ಪದವಿಯೊಂದಿಗೆ ಪತ್ರಿಕೋದ್ಯಮವನ್ನು ವ್ಯಾಸಂಗ ಮಾಡಿರುವ ಇರ್ಶಾದ್, ವಿದ್ಯಾರ್ಥಿ ದಿನಗಳಿಂದಲೇ ಸಕ್ರಿಯವಾಗಿ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕಳೆದ ಹತ್ತು ವರ್ಷಗಳಿಂದ ದುಬೈಯಲ್ಲಿ ನೆಲೆಸಿದ್ದಾರೆ. ಪತ್ನಿ ನಸೀಮಾ, ಮಕ್ಕಳು ನಿಹಾದ್ ಮೊಹಮ್ಮದ್ ಮತ್ತು ನಾಜ಼್ಮಿ.

ಇರ್ಶಾದ್ ಅವರ ಚೊಚ್ಚಲ ನಗೆಬರಹಗಳ ಸಂಕಲನ 'ರಗಳೆ ರಾಗಿಣಿ' ಇತ್ತೀಚೆಗೆ ಬಿಡುಗಡೆಯಾಗಿದೆ. ಇವರ 'ದುಬೈ ನೆನಪುಗಳು' ಕೂಡ ಅಚ್ಚಾಗಿದ್ದು ಶೀಘ್ರ ಬಿಡುಗಡೆಗೊಳ್ಳಲಿದೆ. 'ದುಬೈ ನೆನಪುಗಳು' ಮಲಯಾಳಂ ಭಾಷೆಗೂ ಅನುವಾದಿಸಲ್ಪಟ್ಟು ಪ್ರಕಟವಾಗುತ್ತಿದೆ.

**ಸಂಪರ್ಕ :** irshad mudabidri
sanable digital
post box no 83917
dubai UAE

## ನಳಿನಿ ಮೈಯ

ಇವರು ಶಿಕಾಗೊ ನಗರದ ಬಡಾವಣೆಯಾದ ಡೇರಿಯನ್ ಎಂಬಲ್ಲಿ ತಮ್ಮ ಪತಿ ಸುಬ್ರಾಯ ಮೈಯ ಅವರೊಡನೆ ವಾಸವಾಗಿದ್ದಾರೆ. ಇವರ ಕಥೆ ಮತ್ತು ಲೇಖನಗಳು ಅಮೆರಿಕನ್ನಡ, ಶಿಕಾಗೊ ವಲಯದ ಕನ್ನಡ ಪತ್ರಿಕೆಯಾದ ಸಂಗಮ, ಕನ್ನಡ ಪ್ರಭ, ಉದಯವಾಣಿ, ಪ್ರಜಾವಾಣಿ, ಇಂಟರ್ನೆಟ್ ಪೋರ್ಟಲ್ 'ದಟ್ಸ್ ಕನ್ನಡ ಡಾಟ್‌ಕಾಮ್' ಮುಂತಾದ ಕಡೆ ಪ್ರಕಟವಾಗಿವೆ. 'ಮರೀಚಿಕೆ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. 'ಕಾರಂತ ಚಿಂತನ' ಮತ್ತು 'ಕುವೆಂಪು ಸಾಹಿತ್ಯ ಸಮೀಕ್ಷೆ' ಪುಸ್ತಕಗಳ ಸಹ ಸಂಪಾದಕಿಯಾಗಿ ಕೆಲಸ ಮಾಡಿದ್ದಾರೆ. ಶಿಕಾಗೊ ವಲಯದ ಕನ್ನಡ ಪತ್ರಿಕೆ ಸಂಗಮದ ಸಂಪಾದಕಿಯಾಗಿದ್ದರು.

**ಸಂಪರ್ಕ :** 18194 W Holly Avenue
Darien, Illinois 60561
ವಿ ಅಂಚೆ nmaiya@hotmail.com

## ವೈ. ಆರ್. ಮೋಹನ್

ಇವರು ಸಮಾಜಶಾಸ್ತ್ರದಲ್ಲಿ ಪ್ರಾಧ್ಯಾಪಕರಾಗಿದ್ದು, ಈಗ ನಿವೃತ್ತರಾಗಿ ಟಸ್ಕಲೂಸ, ಅಲಬಾಮಾದಲ್ಲಿ ನೆಲೆಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಅಪಾರ ಆಸಕ್ತಿಯಿದ್ದು, ಅಲಬಾಮ, ಟೆನಿಸ್ಸೀ ಮತ್ತು ಮಿಸ್ಸಿಸ್ಸಿಪಿ ವಲಯಗಳನ್ನೊಳಗೊಂಡ 'ಸಹ್ಯಾದ್ರಿ ಕನ್ನಡ ಕೂಟ'ವನ್ನು ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಹಲವು ಲೇಖನಗಳೂ, ಕವನಗಳೂ 'ಪ್ರಜಾವಾಣಿ' 'ತರಂಗ' ಮುಂತಾದ ಪತ್ರಿಕೆಗಳಲ್ಲೂ, ವಿಶ್ವ ಸಮ್ಮೇಳನ ಸಂಚಿಕೆಗಳಲ್ಲೂ ಪ್ರಕಟವಾಗಿವೆ. ಇವರ 'ನೆನಪುಗಳು' ಎಂಬ ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. ಇವರು 'ಪಾರ್ಕಿನ್ಸನ್ ಖಾಯಿಲೆಯಿಂದ ನಾನೇನು ಕಲಿತೆ ?' ಎಂಬ ಅಪೂರ್ವ ಅನುಭವ ಪುಸ್ತಕವನ್ನೂ ೨೦೦೩ರಲ್ಲಿ 'ಅಮೆರಿಕಾಯಣ'ವೆಂಬ ಒಂದು ಬೃಹತ್ ಗ್ರಂಥವನ್ನು ರಚಿಸಿದ್ದಾರೆ. ಮಡದಿ ನಂದಾ ಇವರಿಗೆ ಸದಾ ಪ್ರೋತ್ಸಾಹ ಒದಗಿಸುತ್ತಿದ್ದಾರೆ.

**ಸಂಪರ್ಕ :** 1826, 37th street, NE
Tascaloosa, Alabama 35406
Email: yrmohan@worldnet.att.net

## ಸಂಧ್ಯಾ ರವೀಂದ್ರನಾಥ್

ಉತ್ತರ ಕ್ಯಾಲಿಫ಼ೋರ್ನಿಯಾದಲ್ಲಿ 'ಇಂಟೆಲ್ ಕಾರ್ಪೊರೇಷನ್' ಸಂಸ್ಥೆಯಲ್ಲಿ ಇಂಜಿನಿಯರಾಗಿ ಉದ್ಯೋಗ ಮಾಡುತ್ತಿರುವ ಇವರು ಕನ್ನಡ ಸಾಹಿತ್ಯದಲ್ಲಿ ಬಹಳ

ಆಸಕ್ತಿಯುಳ್ಳವರು. ಅಲ್ಲಿನ ಕನ್ನಡ ಕೂಟದ ಕಾರ್ಯಕಾರಿ ಸಮಿತಿ ಮತ್ತು ಸ್ಮರಣ ಸಂಚಿಕೆಯಲ್ಲೂ ಸಂಪಾದಕಿಯಾಗಿ ಸೇವೆ ಸಲ್ಲಿಸಿರುತ್ತಾರೆ. ೨೦೦೨ರಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದ ಸಂಪಾದಕ ಮಂಡಳಿಯಲ್ಲೂ ಇವರು ಕಾರ್ಯ ನಿರ್ವಹಿಸಿದ್ದಾರೆ. ಇವರು ಹಲವು ನಾಟಕಗಳನ್ನು ರಚಿಸಿ, ನಿರ್ದೇಶಿಸಿದ್ದಾರೆ. ಜನಪ್ರಿಯ ಚಲನಚಿತ್ರ 'ಅಮೆರಿಕ ಅಮೆರಿಕ' ಕಥಾಮಂಡಳಿಯ ಸದಸ್ಯರಾಗಿದ್ದಲ್ಲದೆ, ಚಿತ್ರದಲ್ಲಿ ಪ್ರಮುಖ ಪಾತ್ರವೊಂದರಲ್ಲಿಯೂ ಶ್ರೀಮತಿ ಸಂಧ್ಯಾ ನಟಿಸಿದ್ದರು. ೨೦೦೩ರಲ್ಲಿ 'ಮರಳಿಬರುವೆ ನಾ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನೂ ಪ್ರಕಟಿಸಿದ್ದಾರೆ. ಇವರ ಅನೇಕ ಕತೆ, ಕವನ, ನಾಟಕ ಹಾಗೂ ಅಮೆರಿಕನ್ನಡ ಗಾದೆಗಳು ವಿವಿಧ ಪತ್ರಿಕೆಗಳಲ್ಲಿಯೂ, ಕನ್ನಡ ಪ್ರಮುಖ ಅಂತರ್ಜಾಲ ಪತ್ರಿಕೆಗಳಲ್ಲಿಯೂ ಪ್ರಕಟವಾಗಿವೆ. ಪತಿ ರವೀಂದ್ರನಾಥರ ನಿರ್ದೇಶನದಲ್ಲಿ ಎರಡು ಸಿ.ಡಿ. 'ಸಂಧ್ಯಾ ಮತ್ತು ದಿವ್ಯ' ಗಳನ್ನೂ ಪ್ರಕಟಿಸಿದ್ದಾರೆ. 'ಪೂರ್ವಾಪರ' ಚಿತ್ರಕ್ಕೆ ಇವರು ಗೀತೆಗಳನ್ನೂ ರಚಿಸಿದ್ದಾರೆ. ಪತಿ ಹಾಗೂ ಮಕ್ಕಳು ದಿವ್ಯಾಸ್ವರೂಪ್ ಮತ್ತು ಕೃತಿ ಇವರೊಡನೆ ಸ್ಯಾನ್ ಫ್ರಾನ್ಸಿಸ್ಕೋ ಸಮೀಪದ ಮಿಲ್ಪಿಟಾಸ್‌ನಲ್ಲಿ ವಾಸವಾಗಿದ್ದಾರೆ.

ಸಂಪರ್ಕ: 874, Strickroth Drive,
Milpitas, CA-95035
Email: divyakriti@hotmail.com

**ವಿಮಲಾ ರಾಜಗೋಪಾಲ್ :**

ಕನ್ನಡದ ಪ್ರಸಿದ್ಧ ಸಾಹಿತಿ ಶ್ರೀ ಎಲ್. ಗುಂಡಪ್ಪನವರ ಮಗಳು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ B A (Hons) ಪದವಿ ಗಳಿಸಿದರು. ಜಿ. ಪಿ. ರಾಜರತ್ನಂ, ಎ. ಎನ್. ಮೂರ್ತಿರಾವ್, ಕೆ. ಅನಂತರಾಮಯ್ಯನವರ ಶಿಷ್ಯೆ. ಮುಂದೆ ಹಲವಾರು ವರ್ಷ ಆಕಾಶವಾಣಿಯಲ್ಲಿ ಕೆಲಸ. ಕನ್ನಡ ಜಾನಪದ ಸಂಗೀತದಲ್ಲಿ ಇವರೂ, ಇವರ ಸಹೋದರಿಯರಾದ ಡಾ. ಎಲ್. ಜಿ. ಸುಮಿತ್ರ ಮತ್ತು ಶ್ರೀಮತಿ ಕಮಲ ಎಮ್. ಎಸ್. ಬಾಲುರವರೂ ತಮ್ಮ ಶಾಲಾಕಾಲೇಜು ದಿನಗಳಿಂದಲೂ ಪ್ರಸಿದ್ಧಿ ಪಡೆದವರು. ಪುತಿನ ಅವರ ಗೋಕುಲ ನಿರ್ಗಮನವನ್ನು ಸ್ವತಃ ಅವರಿಂದಲೇ ಕಲಿತು ಜನಪ್ರಿಯಗೊಳಿಸಿದವರು. ರೇಡಿಯೋ ಮತ್ತು ಇತರ ವೇದಿಕೆಗಳಲ್ಲಿ ಅಸಂಖ್ಯಾತ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. ಕಳೆದ ೩೫ ವರ್ಷಗಳಿಂದ ಫಿಲಿಡೆಲ್ಫಿಯ ಬಳಿ ವಾಸಿಸುತ್ತಿರುವ ಇವರು, ಆ ಸುತ್ತಮುತ್ತಲಿನ ಅನೇಕ ಗಣ್ಯ ಸಂಸ್ಥೆಗಳಲ್ಲಿ ಭಾರತೀಯ ಸಂಸ್ಕೃತಿ ಮತ್ತು ಕನ್ನಡ ಜಾನಪದ ಸಾಹಿತ್ಯದ ಬಗ್ಗೆ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. Elwyn Inc. ಎಂಬಲ್ಲಿ Music and Reception Therapist ಆಗಿ ಕೆಲಸ ಮಾಡುತ್ತಿದ್ದಾರೆ.

University of Pennsylvaniaದ South Asia Studies Department ನಲ್ಲಿ ಕಳೆದ ಹಲವಾರು ವರ್ಷಗಳಿಂದ ಕನ್ನಡ ಕಲಿಸುತ್ತಿದ್ದಾರೆ. Peace Corpsನಲ್ಲಿಯೂ ಕನ್ನಡ ಶಿಕ್ಷಕಿಯಾಗಿ ಕೆಲಸ ಮಾಡಿದ್ದಾರೆ. ಅಂತರ್ಜಾಲದ ಮೂಲಕ ಕನ್ನಡ ಕಲಿಸುವ ಎರಡು ಯೋಜನೆಯನ್ನು ಕೈಗೆತ್ತಿಕೊಂಡಿದ್ದಾರೆ. ಹಲವಾರು ಕತೆ, ಲೇಖನಗಳನ್ನೂ, 'ತುಂಟರ ತೇರು' ಎಂಬ ಮಕ್ಕಳ ಪುಸ್ತಕವನ್ನೂ, ಕನ್ನಡ ಜಾನಪದ ಸಂಗೀತದ ಧ್ವನಿಮುದ್ರಿಕೆಯನ್ನೂ (CD)ಯನ್ನೂ ಹೊರತಂದಿದ್ದಾರೆ.

**ಸಂಪರ್ಕ :** 604, Autumn Lane
Media, Pennsylvania 19063
Email: hyr1195@aol.com

## ಗೋಪೀನಾಥ ರಾವ್

ಉಡುಪಿ ತಾಲೂಕು ಕಟಪಾಡಿಯಲಿ ಹುಟ್ಟಿದ್ದು. ತಂದೆ: ಹೆಸರಾಂತ ಯಕ್ಷಗಾನ ಅರ್ಥಧಾರಿ, ಕನ್ನಡ ಅಧ್ಯಾಪಕರಾಗಿದ್ದ ದಿ. ಮಟ್ಟಿ ಸುಬ್ಬರಾವ್. ವೃತ್ತಿಯಲ್ಲಿ ಚಾರ್ಟರ್ಡ್ ಅಕೌಂಟೆಂಟ್ ಆಗಿ ಹತ್ತು ವರ್ಷಗಳಿಂದ ದುಬೈಯ ಖಾಸಗಿ ಕಂಪೆನಿಯೊಂದರಲ್ಲಿ ಫೈನಾನ್ಸಿಯಲ್ ಕಂಟ್ರೋಲರ್ ಆಗಿ ಕೆಲಸ ಮಾಡುತ್ತಿದ್ದಾರೆ. ಇವರ ಹವ್ಯಾಸ, ಕನ್ನಡ ಸಾಹಿತ್ಯ ಮತ್ತು ಯಕ್ಷಗಾನ. www.kannadadhvani.com ಎಂಬ ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆ ಮತ್ತು ಮನೋರಂಜನೆಗೆ ಮೀಸಲಾಗಿಟ್ಟ ಅಂತರ್ಜಾಲ ವಾರ ಪತ್ರಿಕೆಯ ಸಂಪಾದಕ.

**ಸಂಪರ್ಕ :** post box 1271, Dubai, UAE.
Email: raogopi@yahoo.com

## ವಲ್ಲೀಶ ಶಾಸ್ತ್ರಿ (ಮವಾಸು)

ಮತ್ತಿಗೋಡು (ಹಾಸನಜಿಲ್ಲೆ) ಎಂಬ ಹಳ್ಳಿಯಲ್ಲಿ ಹುಟ್ಟಿ SSLCಯವರೆಗಿನ ವಿದ್ಯಾಭ್ಯಾಸವನ್ನು ಹಳ್ಳಿಯಲ್ಲೇ ಪೂರೈಸಿದವರು. ಪ್ರೌಢಶಾಲೆಯಲ್ಲಿದ್ದಾಗಲೇ ನಾಟಕದ ಗೀಳನ್ನು ಹಚ್ಚಿಕೊಂಡಿದ್ದ ಇವರು ಬೆಂಗಳೂರಿನ ಕಾಲೇಜು ಜೀವನದಲ್ಲೂ ತಮ್ಮ ನಾಟಕದ ಹವ್ಯಾಸವನ್ನು ಮುಂದುವರಿಸಿ ಬೆಂಗಳೂರಿನ ಶ್ರೇಷ್ಠ ಹವ್ಯಾಸಿ ನಾಟಕ ತಂಡ 'ಬೆನಕ'ದಲ್ಲಿ ಸಕ್ರಿಯವಾಗಿ ಭಾಗವಹಿಸಿ ಅನೇಕ ನಾಟಕಗಳಲ್ಲಿ ನಟಿಸಿದ್ದಾರೆ. 'ಹ್ಯಾಮ್ಲೆಟ್', 'ಸತ್ತವರ ನೆರಳು', 'ಜೋಕುಮಾರ ಸ್ವಾಮಿ' ಹೀಗೆ ಹಲವು ನಾಟಕಗಳಲ್ಲಿ ಪ್ರದರ್ಶನಗಳನ್ನು ನೀಡಿದ ಹವ್ಯಾಸಿ ನಟರು. ವೃತ್ತಿಯಲ್ಲಿ ಕಂಪ್ಯೂಟರ್ ಕನ್ಸಲ್ಟಂಟ್ ಆಗಿರುವ ಇವರು

ಸೌದಿ ಅರೇಬಿಯಾ, ಇಟಲಿ, ಇಂಗ್ಲೆಂಡ್ ದೇಶಗಳಲ್ಲಿ ಕೆಲಸ ಮಾಡಿ ಕಳೆದ ೭ ವರ್ಷಗಳಿಂದ ಅಮೆರಿಕೆಯಲ್ಲಿ ನೆಲಸಿದ್ದಾರೆ. ಅಮೆರಿಕೆಯ ಕನ್ನಡ ಸಂಘಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಇವರು, ದಕ್ಷ ಸಂಘಟಕರು. ಇವರು ತಮ್ಮದೇ ಆದ ಶೈಲಿಯಲ್ಲಿ ಎರಡು ಹಾಸ್ಯ ನಾಟಕಗಳನ್ನು ಬರೆದು ಆಡಿಸಿ, ಯಮನ ಪಾತ್ರದಲ್ಲಿ ನಟಿಸಿ ಅಮೆರಿಕನ್ನಡಿಗರಲ್ಲಿ ಬಹಳ ಜನಪ್ರಿಯ ರಂಗ ನಟರಾಗಿದ್ದಾರೆ. 'thatskannada.com' ಅಂತರ್ಜಾಲ ಪತ್ರಿಕೆಯಲ್ಲಿ ಹಲವಾರು ಲೇಖನಗಳನ್ನು ಬರೆದಿದ್ದಾರೆ. ಬಿಡುವಿನ ವೇಳೆಯಲ್ಲಿ ಕಥೆ ಕಾದಂಬರಿಗಳನ್ನು ಓದುವ ಇವರು, ಸಣ್ಣ ಕಥೆಗಳನ್ನು ಬರೆಯುವ ಹವ್ಯಾಸಕ್ಕೂ ಕೈ ಹಾಕಿದ್ದಾರೆ. ಅವರ ಅಪ್ರಕಟಿತ 'ಚಿಕ್ಕೀರಿ', 'ಹಕ್ಕಿ ಗೂಡು ಸೇರಿತು' ಎಂಬ ಸಣ್ಣಕಥೆಗಳು ಹಾಗೂ 'ನ್ಯೂಯಾರ್ಕ್‌ನಲ್ಲಿ ಯಮ', 'ಯಮನ ಕಾಲ್ ಸೆಂಟರ್', 'ವೀಕ್ ಎಂಡ್ ಗಂಡ' ಎಂಬ ನಾಟಕಗಳನ್ನು ಪ್ರಕಟಿಸಬೇಕೆಂಬ ಹಂಬಲವೂ ಇದೆ.

**ಸಂಪರ್ಕ :** ೧೬೩೫೨ ವಿಲ್ಲೋಮಿಸ್ಟ್ ಕೋರ್ಟ್, ಚೀನೋ ಹಿಲ್ಸ್,
ಕ್ಯಾಲಿಫ್ಹೋರ್ನಿಯಾ – ೯೧೭೦೯, ಯು.ಎಸ್.ಎ
Email:vshastry@yahoo.com

## ಪ್ರವೀಣ್ ಶಿವಶಂಕರ್

ಹುಟ್ಟಿದ್ದು ಬೆಂಗಳೂರಿನಲ್ಲಿ, ಸದ್ಯಕ್ಕೆ ಅಮೆರಿಕಾದ ಕಾನ್ಸಸ್ ರಾಜ್ಯದಲ್ಲಿರುವ ವಿಚಿಟಾ ನಗರದಲ್ಲಿನ ವಿಚಿಟಾ ಸ್ಟೇಟ್ ಯೂನಿವರ್ಸಿಟಿಯಲ್ಲಿ ಎಂ.ಎಸ್ ಪದವಿಗೋಸ್ಕರ ವ್ಯಾಸಂಗ ಮಾಡುತ್ತಿದ್ದಾರೆ. 'ಹೀಗೊಂದು ದಿನ' ಇವರ ಮೊದಲ ಪ್ರಕಟಿತ ಕತೆ.

**ಸಂಪರ್ಕ :** Email: praveen.shivashankar@gmail.com

## ಗುಂಡು ಶಂಕರ್

ಗುಂಡು ಶಂಕರ್ ಅವರು ಹುಟ್ಟಿದ್ದು ಚಿತ್ರದುರ್ಗದಲ್ಲಿ. ಆದರೆ, ಅವರ ತಂದೆಯವರ ಉದ್ಯೋಗದಿಂದಾಗಿ ಬೆಳೆದದ್ದು ಹೆಚ್ಚಾಗಿ ಕರ್ನಾಟಕದಿಂದ ಹೊರಗೆ. ಹಾಗಾಗಿ ಶಾಸ್ತ್ರೋಕ್ತ ಕನ್ನಡ ಅಧ್ಯಯನವಾಗಿಲ್ಲ. ಆದರೂ ಅವರು ಕನ್ನಡದಲ್ಲಿ ಮತ್ತು ಕನ್ನಡ ಸಾಹಿತ್ಯದಲ್ಲಿ ಬಹಳ ಆಸಕ್ತಿಯುಳ್ಳವರು. ಅವರ ಮನೆಯಲ್ಲಿರುವ ಅನೇಕ ಪುಸ್ತಕಗಳನ್ನು ಓದಿ ಕನ್ನಡದಲ್ಲಿ ಅಭಿಮಾನ ಹುಟ್ಟಿಸಿಕೊಂಡವರು. Indian Institute of Science ನಿಂದ B.E. ಡಿಗ್ರಿ ಪಡೆದು ನಂತರ ಕಲ್ಕತ್ತದ India Institute of Management ನಿಂದ M B A ಡಿಗ್ರಿ ಪಡೆದರು. ಗುಂಡುಶಂಕರರು ಅಮೆರಿಕಕ್ಕೆ ವಲಸೆ ಬಂದು ಇಪ್ಪತ್ತು ವರ್ಷಗಳ ಮೇಲಾಗಿದೆ. ಐಟಿ ಕನ್ಸಲ್ಟೆಂಟ್ ಆಗಿ ಹಲವು ವರ್ಷ ಕೆಲಸ ಮಾಡಿದಮೇಲೆ, ಈಗ ಪೆನ್ಸಿಲ್ವೇನಿಯಾದ ಫ಼ಾರ್ಮಸ್ಯೂಟಿಕಲ್ ಕಂಪೆನಿಯೊಂದರಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ನ್ಯೂಜರ್ಸಿಯ ಫ಼್ರೀಹೋಲ್ಡ್ ಎಂಬಲ್ಲಿ ವಾಸ ಮಾಡುತ್ತಿದ್ದಾರೆ.

**ಸಂಪರ್ಕ :** 194, Schank Road
Freehold, NJ- 07728
Email: gundu_shankar@hotmail.com

## ಕೆ. ತ್ರಿವೇಣಿ ಶ್ರೀನಿವಾಸರಾವ್

ಹುಟ್ಟೂರು -- ಚಿಕ್ಕಮಗಳೂರು ಜಿಲ್ಲೆಯ ಕಡೂರು. ಪ್ರಾರಂಭದ ಕವನಗಳು ಪ್ರಕಟವಾಗಿದ್ದು 'ಲಂಕೇಶ್ ಪತ್ರಿಕೆ'ಯಲ್ಲಿ. ನಾಡಿನ ಪ್ರಮುಖ ಮಾಸಿಕಗಳಾದ ತುಷಾರ, ಮಯೂರಗಳಲ್ಲಿ ಅನೇಕ ಸಣ್ಣಕಥೆಗಳು ಬೆಳಕು ಕಂಡಿವೆ. 'ದಯಾಮರಣ'ಎಂಬ ಸಣ್ಣಕಥೆಯೊಂದು ಅದೇ ಹೆಸರಿನ ಕಿರುಚಿತ್ರವಾಗಿ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಿದೆ. ಭದ್ರಾವತಿ ಆಕಾಶವಾಣಿಯಲ್ಲಿಯೂ ಅನೇಕ ಬಾರಿ ಸ್ವರಚಿತ ಕವನ ಮತ್ತು ಸಣ್ಣಕಥೆಗಳನ್ನು ವಾಚಿಸುವ ಅವಕಾಶ ದೊರಕಿತ್ತು. ಕನ್ನಡದ ಪ್ರಮುಖ ಅಂತರ್ಜಾಲ ಪತ್ರಿಕೆ 'ದಟ್ಸ್ ಕನ್ನಡ ಡಾಟ್‌ಕಾಂನಲ್ಲಿ ಅನೇಕ ಕವಿತೆ ಮತ್ತು ಲೇಖನಗಳು ಪ್ರಕಟವಾಗಿದ್ದು, ಸದ್ಯಕ್ಕೆ 'ತುಳಸಿವನ' ಅಂಕಣ ನಿರ್ವಹಣೆ. ಲಲಿತ ಪ್ರಬಂಧ ಮತ್ತು ವೈಚಾರಿಕ ಲೇಖನಗಳಲ್ಲಿ ಹೆಚ್ಚಿನ ಆಸಕ್ತಿ. ಪ್ರಸ್ತುತ ವಾಸ, ಅಮೆರಿಕದ ಇಲಿನಾಯ್ ರಾಜ್ಯದ ಹ್ಯಾನೋವರ್ ಪಾರ್ಕ್ ಎಂಬ ಬಡಾವಣೆಯಲ್ಲಿ.

**ಸಂಪರ್ಕ :** 1762, Saint Ann Drive
Hanover park, Illinois 60133
email - venivas@hotmail.com

## ನಂಜುಂಡ ಸ್ವಾಮಿ

ಇವರು ೧೯೩೫ರಲ್ಲಿ ಮೈಸೂರಿನಲ್ಲಿ ಜನಿಸಿದರು. ಅಲ್ಲಿಯೇ ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ. ೧೯೬೧ರಲ್ಲಿ ವೈದ್ಯವಿದ್ಯಾಭ್ಯಾಸ ಮುಗಿಸಿ ಉನ್ನತ ವ್ಯಾಸಂಗಕ್ಕಾಗಿ ಅಮೆರಿಕೆಗೆ ಬಂದರು. ಇಲ್ಲಿ ಶಸ್ತ್ರಚಿಕಿತ್ಸೆಯಲ್ಲಿ ಉನ್ನತ ಪದವಿಗಳನ್ನು (F.R.C.S., F.A.C.S.,)ಗಳಿಸಿ ಫ್ಲಾರಿಡ ಸಂಸ್ಥಾನದಲ್ಲಿ ನೆಲೆಸಿದರು. ಶಸ್ತ್ರಚಿಕಿತ್ಸೆಯ ಸಂಶೋಧನೆ, ಶಿಕ್ಷಣ ಮತ್ತು ಚಿಕಿತ್ಸೆಯಲ್ಲಿ ತೊಡಗಿ ಈಗ ನಿವೃತ್ತರಾಗಿ ಸಾಹಿತ್ಯದ ಕಡೆ ಗಮನ ಸಾಗಿಸಿದ್ದಾರೆ. 'ನಿಶ್ಯಬ್ದ ಸಂಗೀತ' 'ಕಾನನದ ಮಲ್ಲಿಗೆ' 'ಕಲಸುಮೇಲೋಗರ' ಮತ್ತು 'ಸುಶ್ರುತ ನಡೆದ ಹಾದಿಯಲ್ಲಿ....' ಅವರ ಕನ್ನಡ ಪುಸ್ತಕಗಳು. 'Silent Music' ಮತ್ತು 'Where Angels Roamed' ಅವರ ಇಂಗ್ಲಿಷ್ ಕೃತಿಗಳು.

**ಸಂಪರ್ಕ :** Nanjunda Swamy. M.D.
3650 S.W.24th Avenue Rd. , Okala. Fl. 34474.
Email: sita@peoplepc.com

## ವಿಶ್ವನಾಥ ಹುಲಿಕಲ್

ಶ್ರೀಯುತರು ವೃತ್ತಿಯಿಂದ ಸಾಫ್ಟ್‌ವೇರ್ ಇಂಜಿನಿಯರ್ ಆದರೂ, ಪ್ರವೃತ್ತಿಯಿಂದ ಕನ್ನಡ ಬರಹಗಾರರು, ಅನುವಾದಕರು, ಸಣ್ಣ ಕಥೆಗಾರರು, ವಿಮರ್ಶಕರು ಮತ್ತು ಸಾಹಿತ್ಯ ಸಂಘಟಕರು ಹಾಗೂ ಭಾಷಣಕಾರರು. ಶ್ರೀಯುತರು ಇದುವರೆವಿಗೆ ಮೂರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. 'ಹೃದಯ', 'ಸೌರಭ' (ಸಣ್ಣ ಕಥೆಗಳ ಸಂಕಲನಗಳು)'ಮಂಥನ' (ಅನುವಾದಿತ ಲೇಖನಗಳ ಸಂಕಲನ). ಎರಡು ಪುಸ್ತಕಗಳನ್ನು ಸಂಪಾದಿಸಿದ್ದಾರೆ: 'ವಿಷು' (ಸಾಹಿತ್ಯಕ ಸಂಚಿಕೆ) ಮತ್ತು 'Dots and Lines' (Translated Kannada Short Stories). ರಾಜ್ಯ ಪ್ರಶಸ್ತಿ ಗಳಿಸಿದ ಜನಪ್ರಿಯ ಚಲನಚಿತ್ರ 'ಅಮೆರಿಕ ಅಮೆರಿಕ'ಕ್ಕೆ ಕಥೆ ಬರೆದವರಲ್ಲಿ ಇವರೂ ಒಬ್ಬರು. ಸಾಹಿತ್ಯಾಸಕ್ತರಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಸದಭಿರುಚಿಯನ್ನು ಪೋಷಿಸಿ, ವೃದ್ಧಿಸುವ ದೃಷ್ಟಿಯಿಂದ 'ಸಾಹಿತ್ಯ ಗೋಷ್ಠಿ'ಯನ್ನು ಉತ್ತರ ಕ್ಯಾಲಿಫೋರ್ನಿಯದಲ್ಲಿ ನವೆಂಬರ್ ೨೦೦೧ರಲ್ಲಿ ಸ್ಥಾಪಿಸಿ, ಸಾಹಿತ್ಯದ ವಿವಿಧ ಪ್ರಕಾರಗಳ ಮೇಲೆ ಪ್ರತಿ ತಿಂಗಳಿಗೆರಡರಂತೆ ಉಪನ್ಯಾಸಗಳನ್ನು ಸ್ಯಾನ್‌ಫ್ರಾನ್‌ಸಿಸ್ಕೋ ಪ್ರದೇಶದಲ್ಲಿ ಏರ್ಪಡಿಸುತ್ತಿದ್ದಾರೆ. ಇವರ ಸಾಹಿತ್ಯಿಕ ಸಾಧನೆಗಳು ಮತ್ತು ಅವರು ಅಮೆರಿಕಾದಲ್ಲಿ ಕನ್ನಡ ಸಾಹಿತ್ಯವನ್ನು ಪ್ರೋತ್ಸಾಹಿಸುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು, ಅಮೆರಿಕಾದಲ್ಲಿನ ಅನೇಕ ಸಂಸ್ಥೆಗಳು ಸನ್ಮಾನಿಸಿವೆ. ಕರ್ನಾಟಕ ಸಾಂಸ್ಕೃತಿಕ ಸಂಘ (ಲಾಸ್ ಏಂಜಲೀಸ್), ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟ (ಸ್ಯಾನ್ ಹೊಸೆ) ಮತ್ತು ಅಮೆರಿಕಾ ಕನ್ನಡ ಕೂಟಗಳ ಆಗರ (ಅಕ್ಕ). ಉದಯ ಟೀವಿ ಇವರನ್ನು ತನ್ನ ಪರಿಚಯ ಕಾರ್ಯಕ್ರಮದಲ್ಲಿ ಸಂದರ್ಶಿಸಿದೆ.

**ಸಂಪರ್ಕ :** Vishvanath Hulikal
1177 Gardenside Lane, Cupertino CA 95014 U.S.A.
Telephone: (408) 343-3900
Email Id: vhulikal@yahoo.com

ಕನ್ನಡ ಸಾಹಿತ್ಯ ರಂಗದ ಪ್ರಕಟಣೆ

# ಕುವೆಂಪು ಸಾಹಿತ್ಯ ಸಮೀಕ್ಷೆ

ವಸಂತ ಪ್ರಕಾಶನ, ೧೦, ತುಳಸಿವನಂ, ಬೆಂಗಳೂರು ೫೬೦ ೦೫೩

## ಕೆಲವು ಅಭಿಪ್ರಾಯಗಳು

....'ಕುವೆಂಪು ಸಾಹಿತ್ಯ ಸಮೀಕ್ಷೆ' ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಒಂದು ಸಂಪುಟ.... ಅಮೆರಿಕದಲ್ಲಿದ್ದೂ, ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ...ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ...ತಮ್ಮ ಕನ್ನಡತನವನ್ನು...ಉಳಿಸಿಕೊಂಡಿದ್ದರ ಸಂಕೇತವೇ ಈ ಕುವೆಂಪು ಸಾಹಿತ್ಯ ಸಮೀಕ್ಷೆ. ...ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತ ಒಂದು ಒಳ್ಳೆಯ ಸಮೀಕ್ಷೆ ಇದು....

**–ಜಿ.ಎಸ್.ಶಿವರುದ್ರಪ್ಪ**

....ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ....ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಮ್ಮಿಯಿಲ್ಲದ ಲೇಖನಗಳು ಇಲ್ಲಿ ಹೊರಬಂದಿದೆ ಎನ್ನಲು ಹೆಮ್ಮೆಯಾಗುತ್ತಿದೆ....

**–ಪ್ರಭುಶಂಕರ**

....'ಕುವೆಂಪು ಸಾಹಿತ್ಯ ಸಮೀಕ್ಷೆ'ಯಲ್ಲಿ ಅಧ್ಯಯನಪೂರ್ಣ ಲೇಖನಗಳನ್ನು ಬರೆದಿರುವ ಅಮೆರಿಕದ ಲೇಖಕರ ಬಗ್ಗೆ ಕರ್ನಾಟಕದ ಕನ್ನಡಿಗರೂ ಅಭಿಮಾನ ಪಡಬೇಕು. ಕುವೆಂಪು ಸಾಹಿತ್ಯದ ವಿವಿಧ ಮುಖಗಳನ್ನು ಆಸಕ್ತಿಯಿಂದ ಚರ್ಚಿಸಿದ ಎಲ್ಲ ಲೇಖಕ ಲೇಖಕಿಯರೂ ತಾವು ಆರಿಸಿಕೊಂಡ ವಸ್ತುವಿನ ಬಗ್ಗೆ ಸಮರ್ಥವೆನಿಸುವ ಗ್ರಹಿಕೆಯನ್ನು ವ್ಯಕ್ತಪಡಿಸಿದ್ದಾರೆ....

**–ವ್ಯಾಸರಾಯ ಬಲ್ಲಾಳ**

....'ಕುವೆಂಪು ಸಾಹಿತ್ಯ ಸಮೀಕ್ಷೆ' ಕೃತಿಯು ಸುಂದರವಾಗಿ ರೂಪುಗೊಂಡಿದೆ. ಕನ್ನಡದ ಹಿರಿಯ ಕವಿಗೆ ಸಾಗರದಾಚೆಯ ಕನ್ನಡಿಗರ ಯೋಗ್ಯ ಉಡುಗೊರೆ ಇದು. ಅದಕ್ಕಾಗಿ, ಸಂಪಾದಕ ಮಂಡಳಿ ಮತ್ತು ಲೇಖಕರಿಗೆ ಹಾರ್ದಿಕ ಅಭಿನಂದನೆಗಳು.

**–ಟಿ. ವಸಂತಕುಮಾರ (ಮುಂಬಯಿ ವಿ.ವಿ.ದ ಕನ್ನಡ ವಿಭಾಗದ ಮುಖ್ಯಸ್ಥರು)**

ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರು ಕಳೆದ ಮೂರ್ನಾಲ್ಕು ದಶಕಗಳಲ್ಲಿ ಅನೇಕ ಕನ್ನಡ ಕೂಟಗಳನ್ನು ಸ್ಥಾಪಿಸಿಕೊಂಡಿದ್ದಾರೆ.... ಆದರೆ, ಕನ್ನಡ ಸಾಹಿತ್ಯಕ್ಕೆಂದೇ ಮೀಸಲಾದ

ಸಂಘಟನೆ -- ಕನ್ನಡ ಸಾಹಿತ್ಯ ರಂಗ.... ಅಮೆರಿಕದಲ್ಲಿ ಮನೆ ಮಾಡಿ, ಇಂಗ್ಲಿಷ್ ಪರಿಸರದಲ್ಲಿ ಕನ್ನಡವನ್ನು ನೆನಪು ಮಾಡಿಕೊಳ್ಳುವುದೇ ದೊಡ್ಡ ಸಂಗತಿ. ಅದರಲ್ಲೂ ಕುವೆಂಪು ಕುರಿತು ೩೫೪ ಪುಟಗಳ ಬೃಹತ್ ಗ್ರಂಥ ಹೊರತರುವುದುದೆಯಲ್ಲ ಅದು ನಿಜಕ್ಕೂ ಅಭಿನಂದಸಾ ವಿಷಯ. ಈ ಪುಸ್ತಕದಿಂದ ನಾವು ಕಲಿಯುವಂಥದು ಸಾಕಷ್ಟಿದೆ. ಅಮೆರಿಕನ್ನಡಿಗರ ಪ್ರೀತಿಗೆ ಸಲಾಮು.

**–ವಿಶ್ವೇಶ್ವರ ಭಟ್ (ವಿಜಯ ಕರ್ನಾಟಕ ಸಂಪಾದಕೀಯ)**

....ಕರ್ನಾಟಕದ ವಿವಿಧ ಭಾಗಗಳಿಂದ ಕನ್ನಡಿಗರು ಉದ್ಯೋಗಾರ್ಥಿಗಳಾಗಿ ವಿದೇಶಕ್ಕೆ ಹೋಗಿದ್ದಾರೆ. ಅದನ್ನು ಪ್ರತಿಭಾ ಪಲಾಯನ, ಡಾಲರ್ ಪೌಂಡ್ ಗಳಿಕೆಯ ಆಸೆ ಅಂತ ಟೀಕಿಸುವವರಿದ್ದಾರೆ. ಭಾಷೆಗಳ ಅಭಿಮಾನದಿಂದ ವಿಮುಖರಾಗಿದ್ದಾರೆಂದು ದೂರುವವರಿದ್ದಾರೆ! ಈ ಅನಿಸಿಕೆ ಸರಿಯಲ್ಲವೆಂದು ಕುವೆಂಪು ಜನ್ಮಶತಾಬ್ಧಿ ಸಂದರ್ಭದಲ್ಲಿ ಅಮೆರಿಕನ್ನಡಿಗರ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ೩೫೩ ಪುಟಗಳ ಪುಸ್ತಕ ಸೂಚಿಸುತ್ತದೆ.

ಅಮೆರಿಕನ್ನಡಿಗರ ಈ ಕಾರ್ಯ ಸ್ತುತ್ಯರ್ಹ. ನಮ್ಮ ಸಂಸ್ಕೃತಿ, ನಡೆ–ನುಡಿಗಳೆಲ್ಲವೂ ದೂರಾಯಿತೇನೋ ಅನ್ನುವಾಗಲೇ ಪರದೇಶದ ಪರಿಸರದಲ್ಲೂ 'ಇಲ್ಲೂ ಇದೆ ತುಡಿಯುವ ಎದೆ – ಕನ್ನಡ ನಾಡಿಗೆ ನುಡಿಗೆ' ಎಂಬ ಮಾತನ್ನು ಸಫಲಗೊಳಿಸಿದ್ದಾರೆ. ..... ಆದರೆ ಇಂಥ ಸಂಗ್ರಹಯೋಗ್ಯ ಮೌಲಿಕವಾದ ಗ್ರಂಥಕ್ಕೆ ಕನ್ನಡನಾಡಿನಲ್ಲಿ ಪ್ರಚಾರ ಸಿಗದಿರುವುದು ಖೇದಕರ

**–ಎಚ್. ಜಿ. ಸೋಮಶೇಖರ ರಾವ್ (ಪ್ರಜಾವಾಣಿ)**

....ಕುವೆಂಪು ಅವರನ್ನು ಕೇಳಿ, ಓದಿ ಮೆಚ್ಚಿಕೊಂಡು ಇರುವವರ ಹತ್ತಿರ ಕುವೆಂಪು ಬಗ್ಗೆ ನಾಲ್ಕು ಸಾಲು ಬರೆದುಕೊಡಿ ಅಂತ ಕೇಳಿದರೆ ಅವರು ಥಟ್ಟನೆ ಹುಷಾರಗುತ್ತಾರೆ.... ಅವರವರು ಕಂಡ ಕುವೆಂಪು ಆ ಲೇಖನಗಳಲ್ಲಿ ಹಣಕಿ ಹಾಕುತ್ತಾರೆ. ಹಾಗಾಗಿಲ್ಲ ಅನ್ನುವುದು 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಸಂಕಲನದ ಹೆಗ್ಗಳಿಕೆ....

**–ಜಾನಕಿ (ದಟ್ಸ್‌ಕನ್ನಡ ಅಂತರ್ಜಾಲ ಪತ್ರಿಕೆ)**

....'ಎಲ್ಲಿದ್ದರೆ ಏನ್, ಎಂತಿದ್ದರೆ ಏನ್, ನೀ ಮೆಟ್ಟಿದ ನೆಲ ಅದೆ ಕರ್ನಾಟಕ – ಎಂಬ ಕುವೆಂಪು ಕವನದ ಸಾಲಿನ ಜೇನುನುಡಿಯನ್ನು ಸಾರ್ಥಕಗೊಳಿಸಿಕೊಂಡು, ತಾವಿದ್ದೂರನ್ನೇ ಕರ್ನಾಟಕವನ್ನಾಗಿಸಿಕೊಂಡು, ಕನ್ನಡವನ್ನು ಉಸಿರಾಗಿಟ್ಟುಕೊಂಡು ಅಮೆರಿಕದಲ್ಲಿ ಅನಿವಾಸಿ ಕನ್ನಡಿಗರು ಜೀವನ ನಡೆಸುತ್ತಿದ್ದಾರೆ. ಕುವೆಂಪುರವರು ಕೈಗೊಂಡ ಸಾಹಿತ್ಯಕೃಷಿಯನ್ನು ಅವಲೋಕಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ, ಕುವೆಂಪು ಸಾಹಿತ್ಯ ಸಮೀಕ್ಷೆ ಎಂಬ ಒಂದು ಉತ್ತಮ ಗ್ರಂಥವನ್ನು ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ....

**– ಮೂಗಲು ಮಲ್ಲಿಕಾರ್ಜುನ. ದಟ್ಸ್‌ಕನ್ನಡ ಅಂತರ್ಜಾಲ ಪತ್ರಿಕೆ**




ಮನೆ/ಕಛೇರಿ : ೨೩೫೦೫೮೨೫
ಸಂಚಾರಿ : ೯೮೪೫೬೩೬೨೮೮

೧೭/೧೮-೨, ಮೊದಲನೆಯ ಮುಖ್ಯರಸ್ತೆ , (ಮುನೇಶ್ವರ ದೇವಸ್ಥಾನದ ಹತ್ತಿರ,) ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ೫೬೦ ೦೪೦.

---

ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲವಾಗಿರುವ ಅಭಿನವಕ್ಕೆ ಈಗ ಹನ್ನೊಂದು ವರ್ಷ. ವಿಚಾರ ಸಂಕಿರಣ, ಕಾರ್ಯಶಿಬಿರ, ಉಪನ್ಯಾಸ, ಚಾತುರ್ಮಾಸಿಕ ಪತ್ರಿಕೆ, ಪುಸ್ತಕ ಪ್ರಕಟಣೆ, ಪುಸ್ತಕೋತ್ಸವ –– ಆಸಕ್ತಿಯ ಭೂಮಿಕೆಗಳು.

ಅಭಿನವ ಚಾತುರ್ಮಾಸಿಕ : ಕನ್ನಡದಲ್ಲಿ ಭಿನ್ನ ಆಶಯ ಮತ್ತು ವಿಭಿನ್ನ ಸ್ವರೂಪದ ಪತ್ರಿಕೆ. ಪ್ರತಿ ಸಂಚಿಕೆ : ಯಾರಾದರೊಬ್ಬ ಸಾಹಿತಿ/ಚಿಂತಕ/ಕಲಾವಿದನ ಒಟ್ಟು ಕೆಲಸ ಅಥವಾ ಯಾವುದಾದರೊಂದು ಸಮಸ್ಯೆ/ಕಲಾಪ್ರಕಾರ/ಮಾಧ್ಯಮವನ್ನು ಕೇಂದ್ರವಾಗಿರಿಸಿ ಕೊಂಡಿರುತ್ತದೆ. ಈಗಾಗಲೇ ಪರ್ಯಾಯ ಚಿಂತನೆ, ಸಿನಿಮಾ, ಪರಿಸರ, ದೇವನೂರ ಮಹಾದೇವ, ಪು.ತಿ.ನ, ಷೋಯಿಂಕಾ, ಸಂಗೀತ, ದೇಶೀದರ್ಶನಗಳು, ಹಿಂಸೆ, ನೋಮ್‌ಚಾಮ್‌ಸ್ಕಿ, ಪಾರ್ಟಿಷನ್, ಕೆ.ಟಿ. ಶಿವಪ್ರಸಾದ್, ಮಲೆಯಾಳಂ ಕವಿತೆ ಮುಂತಾದ ಸಂಚಿಕೆಗಳು ಹೊರಬಂದಿವೆ. (ವಾರ್ಷಿಕ ಚಂದಾ ರೂ. ೧೫೦/-)

ಪುಸ್ತಕ ಪ್ರಕಟಣೆ : ಭಾಷಾಶಾಸ್ತ್ರ, ಪ್ರಸಕ್ತ ವಿದ್ಯಮಾನ, ತತ್ವಶಾಸ್ತ್ರ, ಪರಿಸರ, ಮಾನವ ಶಾಸ್ತ್ರ, ಚರಿತ್ರೆ ಮುಂತಾದ ವಿಷಯಗಳಲ್ಲಿ ತಲಸ್ಪರ್ಶಿ ಶೀರ್ಷಿಕೆಗಳು, ಸತ್ವಪೂರ್ಣ ಕೃತಿಗಳ ಅನುವಾದಗಳು, ಶ್ರೀಯುತರಾದ ಯು.ಆರ್.ಅನಂತಮೂರ್ತಿ, ಕೆ.ವಿ. ಸುಬ್ಬಣ್ಣ, ಶಿವಪ್ರಕಾಶ್, ಪ್ರಭುಶಂಕರ, ರವಿಬೆಳಗೆರೆ, ಲಕ್ಷ್ಮೀಪತಿ ಕೋಲಾರ ಮುಂತಾದವರ ಕೃತಿಗಳು ಪ್ರಕಟಗೊಂಡಿವೆ.

ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಯವರ **ಯೇಗ್ದಾಗೆಲ್ಲಾ ಐತೆ** ಕೃತಿಯನ್ನು ಪರಿಷ್ಕರಿಸಿ ಪ್ರಕಟಿಸಿದ ಹಿರಿಮೆ ಅಭಿನವದ್ದು. ಅವರದೇ ಕೃತಿ **ಮರೆಯಲಾದೀತೆ ?** ನಮ್ಮ ಐವತ್ತನೆಯ ಪುಸ್ತಕ.

## ನಮ್ಮ ಪ್ರಕಟಣೆಗಳು

| | | |
|---|---|---|
| ಆಚೀಚೆಯ ಕಥೆಗಳು (ಕಡಲಾಚೆಯ ಕನ್ನಡ ಕಥಾ ಸಂಕಲನ) | ಸಂ.ಗುರುಪ್ರಸಾದ್ ಕಾಗಿನೆಲೆ | ೧೫೦/- |
| ನಿಮ್ಮ ಸಿಮ್ಮ (ಅಂಕಣ ಬರಹ) | ಸಿ.ಆರ್.ಸಿಂಹ | ೧೨೫/- |
| ನಿನ್ನ ನೆನಪಿಗೊಂದು ನವಿಲುಗರಿ (ಕವನ ಸಂಕಲನ) | ಆನಂದ ಋಗ್ವೇದಿ | ೫೦/- |
| ಪಂಜರಿಯರವ (ಜಾನಪದ ಅಧ್ಯಯನ) | ಎನ್.ಪಿ. ಶಂಕರ ನಾರಾಯಣರಾವ್ | ೧೫೦/- |
| ಹವಳ ಹಾರಿದ ಹೊತ್ತು (ಕವನ ಸಂಕಲನ) | ಸ.ಉಷಾ | ೫೦/- |
| ಪುಗಳೇಂದಿ ಪ್ರಹಸನ (ನಾಟಕ) | ರಾಮನಾಥ | ೬೦/- |
| ಬೆಂಕಿಯ ನೆನಪು (ಪರ್ಯಾಯ ಚರಿತ್ರೆ) | ಎಡುವರ್ಡೊ ಗೆಲಿಯಾನೊ ಅನು: ಕೆ.ಪಿ. ಸುರೇಶ | ೭೫/- |
| ಹಿಡಿದ ಉಸಿರು (ಕವನ ಸಂಕಲನ) | ಅಂಕುರ್ ಬೆಟಗೇರಿ | ೪೦/- |
| ಯದುಗಿರಿಯ ಬೆಳಕು (ಪು.ತಿ.ನ ಸಾಹಿತ್ಯ ಕುರಿತು) | ಸಂ. ಆಹಿತಾನಲ | ೧೫೦/- |
| ಮರೆಯಲಾದೀತೆ ? (ನೆನಪುಗಳು) | ಬೆಳಗೆರೆ ಕೃಷ್ಣಶಾಸ್ತ್ರಿ | ೨೫೦/- |

| | | |
|---|---|---|
| ಹೇ ರಾಮ್ (ಭಾರತದ ಆತ್ಮಚ್ಛೇದ ಕಥನ) | ಸಂ. ನ. ರವಿಕುಮಾರ | ೨೭೫/- |
| ಭಾರತೀಯ ತತ್ವಶಾಸ್ತ್ರದ ರೂಪುರೇಖೆಗಳು | ಮೂಲ:ಎಂ. ಹಿರಿಯಣ್ಣ<br>ಅನು:ಪ್ರಭುಶಂಕರ | ೨೭೫/- |
| ಅಮೆರಿಕಾಯಣ | ವೈ.ಆರ್. ಮೋಹನ್ | ೬೫೦/- |
| ಅಮೂರ್ತತೆ ಮತ್ತು ಪರಿಸರ (ವಿಮರ್ಶೆ) | ರಾಜೇಂದ್ರ ಚೆನ್ನಿ | ೧೮೦/- |
| ಫಾದರ್ ೫೫ (ಕವನ ಸಂಕಲನ) | ವಿ.ಎಂ.ಮಂಜುನಾಥ್ | ೫೦/- |
| ಮಂದಹಾಸ ಮೀಮಾಂಸೆ(ಸಮಗ್ರ ಲಲಿತ ಪ್ರಬಂಧ) | ಪ್ರಭುಶಂಕರ | ೧೫೦/- |
| ಖಲೀಲ್ ಗಿಬ್ರಾನ್ (ಜೀವನ ದರ್ಶನ) | ಪ್ರಭುಶಂಕರ | ೬೦/- |
| ಆಂಟೋನಿಯೊ ಗ್ರಾಮ್ಷಿ (ಶತಮಾನ ಚಿಂತನೆ) | ಕೆ. ಫಣಿರಾಜ್ | ೫೦/- |
| ಹಳೆಯಕಾಲದ ಹೊಸಕತೆ(ಕಥಾ ಸಂಕಲನ) | ಕೆ.ಸತ್ಯನಾರಾಯಣ | ೧೨೫/- |
| ಮನುಕುಲದ ಮಾತುಗಾರ (ಚಾಮ್‌ಸ್ಕಿ ಚಿಂತನೆ/ದರ್ಶನ) | ವಿವಿಧ ಲೇಖಕರು | ೧೫೦/- |
| ಮಾಯಾಪಾತಾಳ (ಕವಿತೆ) | ರಾಮಲಿಂಗಪ್ಪ ಟಿ.ಬೇಗೂರು | ೫೦/- |
| ಯುಗಪಲ್ಲಟ (ಸಂಸ್ಕೃತಿ ಚಿಂತನೆ) | ಯು.ಆರ್.ಅನಂತಮೂರ್ತಿ | ೮೦/- |
| ಹಕ್ಕಿ ಪುಟಾಣಿ (ಮಕ್ಕಳ ಕವಿತೆ) | ಆನಂದ ವಿ. ಪಾಟೀಲ | ೫೦/- |
| ಅರಹಂತ (ನಾಟಕ) | ರಾಮನಾಥ | ೭೫/- |
| ಬೊಗಸೆಯಲ್ಲಿ ಮಳೆ (ನುಡಿ ನೋಟಗಳು*) | ಜಯಂತ ಕಾಯ್ಕಿಣಿ | ೧೦೦/- |
| ಪ್ರೀತಿಸುವುದೆಂದರೆ (ಆರ್ಟ್ ಆಫ್ ಲಿವಿಂಗ್) | ಮೂಲ : ಎರಿಕ್ ಫ್ರಾಂ<br>ಅನು : ಕೆ.ವಿ.ನಾರಾಯಣ, ಎಚ್.ಎಸ್. ರಾಘವೇಂದ್ರರಾವ್ | ೭೫/- |
| ಯೇಗ್ದಾಗೆಲ್ಲಾ ಐತೆ | ಬೆಳಗೆರೆ ಕೃಷ್ಣಶಾಸ್ತ್ರಿ | ೫೦/- |
| ಗೊಂದಲಪುರ (ಹಿಂಸೆ ಕುರಿತು*) | ಸಂ.ನ.ರವಿಕುಮಾರ, ಡಿ.ಆರ್.ಚಂದ್ರಮಾಗಡಿ | ೧೭೫/- |
| ಕರುಳಬಳ್ಳಿಯ ಸೊಲ್ಲು (ಬೇಂದ್ರೆ ಕಾವ್ಯ ವಿಮರ್ಶೆ*) | ರಾಜೇಂದ್ರ ಚೆನ್ನಿ | ೪೦/- |
| ಫಾದರ್(ಸ್ಟ್ರಿಂಡ್‌ಬರ್ಗ್ ನಾಟಕ) | ಅನು : ಸಿ. ನಾಗಣ್ಣ | ೪೦/- |
| ಬೆಳದಿಂಗಳು(ಮಕ್ಕಳ ಕಾದಂಬರಿ*) | ಆನಂದ ವಿ. ಪಾಟೀಲ | ೧೫/- |
| ರಚನೆ – ನಿರಚನೆ(ವಿಮರ್ಶೆ*) | ಕೇಶವಶರ್ಮ ಕೆ. | ೮೦/- |
| ಯಾರ ಜಪ್ತಿಗೂ ಸಿಗದ ನವಿಲುಗಳು<br>(ದೇವನೂರ ಮಹಾದೇವ ಸಾಹಿತ್ಯ ಕುರಿತು) | ಸಂ. ಪಿ. ಚಂದ್ರಿಕಾ | ೧೨೦/- |
| ನೀಲಿತತ್ತಿ(ಕವನ ಸಂಕಲನ*) | ಲಕ್ಷ್ಮೀಪತಿ ಕೋಲಾರ | ೫೦/- |
| ಜನ್ನ ಮತ್ತು ಅನೂಹ್ಯ ಸಾಧ್ಯತೆ(ಕಥಾ ಸಂಕಲನ*) | ಆನಂದ ಋಗ್ವೇದಿ | ೫೦/- |
| ವಿರೋಧ ವಿಲಾಸ(ವಕ್ರೋಕ್ತಿ ವರಸೆಗಳು) | ಎಮ್.ಎಸ್.ಕೆ. ಪ್ರಭು | ೩೦/- |
| ದೇಶೀ ದರ್ಶನಗಳು* | ವಿವಿಧ ಲೇಖಕರು | ೬೦/- |
| ನಮ್ಮ ತವಕ ತಲ್ಲಣಗಳು(ಲೇಖನಗಳು*) | ಕೆ.ವಿ. ಸುಬ್ಬಣ್ಣ | ೬೦/- |
| ಮಾಗಿ ಮೂವ್ವತ್ತೈದು(ಕಥೆಗಳು) | ಕೇಶವ ಮಳಗಿ | ೬೫/- |
| ಪಾತಿದೋಣಿ (ಕಥೆಗಳು*) | ಉಮಾ ಹೆಗಡೆ | ೪೫/- |
| ಶಬ್ದರೇಖೆ* (ವಿಮರ್ಶೆ) | ಕೇಶವಶರ್ಮ ಕೆ. | ೫೦/- |
| ಅನಾಹತನಾದ (ಸಂಗೀತ ಕುರಿತು*) | ವಿವಿಧ ಲೇಖಕರು | ೩೫/- |
| ಕದಳೀವನ ಕರ್ಪೂರ(ಪರಿಸರ ಚಿಂತನೆ*) | ವಿವಿಧ ಲೇಖಕರು | ೫೦/- |

| | | |
|---|---|---|
| ಯದುಗಿರಿಯ ಅಂಗಳದಿಂದ (ಪು.ತಿ.ನ. ಸಾಹಿತ್ಯ ಕುರಿತು*) | ವಿವಿಧ ಲೇಖಕರು | ೪೫/- |
| ಕ್ಯಾಪ್ಸೂಲಗಿತ್ತಿ(ಅಂಕಣ ಬರಹ) | ನಾಗೇಶ ಹೆಗಡೆ | ೩೦/- |
| ಚಲ್ ಮೇರಿ ಲೂನಾ (ಪ್ರಬಂಧಗಳು*) | ಆರ್. ನಿರ್ಮಲಾ | ೫೦/- |
| ಪಾ.ವೆಂ. ಹೇಳಿದ ಕಥೆ(ಕಥೆಗಳು) | ರವಿ ಬೆಳಗೆರೆ | ೧೦೦/- |
| ದಾಂಪತ್ಯಕ್ಕೊಂದು ಶೀಲ(ಪ್ರಬಂಧಗಳು) | ಕೆ. ಸತ್ಯ ನಾರಾಯಣ | ೩೦/- |
| ಒಂದು ಅನುರಾಗಕ್ಕಾಗಿ ಎಷ್ಟೆಲ್ಲಾ(ಕವನ*) | ಕೆ.ಪಿ. ಮೃತ್ಯುಂಜಯ | ೨೦/- |
| ಆಶಯ ಆಕೃತಿ (ವಿಮರ್ಶೆ*) | ಸಿ. ಎನ್. ರಾಮಚಂದ್ರನ್ | ೧೨೦/- |
| ಖಾಸ್‌ಬಾತ್ ೯೭(ಅಂಕಣ ಬರಹ*) | ರವಿ ಬೆಳಗೆರೆ | ೧೦೦/- |
| ಕಂಪ್ಯೂಟರ್‌ಗೊಂದು ಕನ್ನಡಿ* | ಸಿ.ಪಿ.ರವಿಕುಮಾರ್ | ೨೭/- |
| ನೋಟಪಲ್ಲಟ(ದೃಶ್ಯ ಸಂಸ್ಕೃತಿ ಕುರಿತು) | ಎಚ್.ಎ. ಅನಿಲ್‌ಕುಮಾರ್ | ೩೫/- |
| ಇಚ್ಛಾಶಕ್ತಿಯ ನಿರೂಪ (ವೋಲೆ ಷೋಯಿಂಕಾ ಸಾಹಿತ್ಯ ಕುರಿತು*) | ವಿವಿಧ ಲೇಖಕರು | ೩೫/- |
| ಅಂಧಮಕ್ಕಳ ಅರಿವಿನಂಗಣ (ಮಹಾ ಪ್ರಬಂಧ) | ಎಮ್.ಆರ್. ಮಂದಾರವಲ್ಲಿ | ೨೫/- |
| ಮೊದಲ ಕಟ್ಟಿನ ಗದ್ಯ(ಲೇಖನಗಳು) | ಎಚ್.ಎಸ್. ಶಿವಪ್ರಕಾಶ್ | ೭೦/- |
| ಗೌರವ (ಜಿ.ಎಸ್.ಎಸ್. ೭೫) | ಸಂ.ಚಿ. ಶ್ರೀನಿವಾಸರಾಜು | ೨೫೦/- |
| ಆಟ-ಮಾಟ (ಸೃಜನಶೀಲತೆ ಕುರಿತು) | ಕೆ.ಜಿ.ಸುಬ್ರಹ್ಮಣ್ಯನ್/ಅನು: ಶ್ರೀನಿವಾಸಮೂರ್ತಿ | ೧೦೦/- |
| ನಮನ(ಅನುಭಾವಿ ಕಥನ) | ಆನಂದ ಪಾಟೀಲ | ೫೦/- |
| ಮರೆಯಲಾದೀತೇ ? (ನೆನಪುಗಳು) | ಬೆಳಗೆರೆ ಕೃಷ್ಣಶಾಸ್ತ್ರಿ | ೨೫೦/- |
| ಕಲ್ಲರಳಿ ಹೂವ್ವಂತೆ (ಕೆ.ಟಿ.ಶಿವಪ್ರಸಾದ್ ಕುರಿತು) | ಸಂ.ಕೆ. ಪುಟ್ಟಸ್ವಾಮಿ | ೧೫೦/- |
| ಮಕ್ಕಳ ಸಾಹಿತ್ಯ ಶತಮಾನ (ಮಕ್ಕಳ ಸಾಹಿತ್ಯ ಸಮೀಕ್ಷೆ) | ಆನಂದ ಪಾಟೀಲ<br>ಸಂ. ನ. ರವಿಕುಮಾರ | ೭೫/- |

**ಅಚ್ಚಿನಲ್ಲಿ :**

| | |
|---|---|
| ನಮ್ಮ ಕನ್ನಡ | ಕೆ.ವಿ.ತಿರುಮಲೇಶ್ |
| ಕಾವ್ಯ ಕಾರಣ | ಕೆ.ವಿ.ತಿರುಮಲೇಶ್ |
| ನೆಲಕ್ಕೆ ಬಿದ್ದ ನಕ್ಷತ್ರಗಳು (ಹೂ ಕುರಿತು) | ಸಂ. ರವಿಕುಮಾರ |
| ಟಿಬೆಟ್ (ಜಗತ್ತು ಕೇಳಿಸಿಕೊಳ್ಳಬೇಕಾದ ಆರ್ತಮೊರೆ) | ಮಂಗ್ಳೂರ ವಿಜಯ |
| ಡಂಡಂ ಊರಿಗೆ ಡಂಡಂ ಗಾಡಿ (ಮಕ್ಕಳಿಗಾಗಿ) | ಆನಂದ ಪಾಟೀಲ |
| ವೈದ್ಯರ ಶಿಕಾರಿ | ಟಿ.ಎಸ್.ರಮಾನಂದ್ |
| ಬಾಪು ಕುಟೀ | ರಜನಿ ಭಕ್ಷಿ/ಅನು : ಕೆ. ವೆಂಕಟರಾಜು |
| ಈವರೆಗಿನ ಕಥೆಗಳು | ಅಬ್ದುಲ್ ರಷೀದ್ |

## ನಮ್ಮಲ್ಲಿ ದೊರೆಯುವ ಪುಸ್ತಕಗಳು :

**ರವಿ ಬೆಳಗೆರೆಯವರ ಪುಸ್ತಕಗಳು**

| | |
|---|---|
| ಗಾಂಧಿ ಹತ್ಯೆ ಮತ್ತು ಗೋಡ್ಸೆ | ೧೫೦/- |
| ಲವ್‌ಲವಿಕೆ | ೧೦೦/- |
| ಗಾಡ್ ಫಾದರ್ | ೧೫೦/- |
| ಕಂಪೆನಿ ಆಫ್ ವಿಮೆನ್ | ೧೦೦/- |

| | | |
|---|---|---|
| ಟೈಂಪಾಸ್ | | ೧೦೦/- |
| ಪಾಪಿಗಳ ಲೋಕದಲ್ಲಿ | | ೨೦೦/- |
| ಹಿಮಾಲಯನ್ ಬ್ಲಂಡರ್ | | ೧೦೦/- |
| ಬ್ಲಾಕ್ ಫ್ರೈಡೆ | | ೧೨೫/- |
| ಪಾವೆಂ ಹೇಳಿದ ಕತೆ | | ೧೦೦/- |
| ಖಾತ್ ಬಾತ್ ೯೯ | | ೧೨೫/- |
| ಇಂದಿರೆಯ ಮಗ ಸಂಜಯ | | ೧೦೦/- |
| ಸರ್ಪ ಸಂಬಂಧ | | ೧೫೦/- |
| ಅಮೆರಿಕದಲ್ಲಿ ಆಲೂರು (ಪ್ರವಾಸ ಕಥನ) | ಚಂದ್ರಶೇಖರ ಆಲೂರು | ೭೫/- |
| ನೈಲ್ ನದಿಯ ನಾಡಿನಲ್ಲಿ (ಪ್ರವಾಸ ಕಥನ) | ಚಂದ್ರಶೇಖರ ಆಲೂರು | ೭೫/- |
| ಒಂದು ಸುಂದರ ಮನಸ್ಸು | ಚಂದ್ರಶೇಖರ ಆಲೂರು | ೭೫/- |
| ಸಖೀಗೀತ (ಪ್ರಬಂಧಗಳು) | ಚಂದ್ರಶೇಖರ ಆಲೂರು | ೭೫/- |
| ಕಪ್ಪುಹಕ್ಕಿಯ ಬೆಳಕಿನಹಾಡು (ಆಫ್ರಿಕಾದ ಮಹಿಳಾ ಆತ್ಮಕಥನ) | ಎಮ್.ಆರ್.ಕಮಲ | ೭೫/- |
| ಉತ್ತರ ನಕ್ಷತ್ರ | ಎಮ್.ಆರ್.ಕಮಲ | ೮೦/- |
| ವೆನ್ನೆಲಾ ದೊರೆಸಾನಿ (ಕಥಾ ಸಂಕಲನ) | ಕೇಶವ ಮಳಗಿ | ೧೧೦/- |
| ಜೀವಜಾಲ (ಪರಿಸರ) | ಕೆ.ಪುಟ್ಟಸ್ವಾಮಿ | ೧೦೦/- |
| ಅರಸುಯುಗದ ಆರಣ್ಯಪರ್ವ | ಎ.ಎನ್.ಯಲ್ಲಪ್ಪ ರೆಡ್ಡಿ | ೪೫/- |
| ನೀನೆಂಬ ನಾನು (ಸೂಫಿ ಧರ್ಮ ಕುರಿತು) | ಜೆ. ಬಾಲಕೃಷ್ಣ | ೬೫/- |
| ಭುವನದ ಬೆಡಗು | ಕೆ.ಪುಟ್ಟಸ್ವಾಮಿ | ೧೦೦/- |
| ವಿಗಡ ವಿಕ್ರಮರಾಯ | ಜಿ.ಪಿ.ರಾಜರತ್ನಂ | ೨೫/- |
| ಸೂರ್ಯಗಂಧೀಧರಣಿ (ಕವನ) | ಪಿ.ಚಂದ್ರಿಕಾ | ೭೦/- |
| ತರು ತಳೆದ ಪುಷ್ಪ (ವಿಮರ್ಶೆ) | ಎಚ್.ಎಸ್.ರಾಘವೇಂದ್ರ ರಾವ್ | ೭೦/- |
| ಬೇಂದ್ರೆ ಸಾಹಿತ್ಯ ಒಂದು ಅಧ್ಯಯನ (ಬೇಂದ್ರೆ ಸಾಹಿತ್ಯ ಸಮೀಕ್ಷೆ) | ಸಂ.ಚಿ.ಶ್ರೀನಿವಾಸರಾಜು | ೧೫೦/- |
| ಎ.ಎನ್.ಮೂರ್ತಿರಾಯರ ಆಯ್ದ ಲಲಿತ ಪ್ರಬಂಧ | ಸಂ.ಚಿ. ಶ್ರೀನಿವಾಸರಾಜು | ೨೦/- |
| ನೆಲದ ಜೀವ (ಕಥೆಗಳು) | ಮಂಜುಕೋಡಿಲುಗನೆ | ೭೦/- |
| ಒಡಲಾಳ | ದೇವನೂರ ಮಹಾದೇವ | ೨೫/- |
| ಕುಮಾರವ್ಯಾಸನ ಕಾವ್ಯ ಚಿತ್ರಗಳು (ಸಂಶೋಧನೆ) | ಎ.ಎನ್.ಪ್ರಸನ್ನ | ೩೦೦/- |
| ಮತ್ತೆ ಮತ್ತೆ (ಕವನ) | ಎಚ್.ಎಸ್.ಶಿವಪ್ರಕಾಶ | ೭೦/- |
| ನೀರಿಂದ್ರಿಯ | ಕುಸುಮಾಕರ ರದೇವರಗೆಣ್ಣೂರ | ೩೨/- |
| ಘರಿಫ | ಕುಸುಮಾಕರ ದೇವರಗೆಣ್ಣೂರ | ೫೫/- |
| ನಾಲ್ಕನೆಯ ಆಯಾಮ | ಕುಸುಮಾಕರ ದೇವರಗೆಣ್ಣೂರ | ೩೨/- |
| ಕಾವ್ಯ ದರ್ಶನ | ಶ್ರೀಧರ ಹೆಗಡೆ ಭದ್ರನ್ | ೮೦/- |

## ಕನ್ನಡ ಸಾಹಿತ್ಯ ರಂಗ ಪುಸ್ತಕ ಮಾಲೆ-೨

'ಕತೆ' ಎನ್ನುವುದು ಅನುಭವಿಸುವ ಮನುಷ್ಯನ ಮನಸ್ಸಿಗೆ ತೀರ ಸಹಜವಾದ ಚಟುವಟಿಕೆಯಾಗಿದೆ. ನಮ್ಮ ಪ್ರತಿಯೊಬ್ಬರಲ್ಲೂ ಒಂದು ಕತೆಯಿದೆ. ಯಾಕೆಂದರೆ, ಪ್ರತಿಯೊಬ್ಬರಲ್ಲೂ ಇನ್ನೊಬ್ಬರಿಗೆ ಮುಟ್ಟಲು ತವಕಿಸುವ ಅನುಭವವಿದೆ. ಕತೆ ಮನುಷ್ಯನನ್ನು, ಅವನ ಮೂಲಕ ಬದುಕನ್ನು ಭಾಷೆಯಲ್ಲಿ ಅರಿಯುವ ಅನನ್ಯ ಪ್ರಯತ್ನವಾಗಿದೆ. ಪ್ರಸ್ತುತ ಸಂಕಲನದಲ್ಲಿ ಒಟ್ಟುಗೂಡಿದ ೨೨ ಕತೆಗಳು ಇಂಥ ಪ್ರಯತ್ನದ ಫಲವಾಗಿವೆ. ಈ ಕತೆಗಳ ಹುಟ್ಟಿಗೆ ಕಾರಣವಾದ ಅನುಭವ – ತಮ್ಮ ಒಳ್ಳೆಯ ಕರ್ಮಗಳಿಗೆ ಒಳ್ಳೆಯ ಫಲವನ್ನು ಅಪೇಕ್ಷಿಸಿ – ಕಡಲಾಚೆಯ ನಾಡಿಗೆ ವಲಸೆಹೋದವರಿಗೆ ಸೇರಿದ್ದಾಗಿದೆ ಎನ್ನುವುದರಲ್ಲಿ ಈ ಕತೆಗಳ ವಿಶೇಷತೆ ಹಾಗೂ ವೈಶಿಷ್ಟ್ಯಗಳಿವೆ. ಇಲ್ಲಿಯ ಎಲ್ಲ ಕತೆಗಳ ಸಾಹಿತ್ಯಕ ಸಾಧನೆ ಒಂದೇ ಮಟ್ಟದ್ದಾಗಿಲ್ಲ. ಕನ್ನಡದ ಉತ್ತಮ ಕತೆಗಳ ಸಾಲಿಗೆ ಸೇರುವ ಯೋಗ್ಯತೆಯುಳ್ಳ ಕತೆಗಳ ಜೊತೆಗೆ ಕತೆ ಬರೆಯುವ ಪ್ರಥಮ ಪ್ರಯತ್ನದಂತೆ ತೋರುವ ಕತೆಗಳೂ ಸೇರಿಕೊಂಡದ್ದು, ಬರವಣಿಗೆಯ ಸಫಲತೆಯ ಏರುಪೇರಿಗೆ ಕಾರಣವಾದಂತಿದೆ. ಇಷ್ಟಾಗಿಯೂ ನನಗೆ ಮುಖ್ಯವೆನ್ನಿಸಿದ್ದು, ಮನುಷ್ಯನಿಗೆ ಮನುಷ್ಯನ ಕತೆ ಹೇಳಲು ಹೊರಟ ಈ ಬರವಣಿಗೆಯಲ್ಲಿ ವ್ಯಕ್ತಗೊಂಡ ಅದಮ್ಯ ಉಮೇದು ಉತ್ಸಾಹಗಳೇ!

ಈ ಕತೆಗಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಬಹುದು: ಒಂದು: ಅಮೆರಿಕೆಯಲ್ಲಿ ನೆಲಸಿದ್ದರಿಂದಲೇ ಬರೆಯಲು ಸಾಧ್ಯವಾದ ಕತೆಗಳು – 'ಆಚೆಯ ಕತೆಗಳು'. ಈ ಗುಂಪಿನ ಕತೆಗಳು, ವಿಶೇಷವಾಗಿ 'ಸುಮ್ಮನೆ', 'ಕೊಟ್ಟ ಹೆಣ್ಣು', 'ಶಬ್ದ', 'ಆಯೇಷಾಳ ಅಮೆರಿಕನ್ ಕನಸು', 'ಮೀಡಿಯಾ ಮೀಡಿಯಾ' ಮುಂತಾದವು ತಮ್ಮ ವಸ್ತುವಿನ ಹೊಸತನದಿಂದ, ನಿರೂಪಣೆಯ ಸಹಜತೆಯಿಂದ, ವಿವರಗಳ ಮಿತವ್ಯಯದಿಂದ, ರೂಪಕಗಳನ್ನು ಸೃಷ್ಟಿಸಬಲ್ಲ ಭಾಷೆಯಿಂದ ನಮ್ಮ ಗಮನ ಸೆಳೆಯುತ್ತವೆ. ಎರಡು: ಅಮೆರಿಕೆಯಲ್ಲೇ ಕೂತು ಬರೆದವುಗಳಾಗಿಯೂ, ಸಂಪೂರ್ಣವಾಗಿ ಕನ್ನಡನಾಡಿನಲ್ಲೇ ನಡೆದ ಘಟನೆಗಳ ಸುತ್ತ ಬೆಳೆದವುಗಳು – 'ಈಚೆಯ ಕತೆಗಳು'. ಇಲ್ಲಿ ಅನುಭವದ ನಿರೂಪಣೆ ನೆನಪುಗಳ ರೂಪ ಪಡೆಯುವುದರಿಂದ ಬರವಣಿಗೆ ನಮ್ಮ ಅಂತಃಕರಣ ತಟ್ಟುವುದರಲ್ಲಿ ಹಿಂದೆ ಬೀಳುತ್ತದೆ. ಆದರೂ ಈ ಕತೆಗಳು ಕೂಡ, ಮುಖ್ಯವಾಗಿ 'ಕವಲುದಾರಿ', 'ಮನೆ ಜಗಲಿಯ ಕೋರ್ಟು', 'ಅರಿತವರಾರೋ ಎದೆಯ', 'ಗುಬ್ಬಿಯ ಅವಸಾನ', 'ಸ್ವಾತಂತ್ರ್ಯ', ಮುಂತಾದವು ತಮ್ಮ ಕತೆ ಕಟ್ಟುವ ನೈಪುಣ್ಯದಿಂದ, ವಸ್ತುವಿನ ವೈವಿಧ್ಯದಿಂದ, ಸ್ವಚ್ಛ ಸುಂದರ ಗದ್ಯದಿಂದ ನಮ್ಮ ಮನಸ್ಸನ್ನು ಗೆಲ್ಲುತ್ತವೆ.

'ಆಚೀಚೆಯ ಕತೆಗಳು' ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗವಾಗಿದೆ. ತಾಯಿನೆಲದಿಂದ ದೂರವಾದ – ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ – ಜಾಗದಲ್ಲಿ ಕುಳಿತು, ಕೇವಲ ತಮ್ಮ ಮಾತೃಭಾಷೆಯ ಪ್ರೀತಿಗಾಗಿ ಎಂದೆಂದಿಗೂ ಕನ್ನಡವಾಗಿರುವ ಹಟದಲ್ಲಿ– ರಚಿಸಿದ ಈ ಕತೆಗಳು ಕನ್ನಡ ಕಥಾಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿವೆ. ಸಂಗ್ರಹವನ್ನು ಹೊರತರುತ್ತಿರುವ 'ಕನ್ನಡ ಸಾಹಿತ್ಯ ರಂಗ'ದ ಗೆಳೆಯರಿಗೆ ಹಾರ್ದಿಕ ಅಭಿನಂದನೆಗಳು.

**– ಯಶವಂತ ಚಿತ್ತಾಲ.**

ಕನ್ನಡ ಸಾಹಿತ್ಯ ರಂಗ

